ದ್ವೈತ ಸಂಶೋಧನ ಸಂಸದ್ ಗ್ರಂಥಮಾಲಾ-8

ಓಂ

# ಕಠೋಪನಿಷತ್

(ಕನ್ನಡ ಅವತರಣಿಕೆ)

ಲೇಖಕರು

ಸಂಶೋಧನ ಸಂಸತ್ತಿನ ಸಂಶೋಧಕರು

ಸಂಸ್ಕೃತ ಸಂಶೋಧನ ಸಂಸದ್ಗ್ರಂಥಮಾಲಾ–೪

ಓಂ

# ಕಠೋಪನಿಷತ್

(ಕನ್ನಡ ಅವತರಣಿಕೆ)

ಲೇಖಕರು

ಸಂಸ್ಕೃತ ಸಂಶೋಧನ ಸಂಸತ್ತಿನ ಸಂಶೋಧಕರು



# ಕಠೋಪನಿಷತ್ (ಕನ್ನಡ ಅವತರಣಿಕೆ)

ಉಪನಿಷತ್ ನಿಗಮ

ಸಂಸ್ಕೃತ ಸಂಶೋಧನ ಸಂಸತ್, ಮೇಲುಕೋಟೆ

ಪ್ರಮುಖ ಸಂಪಾದಕರು

ಎಂ. ಎ. ಎಸ್. ರಾಜನ್, ಐ.ಎ.ಎಸ್. (ನಿವೃತ್ತರು)

ಪ್ರಧಾನ ಸಂಪಾದಕರು

ಫೆಸರ್ ಎಂ. ಎ. ಲಕ್ಷ್ಮೀತಾತಾಚಾರ್, ಎಂ.ಎ., ಸಿ.ಎ.ಇ.

ನ್ಯಾಯವಿದ್ವಾನ್, ರಾಷ್ಟ್ರಭಾಷಾಪ್ರವೀಣ

ಪ್ರಕಾಶಕರು

ತ ಸಂಶೋಧನ ಸಂಸತ್, ಮೇಲುಕೋಟೆ-571 431

ಪ್ರಥಮ ಮುದ್ರಣ 1988

ಬೆಲೆ: ಸಾಧಾರಣ ಪ್ರತಿ ರೂ. 110-00

ವಿಶೇಷ ಪ್ರತಿ ರೂ. 130-00

ಮುದ್ರಣ

ವಿವೇಕ ಮುದ್ರಣಾಲಯ

Kathopanishad (Kannada Avataranike)

A project of the Academy of Sanskrit Research
Melkote

*'HIS BOOK IS PUBLISHED WITH THE FINANCIAL 'SISTANCE OF TIRUMALA TIRUPATI DEVASTHANAMS 'DER THEIR SCHEME AID TO PUBLISH RELIGIOUS 'OKS".*

*General Editor*

M. A. S. Rajan, I.A.S. (Retd.)

*Chief Editor*

Prof. M. A. Lakshmithathachar, M.A., C.A.E.
Nyaya Vidwan, Rastrabhasha Praveena

*Publisher*

Academy of Sanskrit Research, Melkote-571 431

First Edition : 1988



Price : Ordinary Copy Rs. 110–00
Special Copy Rs. 130–00

*Printed at*

Vivek P...

# ಕಾರ್ಯನಿರ್ವಾಹಕ ಮಂಡಲಿ

ಪ್ರಮುಖ ಸಂಪಾದಕರು

ಶ್ರೀ ಎಂ. ವಿ. ಎಸ್. ರಾಜನ್, ಐ.ಎ.ಎಸ್. (ನಿವೃತ್ತರು)

ಪ್ರಧಾನ ಸಂಪಾದಕರು

ಶ್ರೀ ಎಂ. ಎ. ಲಕ್ಷ್ಮೀತಾತಾಚಾರ್, ಎಂ.ಎ., ಪಿ.ಎಚ್.ಡಿ.

ನ್ಯಾಯವಿದ್ವಾನ್, ರಾಷ್ಟ್ರಭಾಷಾಪ್ರವೀಣ

ಸಂಪಾದಕರು

ಶ್ರೀ ಎಂ. ಬಿ. ಪಾರ್ಥಸಾರಥಿ ಅಯ್ಯಂಗಾರ್

ನ್ಯಾಯವಿದ್ವಾನ್, ಕನ್ನಡ ಪಂಡಿತ, ರಾಷ್ಟ್ರಭಾಷಾವಿಶಾರದ

ಶ್ರೀ ಎನ್. ಎಸ್. ರಾಮಭದ್ರಾಚಾರ್ಯ

ಪ್ರಾಚೀನ-ನವೀನನ್ಯಾಯ, ಅಲಂಕಾರ ವಿದ್ವಾನ್

ಸಹಾಯಕರು

ಕು॥ ಸಿ. ಪದ್ಮಾವತಿ

ಸಾಹಿತ್ಯವಿದುಷಿ

ಕು॥ ಎಂ. ಬಿ. ಸಾವಿತ್ರಿ

ಸಾಹಿತ್ಯವಿದುಷಿ, ರಾಷ್ಟ್ರಭಾಷಾಪ್ರವೀಣ

ಕು॥ [illegible]

# ಮುನ್ನುಡಿ

ವಿಶ್ವಸಾಹಿತ್ಯದಲ್ಲಿ ಮತ್ತು ಸಾಹಿತ್ಯವಿಶ್ವದಲ್ಲೂ ಪ್ರಾಚೀನತಮವಾದು ಸಾಹಿತ್ಯ. ಅದರ ಸಾರ ಉಪನಿಷತ್ತು. ಇದಕ್ಕೆ ಪ್ರಸ್ಥಾನತ್ರಯದಲ್ಲಿ ಪ್ರಥಮಸ್ಥಾನ. ಬ್ರ ಮತ್ತು ಭಗವದ್ಗೀತೆಗಳೇ ಉಳಿದೆರಡು ಪ್ರಸ್ಥಾನಗಳು. ಅವುಗಳಿಗೆ ಭದ್ರಬುನಾದಿ ಸಿ ಉಪನಿಷದ್ವಾಣಿಯಿಂದಲೇ. ಉಪನಿಷದಧ್ಯಯನದಲ್ಲಿ ನಮಗೆ ಹಲವಾರು ಸ ಗೋಚರವಾಗುತ್ತವೆ. ಈ ಗೋಜಲನ್ನು ವ್ಯಾಸರು ತಮ್ಮ ಬ್ರಹ್ಮಸೂತ್ರಪ್ರ ಬಿಡಿಸಿಕೊಟ್ಟಿದ್ದಾರೆ. ಈ ದೃಷ್ಟಿಯಿಂದ ಬ್ರಹ್ಮಸೂತ್ರಗಳು ಉಪನಿಷನ್ಮಾರ್ಗದ ಚೆಲ್ಲುತ್ತವೆ. ಭಗವದ್ಗೀತೆಯು ಉಪನಿಷದ್ವಿಚಾರಗಳನ್ನು ಸ್ಪಷ್ಟವಾಗಿ ತಿಳಿಸು ಅದರ ಅಧ್ಯಯನವು ಅತ್ಯವಶ್ಯಕ. ಆದ್ದರಿಂದ ಪ್ರಸ್ಥಾನತ್ರಯಗಳನ್ನು ಅಧ್ಯ ಬೇಕು. ಇಲ್ಲದಿದ್ದಲ್ಲಿ ವೇದಾಂತದ ಅಧ್ಯಯನ ಅಪೂರ್ಣ.

ಭಗವದ್ರಾಮಾನುಜರು ಬ್ರಹ್ಮಸೂತ್ರಭಾಷ್ಯವನ್ನು ಬರೆದಿದ್ದಾರೆ. ಗೀ ವನ್ನು ರಚಿಸಿದ್ದಾರೆ. ಉಪನಿಷತ್ತಿಗೆ ಮಾತ್ರ ಭಾಷ್ಯಬರೆದಿಲ್ಲ. ಆದರೆ 'ವೇದಾರ್ಥ ವೆಂಬ ಸ್ವತಂತ್ರಗ್ರಂಥದಲ್ಲಿ ವಿರುದ್ಧಾರ್ಥಪ್ರತಿಪಾದನೆಮಾಡುವಂತೆ ತೋರುವ ವಾಕ್ಯಗಳಿಗೆ ಸಮನ್ವಯಮಾಡಿ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದ್ದಾರೆ. ಕೆಲವು ವಾಕ್ಯಗಳು ಮೇಲ್ನೋಟಕ್ಕೆ ಪರಸ್ಪರ ವಿರುದ್ಧಾರ್ಥಕವಾಗಿರುವಂತೆ ತೋರುತ್ತವೆ. ಅವುಗಳನ್ನು ಘಟಕಶ್ರುತಿಗಳ ಮೂಲಕ ಸಮನ್ವಯಮಾಡಲು ಸಾಧ್ಯವಿದೆ. ಶ್ರೀಮದ್ರಾಮಾನುಜಾಚಾರ್ಯರು ತೋರಿಸಿಕೊಟ್ಟಿದ್ದಾರೆ.

ಉಪನಿಷತ್ತುಗಳಲ್ಲಿ ಮೂರು ವಿಭಾಗಗಳಿವೆ—(1) ಭೇದಶ್ರುತಿ (2) ಅ (3) ಘಟಕಶ್ರುತಿ. ಭೇದ ಮತ್ತು ಅಭೇದಶ್ರುತಿಗಳ ನಡುವೆ ವಿರೋಧವಿಲ್ಲದಂ ಶ್ರುತಿಗಳಿಂದಲೇ ಸಮಸ್ಯೆಯನ್ನು ಪರಿಹರಿಸಬಹುದು. ಇದೇ ಆಚಾರ್ಯರಾದ ಉಪನಿಷತ್ತುಗಳ ಅಧ್ಯಯನದಿಂದ ಕಂಡುಕೊಂಡ ಮಾರ್ಗ. ಉದಾಹರಣೆಗೆ– ಬ್ರಹ್ಮಾಸ್ಮಿ', 'ತತ್ತ್ವಮಸಿ' ಮೊದಲಾದವು ಅಭೇದಶ್ರುತಿಗಳು. ಇವು ಜೀವ– ಸ್ವರೂಪೈಕ್ಯಪ್ರತಿಪಾದಕವಾಗಿವೆ ಎಂದು ಒಂದು ಯೋಜನೆ. ಇಲ್ಲಿ ಜೀವ– ವೈಲಕ್ಷಣ್ಯವನ್ನು ಒಪ್ಪಿ ವಿಶಿಷ್ಟೈಕ್ಯಪರವಾಗಿ ಸಮನ್ವಯಮಾಡುವುದೇ ಸಮಂಜ ರಾಮಾನುಜರ ಅಭಿಪ್ರಾಯ. ಮೇಲೆ ಹೇಳಿದ ಮೂರು ವಿಧವಾದ ಶ್ರುತಿಗಳು ಸರ್ವ ಆದರೂ ಅಭೇದಶ್ರುತಿಯೇ ಪ್ರಧಾನ. ಜೀವ–ಬ್ರಹ್ಮರಿಗೆ ಸ್ವರೂಪೈಕ್ಯವುಂಟು, ಪಾರಮಾರ್ಥಿಕವಲ್ಲವೆಂದು ಕೆಲವರ ಹೇಳಿಕೆ. ಇನ್ನು ಕೆಲವರಿಗೆ ಭೇದಶ್ರುತಿಯೇ ಅಭೇದಶ್ರುತಿಯು ಗೌಣ. 'ರಾಜಾ ರಾಷ್ಟ್ರಮ್' ಎಂಬಲ್ಲಿ ರಾಷ್ಟ್ರವು ರಾಜಾಧೀನ ಆದ್ದರಿಂದ ಇಲ್ಲಿ ಅಭೇದನಿರ್ದೇಶವುಂಟು. ಇದರಂತೆಯೇ ಜೀವಸ್ವರೂಪವು ಪ

೦ೀರಮ್' ಎಂಬಲ್ಲಿ ಚೇತನಾಚೇತನಗಳಿಗೂ ಮತ್ತು ಪರಮಾತ್ಮನಿಗೂ ಶರೀರಾತ್ಮ
ವ–ಶರೀರಭಾವ)ವನ್ನು ಹೇಳಿದೆ. ಆದ್ದರಿಂದ ಸರ್ವವೂ ಪರಮಾತ್ಮನಿಗೆ
ಇದೆ. ಈ ನಯನವೂ ಗೌಣಪರವಾದು.

ಭಗವದ್ರಾಮಾನುಜರ ಅಭಿಪ್ರಾಯದಲ್ಲಿ ಮೂರು ವಿಧವಾದ ಶ್ರುತಿಗಳೂ
'ವೇದಾಃ ಪ್ರಮಾಣಮ್' ಎಂಬಂತೆ–ಎಲ್ಲ ವಿಧವಾದ ಶ್ರುತಿವಾಕ್ಯಗಳಿಗೂ
ಪ್ರ ಏಕರೂಪವಾದುದು. ಭೇದಶ್ರುತಿಯು ಜೀವ–ಬ್ರಹ್ಮರಿಗೆ ಪರಸ್ಪರ
ಕವೈಲಕ್ಷಣ್ಯವನ್ನು ಬೋಧಿಸುತ್ತದೆ. ಅಭೇದಶ್ರುತಿಯು ಜೀವಬ್ರಹ್ಮರಿಗೆ
ಬೋಧಿಸುತ್ತದೆ. ಘಟಕಶ್ರುತಿಯು ಶರೀರಾತ್ಮಭಾವಬೋಧಕವಾದುದು.
ೀವನು ಪರಮಾತ್ಮನ ಶರೀರ. ಆದ್ದರಿಂದ ಪರಮಾತ್ಮೈಕನಿಯಾಮ್ಯ.
ಮ್' 'ಮನಃಪಶ್ಯೇಕ್ಷಮ್' ಮೊದಲಾದ ವಾಕ್ಯಗಳಿವೆ. ಇಲ್ಲಿ ದೇವ
ವಶರೀರಕ ಜೀವಾತ್ಮನನ್ನು ಬೋಧಿಸುವುದು. 'ತತ್ತ್ವಮಸಿ' ಎಂಬ ವಾಕ್ಯ
ತ್ವಮ್' ಎಂದರೆ ಜೀವಶರೀರಕನಾದ ಪರಮಾತ್ಮ ಎಂದೇ ಅರ್ಥೈಸಬೇಕು.
ಜೀವಶರೀರಕ ಅಥವಾ ಜೀವಾಂತರ್ಯಾಮಿಪರಮಾತ್ಮನೂ, ಜಗತ್ಕಾರಣ
ಒಬ್ಬನೇ ಎಂದರ್ಥ. ಆದಕಾರಣ ಇಲ್ಲಿ ಸಮಾನಾಧಿಕರಣನಿರ್ದೇಶವುಂಟು.
ಬ್ರಹ್ಮವೈಲಕ್ಷಣ್ಯವನ್ನೇ ನುಡಿಯುವುದು. ಇದರಿಂದ ಬ್ರಹ್ಮ ಸರ್ವತಂತ್ರ
ುದು ತಿಳಿಯುತ್ತದೆ. ಜೀವನು ಬ್ರಹ್ಮನಿಗೆ ಪರತಂತ್ರ ಎಂಬುದೂ ಸುಸ್ಪಷ್ಟ
ಇದೇ ರೀತಿ ಕರ್ಮಜ್ಞಾನಗಳಿಗೂ ಆಚಾರ್ಯರು ಸಮನ್ವಯವನ್ನು ತೋರಿ

ವಲ್ಲಿ ಕಾಂಡದ್ವಯವುಂಟು–ಒಂದು ಕರ್ಮಕಾಂಡ, ಮತ್ತೊಂದು ಜ್ಞಾನಕಾಂಡ.
ವಲ್ಲಿ ಕರ್ಮಸ್ವರೂಪವನ್ನು ಕುರಿತು ಹೇಳಲಾಗಿದೆ. ಇದರಲ್ಲಿ ಯಾವ
ಅಭಿಪ್ರಾಯಭೇದವಿಲ್ಲ. ಜ್ಞಾನವು ಮೋಕ್ಷಸಾಧನವಾದುದು. ಕರ್ಮ
ನಗಳೆರಡರ ನಡುವೆ ಅಂಗಾಂಗಿಭಾವವಿದೆ. ಕರ್ಮವು ಅಂಗ ; ಜ್ಞಾನವು
ವಿಷಯದಲ್ಲಿ ಮಾತ್ರ ಆಚಾರ್ಯರಲ್ಲಿ ಬಿನ್ನಾಭಿಪ್ರಾಯಗಳಿವೆ. ಈ ಅಭಿ
ವೇ ಮತಭೇದಕ್ಕೆ ಕಾರಣವಾದುದು. ಇದನ್ನು ಕುರಿತೇ ಆಚಾರ್ಯರಾಮಾ
ದಾರ್ಥಸಂಗ್ರಹದಲ್ಲಿ ವಿವೇಚಿಸಿದ್ದಾರೆ. ಮೊಟ್ಟಮೊದಲನೆಯ ಹಂತದಲ್ಲಿ
ಳ ವಿಭಜನೆಯನ್ನು ಮಾಡಿದ್ದಾರೆ ಭೇದ, ಅಭೇದ ಮತ್ತು ಘಟಕಶ್ರುತಿ
ಎಳಿಕ ಸಕಲಶ್ರುತಿಗಳಿಗೂ ಏಕರೀತಿಯ ಪ್ರಾಮುಖ್ಯವನ್ನು ಅಂಗೀಕರಿಸಿದ್ದಾರೆ.
ಹಂತದಲ್ಲಿ ಮುಖ್ಯರೀತಿಯಿಂದ ಯೋಜನಾಪ್ರಕಾರವನ್ನು ನಿರ್ಧರಿಸಿದ್ದಾರೆ.
ಎಲ ಉದ್ದೇಶವೇ ಭಗವದಾರಾಧನೆ. ಉಪಾಸನೆಯು ಮೋಕ್ಷಸಾಧನ. ಅದಕ್ಕೆ
ಗೆ. ಇದೇ ಸಕಲವೇದದ ಅರ್ಥ ಎಂದೇ 'ವೇದಾರ್ಥಸಂಗ್ರಹ' ಎಂಬುದು
ಅನ್ವರ್ಥನಾಮ. ಆಚಾರ್ಯ ಶಂಕರರು ಉಪನಿಷದ್ಭಾಷ್ಯವನ್ನು ರಚಿಸಿಯೋ
ಅವರ ವ್ಯಾಖ್ಯಾನದಿಂದ ಪದ–ಪದಾರ್ಥದ ಜ್ಞಾನ ಸುಲಭಲಭ್ಯವಾದದು.
ಉಪನಿಷತ್ತಿಗೆ ಪ್ರತ್ಯೇಕವ್ಯಾಖ್ಯಾನ ಅವಶ್ಯಕತೆಯೂ ಅವರಿಗೆ ಕಂಡು ಬಂದಿರ

ಸಂಗ್ರಹವೇ ಉಪನಿಷದ್ಭಾಷ್ಯದ ಸ್ಥಾನದಲ್ಲಿರುವುದರಿಂದ ಭಗವದ್ರಾಮಾನುಜರನ್ನು
ಕಾರರು ಎನ್ನಲು ಅಡ್ಡಿಯಿಲ್ಲ.

ದಶೋಪನಿಷತ್ತುಗಳು ಪ್ರಸಿದ್ಧವಾದವು. ಆಚಾರ್ಯ ರಾಮಾನುಜರ ದ್ವ
ಶ್ವೇತಾಶ್ವತರ, ಸುಬಾಲೋಪನಿಷತ್, ಕೌಷೀತಕೀ, ಮಹಾನಾರಾಯಣೋಪನಿಷ
ಮುಖ್ಯವಾದುವು.

ಈಶಾವಾಸ್ಯೋಪನಿಷತ್ತಿನಲ್ಲಿ ಈ ಮೂಜಗದೊಡೆಯು ಒಬ್ಬನೇ. ಅವನೇ ಪ
ಅತ ಸರ್ವವ್ಯಾಪಿ ಎಂದಿದೆ. ಆ ಭಗವದುಪಾಸನಾಮಾರ್ಗವನ್ನೂ ಈಶಾವಾ
ನಿಷತ್ತು ತಿಳಿಸುತ್ತದೆ.

ಕೇನೋಪನಿಷತ್ತಿನಲ್ಲಿ— ಸರ್ವವ್ಯಾಪಿ ಪರಮಾತ್ಮ, ಅವನೇ ಸರ್ವಪ್ರೇರ
ಪರಮಾತ್ಮನ ಪ್ರೇರಣೆಯಿಂದಲೇ ಇಂದ್ರಿಯಗಳು ಕೆಲಸ ಮಾಡುವುವು. ಅಣುರೇ
ಕಾಷ್ಠಾದಿಗಳ ಚಲನೆಗೂ ಪರಮಾತ್ಮನ ಸಂಕಲ್ಪ ಬೇಕೇಬೇಕು ಎಂದು ನಿರೂಪಿ
ಇದು 'ತೇನ ವಿನಾ ತೃಣಮಪಿ ನ ಚಲತಿ' ಎಂಬುದನ್ನು ಕಥಾ ಮೂಲಕ ತೋರಿಸು

ಎಲ್ಲ ಉಪನಿಷತ್ತುಗಳ ಗುರಿಯೂ ಒಂದೇ, ಅದು ತತ್ತ್ವ-ಹಿತ-ಪುರುಷ
ವಿವರಣೆ. ವಿವರಣಾಕ್ರಮದಲ್ಲಿ ಮಾತ್ರ ವೈವಿಧ್ಯವಿದೆ. ಹಲವು ಉಪನಿಷತ್ತುಗಳಲ್ಲಿ
ದಿಙ್ಮಾತ್ರನಿರೂಪಣೆ ಇರುತ್ತದೆ. ಆದರೆ ಕಠೋಪನಿಷತ್ತಿನಲ್ಲಿರುವ ವಿವರಣೆ
ವಿವರಣಾಕ್ರಮವೂ ಮನ ಮುಟ್ಟುವಂತಹುದು. ಪ್ರಸ್ಥಾನತ್ರಯವನ್ನೂ ಆಳವಾಗಿ (
ವವರಿಗೆ, ಅದರಲ್ಲಿ ಕಠೋಪನಿಷತ್ತಿನಸ್ಥಾನ ಎಂತಹುದೆಂದು ಅರಿವಾಗದೇ ಇರದು.

ಬ್ರಹ್ಮಸೂತ್ರದಲ್ಲಿ 156 ಅಧಿಕರಣಗಳಿವೆ ಪ್ರಾಯಃ ಪ್ರತಿಯೊಂದು ಅಧಿಕ
ಉಪನಿಷತ್ತುಗಳಿಂದಾಯ್ದ ವಿಷಯವಾಕ್ಯಗಳಿವೆ. ಬ್ರಹ್ಮಸೂತ್ರಕಾರರು ಇವುಗಳನ್ನು
ಮಾಡಿದ್ದಾರೆ. ಬಳಿಕ ಅಧಿಕರಣಗಳನ್ನು ರಚಿಸಿದ್ದಾರೆ. ಬ್ರಹ್ಮಸೂತ್ರದ 156 ಅಧಿಕ
32 ಅಧಿಕರಣಗಳಿಗೆ ಕಠೋಪನಿಷದ್ವಾಕ್ಯಗಳನ್ನು ಚರ್ಚಿಸಿದ್ದಾರೆ. ಅದ್ದರಿಂದ ಬ್ರ
ಪ್ರಸ್ಥಾನದಲ್ಲಿ ಹೆಚ್ಚುಭಾಗ ಕಠೋಪನಿಷತ್ತಿನ ವಿಚಾರ ವಿಮರ್ಶೆಗೆ ವಿ
ಮತ್ತೊಂದು ಪ್ರಸ್ಥಾನವಾದ ಭಗವದ್ಗೀತೆಯಲ್ಲಿ ಕಠೋಪನಿಷತ್ತಿನ ಅನೇಕ ಮಂ
ಹಲ-ಕೆಲವು ವ್ಯತ್ಯಾಸಗಳೊಂದಿಗೆ ಅಳವಡಿಸಲಾಗಿದೆ.

ಪ್ರಕೃತ ಈ ಕಠೋಪನಿಷತ್ತಿನಲ್ಲಿ 'ಈಶಾನೋ ಭೂತಭವ್ಯಸ್ಯ' ಎಂದ
ಪ್ರಪಂಚಗಳಿಗೆ ನಿಯಾಮಕನು, ಆ ಪರಮಾತ್ಮನೆಂಬುದಾಗಿ ತಿಳಿಸಿದೆ. ಪ
ನಿಯಮನ ಸಾರ್ವಕಾಲಿಕವಾದುದು. ನಿಯಂತೃತ್ವವು ಪರಮಾತ್ಮನಿಗೆ ಪ್ರಾ
ವುದು. ಆದಕಾರಣ ಇಲ್ಲಿ ಶರೀರಾತ್ಮಭಾವವು ಸೂಚ್ಯವಾಗಿದೆ. 'ಯಸ್ಯ ಚೇತನ
ವಸ್ಥಂ ದ್ರವ್ಯಂ ನಿಯಮೇನ ನಿಯಾಮ್ಯಂ ಧಾರ್ಯಂ ಚ ತತ್ ತಸ್ಯ ಶರೀರಮ್
ಲಕ್ಷಣವಾಕ್ಯ. ಇದು ಪರಮಾತ್ಮನಿಗೂ ಮತ್ತು ತನ್ನಿಯಾಮ್ಯವಾದ ಪ್ರಪಂಚ

ಗಳ ಪ್ರಪಂಚಕ್ಕೂ ನಡುವೆ ಅಪೃಥಕ್ಸಿದ್ಧ ಸಂಬಂಧವುಂಟು. ಪರಮಾತ್ಮನಿಂದ ಿದ ಪ್ರಪಂಚವು ನಿಷೇಧಾರ್ಹ.

ಾತ್ಮನ ಸ್ವರೂಪವು ಪ್ರಾಪ್ಯ. ಇದನ್ನು 'ಅಣೋರಣೀಯಾನ್' ಮುಂತಾದ ನಿರೂಪಿಸಿವೆ. 'ನ ಜಾಯತೇ ಮ್ರಿಯತೇ' ಇತ್ಯಾದಿ ಮಂತ್ರಗಳು ಜೀವ ್ನ ತಿಳಿಸುತ್ತವೆ. 'ನಾಯಮಾತ್ಮಾ ಪ್ರವಚನೇನ ಲಭ್ಯಃ' ಎಂಬುದು ಶ್ರುತಿವಾಕ್ಯ. ಇದರಿಂದ ಪರಮಾತ್ಮನೇ ಸಿದ್ಧೋಪಾಯ ಎಂದು ್. 'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' ವಿಷ್ಣುವಿನ ಅಪ್ರಾಕೃತಲೋಕಪ್ರಾಪ್ತಿಯನ್ನು ಕುರಿತು ಹೇಳಲಾಗಿದೆ. ಪರಮಂ ಪದಮ್' ಎಂಬಲ್ಲಿ ಶಂಕರಭಾಷ್ಯವೂ ಭೇದವನ್ನೇ ಸೂಚ 'ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ' ಎಂಬುದು ಂತಲೂ ಅತಿರಿಕ್ತವಾದ ವಸ್ತುವನ್ನು ಪರಮಾರ್ಥತಃ ನಿಷೇಧಿಸುವುದಿಲ್ಲ. ವು ಉತ್ಕೃಷ್ಟವಾಚಿಯಾದುದು. 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬಲ್ಲಿ ್ಳಿ ಇಂದ್ರಿಯಗಳಿಗಿಂತಲೂ ಪ್ರಧಾನವಾದುದು ಎಂದರ್ಥ. 'ಅರ್ಥೇಭ್ಯಶ್ಚ ಃ' ಎಂಬುದು ಮತ್ತೊಂದು ಗೀತಾವಾಕ್ಯ. ಅದು ಅರ್ಥಗಳಿಗಿಂತಲೂ ್ರಧಾನ ಎಂದು ನುಡಿಯುತ್ತದೆ. ಇಲ್ಲಿ ಪ್ರಾಧಾನ್ಯಾರ್ಥದಲ್ಲಿ ಪರಶಬ್ದದ ತಿ. ಪರಮಾತ್ಮನಿಗಿಂತ ಉತ್ಕೃಷ್ಟವಾದ ವಸ್ತುವು ಯಾವುದೂ ಇಲ್ಲವೆಂಬುದೇ . ಹಾಗೆಯೇ 'ಸಾ ಕಾಷ್ಠಾ ಸಾ ಪರಾ ಗತಿಃ' ಎಂಬ ನುಡಿಗಟ್ಟಿನಿಂದಲೂ ಾಸನಾನಿರ್ವರ್ತ್ಯೋಪಾಯಶಿಷ್ಟಭೂತಃ ಪರಮಾತ್ಮಾ ಸ ಏವ ಪ್ರಾಪ್ಯಶ್ಚ' ಎಂಬ ಕ್ಯದಿಂದ ಪರಮಾತ್ಮನೇ ಪ್ರಧಾನ ಉಪಾಯ ಮತ್ತು ಅವನೇ ಪ್ರಾಪ್ಯ. ಸನಾಪ್ರಸನ್ನ. ಉಪಾಸನೆಯೇ ಆ ಉಪೇಯಕ್ಕೆ ಉಪಾಯ. ಉಪಾಸನಾಪ್ರೀತ ್ತ ಸಿದ್ಧೋಪಾಯ. ಇದೇ ವಿಶಿಷ್ಟಾದ್ವೈತಮತದ ಉಕ್ತಿ. ಉಪಾಸಕನಿಗೆ 'ಸಾ ಾ ಗತಿಃ' ಎಂಬುದನ್ನು ವ್ಯಾಖ್ಯಾನಮಾಡುವಲ್ಲಿ 'ತಸ್ಯ ಚ ವಶೀಕರಣಂ ತಚ್ಛರಣಾ ಂದು ಶ್ರೀಭಾಷ್ಯದ ಉಕ್ತಿಯಂತೆ, ಉಪಾಸಕನಿಗೆ ಪ್ರಪತ್ತಿರೂಪೋಪಾ ಾಗುತ್ತದೆ. ಇದನ್ನು ಈ ಕಠವಲ್ಲಿಯು ನಿರೂಪಿಸುತ್ತದೆ. ಈ ದೃಕ್ ಅನುಸರಿಸಿ ಉಪನಿಷದರ್ಥವನ್ನು ಸರಿಯಾಗಿ ಮಾಡಲು ಸಾಧ್ಯವಿದೆ ಅಭಿಪ್ರಾಯ.

ನುಜಾಚಾರ್ಯರು ಪ್ರಾಯಶಃ ಕಠೋಪನಿಷತ್ತಿನ ಎಲ್ಲ ವಾಕ್ಯಗಳನ್ನು ಬ್ರಹ್ಮ ಧಿಕರಣಗಳಿಗೆ ಅರ್ಥವಿಚಾರ ಮಾಡುವಾಗ ವಿಮರ್ಶಿಸಿದ್ದಾರೆ. ಅಲ್ಲಲ್ಲಿ ನ ವಾಕ್ಯಗಳಿಗೆಲ್ಲಾ ವಿವರಣೆಗಳನ್ನು ನೀಡಿದ್ದಾರೆ. ಈ ವಿವರಣೆಗಳನ್ನೆಲ್ಲಾ ಕ್ರೋಢಿಸಿದಲ್ಲಿ ಅದೇ ರಾಮಾನುಜರ ಕಠೋಪನಿಷದ್ಭಾಷ್ಯವಾಗಬಹುದು. ಠೋಪನಿಷತ್ತಿಗೆ ಇಷ್ಟು ಉನ್ನತಸ್ಥಾನವನ್ನು ನೀಡಿದ್ದಾರೆ. ಅದಕ್ಕೆ ಕಾರಣ ್ಲಿರುವಂತೆ ತತ್ತ್ವ—ಹಿತ—ಪುರುಷಾರ್ಥಗಳ ಚಿಂತನೆ ಮತ್ತೊಂದೆಡೆ ಅಗಿಲ್ಲ.

ಉಪಕರಿಸುತ್ತಿರುವ ಭಾರತ ಸರ್ಕಾರಕ್ಕೂ ಹಾಗೂ ರಾಜ್ಯ ಸರ್ಕಾರಕ್ಕೂ ನಾವು ಚಿರಋಣಿಗಳು. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ವಿವೇಕ ಮುದ್ರಣಾಲಯದವರಿಗೆ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳು.

ಉಪನಿಷನ್ಮಾಲೆಯಲ್ಲಿ ಮೂರನೆಯ ಕುಸುಮವಿದು. ಕಠೋಪನಿಷತ್ ಕನ್ನಡ ಅವತರಣಿಕೆಯು ಕನ್ನಡಿಗರಿಗೆ ಆದರಣೀಯವಾಗಿ ಅವರ ಜೀವನಮಾರ್ಗದಲ್ಲಿ ದಾರಿದೀಪವಾಗಲಿ ಎಂಬುದು ನಮ್ಮ ಹಾರೈಕೆ.

ಎಂ. ಎ. ಲಕ್ಷ್ಮೀತಾತಾಚಾರ್

ಪ್ರಧಾನ ಸಂಪಾದಕ

# ಕಠೋಪನಿಷತ್

# ವಿಷಯಸೂಚಿ



(ಕಠೋಪನಿಷತ್ ಸಂಸ್ಕೃತ ಮೂಲ – ಕನ್ನಡ ಮೂಲ – ಪ್ರತಿಪದಾರ್ಥ – ತಾತ್ಪರ್ಯ ರಂಗರಾಮಾನುಜಭಾಷ್ಯ – ಭಾಷಾಂತರ – ವ್ಯಾಖ್ಯಾನಸಹಿತ.)

## ಮೊದಲನೆಯ ವಲ್ಲಿ

## ಎರಡನೆಯ ವಲ್ಲಿ

## ಮೂರನೆಯ ವಲ್ಲಿ



## ನಾಲ್ಕನೆಯ ವಲ್ಲಿ

## ಐದನೆಯ ವಲ್ಲಿ

## ಅನುಬಂಧ

## ಗ್ರಂಥಸೂಚಿ





ಇಂತಹ ಉತ್ತಮ ಪ್ರಕಾಶನ ಕಾರ್ಯಗಳಿಗೆ ನಮ್ಮ ಕರ್ನಾಟಕ ಸರಕಾರವೂ, ಕೇಂದ್ರ ಸರ್ಕಾರವೂ ಉದಾರವಾಗಿ ಆರ್ಥಿಕ ಸಹಾಯ ಮಾಡಿರುವುದು ಕನ್ನಡಿಗರಿಗೆ ಒಂದು ಹೆಮ್ಮೆಯ ವಿಷಯ. ಆಧ್ಯಾತ್ಮಿಕ ಸಾಹಿತ್ಯವು ಕನ್ನಡದಲ್ಲಿ ಹೀಗೆ ಮುಂದೆಯೂ ಹೊರಹೊಮ್ಮಿ ಬಂದು ಸಂಸತ್ತಿನ ಉತ್ತಮೋದ್ದೇಶಗಳು ಸಫಲವಾಗಲಿ ಎಂದು ಆಶಿಸುತ್ತೇನೆ.

ಎಂ. ಎ. ಎಸ್. ರಾಜನ್
ಅಧ್ಯಕ್ಷರು.

# ಭೂಮಿಕೆ

## ಕಠೋಪನಿಷತ್

ವೇದಸಾಹಿತ್ಯವು ಸಂಹಿತೆ–ಬ್ರಾಹ್ಮಣ–ಆರಣ್ಯಕ ಮತ್ತು ಉಪನಿಷತ್ ಎಂಬ ನಾಲ್ಕು ವಿಭಾಗಗಳಿಂದ ಕೂಡಿದೆ. ವೇದಗಳ ಅಂತಿಮಭಾಗವೇ ಉಪನಿಷತ್. ಈ ಉಪನಿಷತ್ತುಗಳು ಭಾರತೀಯ ತತ್ತ್ವಜ್ಞಾನದ ಹಾಗೂ ಧರ್ಮಸಿದ್ಧಾಂತಗಳ ಮೂಲಗಳಾಗಿವೆ. ವೈದಿಕ ಧರ್ಮವನ್ನು ಪ್ರತಿಪಾದಿಸುವ ಪ್ರಸ್ಥಾನತ್ರಯಗಳಲ್ಲಿ ಉಪನಿಷತ್ತುಗಳು ಮುಖ್ಯವಾಗಿವೆ. ಇತರ ಎರಡು ಪ್ರಸ್ಥಾನಗಳಾದ ಬ್ರಹ್ಮಸೂತ್ರ ಮತ್ತು ಭಗವದ್ಗೀತೆಗಳು ಉಪನಿಷತ್ತಿನಲ್ಲಿ ಹೇಳಿದ ತತ್ತ್ವಸಿದ್ಧಾಂತಗಳನ್ನೇ ಒಳಗೊಂಡಿವೆ. ಭಾರತೀಯ ದರ್ಶನಗಳಿಗೆಲ್ಲ ಉಪನಿಷತ್ತೆ ಮೂಲ ಎಂದರೆ ಅತಿಶಯೋಕ್ತಿಯಾಗಲಾರದು.

ಉಪನಿಷತ್ತೆಂದರೆ ಬ್ರಹ್ಮವಿದ್ಯೆ. ಗುರುವಿನ ಬಳಿಯೇ ಕುಳಿತು ಅಭ್ಯಾಸ ಮಾಡುವ ವಿದ್ಯೆ. ಈ ವಿದ್ಯೆಯನ್ನು ಗುರುವಿನ ಬಳಿಯೇ ಕುಳಿತು ಅಭ್ಯಾಸಮಾಡಬೇಕು. ಪರಬ್ರಹ್ಮದ ವಿಷಯವನ್ನು ತಿಳಿಸುವ ರಹಸ್ಯವಿದ್ಯೆಯೇ ಉಪನಿಷತ್. ಇದು ಸಂಸಾರಬಂಧಕ್ಕೆ ಕಾರಣವಾದ ಅವಿದ್ಯೆಯನ್ನು ನಾಶಪಡಿಸಿ ಪರಮಾತ್ಮನ ಸಮೀಪಕ್ಕೆ ನಮ್ಮನ್ನು ಒಯ್ಯುತ್ತದೆ. ಆದ್ದರಿಂದ ಉಪನಿಷತ್ತೆನಿಸಿದೆ. ಅಂದರೆ ಪರಮಾತ್ಮದರ್ಶನಕ್ಕೆ ಸಾಧನವಾದ ಬ್ರಹ್ಮವಿದ್ಯೆಯನ್ನು ತಿಳಿಸುವ ಗ್ರಂಥವೇ ಉಪನಿಷತ್.

'ಉಪ-ಸಮೀಪೇ ನಿಷತ್ ಇತ್ಯುಪನಿಷತ್' ಉಪನಿಷತ್ ಎಂಬ ಶಬ್ದವು 'ಉಪ' ಮತ್ತು 'ನಿ' ಎಂಬ ಉಪಸರ್ಗದಿಂದಗೂಡಿದ ಸದ್ ' ಧಾತುವಿಗೆ 'ಕ್ವಿಪ್' ಎಂಬ ಪ್ರತ್ಯಯವು ಸೇರಿ ಉತ್ಪನ್ನವಾದುದು. 'ಉಪ' ಎಂದರೆ ಸಾಮೀಪ್ಯವೆಂದರ್ಥ. 'ನಿ' ಎಂದರೆ ಪೂರ್ಣವೆಂದರ್ಥ. ಸದ್ ಧಾತುವಿಗೆ ವಿಶರಣ, ಗತಿ, ಅವಸಾದನ ಎಂಬ ಮೂರು ಅರ್ಥಗಳಿವೆ. ವಿಶರಣವೆಂದರೆ ಶಿಥಿಲವಾಗುವುದು, ಗತಿ ಎಂದರೆ ಹೊಂದುವುದು, ಅವಸಾದನವೆಂದರೆ ನಾಶಪಡಿಸುವುದು ಎಂದರ್ಥ. ಪ್ರಕೃತ ಇಲ್ಲಿ 'ಸದ' ಧಾತುವಿಗೆ ಗತಿ ಎಂಬ ಅರ್ಥ. ಅದರ [illegible] ಸೇರಿಸುವುದು ಎಂಬುದಾಗಿ. '[illegible] ವಾಕೀಷ್ವ ವಾಕೀಷು ನಿಷತ್ಸೂಪನಿಷತ್ಸು ಚ' ಎಂಬ ಮಹಾಭಾರತವಚನದಿಂದ, ದೇವತಾಪ್ರತಿಪಾದಕವಾದ ಭಾಗವು 'ನಿಷತ್' ಎನಿಸಿಕೊಳ್ಳುತ್ತದೆ. ದೇವತೆಗಳೆಲ್ಲ ಪರಮಾತ್ಮನ ಅಂಗಗಳೆನಿಸಿರುವುದರಿಂದ ಅಂಗಗಳ ಮೂಲಕ ಅಂಗಿಯಾದ ಪರಮಾತ್ಮನನ್ನು ಕುರಿತಾಗಿರುವ ಮಂತ್ರಗಳೂ ಕೂಡ 'ನಿಷತ್' ಎನಿಸುವುವು.

'ಬ್ರಹ್ಮಣಃ ಉಪಾಸನಾತ್ ಇತ್ಯುಪನಿಷತ್' 'ಉಪನಿಷಣ್ಣತ್ವಾದ್ವಾ ಉಪನಿಷತ್' 'ಗಮನೇ ಚ ಅಂತಃ ವಿದ್ಯಾ ಸನ್ನಿಹಿತಾ' ಎಂಬುದಾಗಿ ದ್ರಮಿಡಭಾಷ್ಯ. 'ಗಮನೇ

ಬ್ರಹ್ಮಣ್ಯುಪನಿಷಣ್ಣಾ' ಎಂಬುದಾಗಿ ವಾಮನಟೀಕಾ. 'ಅದ್ವಾರಕ ಭಗವತ್ಪ್ರತಿಪಾದಕತ್ವಂ ಉಪನಿಷಣ್ಣತ್ವಂ' ಎಂದು ಶ್ರುತಪ್ರಕಾಶಿಕಾಚಾರ್ಯರು ಉಪನಿಷತ್ ಶಬ್ದಕ್ಕೆ ಅಪೂರ್ವವಾದ ಅರ್ಥವನ್ನು ಹೇಳಿದ್ದಾರೆ. ನೇರವಾಗಿ ಬ್ರಹ್ಮವನ್ನು ಪ್ರತಿಪಾದಿಸುವುದು ಯಾವುದೋ ಅದು ಉಪನಿಷತ್ ಎಂದು ತಾತ್ಪರ್ಯ.

ಉಪನಿಷತ್ ಎಂಬ ಪದಕ್ಕೆ ಜ್ಞಾನವೆಂಬುದಾಗಿಯೂ ಅರ್ಥವಿದೆ. ಶಿಷ್ಯ ಗುರುವಿನ ಬಳಿ ಕುಳಿತು ಪಡೆದ ಜ್ಞಾನವೇ ಉಪನಿಷತ್. ಹಾಗೆಯೇ ವಿದ್ಯಾಪ್ರತಿಪಾದಕವಾದ ಗ್ರಂಥಭಾಗಕ್ಕೂ (ಶ್ರುತಿಭಾಗಕ್ಕೂ) ಉಪನಿಷತ್ ಎಂದು ಹೆಸರು. ನಾವು ಉಪನಿಷತ್ತನ್ನು ಅಧ್ಯಯನ ಮಾಡುತ್ತೇವೆ, ನಾವು ಪಾಠ ಹೇಳುತ್ತೇವೆ ಎನ್ನುವಾಗ ಗ್ರಂಥ ಎಂಬ ಅರ್ಥದಲ್ಲಿ (ಶಬ್ದರಾಶಿಯಾಗಿ) ಬಳಸುತ್ತೇವೆ. 'ಸದ್' ಧಾತುವಿನ ಅರ್ಥ ನಾಶಗೊಳಿಸುವುದು ಎಂದಾದಾಗ ಸಂಸಾರದ ಬಂಧವನ್ನು ನಾಶಗೊಳಿಸುವುದು ಎಂದರ್ಥ. ಗ್ರಂಥಮಾತ್ರದಿಂದ ಇದು ಸಾಧ್ಯವಿಲ್ಲ. ಗ್ರಂಥದಿಂದ ಉಂಟಾಗುವ ಜ್ಞಾನದಿಂದ ಮಾತ್ರ ಇದು ಸಾಧ್ಯ. ಆದ್ದರಿಂದ ಸಂಸಾರಬಂಧ ನಾಶಕವಾದ ಜ್ಞಾನವನ್ನು ಬೋಧಿಸುವ ಗ್ರಂಥರಾಶಿಗೂ ಉಪನಿಷತ್ ಎಂಬ ವ್ಯವಹಾರವು ಸಂಗತವಾಗಿದೆ.

## ಉಪನಿಷತ್ತುಗಳ ವೈಶಿಷ್ಟ್ಯ

ಉಪನಿಷತ್ತುಗಳಲ್ಲಿ ಅಧ್ಯಾತ್ಮ ಚಿಂತನೆ ಮತ್ತು ತತ್ತ್ವಚಿಂತನೆಗಳ ಜೊತೆಯಲ್ಲಿ ಭಾರತೀಯ ಸಾಮಾಜಿಕ ಜೀವನದ ಸಮಸ್ತ ವಿಷಯಗಳ ಆಳವಾದ ಚಿಂತನೆಯಿದೆ. ಇಷ್ಟೇ ಅಲ್ಲದೆ ಸಮಸ್ತ ಪ್ರಪಂಚವನ್ನು ವ್ಯಾಪಿಸಿರುವ ತತ್ತ್ವದ ಬಗ್ಗೆ ಜಿಜ್ಞಾಸೆ, ಅದನ್ನು ಪಡೆಯುವ ಸಾಧನ ಈ ಬಗ್ಗೆ ಇಲ್ಲಿ ಗಹನವಾದ ವಿಚಾರಧಾರೆಯನ್ನು ಕಾಣಬಹುದು. ಇಂತಹ ವಿಷಯವನ್ನು ವಿಶ್ವದ ಇತರ ಯಾವ ಸಾಹಿತ್ಯಗಳಲ್ಲಾಗಲೀ, ಶಾಸ್ತ್ರಗಳಲ್ಲಾಗಲಿ ಕಾಣಲಾರೆವು.

ಭಾರತೀಯರ ಧರ್ಮಪರಂಪರೆಯಲ್ಲಿ ವಿಶ್ವಾಸವಿಲ್ಲದವರು ಈ ಉಪನಿಷತ್ತುಗಳಲ್ಲಿ ಆಸಕ್ತಿ ತೋರಿದ್ದಾರೆ. ಜರ್ಮನಿಯ ಪ್ರಸಿದ್ಧ ದಾರ್ಶನಿಕನಾದ ಶಾಂಪೆನ್‌ಹಾವರ್ ಎಂಬಾತನು ಉಪನಿಷತ್ತುಗಳ ಬಗ್ಗೆ ಹೇಳಿದ ಮಾತು ಇಲ್ಲಿ ಉಲ್ಲೇಖನೀಯ—ಈ ಉಪನಿಷತ್ತುಗಳು ನನಗೆ ಜೀವನದಲ್ಲಿ ಶಾಂತಿದಾಯಕಗಳಾಗಿವೆ. ಸಾವಿನಲ್ಲೂ ಶಾಂತಿಕೊಡಬಲ್ಲವು. ಉಪನಿಷತ್ತುಗಳ ಅಧ್ಯಯನವು ಉಪಯುಕ್ತವೂ ಉನ್ನತಿಸಾಧಕವೂ ಆಗಿರುವಂತೆ ಮತ್ತಾವುದೇ ಗ್ರಂಥಾಧ್ಯಯನ ಸಾಧಕವಾಗಿಲ್ಲ. ಒಂದಲ್ಲೊಂದು ದಿನ ವಿಶ್ವ ಮಾನವರಿಗೆ ಉಪನಿಷತ್ತಿನ ಉಪದೇಶಗಳೇ ದಾರಿದೀಪವಾಗಬಲ್ಲವು.

ಭಾರತವು ಪರತಂತ್ರವಾಗಿದ್ದಾಗಲೂ ಕೂಡ ಭಾರತೀಯ ಸಂಸ್ಕೃತಿ ಮತ್ತು ನಾಗರೀಕತೆಗೆ ವಿಶ್ವದಲ್ಲಿದ್ದ ಗೌರವಕ್ಕೆ ನಮ್ಮ ಜ್ಞಾನಭಂಡಾರವೆನಿಸಿದ ಉಪನಿಷತ್ತುಗಳೇ ಪ್ರಧಾನ ಕಾರಣ ಎಂಬಂಶವನ್ನು ಅಲ್ಲಗಳೆಯುವಂತಿಲ್ಲ. ಉಪನಿಷತ್ತುಗಳಲ್ಲಿನ ಒಂದೊಂದು ಮಾತಿನಲ್ಲೂ ಜೀವನದಲ್ಲಿ ಉತ್ಸಾಹವನ್ನೂ ಚಿರಶಾಂತಿಯನ್ನೂ ಮೂಡಿಸುವ ಬೆಳಕನ್ನು ಕಾಣ

ಬಹುದು. ಇವುಗಳನ್ನು ಓದಿ ಅಭ್ಯಾಸಮಾಡಿ ಆಚರಣೆಯಲ್ಲಿ ತಂದ ಅನೇಕರು ಸಿದ್ಧರೂ, ಯೋಗಿಗಳೂ ಆಗಿದ್ದಾರೆ. ಅನೇಕರು ಮುಕ್ತರಾಗಿದ್ದಾರೆ. ಅನೇಕರು ಬಡತನದಲ್ಲಿ ಸಂಪತ್ತನ್ನೂ, ಭೌತಿಕವಸ್ತುಗಳ ಅಭಾವದಲ್ಲಿ ಶಾಂತಿಯನ್ನೂ ಪಡೆದಿದ್ದಾರೆ.

ಇವುಗಳಲ್ಲಿ ಹೇಳಿರುವ ಆಧ್ಯಾತ್ಮ ದರ್ಶನದಿಂದ ಮಾನವ ದೇವತ್ವಕ್ಕೇರಬಹುದು. ಇವುಗಳಲ್ಲಿರುವ ಯಾವುದೊಂದು ಮಾತೂ ವ್ಯರ್ಥವಲ್ಲ. ಪರಮಾಣುಯುಗದಲ್ಲೂ ಇವುಗಳ ಕಾಂತಿ ಕುಂದಿಲ್ಲ. ಇವುಗಳ ಒಂದೊಂದು ಮಾತೂ, ಒಂದೊಂದು ರತ್ನದಂತಿದೆ. ಮಾನವ ಜನಾಂಗವನ್ನೇ ಉದ್ಧರಿಸಬಲ್ಲ ಅದ್ಭುತಶಕ್ತಿ ಇವುಗಳಲ್ಲಿದೆ. ವಿಜ್ಞಾನವು ಸೋಲನ್ನೊಪ್ಪಿರುವಲ್ಲಿ ಉಪನಿಷತ್ತಿನ ತತ್ವಗಳು ವಿಜಯ ಸಾಧಿಸಿವೆ. ಇದನ್ನು ಕೇವಲ ಭಾವುಕತೆಯೆನ್ನಲಾಗದು. ಮೃತ್ಯುವಿನ ರಹಸ್ಯ ಭೇದಿಸಲು ತನ್ನಲ್ಲಿ ಯಾವುದೇ ಸಾಧನವಿಲ್ಲವೆಂದು ವಿಜ್ಞಾನವು ಸೋಲನ್ನೊಪ್ಪಿದೆ. ಮೃತ್ಯುವನ್ನು ಜಯಿಸಿ ಅಮೃತತ್ವ ಪಡೆಯುವ ಉಪಾಯವನ್ನು ಉಪನಿಷತ್ತುಗಳಲ್ಲಿ ನಾವು ಅನೇಕ ಕಡೆಗಳಲ್ಲಿ ಕಾಣಬಹುದು. ಉಪನಿಷತ್ತುಗಳಲ್ಲಿ ವರ್ಣಿಸಲ್ಪಟ್ಟಿರುವ ವಿದ್ಯೆಗಳು ಕಲ್ಪನಾ ವಿಲಾಸದ ಫಲವಲ್ಲ. ಸಭ್ಯಜನಾಂಗದ ಸಾವಿರಾರು ವರ್ಷಗಳ ತಪಃಪ್ರಭಾವದ ಆಳವಾದ ಅಭ್ಯಾಸ ಅನುಭವಗಳ ಪ್ರತೀಕವಾಗಿವೆ.

## ಉಪನಿಷತ್ತುಗಳ ಪ್ರಭಾವ

ಜ್ಞಾನಭಂಡಾರವೆನಿಸಿದ ಉಪನಿಷತ್ತಿನ ಪ್ರಭಾವವು ಭಾರತದ ಎಲ್ಲ ದರ್ಶನಗಳ ಮೇಲೂ ಅಚ್ಚಳಿಯದಂತೆ ನಿಂತಿದೆ. ಉಪನಿಷತ್ತಿನ ಜ್ಞಾನಜ್ಯೋತಿಯು ವಿಶ್ವದಲ್ಲಿ ಹರಡಿದ್ದ ಅವಿದ್ಯೆಯ ಅಂಧಕಾರವನ್ನು ನಾಶಮಾಡಿ ಜ್ಞಾನದೀವಿಗೆಯನ್ನು ಬೆಳಗಿಸಿದೆ. ಮೊಗಲರ ಆಳ್ವಿಕೆಯಲ್ಲೂ ವಿದೇಶಗಳಲ್ಲಿ ಉಪನಿಷತ್ತುಗಳ ಪ್ರಚಾರ ನಡೆದಿತ್ತು ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಎಲ್ಲ ವಿಧವಾದ ಯುಕ್ತಿ, ತಂತ್ರ, ಪುರಾಣ, ಪದಾರ್ಥ, ವಿಜ್ಞಾನ, ಸುಖ, ಶಾಂತಿ, ಸಾಧನ ಈ ಎಲ್ಲವೂ ಉಪನಿಷತ್ತುಗಳ ಸೂಕ್ಷ್ಮರೂಪವಾಗಿ ಇವೆ.

ಈ ಜಗತ್ತಿನಲ್ಲಿ ಕಾಣುವ ದುಃಖ, ದೈನ್ಯ, ದಾರಿದ್ರ್ಯ, ಪಾಪ, ಸಂತಾಪ ಈ ಎಲ್ಲವನ್ನೂ ನಾಶಗೊಳಿಸಬಲ್ಲ ಶಕ್ತಿ ಉಪನಿಷತ್ತುಗಳಲ್ಲಿದೆ. ಹೀಗೆ ಉಪನಿಷತ್ತುಗಳಲ್ಲಿಲ್ಲದ ವಿದ್ಯೆಗಳಿಲ್ಲ, ಕಲೆಗಳಿಲ್ಲ. ಮಾನವರ ಆಚಾರವಿಚಾರಗಳು, ಉನ್ನತಮಟ್ಟದ ಸಭ್ಯತೆ, ಆಧ್ಯಾತ್ಮಿಕತೆ, ಮೋಕ್ಷೋಪಾಯ ಎಲ್ಲವೂ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಮೂಡಿದೆ. ಸನಾತನಿಗಳ ಸಾವಿರಾರು ವರ್ಷಗಳ ಚಿಂತನೆ, ಆಳವಾದ ಅಭ್ಯಾಸ ಮತ್ತು ಕ್ರಿಯಾಕಲಾಪಗಳು ಉಪನಿಷತ್ತುಗಳ ರೂಪ ತಾಳಿವೆ. ಈ ಯುಗದಲ್ಲೂ ರಾಮಕೃಷ್ಣಪರಮಹಂಸ, ವಿವೇಕಾನಂದಸ್ವಾಮಿ, ರಾಮತೀರ್ಥ ಮುಂತಾದ ಅನೇಕ ಸಾಧುಸತ್ಪುರುಷರಿಗೆ ಉಪನಿಷತ್ತುಗಳೇ ಪ್ರೇರಕಗಳಾಗಿವೆ.

ಉಪನಿಷತ್ತಿನ ರಹಸ್ಯ ವಿಚಾರಧಾರೆಯಿಂದ ಕೇವಲ ಒಂದೂ ಜನಾಂಗದ ವಿಚಾರಧಾರೆ ಮಾತ್ರ ಪ್ರಭಾವಿತವಾಗಿಲ್ಲ. ಬೌದ್ಧ ಜೈನ ಮುಂತಾದ ದರ್ಶನಗಳೂ ಪ್ರಭಾವಿತವಾಗಿವೆ. ಸೂಫಿಪಂಥದ ರಹಸ್ಯಭಾವನೆ, ಮುಸಲ್ಮಾನರ ಏಕೇಶ್ವರವಾದ, ಕ್ರಿಶ್ಚಿಯನ್ನರ ರಹಸ್ಯವಾದ

–ಶೋಪೆನ್‌ಹಾವರನ ದಾರ್ಶನಿಕ ವಿಚಾರಧಾರೆ–ರಾಜಾರಾಮಮೋಹನರಾಯರ ಬ್ರಹ್ಮಸಮಾಜದ ಮೂಲಭಾವನೆಗಳು, ಸ್ವಾಮಿ ದಯಾನಂದ, ಕವೀಂದ್ರ, ಯೋಗೀಂದ್ರ, ರವೀಂದ್ರ, ಅರವಿಂದರ ವಿಚಾರಧಾರೆಗಳಲ್ಲೂ ಉಪನಿಷತ್ತುಗಳ ಪ್ರಭಾವ ಇದೆಯೆಂದು ಹೇಳಲಾಗಿದೆ. ಶಂಕರ–ರಾಮಾನುಜ–ವಲ್ಲಭ–ಮಧ್ವಮತಗಳು ಈ ಉಪನಿಷತ್ತುಗಳನ್ನವಲಂಬಿಸಿಯೇ ನಿಂತಿವೆ. ಗೀತೆಯಲ್ಲಿ ಹೇಳಿರುವ ನಿಷ್ಕಾಮಕರ್ಮ, ರಾಮಾಯಣ ಮಹಾಭಾರತಗಳಲ್ಲಿ ಹೇಳಿರುವ ಧಾರ್ಮಿಕ ಭಾವನೆಗಳು ಉಪನಿಷತ್ತುಗಳಲ್ಲಿ ಹೇಳಿರುವ ತತ್ತ್ವಗಳನ್ನೇ ಆಧರಿಸಿವೆ. ಇಲ್ಲಿ ಪ್ರಸ್ತಾಪಿಸಿರುವ ವಿಚಾರಗಳಲ್ಲಿ ಎಲ್ಲೂ ಪಕ್ಷಪಾತಕಾಣದ ಕಾರಣವೆಲ್ಲರಿಗೂ ಸಮಾನಲಾಭವೊದಗಿದೆ. ಈ ಕಾರಣದಿಂದಲೇ ಆಸ್ತಿಕರು, ನಾಸ್ತಿಕರು, ಪ್ರಾಚ್ಯ-ಪಾಶ್ಚಾತ್ಯರು ಈ ಎಲ್ಲ ಜನರ ವಿಚಾರಧಾರೆಗೂ ಉಪನಿಷತ್ತುಗಳ ಪ್ರೇರಣೆ ಇರುವಂತಿದೆ. ಮಾನವ ಧರ್ಮ ಅದರ ಅನುಷ್ಠಾನದ ವಿಷಯದಲ್ಲಿ ಉಪನಿಷತ್ತುಗಳಿಗೆ ಯಾವುದೇ ಭೌಗೋಳಿಕ ಎಲ್ಲೆಯೂ ಇಲ್ಲ. ಕಾಲದ ಎಲ್ಲೆಯೂ ಇವುಗಳ ಸನಾತನತೆಗಾಗಲೀ ಪ್ರಸಿದ್ಧಿಗಾಗಲೀ ಧಕ್ಕೆ ಉಂಟುಮಾಡಿಲ್ಲ. ಇವುಗಳಲ್ಲಿ ಜ್ಞಾನ ಮತ್ತು ಅನುಭವ, ಬುದ್ಧಿ ಮತ್ತು ಹೃದಯಗಳ ಸುಂದರ ಸಮನ್ವಯವಿದೆ. ಆದುದರಿಂದಲೇ ಎಲ್ಲಿಯೂ ವಿಷಮತೆ ಕಂಡುಬಂದಿಲ್ಲ.

ವಿಜ್ಞಾನದ ಪ್ರಭಾವದಿಂದ ಮಾನವರಲ್ಲಿ ಕರ್ಮಗಳ ಬಗ್ಗೆ ಸ್ವಲ್ಪ ಉದಾಸೀನತೆ ಕಂಡರೂ, ಜ್ಞಾನದ ಬಗ್ಗೆ ಹಿಂದಿನಂತೆಯೇ ಆಸಕ್ತಿ ಉಳಿದಿದೆ. ಉಪನಿಷತ್ತುಗಳಲ್ಲಿ ಹೇಳಿರುವ ಆತ್ಮ, ಪರಮಾತ್ಮ, ಸೃಷ್ಟಿ, ಪುನರ್ಜನ್ಮ, ಸ್ವರ್ಗ, ಧರ್ಮ, ಆಚಾರ ಮುಂತಾದವುಗಳು ಇಂದಿಗೂ ಹಿಂದಿನಂತೆಯೇ ಯಾವುದೇ ಏರುಪೇರುಗಳಿಲ್ಲದೆ ಉಳಿದಿವೆ. ವಿಜ್ಞಾನಿಗಳ ವಿಚಾರವಾದಗಳಾಗಲೀ, ನಾಸ್ತಿಕರ ವಿತಂಡವಾದಗಳಾಗಲೀ, ಉಪನಿಷತ್ತುಗಳನ್ನು ಎದುರಿಸಲು ಇಂದಿಗೂ ಸಮರ್ಥವಾಗಿಲ್ಲ. ಆದುದರಿಂದಲೇ ಸನಾತನ ಹಿಂದೂಸಂಸ್ಕೃತಿಯು ವಿದೇಶಿಗಳ ಕ್ರೂರದಬ್ಬಾಳಿಕೆಗೂ ಜಗ್ಗದೆ ತಲೆಎತ್ತಿ ನಿಂತಿದೆ. ವಿದೇಶೀಯರ ಆಳ್ವಿಕೆಯಲ್ಲೂ ಈ ಸಂಸ್ಕೃತಿಯಲ್ಲಿ ಜಡತೆ ಮೂಡಿರಲಿಲ್ಲ. ವಿದೇಶಿಯರ ಆಕ್ರಮಣವೆಂಬ ಸುಳಿಗಾಳಿ–ಬಿರುಗಾಳಿಗಳು ಅಪ್ಪಳಿಸಿದರೂ ಈ ಸಂಸ್ಕೃತಿಯು ತೇಜಸ್ಸು–ಸತ್ತ್ವಗಳು ಕುಂದಿಲ್ಲ.

## ಉಪನಿಷತ್ತುಗಳ ಫಲ

ಉಪನಿಷತ್ತುಗಳಲ್ಲಿ ಹೇಳಿರುವ ತತ್ತ್ವಗಳನ್ನು ದೈನಂದಿನ ಜೀವನದಲ್ಲಿ ಅಳವಡಿಸಿಕೊಂಡರೆ ವ್ಯಕ್ತಿಯೇ ಆಗಲಿ, ಸಮಾಜವೇ ಆಗಲಿ ಅವನತಿಯತ್ತ ಹೋಗಲಾರವು. ಅಂತಹ ವ್ಯಕ್ತಿ ದುಃಖ–ದೈನ್ಯಗಳಿಂದ ಪಾರಾಗುವನು. ಇಂತಹ ವ್ಯಕ್ತಿಯಲ್ಲಿ ಅಸೂಯೆ, ದ್ವೇಷ ಮುಂತಾದುವು ಸುಳಿಯಲಾರವು. ಆತನು ಭೌತಿಕ ವಸ್ತುಗಳ ಅಭಾವದಿಂದ ದುಃಖಿಸುವುದಿಲ್ಲ. ಕಾಮ–ಕ್ರೋಧಾದಿಗಳನ್ನು ಜಯಿಸಬಲ್ಲ. ಈತನಿಗೆ ಆತ್ಮತತ್ತ್ವವನ್ನು ತಿಳಿಯುವ ಸಾಧನೆ ಕರಗತವಾಗುವುದು. ಉಪನಿಷತ್ತುಗಳ ಅಧ್ಯಯನದಿಂದ ಪಶುಸದೃಶರು ಮಾನವರಾಗಬಲ್ಲರು. ಮಾನವರು ಅಮೃತಪುತ್ರರಾಗಬಲ್ಲರು. ಅಂತಹ ಶಕ್ತಿ ಉಪನಿಷತ್ತುಗಳಲ್ಲಿವೆ.

## ಉಪನಿಷತ್ತುಗಳು ಮತ್ತು ಸಂಖ್ಯೆ

ಉಪನಿಷತ್ತುಗಳ ಲೋಕಪ್ರಿಯತೆಯಿಂದಲೇ ಉಪನಿಷತ್ತುಗಳ ಸಂಖ್ಯೆ ಗಣನೀಯವಾಗಿ ಹೆಚ್ಚಿದೆ. ಆದರೆ ಇವುಗಳಲ್ಲಿ ಹತ್ತು ಉಪನಿಷತ್ತುಗಳು ಮುಖ್ಯವೆನಿಸಿವೆ. ವಿಚಾರಗಳ ಗಾಂಭೀರ್ಯ–ಹಿರಿಮೆ–ಔದಾರ್ಯಗಳ ದೃಷ್ಟಿಯಿಂದ ವಿಚಾರ ಮಾಡಿದಾಗ ಈ ದಶೋಪನಿಷತ್ತುಗಳಿಗೂ ಇತರ ಉಪನಿಷತ್ತುಗಳಿಗೂ ಇರುವ ಅಂತರ ಕಂಡುಬರುತ್ತದೆ. ಈ ದಶೋಪನಿಷತ್ತುಗಳೊಡನೆ ಸುಬಾಲ–ಕೌಷೀತಕೀ–ಶ್ವೇತಾಶ್ವತರೋಪನಿಷತ್ತುಗಳನ್ನು ಭಗವದ್ರಾಮಾನುಜರು ಮತ್ತು ಅವರ ಅನುಯಾಯಿಗಳು ತಮ್ಮ ಗ್ರಂಥಗಳಲ್ಲಿ ತಿಳಿಸಿರುವರು.

ಪತಂಜಲಿಮಹರ್ಷಿಗಳು ತಮ್ಮ ಮಹಾಭಾಷ್ಯದಲ್ಲಿ ವೇದಶಾಖೆಗಳು ಒಟ್ಟು 1130 ಎಂದು ಹೇಳಿರುವರು. ಇತರ ತತ್ತ್ವಜ್ಞಾನಿಗಳು ವೇದಶಾಖೆಗಳು ಅಪಾರ, ಅನಂತ ಎಂದು ಹೇಳಿರುವರು. ಪ್ರತಿಶಾಖೆಗಳಲ್ಲೂ ಸಂಹಿತಾ–ಬ್ರಾಹ್ಮಣ–ಆರಣ್ಯಕ–ಉಪನಿಷತ್ತುಗಳಿದ್ದವೆಂದು ಹೇಳುತ್ತಾರೆ. ಅಡ್ಯೆಯಾರ್ ಥಿಯಸಾಫಿಕಲ್ ಸೊಸೈಟಿಯವರು ಸುಮಾರು 200 ಉಪನಿಷತ್ತುಗಳನ್ನು ಪ್ರಕಾಶಪಡಿಸಿರುವರು. ಇವುಗಳಲ್ಲಿ ಬಹಳಷ್ಟು ನವೀನ ಕೃತಿಗಳೆಂದು ಅವುಗಳ ಶೈಲಿ, ವ್ಯಾಪಕತೆ–ಗಾಂಭೀರ್ಯ ಮುಂತಾದವುಗಳಿಂದ ತಿಳಿದುಬರುತ್ತವೆ. ಅಲ್ಲದೆ ಇವುಗಳು ಶೈವ–ಶಾಕ್ತ–ವೈಷ್ಣವ ಸಂಪ್ರದಾಯಗಳನ್ನು ಅನುಸರಿಸಿ ರಚಿಸಿದ ಕೃತಿಗಳೆಂದು ಭಾಸವಾಗುತ್ತವೆ. ಅಪೌರುಷೇಯವಾದ ಉಪನಿಷತ್ತುಗಳಲ್ಲಿ ಈ ಸಾಂಪ್ರದಾಯಿಕ ಭೇದಗಳನ್ನಾಗಲೀ, ಧರ್ಮ ಮತ್ತು ವಿಚಾರಗಳಲ್ಲಿ ಸಂಕುಚಿತ ಭಾವನೆಗಳನ್ನಾಗಲೀ ಕಾಣಲಾರೆವು.

## ಉಪನಿಷತ್ತುಗಳು ಮತ್ತು ಪ್ರಕೃತಸ್ಥಿತಿ

ನಮ್ಮಲ್ಲಿ ಸಂಕುಚಿತ ಭಾವನೆಗಳು ಮೂಡಿದಾಗ ಸಂಪ್ರದಾಯ ಭೇದಗಳುಂಟಾಗಿ ನಮ್ಮ ಜ್ಞಾನಕುಂಠಿತವಾಯಿತು. ಅಧಃಪತನದತ್ತ ಸಾಗಿದೆವು. ಅಪೌರುಷೇಯವಾದ ಉಪನಿಷತ್ತುಗಳಲ್ಲಿ ಹೇಳಿರುವ ವಿಷಯಗಳಲ್ಲೂ ನಂಬಿಕೆ ಉಳಿಯಲಾರದಷ್ಟು ಕೆಳಮಟ್ಟಕ್ಕೆ ಬಂದು ನಿಂತಿದ್ದೇವೆ. ನಾವು ಪ್ರಗತಿವಾದಿಗಳು–ವಿಚಾರವಾದಿಗಳು ಎಂಬ ಮುಸುಕನ್ನೆಳೆದುಕೊಂಡ ಕೆಲವರು— ' ಈ ವೇದ ಮತ್ತು ಉಪನಿಷತ್ತುಗಳು ಬಹಳ ಹಳೆಯವು, ಇವು ಈ ಕಾಲಕ್ಕೆ ಸರಿಹೊಂದುವುದಿಲ್ಲ. ಇವುಗಳನ್ನು ಬಿಟ್ಟು ವಿಚಾರಕ್ರಾಂತಿಯನ್ನು ಬೆಳೆಸಬೇಕು. ಪ್ರಗತಿಯನ್ನು ಸಾಧಿಸಬೇಕು. ಹಿಂದಿನ ತತ್ತ್ವಗಳಿಂದಲೇ ಪ್ರಗತಿಯ ಶಿಖರವನ್ನು ಏರಲಾರೆವು ಮುಂತಾಗಿ ಬೊಬ್ಬಿಡುವರು. ಸೌರಮಂಡಲ–ಭೂಮಂಡಲ–ಹಿಮಾಲಯ–ಯಮುನಾ ಗಂಗಾ ನದಿಗಳು ಸಾವಿರಾರು ವರ್ಷಗಳಷ್ಟು ಹಳೆಯದಲ್ಲವೇ ? ಇವುಗಳನ್ನು ಹಳೆಯವೆಂದು ಬಿಡಲು ಸಿದ್ಧರೇ ! ಇವುಗಳಿಂದ ಏನೂ ಲಾಭವಿಲ್ಲ, ಇವುಗಳನ್ನು ನಾಶಮಾಡಿಬಿಡಬೇಕು ಎಂದು ಒಪ್ಪಲು ಸಿದ್ಧರಿರುವರೇ ? ಇದನ್ನು ಒಪ್ಪಲು ಸಿದ್ಧರಾದಲ್ಲಿ ಮಾನವ ಸಂಸ್ಕೃತಿಯ ಮೂಲಪ್ರವಾಹದಂತಿರುವ ಈ ಉಪನಿಷತ್ತುಗಳನ್ನು ಕಡೆಗಣಿಸಬಹುದು.

ಚಂದ್ರಲೋಕಯಾನದ ಈ ವಿಜ್ಞಾನದ ಮುನ್ನಡೆಯಲ್ಲೂ ಇಂತಹ ಜ್ಞಾನೋನ್ಮಾದ ಕಂಡುಬರಲಾರದು. ಗ್ರಹಾಂತರ್ಯಾನ ಮಾಡಿದ್ದರೂ ವಿಜ್ಞಾನದ ಹಂತ ಇನ್ನೂ ಕೆಳಗೇ ಇದೆ. ಉಪನಿಷತ್ತುಗಳು ಮೇಲ್ಮಟ್ಟದಲ್ಲಿವೆ. ಉಪನಿಷತ್ತುಗಳಲ್ಲಿ ಹೇಳಿರುವ ಜೀವನ ತತ್ತ್ವಗಳನ್ನು ವಿಜ್ಞಾನ ಈಗಲೂ ಒದಗಿಸಲಾರದು. ಕೊಳವೆ–ಬಾವಿಗಳ ಮೂಲಕ ನೂರಾರು ಎಕರೆಗಳಿಗೆ ನೀರು ಹಾಯಿಸಬಹುದಾದರೂ ' ಕುಂಭಮೇಲಪ್ರಯಾಗದ ಮಕರ ಸ್ನಾನವನ್ನು ' ಈ ಬಾವಿಗಳಲ್ಲಿ ಮಾಡಲಾದೀತೇ ? ಆದುದರಿಂದ ವಿಚಾರವಾದಿಗಳೇ ಬನ್ನಿ. ಈ ಉಪನಿಷತ್ಸಾಗರದಲ್ಲಿ ಮುಳುಗಿ ಇವುಗಳಲ್ಲಿರುವ ತತ್ತ್ವರತ್ನಗಳ ಕಾಂತಿಯಿಂದ ಶರೀರ–ಮನಸ್ಸುಗಳ ಸಂತಾಪವನ್ನು ಪರಿಹರಿಸಿಕೊಳ್ಳಿ. ಈಗಲೂ ಇವುಗಳ ಕಾಂತಿ ಕುಂದಿಲ್ಲ. ಹಿಂದಿನಂತೆಯೇ ಇದೆ. ನಮ್ಮ ದೃಷ್ಟಿ ಬದಲಾಗಿದೆ. ನಮ್ಮ ಅಜ್ಞಾನ–ಅಭಿಮಾನಗಳು ನಮ್ಮ ದೃಷ್ಟಿಯನ್ನು ಬದಲಿಸಿವೆ. ಇವುಗಳನ್ನು ತೊರೆದು ಉಪನಿಷತ್ತುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಯಥಾರ್ಥದ ಅರಿವಾದೀತು.

## ಕಠೋಪನಿಷತ್

ದಶೋಪನಿಷತ್ತುಗಳಲ್ಲಿ ಕಠೋಪನಿಷತ್ತು ಅತ್ಯಂತ ಪ್ರಸಿದ್ಧವಾದುದು. ಇದು ಕೃಷ್ಣ ಯಜುರ್ವೇದದ ಕಾಠಕ ಶಾಖೆಗೆ ಸೇರಿದೆ. ಇದರಲ್ಲಿ ಎರಡು ಅಧ್ಯಾಯಗಳಿವೆ, ಒಂದೊಂದು ಅಧ್ಯಾಯದಲ್ಲೂ ಮೂರು ಮೂರು ವಲ್ಲಿಗಳಿವೆ. ಇದು ಬಹಳ ಪ್ರಾಚೀನವಾದುದು. ಪ್ರಾಚೀನತ್ವಮಾತ್ರದಿಂದಲ್ಲದೇ ವಿಷಯಗಾಂಭೀರ್ಯದಿಂದಲೂ ಇದರ ಮಹತ್ವ ಹೆಚ್ಚಿದೆ. ಮುಖ್ಯವಾಗಿ ಪಾಪಪುಣ್ಯಗಳು ಕಳೆದ ಮೇಲೆ ಆತ್ಮವಿರುವುದೇ ? ಇಲ್ಲವೆ ? ಈ ಪ್ರಶ್ನೆ ಮಾನವನನ್ನು ಕಾಡುತ್ತಿದೆ. ಇದಕ್ಕೆ ಈ ಉಪನಿಷತ್ ಸಮರ್ಪಕವಾದ ಉತ್ತರವನ್ನು ನೀಡುತ್ತಿದೆ. ಆದ್ದರಿಂದಲೇ ಇದು ಸಾಮಾನ್ಯ ವ್ಯಕ್ತಿಗೂ ರೋಚಕವಾಗಿದೆ.

ಈ ಕಠೋಪನಿಷತ್ತಿನಲ್ಲಿ ಹೇಳಬೇಕಾದ ವಿಷಯವನ್ನು ಒಂದು ಕಥೆಯ ಮೂಲಕ ಹೇಳಿದೆ. ವಾಜಶ್ರವನ ಮಗ ವಾಜಶ್ರವಸ್. ಅವನು ಫಲಾಪೇಕ್ಷೆಯಿಂದ 'ವಿಶ್ವಜಿತ್' ಯಾಗವನ್ನು ಮಾಡಿದ. ತನ್ನ ಸರ್ವಸ್ವವನ್ನು ದಕ್ಷಿಣೆಯಾಗಿ ಯಾಗದಲ್ಲಿ ನೀಡಿದ. ಅದರಲ್ಲಿ ಕೆಲವು ಮುದಿ ಹಸುಗಳೂ ಇದ್ದವು. ಇದನ್ನು ಕಂಡು ನಚಿಕೇತನಿಗೆ ಶ್ರದ್ಧೆ ಮೂಡಿತು. ತನ್ನ ತಂದೆಯ ಬಳಿ ಬಂದು ನಚಿಕೇತನು ನನ್ನನ್ನು ಯಾರಿಗೆ ಕೊಡುವೆ ? ಎಂದು ಎರಡು ಮೂರು ಸಲ ಪೀಡಿಸಿದನು. ತಂದೆ ಸಿಟ್ಟಿನಿಂದ 'ಯಮನಿಗೆ' ಎಂದು ಹೇಳಿದನು. ನಚಿಕೇತನು ಸಂತಸದಿಂದ ಒಪ್ಪಿಕೊಂಡ. ತಂದೆಯ ಸಿಟ್ಟು ಕುಗ್ಗಿತು. ಮಗನನ್ನು ಯಮನಪಟ್ಟಣಕ್ಕೆ ಕಳುಹಿಸಲು ಹಿಂಜರಿದಾಗ ನಚಿಕೇತನು ತಂದೆಯನ್ನು ಕುರಿತು ಮಾತಿಗೆ ತಪ್ಪಬಾರದು ಎಂದು ನುಡಿದು ಯಮನಪಟ್ಟಣಕ್ಕೆ ಹೋದನು. ಅಂದು ಯಮನು ಅಲ್ಲಿರಲಿಲ್ಲ. ನಚಿಕೇತನು ಯಮನ ನಿರೀಕ್ಷೆಯಲ್ಲಿ ನಿರಾಹಾರಿಯಾಗಿ ಮೂರು ದಿನ ಕಳೆದನು.

ಯಮನು ಹಿಂತಿರುಗಿದಾಗ 'ಮೂರು ದಿನಗಳಿಂದ ಅತಿಥಿಯೊಬ್ಬನು ಅನ್ನಾಹಾರಗಳಿಲ್ಲದೆ ಇರುವನು' ಎಂಬ ಸಮಾಚಾರವನ್ನು ತನ್ನವರಿಂದ ತಿಳಿದು ಯಮನು ನಚಿಕೇತನ ಬಳಿ

ಬಂದು ನಮಸ್ಕರಿಸಿದನು. ಎಲೈ ಪೂಜಾರ್ಹನೇ! ಮೂರು ದಿನಗಳಿಂದ ನಿರಾಹಾರಿಯಾಗಿ ಇಲ್ಲಿ ಕಾದಿರುವೆ. ನನ್ನಿಂದ ಅಪರಾಧವಾಯಿತು. ದೋಷ ಪರಿಹಾರಕ್ಕಾಗಿ ಮೂರು ವರಗಳನ್ನು ಕೇಳು ಎಂದು ಹೇಳಿದನು. ನಚಿಕೇತನು ತಂದೆಯ ಸೌಮನಸ್ಯವನ್ನೂ, ಸ್ವರ್ಗಸಾಧನವಾದ ಅಗ್ನಿವಿದ್ಯೆಯನ್ನೂ ಎರಡು ವರಗಳಿಂದ ಪಡೆದನು. ಮೂರನೇ ವರದಿಂದ ಆತ್ಮಸ್ವರೂಪವನ್ನು ಕುರಿತು ಪ್ರಶ್ನಿಸಿದನು. ಇದನ್ನರಿಯಲು ನಚಿಕೇತನು ಅರ್ಹನೇ ಎಂಬುದನ್ನು ಪರೀಕ್ಷಿಸಲು ಯಮನು ನಾನಾಪ್ರಲೋಭನೆಗಳನ್ನು ನಚಿಕೇತನ ಮುಂದಿಟ್ಟು ಪರೀಕ್ಷಿಸಿದನು. ಕೊನೆಗೆ ಅರ್ಹನೆಂದು ತಿಳಿದು ಆತ್ಮಸ್ವರೂಪವನ್ನು ಉಪದೇಶಿಸಿದನು. ಇದರ ವಿಸ್ತಾರವೇ ಕಠೋಪನಿಷತ್ತಿನ ವಿಷಯ.

## ಕಠೋಪನಿಷತ್ತಿನ ಭಾಷೆ

ಕಠೋಪನಿಷತ್ತಿನ ಭಾಷೆ ವೈದಿಕ ಭಾಷೆ. ಇದರಲ್ಲಿ ಬಂದಿರುವ ಬಹಳಷ್ಟು ಶಬ್ದಗಳನ್ನು ಗಮನಿಸಿದರೆ ಇದು ತಿಳಿಯುತ್ತದೆ. ಇಂತಹ ಪ್ರಯೋಗಗಳು ಲೌಕಿಕ ಸಂಸ್ಕೃತದಲ್ಲಿ ವಿರಳ. ಇದರಿಂದ ಈ ಉಪನಿಷತ್ತು ಪ್ರಾಚೀನವಾದುದು ಎಂದು ತಿಳಿದು ಬರುತ್ತದೆ.

ವೇದಗಳಲ್ಲಿ ಉಪಸರ್ಗಗಳನ್ನು ಪ್ರತ್ಯೇಕವಾಗಿ ಪ್ರಯೋಗಿಸಿರುವುದನ್ನು ಕಾಣುತ್ತೇವೆ. ಈ ಉಪನಿಷತ್ತಿನಲ್ಲೂ ಅಂತಹ ಪ್ರಯೋಗಗಳಿವೆ. 'ತಸ್ಮಾತ್ ಪ್ರತಿ ತ್ರೀನ್‌ವರಾನ್ ವೃಣೀಷ್ವ' (ಕ.ಉ. 1–9) ಪರೀವದದೃಶೇ ಮುಂತಾದೆಡೆಗಳಲ್ಲಿ ಇವನ್ನು ಕಾಣಬಹುದು. 'ಕ್ವಸು' ಕಾನಚ್'ಗಳ ಪ್ರಯೋಗಗಳನ್ನು ವೈದಿಕ ಪ್ರಯೋಗಗಳಲ್ಲಿ ಮಾತ್ರ ಕಾಣುತ್ತೇವೆ. 'ದದೃಶಿವಾನ್' (ಪಾ.ಸೂ. 3–2–68) ಎಂಬಲ್ಲಿ 'ಕ್ವಸು' ಪ್ರಯೋಗವಿದೆ.

'ಇತ್ಥಮ್' ಎಂಬ ಅವ್ಯಯಕ್ಕೆ 'ಇತ್ಥಾ' ಎಂಬ ವೈದಿಕ ಪ್ರಯೋಗವಿದೆ. 'ತಸ್ಯ ಹ ನಚಿಕೇತಾ' 'ಏತದ್ವೈತತ್' ಮುಂತಾದೆಡೆಗಳಲ್ಲಿ 'ಹ' 'ವೈ' ಎಂಬ ನಿಪಾತಗಳ ಪ್ರಯೋಗಗಳೂ ವೈದಿಕ ಪ್ರಯೋಗವೇ ಆಗಿವೆ.

'ಉಶನ್' 'ಅಂತರಾತ್ಮನ್' 'ಮನಸೀ' ಈ ಪ್ರಯೋಗಗಳು ವೈದಿಕಗಳೇ. ಹೀಗೆ ವೈದಿಕ ಪ್ರಯೋಗಗಳಿದ್ದರೂ ಕಠೋಪನಿಷತ್ತಿನ ಭಾಷೆ ಲೌಕಿಕ ಸಂಸ್ಕೃತಕ್ಕೆ ಸಮೀಪದಲ್ಲಿದೆ. ಆದುದರಿಂದ ಇದು ವೈದಿಕ ಮತ್ತು ಲೌಕಿಕ ಸಂಸ್ಕೃತ ಭಾಷೆಗಳ ಮಧ್ಯವರ್ತಿಯಾಗಿದೆಯೆಂದು ಕಾಣಬಹುದು.

## ನವೀನರ ಅಭಿಪ್ರಾಯ

ಕೆಲವು ಪಾಶ್ಚಾತ್ಯ ವಿದ್ವಾಂಸರು ಕಠೋಪನಿಷತ್ತಿನ ಎರಡನೇ ಅಧ್ಯಾಯವು ಪ್ರಕ್ಷಿಪ್ತವೆಂದು ಹೇಳುತ್ತಾರೆ. ಅವರು ಕೊಡುವ ಕಾರಣಗಳು ಹೀಗಿವೆ.

1. ಒಂದನೇ ಅಧ್ಯಾಯದ ಕೊನೆಯಲ್ಲಿ ಉಪನಿಷತ್ತಿನ ಅಂತ್ಯಸೂಚಕವಾದ 'ತದ ನಂತ್ಯಾಯಕಲ್ಪತೇ' ಎಂಬ ಮಾತು ಎರಡು ಸಲ ಬಂದಿದೆ. ಇದು ಉಪನಿಷ ತ್ತಿನ ಮಹತ್ವವನ್ನೂ ಮತ್ತು ಉಪನಿಷತ್ತಿನ ಕೊನೆಯನ್ನೂ ಸೂಚಿಸುತ್ತದೆ.
2. ಕಥೆಯು ಒಂದನೇ ಅಧ್ಯಾಯದೊಡನೆ ಪೂರ್ಣಗೊಳ್ಳುವುದು. ನಚಿಕೇತನ ಮೂರು ವರಗಳೂ ಇಲ್ಲಿಗೆ ಪೂರ್ಣವಾಗುತ್ತದೆ
3. ಒಂದನೇ ಅಧ್ಯಾಯದಲ್ಲಿ 'ನಚಿಕೇತಾ' ಎಂಬ ಶಬ್ದವು ಅನೇಕ ಸಲ ಪ್ರಯೋ ಗಿಸಲ್ಪಟ್ಟಿದೆ. ಎರಡನೇ ಅಧ್ಯಾಯದಲ್ಲಿ ಇದರ ಬಳಕೆ ಇಲ್ಲ ಮತ್ತು ದೇಹ, ಯೋಗ, ಯೋಗವಿಧಿ ಶಬ್ದಗಳು ಪ್ರಯೋಗಿಸಲ್ಪಟ್ಟಿವೆ.

ಈ ಕಾರಣಗಳಿಂದ ಇದು ಪ್ರಕ್ಷಿಪ್ತಭಾಗವೆಂದು ಹೇಳುತ್ತಾರೆ. ಈ ವಾದವು ಅಷ್ಟು ಸಾಧುವೆನಿಸುವುದಿಲ್ಲ. ಒಂದನೇ ಅಧ್ಯಾಯದ ಕೊನೆಯಲ್ಲಿ ಬಂದಿರುವ ದ್ವಿರುಕ್ತಿಯು ಪ್ರಕ ರಣದ ಮುಕ್ತಾಯಸೂಚಕವಾಗಿದೆ.

ಅವನ ಮೂರನೇ ವರಕ್ಕೆ ಉತ್ತರವಾಗಿ ಉಪದೇಶಿಸಿದ ವಿಷಯಗಳನ್ನು ಎರಡನೇ ವಲ್ಲಿಯಲ್ಲಿ ವಿವರಿಸಿ ಉಪದೇಶಿಸಲಾಗಿದೆ. ವಿಷಯ ಗಹನವಾದುದರಿಂದ ಮೊದಲನೇ ಅಧ್ಯಾಯದಲ್ಲಿ ಪ್ರಾಪ್ಯಸ್ವರೂಪ–ಪ್ರಾಪ್ತೃಸ್ವರೂಪ, ಉಪಾಯಸ್ವರೂಪಗಳನ್ನು ಆಚಾರ್ಯ ಸ್ಥಾನದಲ್ಲಿ ನಿಂತು ಯಮನೇ ವಿವರವಾಗಿ ಉಪದೇಶಿಸುತ್ತಾನೆ. ಇದರಿಂದ ವಿಷಯದ ಗಹ ನತೆಯೂ ಆಚಾರ್ಯನಲ್ಲಿರಬೇಕಾದ ಕೃಪೆಯೂ ತಿಳಿಯುತ್ತದೆ. ಇಂತಹ ಕ್ರಮವು ಉಪ ನಿಷತ್ತುಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಆದುದರಿಂದ ಅಧ್ಯಾಯವು ಪ್ರಕ್ಷಿಪ್ತವೆಂದು ಹೇಳುವುದು ಅನುಚಿತ.

## ವಿಚಾರ ಸಂಕಿರಣ

ಸಂಸ್ಥೆಯು 1984ರ ಸೆಪ್ಟೆಂಬರ್ ಮಾಹೆಯಲ್ಲಿ ಕಠೋಪನಿಷತ್ತಿನ ಬಗ್ಗೆ ಕನ್ನಡದಲ್ಲಿ ಒಂದು ವಿಚಾರ ಸಂಕಿರಣವನ್ನು ಮೇಲುಕೋಟೆಯಲ್ಲಿ ಏರ್ಪಡಿಸಿತ್ತು. ಪುನಃ 1985 ರ ಜನವರಿಯಲ್ಲಿ ಬೆಂಗಳೂರಿನಲ್ಲಿ ಆಂಗ್ಲಭಾಷೆಯಲ್ಲಿ ಮತ್ತೊಂದು ವಿಚಾರದ ಸಂಕಿರಣವನ್ನು ಏರ್ಪಡಿಸಿತ್ತು. ಈ ವಿಚಾರ ಸಂಕಿರಣಗಳಲ್ಲಿ ಕಠೋಪನಿಷತ್ತಿನ ಮೇಲೆ ಬೆಳಕನ್ನು ಚೆಲ್ಲುವ ಅನೇಕ ವಿಷಯಗಳು ಚರ್ಚಿಸಲ್ಪಟ್ಟವು. ಮುಖ್ಯವಾಗಿ ಯಾಗ, ದಕ್ಷಿಣೆ, ನಚಿಕೇತನ ವ್ಯಕ್ತಿತ್ವ, ಕಠೋಪನಿಷತ್ ಮತ್ತು ಭಗವದ್ಗೀತೆಗಳಲ್ಲಿ ಇರುವ ಸಾಮ್ಯ, ಆತ್ಮವಿಚಾರ, ಅಶ್ವತ್ಥವೃಕ್ಷದ ಮಹತ್ವ, ಮೂರ್ಧನ್ಯನಾಡೀ ವಿಷಯ. ನಚಿಕೇತ ಶಬ್ದಾರ್ಥ–ಪ್ರಾಣಾ ಪಾನಗಳನ್ನು ಸಮಗೊಳಿಸುವಿಕೆ, ಶರೀರದ ಅವಶ್ಯಕತೆ, ಪಂಚಾಗ್ನಿ–ತ್ರಿಣಾಚಿಕೇತಾಗ್ನಿ ಉಪಾಸನೆ, ವಿಷ್ಣುಪಾರಮ್ಯ ಮುಂತಾದ ವಿಚಾರಗಳು ಪ್ರಸ್ತಾಪಿಸಲ್ಪಟ್ಟವು. ಇದರಿಂದ ವೈಜ್ಞಾನಿಕ ದೃಷ್ಟಿಯಿಂದಲೂ ಕಠೋಪನಿಷತ್ತಿನ ಮಹತ್ವವನ್ನರಿಯಲು ಬಹಳ ಸಹಾಯಕ ವಾಯಿತು. ಈ ಅವತರಣಿಕೆಯನ್ನು ಸಿದ್ಧಗೊಳಿಸುವಲ್ಲಿ ಈ ವಿಚಾರ ಸಂಕಿರಣಗಳು ಬಹಳ ಸಹಾಯಕಗಳಾದುವು. ಇದಕ್ಕಾಗಿ ನಾವು ಸಂಸ್ಕೃತ ಸಂಶೋಧನ ಸಂಸತ್ತಿಗೆ ಚಿರಋಣಿಗಳಾಗಿ ದ್ದೇವೆ.

## ಹೊಸ ಪ್ರಕಾಶನ

ಈ ಗ್ರಂಥದಲ್ಲಿ ಉಪನಿಷತ್ ಮತ್ತು ಕಠೋಪನಿಷತ್ತಿನ ಬಗ್ಗೆ ವಿಚಾರಪೂರಿತ ಭೂಮಿಕೆಯೊಂದಿದೆ. ಪಾರಾಯಣಕ್ಕೆ ಅನುಕೂಲವಾಗಲೆಂದು ಕಠೋಪನಿಷತ್ತಿನ ಮಂತ್ರಗಳನ್ನು ಕನ್ನಡ ಲಿಪಿಯಲ್ಲಿ ಕೊಡಲಾಗಿದೆ. ಮತ್ತು ತುಲನಾತ್ಮಕ ಅಧ್ಯಯನಕ್ಕೆ ಅನುಕೂಲವಾಗಲೆಂದು ನಚಿಕೇತನ ಕಥೆಗಳನ್ನು ಸೂಚಿಸಲಾಗಿದೆ.

ಮುಂದೆ ಕನ್ನಡ ಲಿಪಿಯಲ್ಲಿ ಮಂತ್ರಗಳನ್ನು ಕೊಟ್ಟು ಪ್ರತಿಪದಾರ್ಥ ತಾತ್ಪರ್ಯಗಳನ್ನು ಅಳವಡಿಸಿದೆ. ಇದರಿಂದ ಮಂತ್ರದ ಅರ್ಥ ಮತ್ತು ತಾತ್ಪರ್ಯಗಳು ಸುಲಭವಾಗಿ ತಿಳಿಯುತ್ತದೆ. ಇದರಡಿಯಲ್ಲಿ ರಂಗರಾಮಾನುಜಭಾಷ್ಯವನ್ನು ಕನ್ನಡಲಿಪಿಯಲ್ಲಿ ಕೊಟ್ಟು ಅದರ ಅನುವಾದವನ್ನೂ ಅಳವಡಿಸಿದೆ. ಇದರಿಂದ ಮಂತ್ರದ ತಿರುಳು ತಿಳಿಯುತ್ತದೆ. ಅನಂತರ ರಾಮಾನಂದಭಾಷ್ಯ ಮತ್ತು ಗೋಪಾಲಾನಂದಭಾಷ್ಯಗಳ ಸಾರವನ್ನು ವಿಶೇಷಾಂಶಗಳೊಡನೆ ಕೊಡಲಾಗಿದೆ. ಇದು ಮಂತ್ರದ ಸಾರಾರ್ಥವನ್ನು ಅರಿಯಲು ಸಹಕಾರಿಯಾಗಿದೆ.

ಕೊನೆಯಲ್ಲಿ ಅನುಬಂಧಗಳನ್ನು ಅಳವಡಿಸಲಾಗಿದೆ. ಇವುಗಳಲ್ಲಿ ಮಂತ್ರಅಕಾರಾದಿ, ಪ್ರಮಾಣಾಕಾರಾದಿ, ಶ್ರೀಭಾಷ್ಯದಲ್ಲಿ ಉದ್ಧೃತವಾದ ಕಠೋಪನಿಷತ್ ಮಂತ್ರಸೂಚಿ, ಮಂತ್ರದಲ್ಲಿನ ವಿಶೇಷಶಬ್ದಾರ್ಥಗಳು, ಭಗವನ್ನಾಮಾವಳಿ, ಕಠೋಪನಿಷದರ್ಥಸಂಗ್ರಹ ಅನುವಾದಸಹಿತ, ವ್ಯಾಕರಣ ವಿಚಾರ, ಪೂರ್ವಮೀಮಾಂಸಾ ವಿಚಾರ, ಲೌಕಿಕ ನ್ಯಾಯಗಳ ವಿವರಣೆ ಮತ್ತು ಕಠೋಪನಿಷದ್ಗ್ರಂಥಸೂಚಿಯನ್ನು ಅಳವಡಿಸಲಾಗಿದೆ.

ಭಾಷ್ಯಕಾರರ ಚರಿತ್ರೆ, ಉಲ್ಲೇಖಕಾರರ ಚರಿತ್ರೆಯನ್ನು ಈಶಾವಾಸ್ಯ ಮತ್ತು ಕೇನೋಪನಿಷತ್ ಕನ್ನಡ ಅವತರಣಿಕೆಯಲ್ಲಿ ಮುದ್ರಿಸಿರುವ ಕಾರಣ ಗ್ರಂಥವಿಸ್ತಾರದ ಭಯದಿಂದ ಇಲ್ಲಿ ಮುದ್ರಿಸಿಲ್ಲ. ಪಾಠಕರು ಈ ವಿಷಯವನ್ನು ಅಲ್ಲಿಯೇ ಗಮನಿಸಬೇಕಾಗಿ ಪ್ರಾರ್ಥನೆ.

## ನಿವೇದನೆ

ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಂ. ಎ. ಎಸ್. ರಾಜನ್ ಅವರು ವಿಷಯಗಳನ್ನು ಪರಿಶೀಲಿಸಿ ಚರ್ಚಿಸಿ ಸೂಕ್ತ ಸಲಹೆಗಳನ್ನಿತ್ತು ಪ್ರೋತ್ಸಾಹಿಸಿರುವರು. ಇವರಿಗೆ ಹೃತ್ಪೂರ್ವಕ ವಂದನೆಗಳನ್ನರ್ಪಿಸುತ್ತೇವೆ.

ಈ ಕನ್ನಡ ಅವತರಣಿಕೆಯ ಸಂಪಾದನಾಕಾರ್ಯದಲ್ಲಿ ರೂಪ–ರೇಖೆಗಳನ್ನು ರೂಪಿಸಿ, ಕಾಲಕಾಲದಲ್ಲಿ ಸೂಕ್ತ ಮಾರ್ಗದರ್ಶನವಿತ್ತು ಉತ್ತೇಜಿಸಿದ ಸಂಸ್ಕೃತ ಸಂಶೋಧನ ಸಂಸತ್ತಿನ ಕುಲಸಚಿವರೂ, ಪ್ರಧಾನ ಸಂಪಾದಕರೂ ಆದ ವಿದ್ವಾನ್ ಶ್ರೀ ಉ. ವೇ. ಎಂ. ಎ. ಲಕ್ಷ್ಮೀತಾತಾಚಾರ್ಯರವರಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನರ್ಪಿಸುತ್ತೇವೆ.

ಈ ಅವತರಣಿಕೆಯ ಕರಡುಪ್ರತಿಯನ್ನು ಅವಲೋಕಿಸಿ ಸಲಹೆಗಳನ್ನಿತ್ತ ಕಾರ್ಯಕಾರಿ ಸಮಿತಿಯ ಸದಸ್ಯರಾದ ವಿದ್ವಾನ್ ಶ್ರೀ ಎನ್. ಎಸ್. ಅನಂತರಂಗಾಚಾರ್ ಮತ್ತು ವಿದ್ವಾನ್ ಶ್ರೀ ಕೆ. ಎಸ್. ವರದಾಚಾರ್ಯರಿಗೆ ಹೃತ್ಪೂರ್ವಕ ಧನ್ಯವಾದಗಳನ್ನರ್ಪಿಸುತ್ತೇವೆ.

ಮುದ್ರಿತ ಕರಡುಪ್ರತಿಗಳನ್ನು ತಿದ್ದಿ ಈ ಪ್ರತಿ ಇಷ್ಟು ಸುಂದರವಾಗಿ ಮೂಡಲು ಸಹಕರಿಸಿದ ವಿದ್ವಾನ್ ಎನ್. ವೆಂಕಟಾಚಾರ್, ವಿದ್ವಾನ್ ಕೆ. ಎಸ್. ರಾಘವೇಂದ್ರ ಹಾಗೂ ವಿದ್ವಾನ್ ಕೆ. ಶ್ರೀನಿವಾಸ ಅವರಿಗೂ ಸಂಸ್ಥೆಯು ಆಭಾರಿಯಾಗಿದೆ.

ಈ ಅವತರಣಿಕೆಯಲ್ಲಿನ ಗಹನವಾದ ಶಾಸ್ತ್ರ ವಿಷಯಗಳನ್ನು ಸ್ಪಷ್ಟಪಡಿಸಿದ ವಿದ್ವಾನ್ ಎಸ್. ಎಂ. ಎಸ್. ವರದಾಚಾರ್ಯರವರಿಗೂ, ವಿದ್ವಾನ್ ಎಸ್. ಎಮ್. ವೀರರಾಘವಾಚಾರ್ಯರವರಿಗೂ ಈ ಸಂಸ್ಥೆಯು ಆಭಾರಿಯಾಗಿದೆ.

ಈ ಅವತರಣಿಕೆಗಾಗಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಾಯ ನೀಡಿರುವ ವಿದ್ವಾಂಸರಿಗೂ ಈ ಸಂಸ್ಥೆಯು ಆಭಾರಿಯಾಗಿದೆ.

ಸಂಸ್ಥೆಗೆ ಉದಾರವಾಗಿ ಧನಸಹಾಯವಿತ್ತ ಘನಸರ್ಕಾರಕ್ಕೆ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ಈ ಅವತರಣಿಕೆಯನ್ನು ವಿಶೇಷ ಆಸಕ್ತಿ ವಹಿಸಿ ಅಂದವಾಗಿ ಮುದ್ರಿಸಿಕೊಟ್ಟ ಮೈಸೂರಿನ ವಿವೇಕ್ ಪ್ರಿಂಟರ್ಸ್ ಮಾಲೀಕರಾದ ಶ್ರೀ ಡಿ. ಗುರುರಾಜ್ ಅವರಿಗೆ ಹೃತ್ಪೂರ್ವಕ ಧನ್ಯವಾದಗಳನ್ನರ್ಪಿಸುತ್ತೇವೆ.

ಈ ಗ್ರಂಥವು ಕಠೋಪನಿಷತ್ತಿಗೆ ರಾಮಾನುಜದರ್ಶನ ಪರವಾದ ಅರ್ಥವನ್ನು ಅರಿಯಲು ಮತ್ತು ಇತರ ದರ್ಶನಗಳ ತುಲನಾತ್ಮಕ ಅಧ್ಯಯನಗಳಿಗೆ ಸಾಧನವೂ ಆಗಲಿ ಎಂದು ಪ್ರಾರ್ಥಿಸುತ್ತೇವೆ.

ಈ ಅನುವಾದದಲ್ಲಿ ಮಾನವಸಹಜವಾದ ಕೆಲವಾರು ಲೋಪದೋಷಗಳು ಮತ್ತು ಮುದ್ರಣ ದೋಷಗಳು ಸಂಭವಿಸಿರಬಹುದು. ವಿದ್ವಾಂಸರು ಅವುಗಳನ್ನು ಸೂಚಿಸಿದಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸಲು ಅನುಕೂಲವಾಗುವುದು.

ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖಭಾಗ್ಭವೇತ್ ॥

ಸಂಸ್ಕೃತ ಸಂಶೋಧನ ಸಂಸತ್,
ಮೇಲುಕೋಟೆ

ಸಂಪಾದಕರು
ಎಂ. ಬಿ. ಪಾರ್ಥಸಾರಥಿ ಅಯ್ಯಂಗಾರ್
ಎನ್. ಎಸ್. ರಾಮಭದ್ರಾಚಾರ್ಯ

## ನಚಿಕೇತನ ಆಖ್ಯಾನಗಳು

1. ಕಠೋಪನಿಷತ್ತಿನ ನಾಯಕನಂತಿರುವ ನಚಿಕೇತನ ವಿಷಯು ನಮಗೆ ಋಗ್ವೇದದ 10-135 ನೇ ಸೂಕ್ತದಲ್ಲಿ ಮೊದಲು ತಿಳಿದುಬರುತ್ತದೆ. ಅಲ್ಲಿ 'ಬಾಲಕನಾದ ನಚಿಕೇತನು ತನ್ನ ತಂದೆಯಿಂದ ಯಮನ ಬಳಿ ಕಳುಹಿಸಲ್ಪಟ್ಟನು. ಯಮನು ನಚಿಕೇತನಲ್ಲಿರುವ ಶ್ರದ್ಧೆಯನ್ನು ಮೆಚ್ಚಿ ಅವನನ್ನು ತಂದೆಯ ಬಳಿ ಹಿಂತಿರುಗಲು ಅನುಮತಿಕೊಟ್ಟನು' ಎಂದು ತಿಳಿಯುತ್ತದೆ.

2. ನಚಿಕೇತನ ವಿಷಯು ತೈತ್ತಿರೀಯಬ್ರಾಹ್ಮಣದಲ್ಲೂ ಕಂಡುಬರುತ್ತದೆ. ಇಲ್ಲಿ ಕಥೆ ಕಠೋಪನಿಷತ್ತಿನಂತೆಯೇ ಮಹಾಭಾರತದ ಅನುಶಾಸನಿಕಪರ್ವದ 106 ನೇ ಅಧ್ಯಾಯದಲ್ಲಿ ಬಂದಿರುವ ನಚಿಕೇತನ ಕಥೆ ಉಪನಿಷತ್ತಿನ ಕಥೆಗಿಂತ ಸ್ವಲ್ಪ ಭಿನ್ನವಾಗಿದೆ.

ಮಹರ್ಷಿ ಔದ್ದಾಲಕಿಯು ಯಜ್ಞದೀಕ್ಷೆಯನ್ನು ಕೈಗೊಂಡು ಮಗನಾದ ನಚಿಕೇತನಿಗೆ ತನ್ನ ಸೇವೆ ಮಾಡಲು ಸೂಚಿಸಿದನು. ಯಜ್ಞನಿಯಮವು ಸಮಾಪ್ತಿಯಾದನಂತರ ಮಗನನ್ನು ಕುರಿತು ತಂದೆಯು ಈ ರೀತಿ ಹೇಳಿದನು. ಸ್ನಾನದಲ್ಲಿ ನಿರತನೂ, ವೇದಮಂತ್ರಗಳ ಜಪದಲ್ಲಿ ತತ್ಪರನೂ ಆಗಿದ್ದ ನನಗೆ ದರ್ಭೆ, ಸಮಿತ್ತು ಮತ್ತು ಪುಷ್ಪ, ಕಲಶ ಮತ್ತು ಆಹಾರ ಸಾಮಗ್ರಿಗಳನ್ನು ನದೀತೀರದಲ್ಲಿ ಬಿಟ್ಟು ಬಂದೆ. ನೀನು ಈಗಲೇ ಹೋಗಿ ಅವುಗಳನ್ನು ತೆಗೆದುಕೊಂಡು ಬಾ ಎಂದು ಹೇಳಿದನು.

ತಂದೆಯ ಮಾತಿನಂತೆ ನಚಿಕೇತನು ನದೀತೀರಕ್ಕೆ ಹೋಗಿ ನೋಡಿದನು. ಅವುಗಳು ಪ್ರವಾಹದಲ್ಲಿ ತೇಲಿಹೋಗಿದ್ದವು. ನಚಿಕೇತನು ಹಿಂತಿರುಗಿ ಬಂದು ಅವುಗಳು ಸಿಗಲಿಲ್ಲವೆಂದು ತಂದೆಗೆ ಹೇಳಿದನು. ಹಸಿವು ಮತ್ತು ಬಾಯಾರಿಕೆಗಳಿಂದ ಆಯಾಸಗೊಂಡ ಮುನಿಯು ಕೋಪಾವೇಶಹೊಂದಿ ತನ್ನ ಮಗನಿಗೆ ಯಮನನ್ನು ನೋಡೆಂದು ಶಪಿಸಿದನು.

ಆ ರೀತಿ ತಂದೆಯ ವಾಗ್ವಜ್ರದಿಂದ ಪ್ರಹರಿಸಲ್ಪಟ್ಟ ನಚಿಕೇತನು ಕೈಮುಗಿದುಕೊಂಡು 'ಪ್ರಸನ್ನನಾಗು ತಂದೆಯೇ' ಎಂದು ಹೇಳುತ್ತಿದ್ದಂತೆಯೇ ಗತಪ್ರಾಣನಾಗಿ ಕೆಳಕ್ಕೆ ಬಿದ್ದನು.

ತಂದೆಯು ಕೆಳಕ್ಕೆ ಬಿದ್ದ ಮಗನನ್ನು ನೋಡಿ 'ಕಿಂ! ಮಯಾಕೃತಂ' ಅಯ್ಯೋ! ನನ್ನಿಂದ ಏನಾಗಿ ಹೋಯಿತು ಎಂದು ಹೇಳುತ್ತಾ ದುಃಖಾವಿಷ್ಟನಾಗಿ ನೆಲಕ್ಕೆ ಬಿದ್ದನು.

ಹೀಗೆ ದುಃಖಾಕ್ರಾಂತನಾಗಿ ಮಗನನ್ನೇ ಕುರಿತು ಶೋಕಿಸುತ್ತಿದ್ದ ಔದ್ದಾಲಕಿಗೆ ಶೋಕಾವಸ್ಥೆಯಲ್ಲಿಯೇ ಉಳಿದ ಹಗಲು ಕಳೆಯಿತು. ಹಾಗೆಯೇ ಭಯಂಕರವಾದ ರಾತ್ರಿಯೂ ಕಳೆಯಿತು. ದರ್ಭೆಶಯ್ಯೆಯಲ್ಲಿದ್ದ ನಾಚಿಕೇತನು ತಂದೆಯ ಕಣ್ಣೀರಿನಿಂದ ತೋಯ್ದು ಹೋದವನಾಗಿ ಒಣಗಿದ ಸಸ್ಯವು ನೀರಿನಿಂದ ತೋಯ್ದು ಅಲ್ಲಾಡುವಂತೆ ಆದನು. ನಂತರ ನಿದ್ದೆಯಿಂದ ಎಚ್ಚೆತ್ತವನಂತೆ ಎದ್ದನು.

ಔದ್ದಾಲಕಿಯು ದಿವ್ಯತೇಜಸ್ಸಿನಿಂದ ಕೂಡಿದ, ಜೀವಂತನಾಗಿ ಬಂದ ಮಗನನ್ನು ನೋಡಿ ಆಶ್ಚರ್ಯದಿಂದ, 'ಎಲೈ ಮಗನೇ! ನೀನು ನಿನ್ನ ಪುಣ್ಯದಿಂದ ಲೋಕಗಳನ್ನು

ಜಯಿಸಿ ದಿವ್ಯ ಶರೀರ ಪಡೆದಂತೆ ಕಾಣುವೆ. ನನ್ನ ಸೌಭಾಗ್ಯದಿಂದ ನೀನು ಇಲ್ಲಿಗೆ ಬಂದಿರುವೆ" ಎಂದು ಹೇಳಿದನು.

ಆಶ್ಚರ್ಯಚಕಿತನಾದ ತಂದೆಯನ್ನು ಕುರಿತು, ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿದ್ದ ನಾಚಿಕೇತನು ಮುನಿಗಳ ಮಧ್ಯದಲ್ಲಿ ಈ ರೀತಿ ಹೇಳತೊಡಗಿದನು.

ಎಲೈ ತಂದೆಯೇ, ನಿನ್ನ ಆಜ್ಞೆಯಂತೆ ನಾನು ನೂರಾರು ಯೋಜನೆ ವಿಸ್ತಾರವಾದ ಚಿನ್ನದಂತೆ ಕಾಂತಿಯುತವಾದ ಯಮನ ಸಭೆಗೆ ಹೋದೆನು. ನಾನು ಬರುತ್ತಿರುವುದನ್ನು ಕಂಡು ಯಮನು ನನಗೆ ಆಸನ ಕೊಡಲು ತನ್ನ ಸೇವಕರಿಗೆ ಹೇಳಿದನು. ನಿನಗೆ ಗೌರವವನ್ನು ತೋರುವ ಸಲುವಾಗಿ 'ವೈವಸ್ವತನು' ಅರ್ಘ್ಯಾದಿಗಳಿಂದ ನನ್ನನ್ನು ಗೌರವಿಸಿದನು. ಹಾಗೆಯೇ ಸಭಾಸದರಿಂದ ಗೌರವಿಸಲ್ಪಟ್ಟ ನಾನು ಯಮನನ್ನು ಕುರಿತು ಧರ್ಮಜನೇ ! " ನಾನು ನಿನ್ನ ಲೋಕಕ್ಕೆ ಬಂದಿರುವೆನು. ನನಗೆ ಉಚಿತವಾದ ಲೋಕವಾವುದು ? ಅಲ್ಲಿಗೆ ನನ್ನನ್ನು ಕಳುಹಿಸು" ಎಂದು ಕೇಳಿದೆನು.

ಅದಕ್ಕೆ ಯಮನು, ಎಲೈ ಸೌಮ್ಯನೇ ! ನೀನು ಮರಣ ಹೊಂದಿ ಇಲ್ಲಿಗೆ ಬಂದಿಲ್ಲ. ಅಗ್ನಿಯಂತೆ ತೇಜಸ್ವಿಯಾದ ನಿನ್ನ ತಂದೆಯ ಮಾತಿನಂತೆ ಬಂದಿರುವೆ. ನಿನ್ನ ತಂದೆ ಯಮನನ್ನು ನೋಡು ಎಂದು ಮಾತ್ರ ಹೇಳಿರುವನು. ಅವನ ಮಾತನ್ನು ಸುಳ್ಳಾಗಿಸಬಾರದು. ನಿನ್ನ ತಂದೆಯ ಮಾತಿನಂತೆ ನನ್ನನ್ನು ನೋಡಿಯಾಯಿತು, ನೀನು ಹಿಂತಿರುಗು. ನಿನ್ನ ತಂದೆ ದುಃಖಿಯಾಗಿರುವನು. ನೀನು ನನ್ನ ಅತಿಥಿ, ನಿನ್ನ ಅಭೀಷ್ಟವಾವುದು ? ಕೇಳು, ಕೊಡುವೆನು ಎಂದು ಹೇಳಿದನು. ಅದಕ್ಕೆ ನಾನು ಅವನನ್ನು ಈ ರೀತಿ ಕೇಳಿದೆನು. ಎಲೈ ಯಮನೇ ನಾನು ನಿನ್ನಿಂದ ವರವನ್ನು ಪಡೆದುಕೊಳ್ಳಲು ಅರ್ಹನಾಗಿದ್ದರೆ ಪುಣ್ಯಾತ್ಮರು ನೆಲೆಸಿರುವ ಲೋಕಗಳನ್ನು ನೋಡ ಬಯಸುತ್ತೇನೆ. ಅವುಗಳನ್ನು ತೋರಿಸು ಎಂದು ಕೇಳಿದೆನು. ಕೂಡಲೇ ಯಮನು ಕುದುರೆಗಳಿಂದ ಅಲಂಕರಿಸಲ್ಪಟ್ಟ ಕಾಂತಿಯುತವಾದ ರಥದಲ್ಲಿ ಕುಳ್ಳಿರಿಸಿ ಪುಣ್ಯಲೋಕಗಳನ್ನು ತೋರಿಸಿದನು ಮತ್ತು ಯಾವ ಯಾವ ಪುಣ್ಯ ಕಾರ್ಯಗಳಿಂದ ಈ ಲೋಕಗಳ ಪ್ರಾಪ್ತಿಯಾಗುವುದೆಂಬುದನ್ನೂ ತೋರಿಸಿದನು. ಈ ಸಂದರ್ಭದಲ್ಲಿ ಸಮೃದ್ಧಿಯಾಗಿ ಹಾಲನ್ನು ಕೊಡುವ ಗೋದಾನ, ವೇದಾಧ್ಯಯನ, ತಪಸ್ಸು, ಮತ್ತು ಅಗ್ನಿಚಯನಗಳ ಮಹತ್ವವನ್ನು ಹೇಳಲಾಗಿದೆ.

— o —

ವರಾಹಪುರಾಣದ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ನಚಿಕೇತನ ಕಥೆ ಈ ಉಪನಿಷತ್ತಿನ ಕಥೆಗಿಂತ ಸ್ವಲ್ಪ ಭಿನ್ನವಾಗಿದೆ :—

ಉದ್ದಾಲಕನೆಂಬ ಪ್ರಸಿದ್ಧ ಋಷಿ ಇದ್ದನು. ಇವನಿಗೆ ನಚಿಕೇತನೆಂಬ ಮಗನಿದ್ದನು. ಒಂದು ಪ್ರಸಂಗದಲ್ಲಿ ತಂದೆ–ಮಕ್ಕಳಲ್ಲಿ ವಾದ–ವಿವಾದ ಬೆಳೆದು ತಂದೆಯು ಸಿಟ್ಟಿನ ಭರದಲ್ಲಿ ಮಗನನ್ನು ಕುರಿತು ನನ್ನನ್ನು ಇಷ್ಟು ಸಿಟ್ಟಿಗೆಬ್ಬಿಸಿದ ನೀನು ಬೇಗನೆ ಯಮನ ಬಳಿಗೆ ಹೋಗು. ಸಾವಿನ ಊರನ್ನು ಕಂಡು ಬಾ ಎಂದು ಗದರಿಸಿದನು. ಆಗ ನಚಿಕೇತನು ತಂದೆಯ

ಮಾತನ್ನು ಶಿರಸಾವಹಿಸಿ, ತಂದೆಯ ನುಡಿಗೆ ಚ್ಯುತಿಬರಬಾರದೆಂದು ಭಾವಿಸಿ ಯಮಪುರಿಗೆ ಹೋಗಲು ತಂದೆಯ ಅಪ್ಪಣೆಯನ್ನು ಬೇಡಿದನು.

ತಾನು ಕೋಪಾವೇಶದಲ್ಲಿ ಆಡಿದ ನುಡಿಯನ್ನು ನಿಜವೆಂದು ಭಾವಿಸಿ ಯಮಪುರಿಗೆ ಹೊರಟು ನಿಂತಿರುವ ಮಗನನ್ನು ಕುರಿತು ತಂದೆಯಾದ ಉದ್ದಾಲಕನು ಈ ರೀತಿ ನುಡಿದನು.

ಮಗು ನನಗೆ ಇರುವವನು ನೀನೊಬ್ಬನೇ. ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟ ನಾನು ನಿನಗೆ ಹಾಗೆ ಹೇಳಿದೆ. ಕೋಪದಿಂದ ಆಡಿದ ನನ್ನ ಮಾತನ್ನು ನೀನು ನಿಜಗೊಳಿಸಬೇಡ, ನನಗೆ ಇದರಿಂದ ಅಪಕೀರ್ತಿ ಬಂದರೂ ಸರಿಯೇ, ನಿನ್ನನ್ನು ಬಿಟ್ಟು ನಾನು ಇರಲಾರೆ. ಸುಳ್ಳುಡಿದ ನನ್ನನ್ನು ನಿನ್ನಂತಹ ಸತ್ಪುತ್ರನು ಪಾರುಮಾಡಬಲ್ಲ. ಸುಳ್ಳಾಡುವ ಮನುಷ್ಯನು ಕುಲಘಾತಕನಾಗಿರುತ್ತಾನೆ. ನೀನು ನನ್ನ ಮಾತಿಗೆ ಮಹತ್ವವನ್ನು ಕೊಡದೇ ನನ್ನ ಅಂತಃ ಕರಣಕ್ಕೆ ಮಹತ್ವವನ್ನು ಕೊಡು, ನಾನು ಮನಸ್ಸಿನಿಂದ ಧರ್ಮದೂಷಕನಲ್ಲ, ಪುತ್ರ ದ್ವೇಷಕನೂ ಅಲ್ಲ. ನೀನು ಒಂದುವೇಳೆ ಯಮಪುರಿಗೆ ಹೋದಲ್ಲಿ ಆ ಯಮನು ನಿನ್ನನ್ನು ಪುನಃ ಈಕಡೆ ಕಳುಹಿಸಲಾರ. ನಿನ್ನನ್ನು ಯಮಪುರಿಗೆ ಕಳುಹಿಸಿದ ನಾನು ವಂಶಘಾತಕನೂ, ಎಲ್ಲರಿಂದ ಧಿಕ್ಕರಿಸಲ್ಪಟ್ಟವನೂ ಆಗುತ್ತೇನೆ. ಮುಂದೆ ಮಗನಿಲ್ಲದ ನಾನು ಹೋಮ-ಹವನ-ಜಪ-ತಪ-ದಾನ-ಧರ್ಮ ಏನು ಮಾಡಿದರೂ ವ್ಯರ್ಥವಾಗುವುದು. ಪುತ್ರಹೀನ ನಾದ ನನಗೆ ಮುಂದೆ ಸ್ವರ್ಗಾದಿ-ಸದ್ಗತಿಯೂ ಆಗುವುದಿಲ್ಲ. 'ಪುತ್' ಎಂಬ ನರಕಕ್ಕೆ ನಾನು ಹೋಗಬೇಕಾಗುವುದು. ಆದುದರಿಂದ ನನ್ನ ವಂಶವರ್ಧಕನಾದ ನೀನು ಯಮ ಪಟ್ಟಣಕ್ಕೆ ಸರ್ವಥಾ ಹೋಗಬೇಡ. ಹೀಗೆ ಅಂಗಲಾಚಿ ಅಳುತ್ತಾ ತನ್ನನ್ನು ಬಿನ್ನಹಮಾಡಿ ಕೊಳ್ಳುವ ತಂದೆಯನ್ನು ಕಂಡು ಮನಕರಗಿದ ನಚಿಕೇತನು ಈ ರೀತಿ ನುಡಿದನು.

ಅಪ್ಪಾ, ನೀವು ಶೋಕಿಸಬೇಡಿ. ನನಗೆ ಮೃತ್ಯುವಿನ ಭಯವಿಲ್ಲ, ಲೋಕವಂದ್ಯನಾದ ಆ ಯಮಧರ್ಮನನ್ನು ಕಂಡು ಮಾತನಾಡಿಸಿ ನಿಮ್ಮ ಬಳಿಗೆ ಪುನಃ ಬರುತ್ತೇನೆ. ನಿಮ್ಮ ಕರುಣೆಯ ಕವಚವನ್ನು ತೊಟ್ಟು ನಡೆದ ನನ್ನ ಸಮೀಪದಲ್ಲಿಯೂ ಕೂಡ ಸಾವು ಸುಳಿಯ ಲಾರದು. ನಿಮ್ಮ ನುಡಿಯನ್ನು ಸತ್ಯವಾಗಿಸಹೊರಟ ನನಗೆ ಮೃತ್ಯುವಿನಿಂದ ಯಾವ ತೊಂದರೆಯೂ ಇಲ್ಲ, ಯಮಧರ್ಮನಿಂದ ದಿವ್ಯ-ಜ್ಞಾನೋಪದೇಶವನ್ನು ಪಡೆದುಕೊಂಡು ನಿಮ್ಮ ಚರಣಸನ್ನಿಧಿಗೆ ಬೇಗನೇ ಮರಳಿ ಬರುತ್ತೇನೆ. ನಿಮ್ಮಲ್ಲಿ ನನ್ನದು ಒಂದು ಬಿನ್ನಹ, ನೀವು ಎಂದೂ ಸತ್ಯಚ್ಯುತರಾಗಬಾರದು. ನಮ್ಮನ್ನು ಸರ್ವಸಂಕಟಸಾಗರದಿಂದ ದಾಟಿಸುವ ನೌಕೆಯಂತಿರುವ ಸತ್ಯವನ್ನು ಎಂದೂ ಕೈಬಿಡಬಾರದು. ಸತ್ಯವೆಂದರೆ 'ಸ್ವರ್ಗದ ಮೆಟ್ಟಿಲು, ಮುಕ್ತಿಯ ತೊಟ್ಟಿಲು, ಸುಖದ ಬಟ್ಟಲು.'

ಸೂರ್ಯನ ಬೆಳಕಿಗೂ, ವಾಯುವಿನ ಸದಾಗತಿಗೂ, ಅಗ್ನಿಯ ತೇಜಸ್ಸಿಗೂ, ಭೂಮಿಯ ಸ್ಥಿತಿಗೂ, ಸತ್ಯವೇ ಮೂಲ. ಸಮುದ್ರವು ಎಲ್ಲೆಯನ್ನು ಮೀರದಿರುವುದು ಸತ್ಯದ ಮಹಿಮೆಯಿಂದ. ವೇದಗಳ ಹಾಡಿನ ಸೊಲ್ಲು ಸತ್ಯ. ಸತ್ಯದಿಂದಲೇ ಲೋಕಗಳ ಪ್ರತಿಷ್ಠೆ, ಧರ್ಮರಕ್ಷಣೆಯೂ ಸತ್ಯದಿಂದಲೇ ಆದಕಾರಣ ಆ ಸತ್ಯವನ್ನು ನೀನು ಸಂರಕ್ಷಿಸು ಎಂಬುದಾಗಿ ತಂದೆಗೆ ಸತ್ಯದ ಮಹಿಮೆಯನ್ನು ತಿಳಿಸಿ ಅವನ ಅಪ್ಪಣೆಯನ್ನು ಪಡೆದು ತನ್ನ ಯೋಗ ಶಕ್ತಿಯಿಂದ ಶರೀರಸಹಿತನಾಗಿಯೇ ಯಮಪುರಿಗೆ ನಡೆದನು. ಅಲ್ಲಿ ಯಮಧರ್ಮನ

ಇವನನ್ನು ಸ್ವಾಗತಿಸಿ ಆದರದಿಂದ ಉಪಚರಿಸಿದನು. ಪ್ರೀತಿಯಿಂದ ಪೂಜಿಸಿದನು. ಮನೆಗೆ ಬಂದ ಮುನಿಕುಮಾರನನ್ನು ಸಂಭ್ರಮದಿಂದ ಸತ್ಕರಿಸಿ ಸಂತೋಷಪಡಿಸಿ ಮರಳಿ ಭೂಲೋಕಕ್ಕೆ ಕಳುಹಿಸಿಕೊಟ್ಟನು.

ಸಾವಿನ ನೆಲೆಯಾದ ಯಮಪಟ್ಟಣದಿಂದ ಸುರಕ್ಷಿತವಾಗಿ ಬದುಕಿ ಮನೆಗೆ ಬಂದ ಮಗನನ್ನು ನೋಡಿ ಉದ್ದಾಲಕನಿಗೆ ಕಳೆದುಹೋದ ಪ್ರಾಣವು ತಿರುಗಿಬಂದಂತಾಯಿತು. ಆನಂದಬಾಷ್ಪವು ಕಣ್ಣಂಚಿನಲ್ಲಿ ತುಳುಕಿತು. ಪುತ್ರನನ್ನು ಸಂತೋಷದಿಂದ ಬರಸೆಳೆದು ಬಿಗಿದಪ್ಪಿದನು. ಅವನ ನೆತ್ತಿಯನ್ನು ಮಮತೆಯಿಂದ ಮೂಸಿನೋಡಿದನು. ಹರ್ಷೋದ್ಗಾರಗಳನ್ನು ತೆಗೆದನು. ದೇಶದಲ್ಲಿನ ಋಷಿ-ಮುನಿಗಳನ್ನೆಲ್ಲಾ ಬರಮಾಡಿಕೊಂಡು ಅವರೆದುರು ತನ್ನ ಮಗನ ಮಹಿಮೆಯನ್ನು ಕೊಂಡಾಡಿದನು.



# ತೈತ್ತಿರೀಯ ಬ್ರಾಹ್ಮಣದಲ್ಲಿ ಕಾಠಕೋಪನಿಷತ್

ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ । ತಸ್ಯ ಹ ನಚಿಕೇತಾ ನಾಮ ಪುತ್ರ ಆಸ । ತಂ ಹ ಕುಮಾರಂ ಸಂತಂ ದಕ್ಷಿಣಾಸು ನೀಯಮಾನಾಸು ಶ್ರದ್ಧಾऽऽವಿವೇಷ । ಸ ಹೋವಾಚ ತತ ಕಸ್ಮೈ ಮಾಂ ದಾಸ್ಯಸೀತಿ । ದ್ವಿತೀಯಂ ತೃತೀಯಮಿತಿ ॥

ತಂ ಹ ಪರೀತ ಉವಾಚ । ಮೃತ್ಯವೇ ತ್ವಾ ದದಾಮಿ ಇತಿ ॥

ತಂ ಹ ಸ್ಮೋತ್ಥಿತಂ ವಾಗಭಿವದತಿ । ಗೌತಮ ಕುಮಾರಮಿತಿ । ಸಹೋವಾಚ ಪರೇಹಿ ಮೃತ್ಯೋರ್ಗೃಹಾನ್ । ಮೃತ್ಯವೇ ವೈ ತ್ವಾऽದಾಮ್ ಇತಿ ॥

ತಂ ವೈ ಪ್ರವಸಂತಂ ಗಂತಾಸೀತಿ ಹೋವಾಚ । ತಸ್ಯ ಸ್ಮ ತಿಸ್ರೋ ರಾತ್ರೀರನಾಶ್ವಾನ್ ಗೃಹೇ ವಸತಾತ್ । ಸ ಯದಿ ತ್ವಾಂ ಪೃಚ್ಛೇತ್-ಕುಮಾರ ಕತಿ ರಾತ್ರೀರವಾತ್ಸೀಃ ? ಇತಿ । ತಿಸ್ರ ಇತಿ ಪ್ರತಿಬ್ರೂತಾತ್ । ಕಿಂ ಪ್ರಥಮಾಂ ರಾತ್ರೀಮಾಶ್ನಾ ಇತಿ । ಪ್ರಜಾಂ ತ ಇತಿ ॥ ಕಿಂ ದ್ವಿತೀಯಮಿತಿ । ಪಶೂಂಸ್ತ ಇತಿ । ಕಿಂ ತೃತೀಯಮಿತಿ । ಸಾಧು ಕೃತ್ಯಾಂ ತ ಇತಿ ॥

ತಂ ವೈ ಪ್ರವಸಂತಂ ಜಗಾಮ। ತಸ್ಯ ಹ ತಿಸ್ರೋ ರಾತ್ರೀ ರನಾಶ್ವಾನ್ ಗೃಹ ಉವಾಸ। ತಮಾಗತ್ಯ ಪಪ್ರಚ್ಛ-ಕುಮಾರ! ಕತಿ ರಾತ್ರೀರವಾತ್ಸೀರಿತಿ । ತಿಸ್ರ ಇತಿ ಪ್ರತ್ಯುವಾಚ । ಕಿಂ ಪ್ರಥಮಾಂ ರಾತ್ರೀಮಾಶ್ನಾ ಇತಿ । ಪ್ರಜಾಂತ ಇತಿ । ಕಿಂ ದ್ವಿತೀಯಮಿತಿ । ಪಶೂಂಸ್ತ ಇತಿ । ಕಿಂ ತೃತೀಯಮಿತಿ ಸಾಧುಕೃತ್ಯಾಂತ ಇತಿ ।

ನಮಸ್ತೇ ಅಸ್ತು ಭಗವ ಇತಿ ಹೋವಾಚ । ವರಂ ವೃಣೀಷ್ವೇತಿ ।

' ಪಿತರಮೇವ ಜೀವನ್ ಅಯಾನೀತಿ '

ದ್ವಿತೀಯಂ ವೃಣೀಷ್ವೇತಿ । ಇಷ್ಟಾಪೂರ್ತಯೋ ರ್ಮೇऽಕ್ಷಿತಿಂ ಬ್ರೂಹೀತಿ ಹೋವಾಚ । ತಸ್ಮೈ ಹೈ ತಮಗ್ನಿಂ ನಾಚಿಕೇತಮುವಾಚ । ತತೋ ವೈ ತಸ್ಯೇಷ್ಟಾ ಪೂರ್ತೇ ನ ಕ್ಷೀಯೇತೇ ॥

ನಾಸ್ಯೇಷ್ಟಾಪೂರ್ತೆ ಕ್ಷೀಯತೇ । ಯೋऽಗ್ನಿಂ ನಾಚಿಕೇತಂ ಚಿನುತೇ । ಯ ಉ ಚೈನ ಮೇವಂ ವೇದ । ತೃತೀಯಂ ವೃಣೀಷ್ವೇತಿ । ಪುನಃ । ಮೃತ್ಯೋರ್ಮೇ ಅಪಜಿತಿಂ ಬ್ರೂಹೀತಿ ಹೋವಾಚ । ತಸ್ಮೈ ಹೈತಮಗ್ನಿಂ ನಾಚಿಕೇತಮುವಾಚ । ತತೋ ವೈ ಸೋಪ ಪುನರ್ಮೃತ್ಯುಮಜಯತ್, ಅಪಪುನರ್ಮೃತ್ಯುಂ ಜಯತಿ ಯೋऽಗ್ನಿಂ ನಾಚಿಕೇತಂ ಚಿನುತೇ ಯ ಉ ಚೈನಮೇವಂ ವೇದ ॥

'ವಾಜ' ಎಂದರೆ ಅನ್ನ. ಅದನ್ನು ದಾನಮಾಡುವುದರಿಂದ ಕೀರ್ತಿಯನ್ನು ಪಡೆದವನು ವಾಜಶ್ರವ. ಅವನು ಗೌತಮ ಗೋತ್ರದಲ್ಲಿ ಜನಿಸಿದ ಒಬ್ಬ ಮುನಿ. ಅವನ ಮಗನೇ ಉದ್ದಾಲಕನೆಂದು ಪ್ರಸಿದ್ಧನಾದ ವಾಜಶ್ರವಸನು.

ಇವನು ಒಮ್ಮೆ ಸರ್ವಸ್ವವನ್ನೂ ದಕ್ಷಿಣಾರೂಪವಾಗಿ ಕೊಡಬೇಕಾದ 'ವಿಶ್ವಜಿತ್' ಮೊದಲಾದ ಯಾಗದಿಂದ ಅದರ ಫಲವನ್ನು ಬಯಸುತ್ತಾ ತನ್ನ ಸಮಸ್ತ ಐಶ್ವರ್ಯವನ್ನೂ ಋತ್ವಿಕ್ಕುಗಳಿಗೆ ಧಾರೆ ಎರೆದನು. ಅಂತಹ ಉದ್ದಾಲಕನಿಗೆ ನಚಿಕೇತನೆಂಬ ಹೆಸರುಳ್ಳ ಒಬ್ಬ ಮಗನಿದ್ದನು. ಯಾಗದ ಸಮಯದಲ್ಲಿ ಅವನು ಉಪನಯನಕ್ಕೆ ಪ್ರಾಪ್ತವಯಸ್ಕ ನಾಗಿದ್ದನು. ಋತ್ವಿಕ್ಕುಗಳಿಗೆ ತನ್ನ ತಂದೆಯು ದಕ್ಷಿಣೆಗಳನ್ನು ಕೊಡುತ್ತಿರುವಾಗ ಕುಮಾರ ನಾಗಿದ್ದ ನಚಿಕೇತನಲ್ಲಿ ಅಧಿಕವಾದ ಶ್ರದ್ಧೆಯು ಆವಿರ್ಭಾವಗೊಂಡಿತು. ಶ್ರದ್ಧಾ–ಶ್ರತ್ ಎಂದರೆ ಸತ್ಯವೆಂದರ್ಥ 'ಶ್ರತ್ ಅಸ್ಯಾಂಧೀಯತ ಇತಿ ಶ್ರದ್ಧಾ' ಇದು ಸತ್ಯವೆಂಬ ದೃಢಬುದ್ಧಿ, ನಿಶ್ಚಯ ಯಾವುದರಲ್ಲಿ ಉಂಟಾಗುವುದೋ ಅದು ಶ್ರದ್ಧೆ. ಕೇವಲ ಮೂಢನಂಬಿಕೆ ಶ್ರದ್ಧೆ ಯಲ್ಲ. ಪ್ರಕೃತ ಇಲ್ಲಿ ಶಾಸ್ತ್ರಮರ್ಯಾದೆಯನ್ನು ಅನುಸರಿಸಿ ದಕ್ಷಿಣೆಯನ್ನು ಕೊಡಬೇಕೆಂಬ ಬುದ್ಧಿಯೇ ಶ್ರದ್ಧಾತಿಶಯ.

ಅಧಿಕ ಶ್ರದ್ಧಾಳುವಾದ ಆ ಕುಮಾರನು ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು. ವಿಶ್ವ ಜಿದ್ಯಾಗ ಸಾರ್ಥಕವಾಗಬೇಕಾದರೆ ನನ್ನ ತಂದೆಯಿಂದ ಸರ್ವಸ್ವದಾನವೂ ಆಗಬೇಕಾಗಿದೆ. ನಾನೂ ನನ್ನ ತಂದೆಯ ಸ್ವತ್ತು. ಆದ್ದರಿಂದ ನಾನೂ ಕೂಡ ದಾನಕ್ಕೆ ಅರ್ಹನಾದವನು ಎಂದು ಯೋಚಿಸಿ, ತಂದೆಯನ್ನು ಕುರಿತು ಹೀಗೆಂದನು. 'ಎಲೈ ತಂದೆಯೇ! ನನ್ನನ್ನು ಯಾವ ಋತ್ವಿಕ್ಕಿಗೆ ಕೊಡುವೆ' ಎಂದು ಕೇಳಿದನು ತಂದೆಯು ಮುಗ್ಧಬಾಲಕನಿವನೆಂದು ಲಕ್ಷಿಸದೇ ಸುಮ್ಮನಿದ್ದನು. ಸುಮ್ಮನಿರುವ ತಂದೆಯನ್ನು ಕುರಿತು ನಚಿಕೇತನು ಬಿಡದೆ ಪುನಃ ಪುನಃ ಹಿಂದಿನಂತೆಯೇ ಕೇಳಿದನು.

ಅದಕ್ಕೆ ತಂದೆಯ ಉತ್ತರ–('ತಂ ಹ....' ಎಂಬುದರಿಂದ). ಆಗ ವಾಜಶ್ರವನು ಈ ಬಾಲಕನು ಮುಗ್ಧನಲ್ಲ, ಧೂರ್ತನೆಂದು ತಿಳಿದು ಅತ್ಯಂತ ಕೋಪದಿಂದ 'ಮೃತ್ಯುವಿಗೆ ನಿನ್ನನ್ನು ಕೊಡುತ್ತೇನೆ' ಎಂದು ನಚಿಕೇತನಿಗೆ ಹೇಳಿದನು.

ಈ ಸಮಯದಲ್ಲಿ ಅತೀಂದ್ರಿಯವಾದ ರೂಪವುಳ್ಳ ಒಂದು ದೈವೀವಾಣಿಯು (ಅಶರೀರವಾಣಿಯು) ಆ ನಚಿಕೇತನನ್ನು ಅನುಗ್ರಹಿಸಿತ್ತು. ಅವನನ್ನು ಅನುಗ್ರಹಿಸಿದ ರೀತಿ ('ತಂ ಹ ಇತಿ') ಹೀಗಿದೆ.

ಕೋಪದಿಂದಕೂಡಿ ಹೊರಬಂದ ತಂದೆಯ ಆ ಮಾತನ್ನು ಕೇಳಿ ತಂದೆಯ ದೆಸೆಯಿಂದ ಬೇರೆಡೆಗೆ ಹೋಗಲು ಮೇಲಕ್ಕೆ ಎದ್ದ ಆ ಕುಮಾರನನ್ನು ಲಕ್ಷಿಸಿ ಅನುಗ್ರಹಕ್ಕೆ ತೊಡಗಿದ ಅಶರೀರವಾಣಿಯು, ಈ ರೀತಿ ಹೇಳಿತಷ್ಟೇ! ಏನೆಂದರೆ ಅದು ಈ ಮುಂದೆ ಹೇಳಲಾಗುತ್ತದೆ.

ಎಲೈ ಗೌತಮಕುಲದಲ್ಲಿ ಹುಟ್ಟಿದ ನಚಿಕೇತನೇ! ಆ ನಿನ್ನ ತಂದೆಯು ಹೀಗೆ ಹೇಳಿದನಷ್ಟೆ ಅವನ ಮಾತಿನ ಅಭಿಪ್ರಾಯವಿದು. ಎಲೈ ಪುತ್ರನೇ! ಮೃತ್ಯುವಿನ ಮನೆಗೆ

ತೆರಳುವವನಾಗು. ಮೃತ್ಯುವಿಗೆ ನಿನ್ನನ್ನು ನಾನು ಕೊಟ್ಟಿರುವವನಾಗಿದ್ದೇನೆ ಎಂದು ಹೇಳಿದನು.

ಈ ರೀತಿಯಾಗಿ ಅವನ ತಂದೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸಿ ವಾಗ್ದೇವತೆಯು (ಅಶರೀರವಾಣಿಯು) ಕುಮಾರನನ್ನು ಅನುಗ್ರಹಿಸಲು ಅವನಿಗೆ ಬುದ್ಧಿ ಪ್ರಧಾನವಮಾಡುತ್ತದೆ. ಏನೆಂದರೆ—ಎಲೈ ನಚಿಕೇತನೇ ! ಯಮನು ಯಾವಾಗ ಮನೆಯಿಂದ ಹೊರಟು ಎಲ್ಲಾದರೂ ಬೇರೆಕಡೆಯಲ್ಲಿ ಪ್ರವಾಸದಲ್ಲಿರುವಾಗ ಆ ಸಮಯವನ್ನು ದೃಢವಾಗಿ ತಿಳಿದು ಅವನ ಮನೆಗೆ ಹೋಗುವವನಾಗು (ಹೋಗು ಎಂದರ್ಥ) ಎಂದು ಹೇಳಿ ಪುನಃ ಈ ರೀತಿ ಹೇಳಿತು. ಆ ಯಮನ ಮನೆಗೆ ಹೋಗಿ ಯಮನ ದರ್ಶನ ಸಿಗದಿದ್ದಲ್ಲಿ ಅವನ ಹೆಂಡತಿ–ಮಕ್ಕಳು ಮುಂತಾದವರಿಂದ ಪ್ರಾರ್ಥಿಸಲ್ಪಟ್ಟರೂ ಸಹ ನೀನು ಮೂರು ದಿನಗಳ ಕಾಲ ನಿರಾಹಾರನಾಗಿಯೇ ವಾಸಮಾಡು. ಅಷ್ಟರಲ್ಲಿ ಹಿಂತಿರುಗಿ ಬಂದ ಆ ಯಮನು ನಿನ್ನನ್ನು ಕುರಿತು ಎಲೈ ಕುಮಾರನೇ ! ಎಷ್ಟು ರಾತ್ರಿಗಳು ಇಲ್ಲಿ ವಾಸಿಸಿದೆ ಎಂದು ಪ್ರಶ್ನಿಸಿದ್ದೇ ಆದರೆ, ಆಗ 'ಮೂರು ರಾತ್ರಿ' ಎಂದು ಸತ್ಯವಾದ ಪ್ರತ್ಯುತ್ತರವನ್ನೇ ಕೊಡು. ನಂತರ ಮೊದಲ ದಿನ ಏನು ಆಹಾರ ಪಡೆದೆ ? ಎಂದು ಕೇಳುತ್ತಿರಲಾಗಿ ಅದಕ್ಕೆ ನಿನ್ನ ಪ್ರಜೆಗಳನ್ನೇ ಭಕ್ಷಿಸಿದೆನೆಂದು ಉತ್ತರಿಸು. ಅತಿಥಿಯು ಮನೆಗೆ ಬಂದು ನಿರಾಹಾರನಾಗಿ ಮನೆಯಲ್ಲಿ ವಾಸಮಾಡಿದ್ದೇ ಆದರೆ ಮನೆಯ ಯಜಮಾನನಿಗೆ ಆ ಒಂದು ದಿನದ ಉಪವಾಸದಿಂದ ಪ್ರಜಾಕ್ಷಯವು ಉಂಟಾಗುತ್ತದೆ ಎಂಬ ಶಾಸ್ತ್ರರಹಸ್ಯವು ಆ ಮಾತಿನಿಂದ ಸೂಚಿತವಾಗುತ್ತದೆ. ಹೀಗೆಯೇ ಎರಡನೆಯ ಮತ್ತು ಮೂರನೆಯ ದಿನಗಳ ಉಪವಾಸದಿಂದ ಪಶುಕ್ಷಯವೂ ಮತ್ತು ಪುಣ್ಯಕ್ಷಯವೂ ಆಗುವುದೆಂದು ಸೂಚಿಸಿತು.

ಈ ರೀತಿ ವಾಗ್ದೇವತೆಯಿಂದ ಶಿಕ್ಷಿಸಲ್ಪಟ್ಟ (ತಿಳುವಳಿಕೆ ಪಡೆದ) ನಚಿಕೇತನು ಹಾಗೆಯೇ ಮಾಡಿದನೆಂಬುದನ್ನು 'ತಂ ವೈ - - ಇತಿ' ಎಂಬ ಮುಂತಾದ ವಾಕ್ಯಗಳಿಂದ ಹಿಂದಿನಂತೆಯೇ ತಿಳಿಯಬೇಕೆಂದು ಸೂಚಿತವಾಯಿತು. ಇಷ್ಟರಿಂದ ಈ ಕುಮಾರನು ಶಾಸ್ತ್ರಾರ್ಥರಹಸ್ಯವನ್ನು ಅರಿತವನು ಈ ಕುಮಾರನು ಮೂರ್ಖನಲ್ಲವನಾದ್ದರಿಂದ ಸತ್ಕಾರಾರ್ಹನೇ ಹೊರತು ಮರಣಕ್ಕೆ ಗುರಿ ಮಾಡತಕ್ಕವನಲ್ಲ ಎಂಬುದಾಗಿ ನಿಶ್ಚಯಿಸಿ, 'ನಮಸ್ತೇ....ಇತಿ' ಎಂಬುದರಿಂದ ಯಮನು ಯಾವ ಸತ್ಕಾರವನ್ನು ಮಾಡಿದನೋ ಆ ಪ್ರಕಾರವನ್ನು ವಿವರಿಸುತ್ತಾನೆ—

ಜಗತ್ತಿನ ಉತ್ಪತ್ತಿ ಮತ್ತು ವಿನಾಶವನ್ನೂ, ಪ್ರಾಣಿಗಳ ಉತ್ಪತ್ತಿ ಮತ್ತು ಬದುಕನ್ನೂ, ಕರ್ಮಮಾರ್ಗ ಮತ್ತು ಜ್ಞಾನಮಾರ್ಗವನ್ನೂ ತಿಳಿದವನೇ ಪೂಜ್ಯನು ಎಂಬ ಶಾಸ್ತ್ರವನ್ನು ಅನುಸರಿಸಿ ನಚಿಕೇತನನ್ನು ಅಭಿಜ್ಞನೆಂದು ಭಾವಿಸಿ ಭಗವಚ್ಛಬ್ದದಿಂದ ಸಂಬೋಧನೆ ಮಾಡಿ ಮೂರು ದಿವಸ ಉಪವಾಸದಿಂದಾದ ತನ್ನ ಅಪರಾಧವನ್ನು ನೀಗಿಸಿಕೊಳ್ಳಲು ಮೂರು ವರಗಳನ್ನು ಕೊಟ್ಟನು. ಅಂತಹ ಈ ಅರ್ಥವು ಕಠವಲ್ಲಿಯ ಈ ನಾಚಿಕೇತೋಪಾಖ್ಯಾನದಲ್ಲಿ ಸ್ಪಷ್ಟವಾಗಿ ಶ್ರುತವಾಗಿದೆ. 'ತಿಸ್ರೋ ರಾತ್ರೀಃ....ವೃಣೀಷ್ವ' (ಕ, ಉ, 1–9) ಎಂಬುದಾಗಿ. 'ಪ್ರತಿತ್ರೀನ್ ವರಾನ್' ಎಂಬಲ್ಲಿ 'ಪ್ರತಿ' ಶಬ್ದದಿಂದ ಪ್ರತ್ಯೇಕದಿನದ ಉಪವಾಸದಿಂದೊದಗಿದ ಅಪರಾಧಪರಿಹಾರಕ್ಕಾಗಿ ಎಂಬ ಅರ್ಥವು ವ್ಯಕ್ತವಾಗುತ್ತದೆ. (ಮೂರು ರಾತ್ರಿಗಳು ನನ್ನ ಮನೆಯಲ್ಲಿ ಉಪವಾಸವಿದ್ದ ಕಾರಣ ನನಗೆ ಮಂಗಳವುಂಟಾಗಲಿಕ್ಕಾಗಿ ಮೂರು ವರಗಳನ್ನು ಕೇಳು ಎಂದರ್ಥ).

ನಚಿಕೇತನು ಬೇಡಿದ ಮೊದಲನೆಯ ವರವನ್ನು 'ಶಾಂತಸಂಕಲ್ಪ...' ಎಂಬ ಮಂತ್ರದಿಂದ ವಿವರಿಸಲಾಗಿದೆ. ಎಲೈ ಯಮನೇ ! ನಿನ್ನಿಂದ ನಾನು ಮರಣಗೊಳಿಸಲ್ಪಡದೇ ಜೀವಂತನಾಗಿಯೇ ನನ್ನ ತಂದೆಯನ್ನು ತಲುಪುವವನಾಗಬೇಕು ಇದೇ ಮೊದಲನೆಯ ವರವು.

ಅನಂತರ ಪ್ರಶ್ನೆ ಮತ್ತು ಉತ್ತರಗಳ ಮೂಲಕ ಎರಡನೆಯ ವರವನ್ನು 'ದ್ವಿತೀಯಂ ವೃಣೀಷ್ವ' ಎಂಬ ಮಂತ್ರದಿಂದ ವಿವರಿಸಲಾಗಿದೆ—ಎರಡನೆಯ ವರಕ್ಕಾಗಿ ಪ್ರಾರ್ಥಿಸಲ್ಪಟ್ಟ ಈ ಕುಮಾರನು ನನ್ನದಾದ ಶ್ರೌತ ಮತ್ತು ಸ್ಮಾರ್ತರೂಪವಾದ ಸತ್ಕರ್ಮಗಳಿಂದ ಒದಗಿದ ಪುಣ್ಯಗಳು ಕ್ಷೀಣವಾಗದಿರಲು ಬೇಕಾದ ಕಾರಣವನ್ನು ಹೇಳು ಎಂಬುದಾಗಿ ವರವನ್ನು ಕೇಳಿದನು. ಬಳಿಕ ಯಮನು, ಆ ನಚಿಕೇತನಿಗೆ ಈ ಹಿಂದಿನ ಅನುವಾಕದಲ್ಲಿ ಹೇಳಿರುವ ಅಗ್ನಿಚಯನ ಮಾಡಬೇಕಾದ ಮತ್ತು ಉಪಾಸನೆ ಮಾಡಬೇಕಾದ ಎರಡು ಬಗೆಯ ನಾಚಿಕೇತ ನಾಮಾಂಕಿತವಾದ ಅಗ್ನಿವಿದ್ಯೆಯನ್ನು ಉಪದೇಶಿಸಿದನು. ಅವನ ಹೆಸರಿನಿಂದಲೇ ಅಂಕಿತವಾದ ನಾಚಿಕೇತಾಗ್ನಿವಿದ್ಯೆಯು 'ಏಷ ತೇ ಅಗ್ನಿಃ....ಜನಾಸಃ' (ಕ. ಉ. 1–19) ಎಂಬ ಕಠವಲ್ಲಿಯ ಮಂತ್ರದಿಂದ ಸ್ಪಷ್ಟವಾಗಿದೆ. ನಂತರ ನಾಚಿಕೇತಾಗ್ನಿಚಯನದಿಂದಲೂ ಮತ್ತು ಧ್ಯಾನರೂಪವಾದ ಉಪಾಸನದಿಂದಲೂ, ಆ ನಚಿಕೇತನ ಶ್ರೌತ–ಸ್ಮಾರ್ತಕರ್ಮಗಳಿಂದಾದ ಪುಣ್ಯಗಳು ಕ್ಷಯಿಸುವುದಿಲ್ಲ. ಅಂದರೆ ನಚಿಕೇತನಿಗೆ ಸ್ವಲ್ಪ ಫಲಗಳು ಆಗುವುದಿಲ್ಲ ಫಲಾಧಿಕ್ಯವೇ ಆಗುವುದೆಂದರ್ಥ.

(ನಂತರ) ನಚಿಕೇತನಂತೆಯೇ ಬೇರೆಯವರಿಗೂ (ಅಗ್ನಿಚಯನ ಮತ್ತು ಧ್ಯಾನಗಳಿಂದ) ಶ್ರೌತ–ಸ್ಮಾರ್ತಕರ್ಮಗಳಿಂದಾದ ಪುಣ್ಯಗಳು ಅಕ್ಷಯವಾಗುತ್ತದೆಂಬುದನ್ನು 'ನಾಸ್ಯೇಷ್ಟಾ....' ಎಂಬ ಮಂತ್ರ ತಿಳಿಸುತ್ತದೆ. ಮತ್ತೆ ಪ್ರಶ್ನೆ ಮತ್ತು ಉತ್ತರಗಳ ಮೂಲಕ ಮತ್ತೊಂದು ವರ (ವರಾಂತರ)ವನ್ನು 'ತೃತೀಯಮ್....'ಎಂಬ ಮಂತ್ರದಿಂದ ವಿವರಿಸಲಾಗಿದೆ.

ಬದುಕಿರುವ ಮನುಷ್ಯನ ಶರೀರಕ್ಕೆ ಒಮ್ಮೆ ಮೃತ್ಯುವು ಬರಲೇಬೇಕು. ಅದರ ನಂತರ ಮತ್ತೊಂದು ಜನ್ಮವನ್ನು ಪಡೆದರೆ ಅದು ಪುನರ್ಮೃತ್ಯುವಾಗುವುದು. ಜನ್ಮವನ್ನು ಕಳೆಯದೆ ಮುಕ್ತಿ ಹೊಂದಿಬಿಟ್ಟರೆ ಪುನರ್ಮೃತ್ಯುವು ಅಪಜಯಕ್ಕೆ ಒಳಗಾಗುತ್ತದೆ. ಮೃತ್ಯುವಿನ ಆಪಜಯವು ಪುರುಷನಿಗೆ ಜಯ. ಅಂತಹ ಪುನರ್ಮೃತ್ಯುವನ್ನು ಅಪಜಯಗೊಳಿಸಬೇಕಾದ ಸಾಧನವನ್ನು ಉಪದೇಶಿಸು ಎಂಬುದು ಮೂರನೆಯ ವರ. ಈ ರೀತಿ ವರವನ್ನು ಕೇಳುತ್ತಿರುವ ಆ ನಚಿಕೇತನಿಗೆ ಪುನರ್ಮೃತ್ಯುವಿನ ಜಯಕ್ಕೆ ಸಾಧನವಾಗಿ ಎರಡು ಬಗೆಯ ನಾಚಿಕೇತಾಗ್ನಿಯನ್ನು ಉಪದೇಶಿಸಿದನು. ಚಯನ ಮತ್ತು ಉಪಾಸನಗಳ ನಡುವೆ ಯಾವನಿಗೆ ಚಯನವು ಪ್ರಧಾನವಾಗಿ, ಉಪಾಸನವು ಅಪ್ರಧಾನವಾಗುವುದೋ ಆಗ ಅವನಿಗೆ ಇಷ್ಟಾಪೂರ್ತಗಳು ಅಕ್ಷಯಮಾತ್ರವಾಗಿ ಬಹಳ ಕಾಲ ಪುಣ್ಯಲೋಕವನ್ನು ಅನುಭವಿಸಿ ಪುನರ್ಜನ್ಮವನ್ನು ಸ್ವೀಕರಿಸಬೇಕಾಗುವುದು. ಯಾವನಿಗೆ ಉಪಾಸನವು ಪ್ರಧಾನವಾಗಿ ಚಯನವು ಅಪ್ರಧಾನವಾಗುವುದೋ ಅವನಿಗೆ ಬ್ರಹ್ಮಲೋಕಪ್ರಾಪ್ತಿಯ ಮೂಲಕ ಮುಕ್ತಿಯೇ ದೊರಕುವುದು ಮತ್ತೊಂದು ಜನ್ಮವಿಲ್ಲ. ಅದರಿಂದ ಮೃತ್ಯುವಿನ ಜಯ ಎಂಬುದಾಗಿ ಚಯನ ಮತ್ತು ಉಪಾಸನಗಳ ವಿಭಾಗವು. ಆ ಪ್ರಧಾನ ಭೂತವಾದ ಉಪಾಸನದಿಂದಲೇ ಆ ನಚಿಕೇತನು ಪುನರ್ಮೃತ್ಯುವನ್ನು ಗೆದ್ದನು. ಇದೇ ತರಹ ಬೇರೆಯವರೂ ಸಹ ವಿದ್ಯೆಯನ್ನು ಪ್ರಧಾನವಾಗಿ ಅನುಷ್ಠಿಸಿದರೆ ನಚಿಕೇತನಂತೆಯೇ ಮೃತ್ಯುವನ್ನು ಗೆಲ್ಲುವರು.

## ಭಟ್ಟಭಾಸ್ಕರ ಭಾಷ್ಯಾನುವಾದ

ಉಶನ್–ವಾಜಶ್ರವನ ಮಗ. 'ಉಶನ್' ಎಂಬುದು ಒಬ್ಬನ ಹೆಸರು ಎಂಬುದಾಗಿ ಉಲ್ಲೇಖಿಸಿದ್ದಾರೆ.

ವಾಜಶ್ರವನೆಂಬ ಮುನಿಯು ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡುವ ವಿಶ್ವಜಿದ್ಯಾಗವನ್ನು ಮಾಡಿದನು. ದಾನಕೊಡುವ ಸಂದರ್ಭದಲ್ಲಿ ವಾಜಶ್ರವಸನಿಗೆ ದಾನಕೊಡುವ ವಸ್ತುವಿನಲ್ಲಿ ನನ್ನ ಮಗನೂ ಸೇರಿದ್ದಾನೆ. ಅವನನ್ನೂ ದಕ್ಷಿಣೆಯಾಗಿ ಕೊಡಬಹುದೆಂಬ ಶ್ರದ್ಧಾತಿಶಯವು ಉಂಟಾಯಿತು.

ತಂದೆಯ ಅಭಿಪ್ರಾಯವು ನಚಿಕೇತನಿಗೆ ತಿಳಿಯಿತು. ನಂತರ ತಂದೆಯನ್ನು ಕುರಿತು ನನ್ನನ್ನು ಯಾರಿಗೆ ಕೊಡುವೆ ಎಂಬುದಾಗಿ ಎರಡು–ಮೂರು ಬಾರಿ ಪ್ರಶ್ನಿಸಿದನು. ಅದಕ್ಕೆ ತಂದೆಯ ಉತ್ತರ ಯಮನಿಗೆ ಎಂಬುದಾಗಿ.

ನಚಿಕೇತನು ತಂದೆಯ ಮಾತಿನಂತೆ ಯಮಸದನವನ್ನು ಕುರಿತು ಹೊರಟ ಸಮಯದಲ್ಲಿ ಒಂದು ಅಶರೀರವಾಣಿಯು ಕೇಳಿಸಿತು. ಆ ವಾಣಿಯು ನಚಿಕೇತನ ತಂದೆಯನ್ನು ಕುರಿತು– ಹೇ ಗೌತಮ ! ಏನು ! ಮಗುವನ್ನು ಮೃತ್ಯುವಿಗೆ ಕೊಡುವೆಯಾ ? ಗೌತಮಗೋತ್ರದಲ್ಲಿ ಜನಿಸಿದ ನಿನಗೆ ಇದು ಸರಿಯೇ ? ಎಂಬುದಾಗಿ ಕೇಳಿತು.

ವಾಜಶ್ರವಸನು ಆ ಮಾತನ್ನು ಲಕ್ಷಿಸದೇ ನಚಿಕೇತನಿಗೆ ಹೀಗೆ ಹೇಳಿದನು. ನಾನು ಮೃತ್ಯುವಿಗೆ ನಿನ್ನನ್ನು ಕೊಟ್ಟನಷ್ಟೇ. ಅದನ್ನು ನಾನು ಯಾವ ಕಾರಣದಿಂದಲೂ ಹಿಂತಿರುಗಿಸಿಕೊಳ್ಳಲಾರೆನು. ನೀನು ಮೃತ್ಯುವಿನ ಮನೆಗೆ ಹೋಗು ಎಂದು ಹೇಳಿ ಮತ್ತೆ ಹೀಗೆ ಹೇಳಿದನು.

ಯಮಸದನಕ್ಕೆ ಹೋದನಂತರ ಅಲ್ಲಿ ಏನು ನಡೆಯುತ್ತದೆ ಎಂಬುದನ್ನು (ಸಾಯಣ ಭಾಷ್ಯದಲ್ಲಿ ತಿಳಿಸಿರುವಂತೆಯೇ ಅಂದರೆ ಅಶರೀರವಾಣಿಯ ಮಾತಿನಂತೆಯೇ) ಹೇಳಿದನು. ಅದರಂತೆ ನಚಿಕೇತನು ನಡೆದನು. ಈ ರೀತಿ ಭಟ್ಟಭಾಸ್ಕರ ಭಾಷ್ಯದಲ್ಲಿ ಕೆಲವೆಡೆ ಮಾತ್ರ ವ್ಯತ್ಯಾಸವಿದೆ. ಉಳಿದ ಭಾಗ ಸಾಯಣ ಭಾಷ್ಯದಲ್ಲಿರುವಂತೆಯೇ ಇದೆ ಆದಕಾರಣ ಪೂರ್ಣ ಅನುವಾದವನ್ನು ಇಲ್ಲಿ ಉಲ್ಲೇಖಿಸಿಲ್ಲ.



ನಚಿಕೇತ–'ನ ಚಿ ಕೇತ ನ ಜಜ್ಞೌ' ಅಂದರೆ ತಂದೆಯ ಭಾವವನ್ನು ತಿಳಿದುಕೊಳ್ಳಲಿಲ್ಲ ಎಂಬುದರಿಂದ ನಚಿಕೇತನೆಂಬ ಹೆಸರಾಯಿತೆಂಬುದಾಗಿ ಕೆಲವರ ಅಭಿಪ್ರಾಯ.

# ಸಂಕೇತಾಕ್ಷರ ಸೂಚೀ

| | |
|---|---|
| ಋಗ್ವೇದ | |
| ಐತರೇಯೋಪನಿಷತ್ | ಐ. ಉ. |
| ಕುಮಾರಸಂಭವ | ಕು. ಸಂ. |
| ಕೇನೋಪನಿಷತ್ | ಕೇ. ಉ. |
| ಕೌಷೀತಕೀ ಉಪನಿಷತ್ | ಕೌ. ಉ. |
| ಗೀತಾಭಾಷ್ಯ | ಗೀ. ಭಾ. |
| ಗೋವಿಂದರಾಜೀಯ | ಗೋ. ರಾ. |
| ಛಾಂದೋಗ್ಯೋಪನಿಷತ್ | ಛಾಂ. ಉ. |
| ತಂತ್ರವಾರ್ತಿಕ | ತಂತ್ರವಾ. |
| ತೈತ್ತಿರೀಯನಾರಾಯಣೋಪನಿಷತ್ | ತೈ. ನಾ. |
| ತೈತ್ತಿರೀಯ ಬ್ರಾಹ್ಮಣ | ತೈ. ಬ್ರಾ. |
| ತೈತ್ತಿರೀಯ ಸಂಹಿತೆ | ತೈ. ಸಂ. |
| ತೈತ್ತೀರೀಯ ಆರಣ್ಯಕ | ತೈ. ಆರ. |
| ತೈತ್ತಿರೀಯ ಆರಣ್ಯಕದಲ್ಲಿ ಕಾಠಕ | ತೈ. ಆರ. ಕಾಠ. |
| ತೈತ್ತೀರೀಯೋಪನಿಷತ್ ಆನಂದವಲ್ಲಿ | ತೈ. ಆನ. |
| ನೃಸಿಂಹತಾಪನೀಯೋಪನಿಷತ್ | ನೃ. ತಾ. ಉ. |
| ಪಾಣಿನೀಯ ಧಾತು | ಪಾ. ಧಾ. |
| ಪಾಣಿನೀಯ ಸೂತ್ರ | ಪಾ. ಸೂ. |
| ಪೂರ್ವಮೀಮಾಂಸ (ಅಧಿಕರಣ) | ಪೂ. ಮೀ. |
| ಪೂರ್ವಮೀಮಾಂಸ (ಸೂತ್ರ) | ಪೂ. ಮೀ. ಸೂ. |
| ಪೈಂಗಿಬ್ರಾಹ್ಮಣ | ಪೈ. ಬ್ರಾ. |
| ಪ್ರಶ್ನೋಪನಿಷತ್ | ಪ್ರ. ಉ. |
| ಬ್ರಹ್ಮಸೂತ್ರ | ಬ್ರ. ಸೂ. |
| ಭಗವದ್ಗೀತಾ | ಭ. ಗೀ. |
| ಮನುಸ್ಮೃತಿ | ಮ. ಸ್ಮೃ. |
| ಮಹಾಭಾರತ ಭೀಷ್ಮಪರ್ವ | ಮ. ಭಾ. ಭೀ. |
| ಮಹಾಭಾರತ ವನಪರ್ವ | ಮ. ಭಾ. ವನ |
| ಮಹಾಭಾರತ ಶಾಂತಿಪರ್ವ | ಮ. ಭಾ. ಶಾಂ. |
| ಮುಂಡಕೋಪನಿಷತ್ | ಮುಂ. ಉ. |
| ರಂಗರಾಮಾನುಜಭಾಷ್ಯ | ರಂ. ಭಾ. |
| ರಾಮಾಯಣ ಬಾಲಕಾಂಡ | ರಾ. ಬಾ. |

| | |
|---|---|
| ರಾಮಾಯಣ ಯುದ್ಧಕಾಂಡ | ರಾ. ಯು. |
| ಲಿಂಗಾನುಶಾಸನ | ಲಿಂಗಾನು. |
| ವರರುಚಿವಾರ್ತಿಕ | ವ. ವಾ. |
| ವರಾಹಪುರಾಣ | ವ. ಪು. |
| ವಿಷ್ಣುಚಿತ್ತೀಯ | ವಿ. ಚಿ. |
| ವಿಷ್ಣುಪುರಾಣ | ವಿ. ಪು. |
| ವಿಷ್ಣುಸಹಸ್ರನಾಮಸ್ತೋತ್ರ ಧ್ಯಾನಶ್ಲೋಕ | ವಿ. ಸ. ಧ್ಯಾ |
| ವಿಷ್ಣುಸಹಸ್ರನಾಮಸ್ತೋತ್ರ ಫಲಶ್ರುತಿ | ವಿ. ಸ. ಫಲ |
| ವೇದಾಂತದೀಪ | ವೇ. ದೀ. |
| ವೇದಾಂತಸಾರ | ವೇ. ಸಾ. |
| ವೇದಾರ್ಥಸಂಗ್ರಹ | ವೇ. ಸಂ. |
| ಶತಪಥಬ್ರಾಹ್ಮಣ | ಶ. ಬ್ರಾ. |
| ಶ್ರೀಭಾಷ್ಯ | ಶ್ರೀ.ಬಾ. |
| ಶ್ರುತಪ್ರಕಾಶಿಕಾ | ಶ್ರು. ಪ್ರ. |
| ಶ್ವೇತಾಶ್ವತರೋಪನಿಷತ್ | ಶ್ವೇ. ಉ. |
| ಸಾಯಣಭಾಷ್ಯ | ಸಾ. ಭಾ. |
| ಸಿದ್ಧಾಂತಕೌಮುದೀ | ಸಿ. ಕೌ. |
| ಸುಬಾಲೋಪನಿಷತ್ | ಸು. ಉ. |



ಶ್ರೀಃ

# ಕಠೋಪನಿಷತ್

## ಶಾಂತಿಪಾಠಃ

ಸಹ ನಾವವತು। ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ ।
ತೇಜಸ್ವಿ ನಾವಧೀತಮಸ್ತು ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂ.

ಹರಿಃ ಓಮ್

## ಮೊದಲನೆಯ ವಲ್ಲಿ

ಉಶನ್ ಹ ವೈ ವಾಜಶ್ರವಸಸ್ಸರ್ವವೇದಸಂ ದದೌ ।
ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ॥1॥

ತಂ ಹ ಕುಮಾರಂ ಸಂತಂ ದಕ್ಷಿಣಾಸು ನೀಯಮಾನಾಸು ಶ್ರದ್ಧಾಽಽವಿವೇಶ
ಸೋಽಮನ್ಯ

ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ ।
ಅನಂದಾ ನಾಮ ತೇ ಲೋಕಾಸ್ತಾನ್ ಸ ಗಚ್ಛತಿ ತಾ ದದತ್ ॥3॥

ಸ ಹೋವಾಚ ಪಿತರಮ್, ತತ ಕಸ್ಮೈ ಮಾಂ ದಾಸ್ಯಸೀತಿ ।
ದ್ವಿತೀಯಂ ತೃತೀಯಮ್ । ತಂ ಹೋವಾಚ ಮೃತ್ಯವೇ ತ್ವಾ ದದಾಮೀ.

ಬಹೂನಾಮೇಮಿ ಪ್ರಥಮೋ ಬಹೂನಾಮೇಮಿ ಮಧ್ಯಮಃ ।
ಕಿಂ ಸ್ವಿತ್ ಯಮಸ್ಯ ಕರ್ತವ್ಯಂ ಯನ್ಮಯಾಽದ್ಯ ಕರಿಷ್ಯತಿ ॥ 5 ॥

ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾ(ಽ)ಪರೇ ।
ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವಾಽಽಜಾಯತೇ ಪುನಃ ॥ 6 ॥

ಪ್ರತೀಕ್ಷೇ ಸಂಗತಂ ಸೂನೃತಾಂ ಚ ಇಷ್ಟಾಪೂರ್ತೇ ಪುತ್ರಪಶೂಂಶ್ಚ ಸರ್ವಾನ್ ।
ವೃಂಕ್ತೇ ಪುರುಷಸ್ಯಾಲ್ಪಮೇಧಸೋ ಯಸ್ಯಾನಶ್ನನ್ ವಸತಿ
ಬ್ರಾಹ್ಮಣೋ ಗೃಹೇ ॥ 8 ॥

ತ್ರೀ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನನ್ ಬ್ರಹ್ಮನ್ನತಿಥಿರ್ನಮಸ್ಯಃ ।
ಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು ತಸ್ಮಾತ್ ಪ್ರತಿ ತ್ರೀನ್
ವರಾನ್ ವೃಣೀಷ್ವ ॥ 9 ॥

ತಸಂಕಲ್ಪಃ ಸುಮನಾ ಯಥಾ ಸ್ಯಾದ್ವೀತಮನ್ಯುರ್ಗೌತಮೋ ಮಾಭಿ ಮೃತ್ಯೋ ।
ಸೃಷ್ಟಂ ಮಾಽಭಿವದೇತ್ ಪ್ರತೀತ ಏತತ್ ತ್ರಯಾಣಾಂ ಪ್ರಥಮಂ
ವರಂ ವೃಣೇ ॥ 10 ॥

ಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ (ಷ್ಟಮ್) ।
ಂ ರಾತ್ರೀಶ್ಶಯಿತಾ ವೀತಮನ್ಯುಸ್ತ್ವಾಂ (?) ದೃಶಿವಾನ್ ಮೃತ್ಯುಮುಖಾತ್
ಪ್ರಮುಕ್ತಮ್ ॥ 11 ॥

ರ್ಗೇ ಲೋಕೇ ನ ಭಯಂ ಕಿಂಚನಾಸ್ತಿ ನ ತತ್ರ ತ್ವಂ ನ ಜರಯಾ ಬಿಭೇತಿ ।
ಭೇ ತೀರ್ತ್ವಾ ಅಶನಾಯಾಪಿಪಾಸೇ ಶೋಕಾತಿಗೋ ಮೋದತೇ
ಸ್ವರ್ಗಲೋಕೇ ॥ 12 ॥

ಸ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತ್ವಂ ಶ್ರದ್ದಧಾನಾಯ
ಮಹ್ಯಮ್ ।
ರ್ಗಲೋಕಾ ಅಮೃತತ್ವಂ ಭಜಂತೇ ಏತದ್ ದ್ವಿತೀಯೇನ ವೃಣೇ ವರೇಣ ॥ 13 ॥

ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ।
ಂತಲೋಕಾಪ್ತಿಮಥೋ ಪ್ರತಿಷ್ಠಾಂ ವಿದ್ಧಿ ತ್ವಮೇತನ್ನಿಹಿತಂ
ಗುಹಾಯಾಮ್ ॥ 14 ॥

ಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ ।
ಚಾಪಿ ತತ್ ಪ್ರತ್ಯವದತ್ ಯಥೋಕ್ತಮಥಾಸ್ಯ ಮೃತ್ಯುಃ ಪುನರಾಹ
ತುಷ್ಟಃ ॥ 15 ॥

ಮಬ್ರವೀತ್ ಪ್ರೀಯಮಾಣೋ ಮಹಾತ್ಮಾ ವರಂ ತವೇಹಾದ್ಯ ದದಾನಿ (ಮಿ)
ಭೂಯಃ ।

ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ ।
ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ ನಿಚಾಯ್ಯೇಮಾಂ
ಶಾಂತಿಮತ್ಯಂತಮೇತಿ

ತ್ರಿಣಾಚಿಕೇತಸ್ತ್ರಯಮೇತತ್ ವಿದಿತ್ವಾ ಯ ಏವಂ ವಿದ್ವಾಂಶ್ಚಿನುತೇ ನಾಚಿಕೇ
ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ ಶೋಕಾತಿಗೋ ಮೋದತೇ
ಸ್ವರ್ಗಲೋಕೇ

ಯೋ ವಾ ಏ ಷ್ಟೇ) ತಾಂ ಬ್ರಹ್ಮಜಜ್ಞಾತ್ಮಭೂತಾಂ ಚಿತಿಂ ವಿದಿತ್ವಾಚಿನುತೇ
ನಾಚಿ

ಸ ಏವ ಭೂತ್ವಾ ಬ್ರಹ್ಮಜಜ್ಞಾತ್ಮಭೂತಃ ಕರೋತಿ ತದ್ಯೇನ ಪುನರ್ನ
ಜಾಯತೆ

ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯೋ ಯಮವೃಣೀಥಾ ದ್ವಿತೀಯೇನ ವರೇ
ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಸ್ತೃತೀಯಂ ವರಂ ನಚಿಕೇತೋ
ವೃಣೀಷ

ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮಸ್ತೀತಿ
ಏತದ್ ವಿದ್ಯಾಮನುಶಿಷ್ಟಸ್ತ್ವಯಾಽಹಂ ವರಾಣಾಮೇಷ ವರಸ್ತೃತೀಯ

ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ ನ ಹಿ ಸುಜ್ಞೇಯಮಣುರೇಷ ಧರ್ಮಃ
ಅನ್ಯಂ ವರಂ ನಚಿಕೇತೋ ವೃಣೀಷ್ವ ಮಾ ಮೋಪರೋತ್ಸೀರತಿ ಮಾ
ಸೃಜೈನವ

ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ತ್ವಂಚ ಮೃತ್ಯೋ ಯನ್ನ ಸುಜ್ಞೇಯಮ
ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ ನಾನ್ಯೋ ವರಸ್ತುಲ್ಯ ಏತಸ್ಯ ಕ

ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ಬಹೂನ್ ಪಶೂನ್ ಹಸ್ತಿಹಿರ
ಭೂಮೇರ್ಮಹದಾಯತನಂ ವೃಣೀಷ್ವ ಸ್ವಯಂ ಚ ಜೀವ ಶರದೋ
ಯಾವದಿ

ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ ಚಿರಜೀವಿಕಾಂಚ

ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾನ್ ಛಂದತಃ
ಪ್ರಾರ್ಥಯಸ್ವ ।
ಇಮಾ ರಾಮಾಸ್ಸರಥಾಸ್ಸತೂರ್ಯಾ ನ ಹೀದೃಶಾ ಲಂಭನೀಯಾ ಮನುಷ್ಯೈಃ ।
ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ ನಚಿಕೇತೋ ಮರಣಂ
ಮಾಽನುಪ್ರಾಕ್ಷೀಃ ॥ 26 ॥

ಶ್ವೋಽಭಾವಾ ಮರ್ತ್ಯಸ್ಯ ಯದಂತಕೈತತ್ ಸರ್ವೇಂ(ದ್ರಿ)ಯಾಣಾಂ ಜರಯಂತಿ
ತೇಜಃ ।
ಅಪಿ ಸರ್ವಂ ಜೀವಿತಮಲ್ಪಮೇವ ತವೈವ ವಾಹಾಸ್ತವ ನೃತ್ಯಗೀತೇ ॥ 27 ॥

ನ ವಿತ್ತೇನ ತರ್ಪಣೀಯೋ ಮನುಷ್ಯೋ ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ
ಚೇತ್ ತ್ವಾ ।
ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ ವರಸ್ತು ಮೇ ವರಣೀಯಃ ಸ ಏವ ॥ 28 ॥

ಅಜೀರ್ಯತಾಮಮೃತಾನಾಮುಪೇತ್ಯ ಜೀರ್ಯನ್ ಮರ್ತ್ಯಃ ಕ್ವ ತದಾಸ್ಥಃ (ಕ್ವಧಃಸ್ಥಃ)
ಪ್ರಜಾನನ್ ।
ಅಭಿಧ್ಯಾಯನ್ ವರ್ಣರತಿಪ್ರಮೋದಾನ್ ಅನತಿದೀರ್ಘೇ ಜೀವಿತೇ ಕೋ
ರಮೇತ ॥ 29 ॥

ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ (ಯತ್) ಸಾಂಪರಾಯೇ ಮಹತಿ ಬ್ರೂಹಿ
ನಸ್ತತ್ ।
ಯೋಽಯಂ ವರೋ ಗೂಢಮನುಪ್ರವಿಷ್ಟೋ ನಾನ್ಯಂ ತಸ್ಮಾನ್ನಚಿಕೇತಾ
ವೃಣೀತೇ ॥ 30 ॥

ಮೊದಲನೇ ವಲ್ಲಿ ಸಂಪೂರ್ಣಂ

## ಎರಡನೆಯ ವಲ್ಲಿ

ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಸ್ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ।
ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ ಹೀಯತೇಽರ್ಥಾತ್ ಯ ಉ
ಪ್ರೇಯೋ ವೃಣೀತೇ ॥ 1 ॥

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವನಕ್ತಿ ಧೀರಃ
ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೇ ಪ್ರೇಯೋ ಮಂದೋ
ಯೋಗಕ್ಷೇಮಾದ್ವೃಣೀತೇ ॥ 2 ॥

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್ ಅಭಿಧ್ಯಾಯನ್
ನಚಿಕೇತೋಽತ್ಯಸ್ರಾಕ್ಷೀಃ ।
ನೈತಾಂ ಸೃಂಕಾಂ ವಿತ್ತಮಯೀಮವಾಪ್ತೋ ಯಸ್ಯಾಂ ಮಜ್ಜಂತಿ ಬಹವೋ
ಮನುಷ್ಯಾಃ ॥ 3 ॥

ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ ।
ವಿದ್ಯಾಭೀಪ್ಸಿತಂ(ನಂ) ನಚಿಕೇತಸಂ ಮನ್ಯೇ ನ ತ್ವಾ ಕಾಮಾ
ಬಹವೋಽಲೋಲುಪಂತ ॥ 4 ॥

ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।
ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇನೈವ ನೀಯಮಾನಾ
ಯಥಾಽಂಧಾಃ ॥ 5 ॥

ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ ।
ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ॥6॥

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ ಬಹವೋ ಯಂ
ನ ವಿದ್ಯುಃ ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ 7 ॥

ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ ।
ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥ 8 ॥

ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।
ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತ್ವಾದೃಙ್ನೋ ಭೂಯಾನ್ನಚಿಕೇತಃ
ಪ್ರಷ್ಟಾ ॥ 9 ॥

ಜಾನಾಮ್ಯಹಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ ।
ತತೋ ಮಯಾ ನಾಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ
ನಿತ್ಯಮ್ ॥ 10 ॥

ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯಮಭಯಸ್ಯ ಪಾರಮ್ ।
ಸ್ತೋಮಂ ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೃತ್ಯಾ ಧೀರೋ
ನಚಿಕೇತೋಽತ್ಯಸ್ರಾಕ್ಷೀಃ ॥ 11 ॥

ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ ।
ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ
ಜಹಾತಿ ॥ 12 ॥

ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ ।
ಸ ಮೋದತೇ ಮೋದನೀಯಂ ಹಿ ಲಬ್ಧ್ವಾ ವಿವೃತಂ ಸದ್ಮ ನಚಿಕೇತಸಂ
ಮನ್ಯೇ ॥ 13 ॥

ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ ।
ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥ 14 ॥

ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮಿ
ಓಮಿತ್ಯೇತತ್ ॥ 15 ॥

ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ 16 ॥

ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್ ।
ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥ 17 ॥

ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ
ಶರೀರೇ ॥ 18 ॥

ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ 19 ॥

ಅಣೋರಣೀಯಾನ್ ಮಹತೋ ಮಹೀಯಾನ್ ಆತ್ಮಾಸ್ಯ ಜಂತೋರ್ನಿಹಿತೋ
ಗುಹಾಯಾಮ್ ।
ತಮಕ್ರತುಃ ಪಶ್ಯತಿ ವೀತಶೋಕೋ ಧಾತುಪ್ರಸಾದಾನ್ಮಹಿಮಾನಮಾತ್ಮನಃ ॥ 20 ॥

ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ।
ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ 21 ॥

ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ 22 ॥

ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ
ಸ್ವಾಮ್ ॥ 23 ॥

ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।
ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥ 24 ॥

ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।
ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರಸಃ ॥ 25 ॥

ಎರಡನೆಯ ವಲ್ಲಿ ಸಂಪೂರ್ಣಂ

## ಮೂರನೆಯ ವಲ್ಲಿ

ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ದ್ಧೇ ।
ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ
ತ್ರಿಣಾಚಿಕೇತಾಃ ॥ 1 ॥

ಯಸ್ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ಪರಮ್ ।
ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ(ಸಿ) ॥ 2 ॥

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ (ತು) ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ 3 ॥

ಇಂದ್ರಿಯಾಣಿ ಹಯಾನ್ ಆಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ 4 ॥

ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ(ಹ) ।
ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ 5 ॥

ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸಹ(ದಾ) ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ 6 ॥

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಸ್ಸದಾಽಶುಚಿಃ ।
ನ ಸ ತತ್ ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ 7 ॥

ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ 8 ॥

ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ 9 ॥

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥ 10 ॥

ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥ 11 ॥

ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ 12 ॥

ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇತ್ ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾಂತ ಆತ್ಮನಿ ॥ 13 ॥

ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ ॥ 14 ॥

ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ ನಿತ್ಯಮಗಂಧವಚ್ಚಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್
ಪ್ರಮುಚ್ಯತೇ ॥ 15 ॥

ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್ ।
ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥ 17 ॥

ಯ ಇದಂ ಪರಮಂ ಗುಹ್ಯಂ ಶ್ರಾವಯೇತ್ ಬ್ರಹ್ಮಸಂಸದಿ ।
ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ ॥
ತದಾನಂತ್ಯಾಯ ಕಲ್ಪತ ಇತಿ ॥ 17 ॥

ಮೂರನೆಯ ವಲ್ಲಿ ಸಂಪೂರ್ಣಂ

# ನಾಲ್ಕನೆಯ ವಲ್ಲಿ

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಙ್ಪಶ್ಯಂತಿ(ತಿ)
ನಾಂತರಾತ್ಮನ್ ।
ಕಶ್ಚಿತ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್ ॥ 1 ॥

ಪರಾಚಃ ಕಾಮಾನ್ ಅನುಯಂತಿ ಬಾಲಾಸ್ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ।
ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥ 2॥

ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ।
ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ ॥ ಏತದ್ವೈತತ್ ॥ 3 ॥

ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ।
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ 4 ॥

ಯ ಇದಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥ ಏತದ್ವೈತತ್ ॥ 5 ॥

ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ ।
ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ (ಯದ್) ಭೂತೇಭಿರ್ವ್ಯಪಶ್ಯತ ॥
ಏತದ್ವೈತತ್ ॥ 6 ॥

ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ।
ಗುಹಾಂ ಪ್ರವಿಶ್ಯ ತಿಷ್ಠಂತೀ ಯಾ ಭೂತೇಭಿರ್ವ್ಯಜಾಯತ ॥ ಏತದ್ವೈತತ್ ॥ 7 ॥

ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವೇತ್ ಸುಭೃತೋ ಗರ್ಭಿಣೀಭಿಃ ।॥
ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥ಏತದ್ವೈತತ್॥ 8 ॥

ಯತಶ್ಚೋದೇತಿ ಸೂರ್ಯೋ ಅಸ್ತಂ ಯತ್ರ ಚ ಗಚ್ಛತಿ ।
ತಂ ದೇವಾಸ್ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ್ ॥ ಏತದ್ವೈತತ್ ॥ 9 ॥

ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।
ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ 10

ಮನಸೈವೇದಮಾಪ್ತವ್ಯಂ ನೇಹ ನಾನಾಽಸ್ತಿ ಕಿಂಚನ ।
ಮೃತ್ಯೋಸ್ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ 11 ॥

ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।
ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥ ಏತದ್ವೈತತ್ ॥ 12 ॥

ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।
ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ॥ ಏತದ್ವೈತತ್ ॥ 13 ॥

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ಪಶ್ಯಂಸ್ತಾನೇವಾನು ವಿಧಾವತಿ ॥ 14 ॥

ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥ 15 ॥

ನಾಲ್ಕನೆಯ ವಲ್ಲಿ ಸಂಪೂರ್ಣ

## ಐದನೆಯ ವಲ್ಲಿ

ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।
ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥ ಏತದ್ವೈತತ್ ॥ 1 ॥

ಹಂಸಶ್ಶುಚಿಷತ್ ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ ।
ನೃಷತ್ ವರಸತ್ ಋತಸತ್ ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ
ಋತಂ ಬೃಹತ್ ॥ 2 ॥

ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।
ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥ 3 ॥

ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।
ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ॥ ಏತದ್ವೈತತ್ ॥ 4 ॥

ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।
ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥ 5 ॥

ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।
ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥ 6 ॥

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥ 7 ॥

ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ ॥ ಏತದ್ವೈತತ್ ॥ 8 ॥

ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ 9 ॥

ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂರೂಪಂ ಪ್ರತಿರೂಪೋ ಬಹಿಶ್ಚ ॥ 10 ॥

ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ ।
ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥ 11 ॥

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ಬೀಜಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥ 12 ॥

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥ 13 ॥

ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।
ಕಥನ್ನು ತದ್ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ ॥ 14 ॥

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ 15 ॥

ಐದನೆಯ ವಲ್ಲಿ ಸಂಪೂರ್ಣಂ

## ಆರನೆಯ ವಲ್ಲಿ

ಊರ್ಧ್ವಮೂಲೋ ಅವಾಕ್ಶಾಖ ಏಷೋಽಶ್ವತ್ಥಸ್ಸನಾತನಃ ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ॥
ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ ॥ ಏತದ್ವೈತತ್ ॥ 1 ॥

ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಸ್ಸೃತಮ್ ।
ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥ 2 ॥

ಭಯಾದಸ್ಯಾಗ್ನಿಸ್ತಪತಿ ಭಯಾತ್ ತಪತಿ ಸೂರ್ಯಃ ।
ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥ 3 ॥

ಇಹ ಚೇದಶಕತ್ ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।
ತತಸ್ಸರ್ಗೇ(ರ್ವೇ)ಷು ಲೋಕೇಷು ಶರೀರತ್ವಾಯ ಕಲ್ಪತೇ ॥ 4 ॥

ಯಥಾದರ್ಶೇ ತಥಾಽಽತ್ಮನಿ ಯಥಾ ಸ್ವಪ್ನೇ ತಥಾ ಪಿತೃಲೋಕೇ ।
ಯಥಾಽಪ್ಸು ಪರೀವ ದದೃಶೇ ತಥಾ ಗಂಧರ್ವಲೋಕೇ ಛಾಯಾತಪಯೋರಿವ
ಬ್ರಹ್ಮಲೋಕೇ ॥ 5 ॥

ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।
ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥ 6 ॥

ಇಂದ್ರಿಯೇಭ್ಯಃ ಪರಂ ಮನೋ ಮನಸಸ್ಸತ್ತ್ವಮುತ್ತಮಮ್ ।
ಸತ್ತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥ 7 ॥

ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ ।
ಯದ್(ಯಂ)ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ॥ 8 ॥

ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।
ಹೃದಾ ಮನೀಷಾ ಮನಸಾಽಭಿಕ್ಲೃಪ್ತೋ ಯ ಏನಂ(ಏತತ್)ವಿದುರಮೃತಾಸ್ತೇ
ಭವಂತಿ॥ 9 ॥

ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟೇತ ತಾಮಾಹುಃ ಪರಮಾಂ ಗತಿಮ್ ॥ 10 ॥

ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।
ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥ 11 ॥

ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।
ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥ 12 ॥

ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।
ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥ 13 ॥

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥ 14 ॥

ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ(ಸ್ಯೈವ) ಗ್ರಂಥಯಃ ।
ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಮ್ ॥ 15 ॥

ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಂಙ್ಅನ್ಯಾ ಉತ್ಕ್ರಮಣೇ
ಭವಂತಿ ॥ 16 ॥

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ।
ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ ॥ 17 ॥

ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ ವಿದ್ಯಾಮೇತಾಂ ಯೋಗವಿಧಿಂ ಚ
ಕೃತ್ಸ್ನಮ್ ।
ಬ್ರಹ್ಮಪ್ರಾಪ್ತೋ ವಿರಜೋಽಭೂತ್ ವಿಮೃತ್ಯುರನ್ಯೋಽಪ್ಯೇವಂ ಯೋ
ವಿದಧ್ಯಾತ್ಮಮೇವ ॥18 ॥

ಆರನೆಯ ವಲ್ಲಿ ಸಂಪೂರ್ಣಂ

## ಉತ್ತರ ಶಾಂತಿಪಾಠಃ

ಸ ಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ ।
ತೇಜಸ್ವಿ ನಾವಧೀತಮಸ್ತು । ಮಾ ವಿದ್ವಿಷಾವಹೈ ॥
ಓಂ ಶಾಂತಿಃ ಶಾಂತಿಃ ಶಾಂತಿಃ ॥

॥ ಹರಿಃ ಓಮ್ ॥

ಕಠೋಪನಿಷತ್ ಸಂಪೂರ್ಣಂ





# ಕಠೋಪನಿಷತ್

(ಸಂಸ್ಕೃತ ಮೂಲ-ಕನ್ನಡಮೂಲ-ಪ್ರತಿಪದಾರ್ಥ-ತಾತ್ಪರ್ಯ
ರಂಗರಾಮಾನುಜಭಾಷ್ಯ-ಭಾಷಾಂತರ-ಭಾಷ್ಯಸಾರಸಹಿತ)



ಶ್ರೀಃ

# ಕಠೋಪನಿಷತ್

## ಪ್ರಥಮವಲ್ಲಿ-ಮಂತ್ರ ೧

ಹರಿಃ ಓಮ್

**उशन् ह वै वाजश्रवसस्सर्ववेदसं ददौ ।**
**तस्य ह नचिकेता नाम पुत्र आस ॥**

ಹರಿಃ ಓಮ್

ಉಶನ್ ಹ ವೈ ವಾಜಶ್ರವಸಸ್ಸರ್ವವೇದಸಂ ದದೌ ।
ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ॥

### ಪ್ರತಿಪದಾರ್ಥ

ಉಶನ್ ಹ ವೈ ವಾಜಶ್ರವಸ ಇತಿ । ಉಶನ್—ಫಲವನ್ನು ಬಯಸಿ, ವಾಜಶ್ರವಸಃ—ವಾಜಶ್ರವನ ಮಗನಾದ ವಾಜಶ್ರವಸನು, ಸರ್ವವೇದಸಮ್—ಐಶ್ವರ್ಯವೆಲ್ಲವನ್ನೂ, ದದೌ—ಕೊಟ್ಟನು. ತಸ್ಯ—ಅವನಿಗೆ ನಚಿಕೇತಾ ನಾಮ –ನಚಿಕೇತನೆಂಬ, ಪುತ್ರಃ—ಮಗನು, ಆಸ ಹ—ಇದ್ದನು.

### ತಾತ್ಪರ್ಯ

ವಾಜಶ್ರವನೆಂಬ ಋಷಿ. ಇವನು ಅನ್ನದಾನದಿಂದ ಪ್ರಸಿದ್ಧನಾಗಿದ್ದನು. ಇವನಿಗೆ ವಾಜಶ್ರವಸ ಎಂಬ ಮಗನಿದ್ದನು. ಈತನು ಫಲಾಭಿಲಾಷೆಯಿಂದ 'ವಿಶ್ವಜಿತ್' ಎಂಬ ಒಂದು ಯಾಗವನ್ನು ಮಾಡಿ, ಈ ಯಾಗದಲ್ಲಿ ತನ್ನ ಐಶ್ವರ್ಯವೆಲ್ಲವನ್ನೂ, ಋತ್ವಿಜರಿಗೆ ದಕ್ಷಿಣಾ ರೂಪದಲ್ಲಿ ಕೊಟ್ಟನು. ಇವನಿಗೆ ನಚಿಕೇತನೆಂಬ ಮಗನಿದ್ದನು.

### ರಂಗರಾಮಾನುಜಭಾಷ್ಯಮ್

ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ । ಉಶನ್ ಕಾಮಯಮಾನಃ । 'ವಶ–ಕಾಂತೌ' (ಪಾ. ಧಾ.1080) ಇತ್ಯಸ್ಮಾತ್ ಶತರಿ 'ಗ್ರಹಿಜ್ಯಾ' (ಪಾ.ಸೂ.6–1–16) ಇತ್ಯಾದಿನಾ ಸಂಪ್ರಸಾರಣಮ್[2]। ಹ ವೈ ಇತಿ ವೃತ್ತಾರ್ಥ–ಸ್ಮರಣಾರ್ಥೌ ನಿಪಾತೌ॥ ಫಲಮಿತಿ ಶೇಷಃ। ವಾಜಶ್ರವಸಃ–ವಾಜೇನ–ಅನ್ನೇನ ದಾನಾದಿಕರ್ಮಭೂತೇನ, ಶ್ರವಃ–ಕೀರ್ತಿಃ ಯಸ್ಯ,

---

1 'ಉಶನ್' ಎಂಬುದು 'ವಶ–ಕಾಂತೌ' ಎಂಬ ಧಾತುವಿಗೆ ಶತೃಪ್ರತ್ಯಯ ಸೇರಿ ಆಗಿರುವ ರೂಪ. ಕಾಂತಿ ಅಂದರೆ ಇಚ್ಛೆ. ಇಚ್ಛೆ ಎಂಬರ್ಥದಲ್ಲಿ ವಶಧಾತು ಬರುತ್ತದೆ. ಆದುದರಿಂದ ಉಶನ್ ಅಂದರೆ ಫಲಾಭಿಲಾಷಿ ಎಂದರ್ಥ.

2 ಯ–ವ–ರ–ಲಗಳಿಗೆ ಇ–ಉ–ಋ–ಲೃ ವರ್ಣಗಳು ಬರುವುದಕ್ಕೆ ಸಂಪ್ರಸಾರಣ ಎಂದು ಹೆಸರು. ಇಲ್ಲಿ 'ವ'ಕಾರದ ಸ್ಥಾನದಲ್ಲಿ 'ಉ'ಕಾರ ಬಂದು 'ಉಶನ್' ಎಂದಾಗಿದೆ.

ಸ ವಾಜಶ್ರವಾಃ । ತಸ್ಯಾಪತ್ಯಂ ವಾಜಶ್ರವಸಃ । ರೂಢಿರ್ವಾ ವಾಜಶ್ರವಸಃ (ವಾಃ ?) ಇತಿ । ಸ ಕಿಲ ಋಷಿಃ ವಿಶ್ವಜಿತಾ ಸರ್ವಸ್ವದಕ್ಷಿಣೇನ ಯಜಮಾನಃ, ತಸ್ಮಿನ್ ಕ್ರತೌ ಸರ್ವವೇದಸಂ–ಸರ್ವಸ್ವಂ ದದೌ–ದತ್ತವಾನ್ ಇತ್ಯರ್ಥಃ । 'ಉಶನ್' ಇತ್ಯನೇನ ಕರ್ಮಣಃ ಕಾಮ್ಯತ್ವಾತ್ ದಕ್ಷಿಣಾಸಾದ್ಗುಣ್ಯಮ್ ಆವಶ್ಯಕಮಿತಿ ಸೂಚ್ಯತೇ ॥

**ತಸ್ಯ ಹ....ಪುತ್ರ ಆಸ** । **ಆಸ** ಬಭೂವ । 'ಛಂದಸ್ಯುಭಯಥಾ' ಇತಿ ಲಿಟಃ ಸಾರ್ವಧಾತುಕತ್ವಾತ್ 'ಸ್ವಸ್ತಯೇ ತಾರ್ಕ್ಷ್ಯಮ್' ಇತ್ಯಾದಿವತ್ ಅಸ್ತೇರ್ಭೂಭಾವಾಭಾವಃ ॥

## ಅನುವಾದ

**ಉಶನ್ ಹ ವೈ ವಾಜಶ್ರವಸಸ್ಸರ್ವವೇದಸಂ ದದೌ। ಉಶನ್**—ಅಭಿಲಾಷಿಯಾಗಿ 'ವಶ ಕಾಂತೌ' (ಪಾ. ಧಾ. 1080) ಎಂಬ ಧಾತುವಿಗೆ 'ಶತೃ' ಪ್ರತ್ಯಯ ಬಂದು; 'ಗ್ರಹಿಜ್ಯಾ....' (ಪಾ.ಸೂ. 6–1–16)ಎಂಬ ಸೂತ್ರದಿಂದ ಸಂಪ್ರಸಾರಣ ಬಂದಿದೆ. 'ವ'ಕಾರಕ್ಕೆ 'ಉ'ಕಾರ ಬಂದಿದೆ. ಹ. ವೈ. ಹಿಂದೆ ನಡೆದ ವಿಷಯವನ್ನು ಜ್ಞಾಪಿಸುವ ನಿಪಾತ (ಅವ್ಯಯ)ಗಳು। 'ಫಲ'ವನ್ನು ಎಂದು ಸೇರಿಸಿಕೊಳ್ಳಬೇಕು. **ವಾಜಶ್ರವಸಃ**—ವಾಜೇನ–(ದಾನಕ್ಕೆ ಕರ್ಮವಾಗಿರುವ) ಅನ್ನದಿಂದ ಶ್ರವಃ–ಕೀರ್ತಿಯು ಯಾವನಿಗಿದೆಯೋ, ಅವನು ವಾಜಶ್ರವ. ಅವನ ಮಗ ವಾಜಶ್ರವಸ. ಅಥವಾ ವಾಜಶ್ರವಸಃ (ವಾಃ) ಎಂಬುದು ರೂಢನಾಮ. ಈ ವಾಜಶ್ರವಸನೆಂಬ ಋಷಿಯು ತನ್ನದೆಲ್ಲವನ್ನೂ ದಕ್ಷಿಣಾರೂಪದಲ್ಲಿ ಕೊಡಬೇಕಾದ 'ವಿಶ್ವಜಿತ್' ಎಂಬ ಯಾಗಕ್ಕೆ ಯಜಮಾನನಾಗಿ, ಆ ಯಾಗದಲ್ಲಿ, **ಸರ್ವವೇದಸಮ್**–ತನ್ನ ಐಶ್ವರ್ಯವೆಲ್ಲವನ್ನೂ, **ದದೌ**–ಕೊಟ್ಟನು ಎಂದರ್ಥ. **'ಉಶನ್'** ಎಂಬುದರಿಂದ (ಇದು) ಕಾಮ್ಯಕರ್ಮವಾದುದರಿಂದ ದಕ್ಷಿಣೆ ಕೊಡಬೇಕಾದುದು ಆವಶ್ಯಕವೆಂದು ಸೂಚಿತವಾಗುತ್ತದೆ.

**ತಸ್ಯಹ....ಪುತ್ರ ಆಸ । ಆಸ**–ಇದ್ದನು. 'ಛಂದಸ್ಯುಭಯಥಾ'(ಪಾ.ಸೂ. 3–4–117) ಎಂಬುದರಿಂದ 'ಲಿಟ್' ರೂಪಕ್ಕೆ ಸಾರ್ವಧಾತುಕಸಂಜ್ಞೆಯಿರುವುದರಿಂದ 'ಸ್ವಸ್ತಯೇ ತಾರ್ಕ್ಷ್ಯಂ' (ಋಗ್ವೇದ 10–178–1) ಎಂಬಂತೆ ಅಸ ಧಾತುವಿಗೆ ಭೂಭಾವ ಬಂದಿಲ್ಲ.[1]

## ಭಾಷ್ಯಸಾರ

ದಶೋಪನಿಷತ್ತುಗಳಲ್ಲಿ ಕಠೋಪನಿಷತ್ತು ಅತ್ಯಂತ ಶ್ರೇಷ್ಠವಾದುದು. ಇದರಲ್ಲಿ ಬರುವ ನಚಿಕೇತನ ಕಥೆಯೂ ಪ್ರಸಿದ್ಧವಾಗಿದೆ. ಈ ಕಥೆಯನ್ನು 'ಕಾಠಕ' ಮತ್ತು 'ಮಹಾಭಾರತ'ಗಳಲ್ಲಿಯೂ ಕಾಣಬಹುದು.

ಈ ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆಯ ಮಹತ್ವವನ್ನು ನಚಿಕೇತನ ಕಥೆಯ ಮೂಲಕ ವಿವರಿಸಲಾಗಿದೆ. ಸರ್ವೇಶ್ವರನಾದ ಪರಮಾತ್ಮನೇ ನಾವು ಪಡೆಯಬೇಕಾದವನು. (ಉಪೇಯ).

---

1 ಈ ನಿಪಾತಾವ್ಯಯಗಳಿಂದ ಈ ಕಥೆ ಕಲ್ಪಿತವಲ್ಲ. ನಿಜವಾಗಿ ನಡೆದಿದ್ದು ಎಂದು ತಿಳಿಯುತ್ತದೆ.

1 ಆರ್ಧಧಾತುಕವಾದ ಅಸಧಾತುವಿಗೆ ಲಿಟ್‌ರೂಪದಲ್ಲಿ ಭೂಭಾವ ಬರಬೇಕು. ಅಂದರೆ 'ಬಭೂವ' ಎಂದಾಗಬೇಕು. 'ಛಂದಸ್ಯುಭಯಥಾ' ಎಂಬುದರಿಂದ ವೇದದಲ್ಲಿ 'ಲಿಟ್' ಲಕಾರಕ್ಕೆ ಸಾರ್ವಧಾತುಕ–ಆರ್ಧಧಾತುಕ ಸಂಜ್ಞೆಗಳೆರಡೂ ಬರುವುದರಿಂದ, 'ಸ್ವಸ್ತಯೇ ತಾರ್ಕ್ಷ್ಯಮ್' ಎಂಬಂತೆ ಇಲ್ಲೂ ಅಸಧಾತುವಿಗೆ ಭೂಭಾವ ಬಂದಿಲ್ಲ. 'ಆಸ' ಎಂದೇ ರೂಪವಿದೆ.

ಜೀವನೇ ಪಡೆಯುವವನು (ಉಪೇತೃ). ಉಪಾಸನವೇ ಪಡೆಯುವ ಸಾಧನ (ಉಪಾಯ). ಇವುಗಳ ಸ್ವರೂಪ ಗಹನವಾದುದು. ಇವುಗಳ ಸ್ವರೂಪವನ್ನು ಸುಲಭವಾಗಿ ಉಪದೇಶಿಸ ಬೇಕೆಂಬ ಇಚ್ಛೆಯಿಂದ, ಆಚಾರ್ಯನು ಗುರು–ಶಿಷ್ಯಸಂವಾದರೂಪವಾದ ಈ ಕಥೆಯನ್ನು ಆರಂಭಿಸುತ್ತಾನೆ ಎಂದು ರಾಮಾನಂದರು ತಿಳಿಸುತ್ತಾರೆ.

ಹಿಂದೆ 'ವಾಜಶ್ರವ'ನೆಂಬ ಋಷಿಯಿದ್ದನು. ಈತನು ಅನ್ನದಾನ ಮುಂತಾದವು ಗಳಿಂದ ಕೀರ್ತಿ ಪಡೆದಿದ್ದನು. ಇವನ ಮಗ ವಾಜಶ್ರವಸನು. ಈತನು ಫಲಾಕಾಂಕ್ಷಿ. ಆದಕಾರಣ ಫಲೋದ್ದೇಶದಿಂದ ಇವನು ತನ್ನ ಸರ್ವಸ್ವವನ್ನು ದಕ್ಷಿಣಾರೂಪದಲ್ಲಿ ಕೊಡಬೇಕಾದ 'ವಿಶ್ವಜಿತ್' ಎಂಬ ಯಾಗ ಮಾಡಿದನು. ಯಾಗದಲ್ಲಿ ಭಾಗವಹಿಸಿದ್ದ ಋತ್ವಿಕ್ಕುಗಳಿಗೂ, ಇತರ ಬ್ರಾಹ್ಮಣರಿಗೂ ತನ್ನೆಲ್ಲ ಐಶ್ವರ್ಯವನ್ನೂ ದಕ್ಷಿಣೆಯ ರೂಪದಲ್ಲಿ ಕೊಟ್ಟನು. ಯಜಮಾನ ನಾದ ಈ ವಾಜಶ್ರವಸನಿಗೆ 'ನಚಿಕೇತ' ಎಂದು ಪ್ರಸಿದ್ಧನಾದ ಮಗನಿದ್ದನು.



# ಮಂತ್ರ ೨

तं ह कुमारं सन्तं दक्षिणासु नीयमानासु श्रद्धाऽऽविवेश। सोऽमन्यत॥

ತಂ ಹ ಕುಮಾರಂ ಸಂತಂ ದಕ್ಷಿಣಾಸು ನೀಯಮಾನಾಸು
ಶ್ರದ್ಧಾऽऽವಿವೇಶ । ಸೋऽಮನ್ಯತ ॥

## ಪ್ರತಿಪದಾರ್ಥ

ಸಂತಮ್—ಅಸ್ತಿಕತೆಯಿಂದ ಕೂಡಿದ, ತಮ್—ಆ, ಕುಮಾರಮ್—ಬಾಲಕನನ್ನು, ದಕ್ಷಿಣಾಸು—ದಕ್ಷಿಣೆಗಳು (ಹಸುಗಳು), ನೀಯಮಾನಾಸು—ಒಯ್ಯಲ್ಪಡುತ್ತಿರಲು, ಶ್ರದ್ಧಾ—ಆಸಕ್ತಿಯು, ಆವಿವೇಶ——ಪ್ರವೇಶಿಸಿತು. ಸಃ – ಆ ನಚಿಕೇತನು. ಅಮನ್ಯತ—ಆಲೋಚಿಸಿದನು.

## ತಾತ್ಪರ್ಯ

ನಚಿಕೇತನು ಬಾಲಕನಾಗಿರುವಾಗಲೇ ಆಸ್ತಿಕನಾಗಿದ್ದನು. ಆದ್ದರಿಂದ ತಂದೆಯು ಋತ್ವಿಕ್ಕುಗಳಿಗಾಗಿ ದಕ್ಷಿಣೆಯಾಗಿ ಕೊಡಲು ಹಸುಗಳನ್ನು ಒಯ್ಯುತ್ತಿರಲು ಅವನಲ್ಲಿ ಶ್ರದ್ಧೆಯು ಮೂಡಿತು. ಕೂಡಲೇ ಅವನು ಆಲೋಚಿಸಿದನು.

## ರಂಗರಾಮಾನುಜಭಾಷ್ಯಮ್

**ತಮ್.......ಶ್ರದ್ಧಾऽऽವಿವೇಶ** । **ತಮ್**–ನಚಿಕೇತಸಂ. **ಕುಮಾರಂ ಸಂತಮ್**–ಬಾಲಮೇವ ಸಂತಮ್, ಋತ್ವಿಗ್ಭ್ಯೋ ದಕ್ಷಿಣಾಸು ಗೋಷು ನೀಯಮಾನಾಸು ಸತೀಷು, **ಶ್ರದ್ಧಾ**–ಆಸ್ತಿಕ್ಯಬುದ್ಧಿಃ ಪಿತುರ್ಹಿತಕಾಮಪ್ರಯುಕ್ತಾ, **ಆವಿವೇಶ**–ಆವಿಷ್ಟವತೀ ॥

## ದಕ್ಷಿಣಾಸ್ವಿತಿ ವಚನವಿಚಾರಃ

ಯದ್ಯಪಿ ಯತ್ ಆನತಿಕರಂ ದ್ರವ್ಯಮ್, ತದ್ ದಕ್ಷಿಣಾ ಇತ್ಯುಚ್ಯತೇ । ಏಕಾ ಚಾಸೌ ಕ್ರತಾವಾನತಿರಿತಿ ತದುಪಾಧಿಕೋ ದಕ್ಷಿಣಾಶಬ್ದಃ ಏಕವಚನಾಂತತಾಮೇವ ಲಭತೇ । ಅತ ಏವ ಭೂನಾಮಕೈಕಾಹಕ್ರತೌ, 'ತಸ್ಯ ಧೇನುರ್ದಕ್ಷಿಣಾ' ಇತ್ಯತ್ರ ಕೃತ್ಸ್ನಸ್ಯ ಗವಾಶ್ವಾದೇಃ ಪ್ರಾಕೃತಸ್ಯ ದಾಕ್ಷಿಣ್ಯಸ್ಯ ನಿವೃತ್ತಿಃ ಇತಿ 'ತಸ್ಯ ಧೇನುರಿತಿ ಗವಾಮ್' ಇತಿ ದಾಶಮಿಕಾಧಿಕರಣೇ (ಪೂ. ಮೀ. 10–3–19) ಸ್ಥಿತಮ್—ತಥಾಪಿ ದಕ್ಷಿಣಾಶಬ್ದೋऽಯಂ ಭೃತಿವಚನಃ ಸ ಚ ಕರ್ಮಾಪೇಕ್ಷಯಾಪಿ ಪ್ರವರ್ತತೇ, ಅಸ್ಮಿನ್ ಕರ್ಮಣೀಯಂ ಭೃತಿರಿತಿ । ಕರ್ತಾರಪೇಕ್ಷಯಾಪಿ ಪ್ರವರ್ತತೇ, ಅಸ್ಮಿನ್ ಕರ್ಮಣಿ ಅಸ್ಯ ಪುರುಷಸ್ಯೇಯಂ ಭೃತಿರಿತಿ ॥ ತತಶ್ಚ ಋತ್ವಿಗ್ಬಹುತ್ವಾಪೇಕ್ಷಯಾ ದಕ್ಷಿಣಾಬಹುತ್ವಸಂಭವಾತ್ ದಕ್ಷಿಣಾಸ್ವಿತಿ ಬಹುವಚನಮ್ ಉಪಪದ್ಯತೇ । ಅತ ಏವ ಋತಪೇಯೇ 'ಔದುಂಬರಸ್ಸೋಮಚಮಸೋ ದಕ್ಷಿಣಾ ; ಸ

ಪ್ರಿಯಾಯ ಸಗೋತ್ರಾಯ ಬ್ರಹ್ಮಣೇ ದೇಯಃ' ಇತ್ಯತ್ರ ಏಕವಾಕ್ಯತಾಪಕ್ಷೇ ಬ್ರಹ್ಮಭಾಗ ಮಾತ್ರೇಽಪಿ ದಕ್ಷಿಣಾಶಬ್ದಸ್ಯಾವಯವಲಕ್ಷಣಾಮಂತರೇಣ ಮುಖ್ಯತ್ವೋಪಪತ್ತೇಃ ತನ್ಮಾತ್ರ ಬಾಧ ಇತ್ಯುಕ್ತಂ ದಶಮೇ, "ಯದಿ ತು ಬ್ರಹ್ಮಣಸ್ತದೂನಂ ತದ್ವಿಕಾರಸ್ಸ್ಯಾತ್" ಇತ್ಯಧಿಕರಣೇ (ಪೂ.ಮೀ. 10–3–20) । ತತಶ್ಚ ಕ್ರತ್ವಪೇಕ್ಷಯಾ ದಕ್ಷಿಣೈಕ್ಯೇಽಪಿ ಋತ್ವಿಗಪೇಕ್ಷಯಾ ದಕ್ಷಿಣಾಭೇದಸಂಭವಾತ್ ದಕ್ಷಿಣಾಸ್ವಿತಿ ಬಹುವಚನಸ್ಯ ನ ಅನುಪಪತ್ತಿಃ ಇತಿ ದ್ರಷ್ಟವ್ಯಮ್।

## ಅನುವಾದ

**ತಮ್**–ಆ ನಚಿಕೇತನನ್ನು, **ಕುಮಾರಂ ಸಂತಮ್**–ಬಾಲಕನಾಗಿದ್ದಾಗಲೇ ಆಸ್ತಿಕನಾದ, ಋತ್ವಿಕ್ಕುಗಳಿಗೆ ದಕ್ಷಿಣಾರೂಪವಾದ ಗೋವುಗಳು ಒಯ್ಯಲ್ಪಡುತ್ತಿರಲು, **ಶ್ರದ್ಧಾ**–ತಂದೆಗೆ ಹಿತವುಂಟುಮಾಡಬೇಕೆಂಬ ಆಸ್ತಿಕ್ಯಬುದ್ಧಿಯು, **ಆವಿವೇಶ**–ಹೊಕ್ಕಿತು ? (ಮೂಡಿತು.)

## ದಕ್ಷಿಣಾಸು ಎಂಬಲ್ಲಿ ಬಹುವಚನದ ಸಾಧುತ್ವ ವಿಚಾರ[1]

'ಭೂ' ಎಂಬ ಹೆಸರಿನ ಒಂದು ದಿನದ ಯಾಗದಲ್ಲಿ ಕೊಡಬೇಕಾದ ದಕ್ಷಿಣಾವಿಷಯ ದಲ್ಲಿ 'ತಸ್ಯಧೇನುರ್ದಕ್ಷಿಣಾ' (ಪೂ. ಮೀ. 10–3–56) ಎಂಬಲ್ಲಿ ಏಕವಚನವಿದೆ. ಇಲ್ಲಿ ಹಸು-ಕುದುರೆ ಮುಂತಾದ ಪ್ರಾಕೃತದ್ರವ್ಯಗಳನ್ನು ದಕ್ಷಿಣಾರೂಪದಲ್ಲಿ ಕೊಡುವರು. ಅನೇಕ ವಸ್ತುಗಳನ್ನು ಕೊಟ್ಟರೂ ಏಕವಚನವೇ ಇದೆ ಮತ್ತು 'ಏಕಾ ಚಾಸೌ ಕ್ರತೌ ಆನತಿಃ' ಎಂಬ ಮಾತಿನಿಂದ ಈ ದಕ್ಷಿಣೆ ಒಂದು ಎಂದು ಹೇಳಿದೆ. ಆದುದರಿಂದ 'ದಕ್ಷಿಣಾಸು' ಎಂಬ ಬಹುವಚನ ಹೇಗೆ ? ಎಂದು ಆಕ್ಷೇಪ.

'ದಕ್ಷಿಣಾ' ಶಬ್ದವು ಭೃತಿಯನ್ನು ಸೂಚಿಸುತ್ತದೆ. 'ಭೃತಿ' ಅಂದರೆ ವೇತನ ಅಥವಾ ಕೂಲಿ. ಇದು ಈ ಕಾರ್ಯಕ್ಕೆ ಇಷ್ಟು ಕೂಲಿ ಎಂದು ಕರ್ಮವನ್ನು ಅವಲಂಬಿಸಿಯೂ, ಈ ಕಾರ್ಯ ಮಾಡುವವನಿಗೆ ಇಷ್ಟು ವೇತನ ಎಂದು ವ್ಯಕ್ತಿಯನ್ನು ಅವಲಂಬಿಸಿಯೂ ಇದೆ. ಯಾಗದಲ್ಲಿ ಅನೇಕ ಋತ್ವಿಕ್ಕುಗಳಿರುವುದರಿಂದ ಅವರನ್ನು ಅವಲಂಬಿಸಿ ದಕ್ಷಿಣೆಯೂ ಅನೇಕ ವಾಗಿರುವುದರಿಂದ 'ದಕ್ಷಿಣಾಸು' ಎಂದು ಬಹುವಚನ ಬರಬಹುದೆಂದು ಸಮಾಧಾನ.

ನಚಿಕೇತನು ಬಾಲಕನಾಗಿದ್ದರೂ ಆಸ್ತಿಕನಾಗಿದ್ದನು. ತಂದೆಯು ಮಾಡುತ್ತಿದ್ದ ಸರ್ವಸ್ವವನ್ನು ದಾನಮಾಡಬೇಕಾದ 'ವಿಶ್ವಜಿತ್' ಯಾಗದಲ್ಲಿ ಋತ್ವಿಕ್ಕುಗಳಿಗೂ ಇತರರಿಗೂ ದಕ್ಷಿಣಾರೂಪದಲ್ಲಿ ಕೊಡಲು ಹಸುಗಳು ಒಯ್ಯಲ್ಪಡುತ್ತಿದ್ದವು. ಈ ಋತ್ವಿಕ್ಕಿಗೆ ಇಷ್ಟು ಹಸುಗಳು ಎಂದು ವಿಭಾಗಿಸಿ ಹಸುಗಳನ್ನು ಕೊಡುತ್ತಿದ್ದನು. ಇದನ್ನು ನೋಡಿದಾಗ ನಚಿಕೇತನ ಮನಸ್ಸಿನಲ್ಲಿ ಆಲೋಚನೆ ಮೂಡಿತು. ನನ್ನ ತಂದೆ ಫಲಾಭಿಲಾಷಿ. ಇವನ ಇಚ್ಛೆ ಈಗ ಕೊಡುತ್ತಿರುವ ಜೀರ್ಣವಾದ ಹಸುಗಳಿಂದ ಸಿದ್ಧಿಸಲಾರದು. ನನ್ನನ್ನು ದಾನ ಕೊಡುವುದರಿಂದಲಾದರೂ ತಂದೆಯ ಇಚ್ಛೆ ಪೂರ್ಣವಾಗಲಿ ಎಂದು ತಂದೆಗೆ ಹಿತವನ್ನುಂಟು ಮಾಡುವ ಸದ್ಬುದ್ಧಿ ಮೂಡಿತು. ಈ ಹಿನ್ನೆಲೆಯಲ್ಲಿ ನಚಿಕೇತನು ಆಲೋಚಿಸಿದನು.

---

1 ವಚನ ವಿಚಾರ : ಯಾಗದಲ್ಲಿ ಕೊಡಬೇಕಾದ ದಕ್ಷಿಣೆ ಒಂದೇ ಆಗಿರುವುದರಿಂದ ಏಕವಚನವೇ ಉಚಿತವೆಂಬ ಶಂಕೆ ಸಲ್ಲದು. ಯಾಗದ ದೃಷ್ಟಿಯಿಂದ ದಕ್ಷಿಣೆ ಒಂದೇ ಆದರೂ ಉದ್ದೇಶ್ಯರಾದ ಋತ್ವಿಕ್ಕುಗಳು ಇತರ ಸದಸ್ಯರು ಅನೇಕರಾಗಿರುವುದರಿಂದ, ಅವರಿಗೆ ಕೊಡಬೇಕಾದ ದಕ್ಷಿಣೆಗಳೇ ಉದ್ದೇಶವಾಗಿರುವುದರಿಂದಲೂ ಬಹುವಚನ ಸಾಧುವಾಗಿದೆ. (ರಾಮಾನಂದ ಭಾಷ್ಯ)

## ಮಂತ್ರ ೩

**पीतोदका जग्धतृणा दुग्धदोहा निरिन्द्रियाः ।**
**अनन्दा नाम ते लोकास्तान् स गच्छति ता ददत् ॥**

ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ ।
ಅನಂದಾ ನಾಮ ತೇ ಲೋಕಾಸ್ತಾನ್ ಸ ಗಚ್ಛತಿ ತಾ ದದತ್ ॥

### ಪ್ರತಿಪದಾರ್ಥ

ಪೀತೋದಕಾಃ–ನೀರನ್ನು ಕುಡಿದವು. (ಈಗ ಕುಡಿಯುವವಲ್ಲ), ಜಗ್ಧತೃಣಾಃ–ಹುಲ್ಲನ್ನು ಮೇದವು(ಈಗ ಮೇಯಲಾರವು), ದುಗ್ಧದೋಹಾಃ–ಹಾಲು ಕರೆದವು (ಇನ್ನು ಕರೆಯಲಾರವು), ನಿರಿಂದ್ರಿಯಾಃ–ಇಂದ್ರಿಯಗಳಿಲ್ಲದವು (ಅಂದರೆ ದಾನವಾಗಿ ಕೊಡುತ್ತಿರುವ ಹಸುಗಳು ಕೆಲಸಕ್ಕೆ ಬಾರದ ಮುದಿ ಹಸುಗಳು), ತಾಃ–ಇವನ್ನು, ದದತ್[1]–ಕೊಡುವ, ಸಃ-ಯಜಮಾನನು, ಅನಂದಾಃ–ಆನಂದವಿಲ್ಲದ, ತೇ ಲೋಕಾಃ (ಸಂತಿ) ನಾಮ–ಶಾಸ್ತ್ರಗಳಲ್ಲಿ ಪ್ರಸಿದ್ಧವಾದ ಲೋಕಗಳಿವೆಯಲ್ಲವೇ ! ತಾನ್–ಆ ಲೋಕಗಳನ್ನು (ಯಜಮಾನನು), ಗಚ್ಛತಿ–ಸೇರುತ್ತಾನೆ, (ಎಂದು ಆಲೋಚಿಸಿದನು.)

### ತಾತ್ಪರ್ಯ

ನಮ್ಮ ತಂದೆ ದಕ್ಷಿಣೆಯಾಗಿ ಕೊಡುತ್ತಿರುವ ಹಸುಗಳು ನೀರು ಕುಡಿದು ಮುಗಿದಿವೆ. ಇನ್ನು ಕುಡಿಯಲಾರವು. ಹುಲ್ಲನ್ನು ಮೇದಿವೆ. ಇನ್ನು ಮೇಯಲಾರವು. ಹಾಲು ಕರೆದು ಮುಗಿಸಿವೆ. ಇನ್ನು ಕರೆಯಲಾರವು. ಕರುವನ್ನು ಹಾಕಲು ಅವುಗಳ ಇಂದ್ರಿಯಗಳೂ ಸಮರ್ಥವಾಗಿಲ್ಲ. ಇಂತಹ ಹಸುಗಳನ್ನು ಯಾಗದಲ್ಲಿ ದಾನಕೊಡುವುದರಿಂದ ಶಾಸ್ತ್ರಗಳಲ್ಲಿ ಪ್ರಸಿದ್ಧವಾದ ಆನಂದವಿಲ್ಲದೇ ಇರುವ ನರಕ ಲೋಕಗಳನ್ನು ಯಜಮಾನನು ಹೋಗಿ ಸೇರುತ್ತಾನಲ್ಲವೇ ! ಎಂದು ಯೋಚಿಸಿದನು.

### ರಂಗರಾಮಾನುಜಭಾಷ್ಯಮ್

ಶ್ರದ್ಧಾಪ್ರಕಾರಮೇವ ದರ್ಶಯತಿ (ಸೋಽಮನ್ಯತ ?) ಪೀತೋದಕಾಃ ಜಗ್ಧತೃಣಾಃ ........**ತಾ ದದತ್** । ಪೀತಮ್ ಉದಕಂ ಯಾಭಿಃ ತಾಃ **ಪೀತೋದಕಾಃ**, ಜಗ್ಧಮ್–ಭಕ್ಷಿತಂ ತೃಣಂ ಯಾಭಿಃ ತಾಃ ಜಗ್ಧತೃಣಾಃ, ದುಗ್ಧಃ ದೋಹಃ ಕ್ಷೀರಾಖ್ಯೋಯಾಸು(ಭಿಃ) ತಾಃ ದುಗ್ಧದೋಹಾಃ, ನಿರಿಂದ್ರಿಯಾಃ – ಅಪ್ರಜನನಸಮರ್ಥಾಃ ; ಜೀರ್ಣಾಃ ನಿಷ್ಫಲಾ ಇತಿ ಯಾವತ್ । ಯಾ ಏವಂಭೂತಾ ಗಾವಃ, ತಾ ಋತ್ವಿಗ್ಭ್ಯೋ ದಕ್ಷಿಣಾಬುದ್ಧ್ಯಾ ದದತ್–ಪ್ರಯಚ್ಛನ್, ಅನಂದಾಃ–ಅಸುಖಾಃ, ತೇ–ಶಾಸ್ತ್ರಸಿದ್ಧಾ ಲೋಕಾಃ ಸಂತಿ ನಾಮ–ಖಲು, ತಾನ್ ಸಃ ಯಜಮಾನಃ ಗಚ್ಛತಿ । ಏವಮ್ ಅಮನ್ಯತ ಇತ್ಯರ್ಥಃ ॥

---

1 ಪ್ರತಿಪದಾರ್ಥಕಾರರು 'ಅದದತ್' ಎಂದು ವಿಭಾಗ ಮಾಡಿರುವರು, (ಇವರ ಸಾಧುತ್ವ ವಿಚಾರಣೀಯ) ಇತರ ಭಾಷ್ಯಗಳನ್ನು ಅನುಸರಿಸಿ 'ದದತ್' ಎಂದೇ ಪಾಠವಿಟ್ಟುಕೊಂಡಿದೆ.

## ಅನುವಾದ

(ನಚಿಕೇತನಿಗುಂಟಾದ) ಶ್ರದ್ಧಾ ರೀತಿಯನ್ನು ವಿವರಿಸುತ್ತಾನೆ. ಪೀತೋದಕಾಃ–ಈ ಹಸುಗಳು ಹಿಂದೆ ನೀರು ಕುಡಿದಿವೆ. ಜಗ್ಧತೃಣಾಃ–ಹಿಂದೆ ಹುಲ್ಲು ಮೇದಿವೆ. ದುಗ್ಧದೋಹಾಃ ಹಿಂದೆ ಹಾಲನ್ನು ಕರೆದಿವೆ. ನಿರಿಂದ್ರಿಯಾಃ–ಮುಂದೆ ಕರುಹಾಕಲು ಅಸಮರ್ಥವಾದುವು. ಅಂದರೆ (ಈಗ) ಜೀರ್ಣವಾಗಿವೆ–ನಿಷ್ಫಲವಾಗಿವೆ. ಇಂತಹ ತಾಃ–ಆ ಹಸುಗಳನ್ನು ಋತ್ವಿಕ್ಕುಗಳಿಗೆ ದಕ್ಷಿಣೆ ಎಂದು ದದತ್–ಕೊಡುವ ಅನಂದಾಃ ನಾಮ ತೇ ಲೋಕಾಃ–ಸುಖವಿಲ್ಲದ ಲೋಕಗಳೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ತಾನ್–ಆ ಲೋಕಗಳನ್ನು ಸಃ– ಆ ಯಜಮಾನನು ಗಚ್ಛತಿ–ಪಡೆಯುತ್ತಾನೆ ಎಂದು ಅವನು ತಿಳಿದನು ಎಂದರ್ಥ.

## ಭಾಷ್ಯಸಾರ

ನಚಿಕೇತನು ಏನೆಂದು ಆಲೋಚಿಸಿದನು ಎಂಬುದನ್ನು ಇಲ್ಲಿ ವಿವರಿಸುತ್ತಾನೆ. ಈ ಹಸುಗಳು ಹಿಂದೆ ಸಾಕಷ್ಟು ನೀರು ಕುಡಿದು, ಹುಲ್ಲು ಮೇದು, ಹಾಲು ಕರೆದಿವೆ. ಈಗ ನೀರು ಕುಡಿಯಲು ಅಸಮರ್ಥವಾಗಿವೆ. ಹುಲ್ಲನ್ನು ಮೇಯಲೂ ಸಮರ್ಥವಾಗಿಲ್ಲ. ಹಾಲನ್ನೂ ಕರೆಯಲಾರವು. ಕರುಗಳನ್ನುಹಾಕಲೂ ಅಸಮರ್ಥವಾಗಿವೆ. 'ನಿರಿಂದ್ರಿಯಾಃ' ಎಂಬಲ್ಲಿ ಇಂದ್ರಿಯ ಶಬ್ದದಿಂದ ಆಸನದ್ವಾರವೂ ಸೂಚಿತವಾಗುತ್ತದೆ. ಅದೂ ಶಕ್ತಿಹೀನವಾಗಿದೆ ಅಂದರೆ ಸಗಣಿ ಹಾಕಲೂ ಅಸಮರ್ಥವಾಗಿವೆ ಎಂದು ತಿಳಿಯುತ್ತದೆ.

'ಇಂತಹ ಹಸುಗಳನ್ನು ಋತ್ವಿಕ್ಕುಗಳಿಗೆ ದಕ್ಷಿಣಾ ರೂಪದಲ್ಲಿ ಕೊಡುವ ಯಜಮಾನನು ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುವ 'ಅನಂದಾ' ಎಂಬ ಲೋಕಗಳನ್ನು ಹೊಂದುತ್ತಾನೆ. ಅಂದರೆ ಸುಖವೇ ಇಲ್ಲದ ಲೋಕಗಳಿಗೆ ಹೋಗುತ್ತಾನೆ ಎಂದು ಆಲೋಚಿಸಿದನು' ಎಂದು ತಾತ್ಪರ್ಯ.

# ಮಂತ್ರ ೪

**स हो[1]वाच पितरम् ; तत ! कस्मै मां दास्यसीति । द्वितीयं तृतीयम् । तं होवाच ; मृत्यवे त्वा ददामीति ॥**

ಸ ಹೋವಾಚ ಪಿತರಮ್; ತತ ! ಕಸ್ಮೈ ಮಾಂ ದಾಸ್ಯಸೀತಿ | ದ್ವಿತೀಯಂ ತೃತೀಯಂ || ತಂ ಹೋವಾಚ ; ಮೃತ್ಯವೇ ತ್ವಾ ದದಾಮೀತಿ ||

## ಪ್ರತಿಪದಾರ್ಥ

**ತತ**[2]–ಎಲೈ ತಂದೆಯೇ ! **ಮಾಮ್**–ನನ್ನನ್ನು, **ಕಸ್ಮೈ**–ಯಾರಿಗೆ, **ದಾಸ್ಯಸಿ**–ಕೊಡುವೆ, **ಇತಿ**-ಎಂದು, **ಸಃ**-ನಚಿಕೇತನು, **ಪಿತರಮ್**–ತಂದೆಯನ್ನು ಕುರಿತು, **ಉವಾಚ**-ಹೇಳಿದನು. **ದ್ವಿತೀಯಂ**-ಎರಡನೆಯ ಸಲ **ತೃತೀಯಂ**-ಮೂರನೇ ಸಲವೂ (ನಚಿಕೇತನು ಹಾಗೆ ಹೇಳಿದನು),**ತಂ ಹ**-(ಹೀಗೆ ಹೇಳಿದ) ನಚಿಕೇತನನ್ನು ಕುರಿತು, **ತ್ವಾ**–ನಿನ್ನನ್ನು, **ಮೃತ್ಯವೇ**–ಯಮನಿಗೆ, **ದದಾಮಿ**–ಕೊಡುತ್ತೇನೆ. **ಇತಿ**-ಎಂದು, **ಉವಾಚ**–ಹೇಳಿದನು.

## ತಾತ್ಪರ್ಯ

ತಂದೆಯು ಯಾಗದಲ್ಲಿ ಕೊಡುತ್ತಿದ್ದ ದಕ್ಷಿಣಾರೂಪವಾದ ಹಸುಗಳಿಂದ ತಂದೆಗೆ ಒಳ್ಳೆಯದಾಗುವುದಿಲ್ಲ ; ಕೆಡುಕುಂಟಾಗುತ್ತದೆ ಎಂದು ತಿಳಿದ ನಚಿಕೇತನು 'ನನ್ನನ್ನು ಯಾರಿಗೆ ಕೊಡುವೆ' ? ಎಂದು ತಂದೆಯನ್ನು ಎರಡು–ಮೂರು ಬಾರಿ ಕೇಳಿದನು. ಇದರಿಂದ ತಂದೆಯು ಸಿಟ್ಟಿನಿಂದ 'ಯಮನಿಗೆ ನಿನ್ನನ್ನು ಕೊಡುತ್ತೇನೆ' ಎಂದು ಅವನನ್ನು ಕುರಿತು ಹೇಳಿದನು.

## ರಂಗರಾಮಾನುಜಭಾಷ್ಯಮ್

**ಸ ಹೋವಾಚ ಪಿತರಮ್....ತೃತೀಯಂ** । ದೀಯಮಾನದಕ್ಷಿಣಾವೈಗುಣ್ಯಂ ಮನ್ಯಮಾನಃ ನಚಿಕೇತಾಃ ಸ್ವಾತ್ಮದಾನೇನಾಪಿ ಪಿತುಃ ಕ್ರತುಸಾದ್ಗುಣ್ಯಮಿಚ್ಛನ್ ಆಸ್ತಿಕಾಗ್ರೇಸರಃ ಪಿತರಮುಪಗಮ್ಯೋವಾಚ, **ತತ** !–ಹೇ ತಾತ ! **ಕಸ್ಮೈ** ಋತ್ವಿಜೇ ದಕ್ಷಿಣಾರ್ಥಂ **ಮಾಂ ದಾಸ್ಯಸೀತಿ** । **ಸ** ಏವಮುಕ್ತೇನಾಪಿ ಪಿತ್ರಾ ಉಪೇಕ್ಷ್ಯಮಾಣೋಽಪಿ **ದ್ವಿತೀಯಂ ತೃತೀಯ**ಮಪಿ ಪರ್ಯಾಯಂ **ಕಸ್ಮೈ ಮಾಂ ದಾಸ್ಯಸಿ ಇತಿ ಉವಾಚ** । **ತಂ ಹೋವಾಚ ಮೃತ್ಯವೇ ತ್ವಾ ದದಾಮೀತಿ** । ಏವಂ ಬಹು (ಮುಹುಃ) ನಿರ್ಬಧ್ಯಮಾನಃ ಪಿತಾ ಕುಪಿತಃ ತಂ ಪುತ್ರಮ್, **ಮೃತ್ಯವೇ ತ್ವಾ ದದಾಮೀತಿ** ಉಕ್ತವಾನ್ ॥

---

1 'ಹ' ಎಂಬುದು ನಿಶ್ಚಯಾರ್ಥದಲ್ಲಿದೆ.

2 'ತತ'—'ತಾತ' ಎಂಬುದಕ್ಕೆ ಬದಲಾಗಿ 'ತತ' ಎಂದು ಹ್ರಸ್ವ ಋಷಿ ಪ್ರಯೋಗ.

## ಅನುವಾದ

ಕೊಡಲ್ಪಡುತ್ತಿರುವ ದಕ್ಷಿಣೆಗಳು ಗುಣರಹಿತವಾಗಿರುವುದನ್ನು ಅರಿತು, ತನ್ನನ್ನು ದಕ್ಷಿಣೆಯಾಗಿ ಕೊಡುವುದರಿಂದಲಾದರೂ ಯಾಗವು ಸಫಲವಾಗಲಿ ಎಂದು ಆಶಿಸಿ, ಆಸ್ತಿಕಾಗ್ರೇಸರನಾದ (ನಚಿಕೇತನು) ತಂದೆಯನ್ನು ಸಮೀಪಿಸಿ ಹೇಳಿದನು. **ತತ**–ಎಲೈ ತಂದೆಯೇ ! ಯಾವ ಋತ್ವಿಕ್ಕಿಗೆ ದಕ್ಷಿಣೆಯಾಗಿ ನನ್ನನ್ನು ಕೊಡುತ್ತೀಯೆಂದು ಹೇಳಿದನು, ಅವನು ಹೀಗೆ ಹೇಳಿದರೂ ಉದಾಸೀನನಾಗಿದ್ದ ತಂದೆಯನ್ನು ಎರಡನೆಯ ಸಲ, ಮೂರನೆಯ ಸಲವೂ ಯಾರಿಗೆ ನನ್ನನ್ನು ಕೊಡುವೆ ಎಂದು ಕೇಳಿದನು. ಹೀಗೆ ಪದೇ ಪದೇ ನಿರ್ಬಂಧಿಸಿದಾಗ ಕೋಪಗೊಂಡ ತಂದೆಯು ತಮ್–ಆ ಮಗನನ್ನು ಕುರಿತು ಮೃತ್ಯುವಿಗೆ ನಿನ್ನನ್ನು ಕೊಡುತ್ತೇನೆ ಎಂದು ಹೇಳಿದನು.

## ಭಾಷ್ಯಸಾರ

ನಚಿಕೇತನು ಬಾಲಕನಾದರೂ ಆಸ್ತಿಕ್ಯ ಬುದ್ಧಿಯುಳ್ಳವನೆಂದು ಹೇಳಿದೆ. ಈ ಹಿಂದೆ ಹೇಳಿದ ಕೆಲಸಕ್ಕೆ ಬಾರದ ಹಸುಗಳನ್ನು ದಕ್ಷಿಣೆ ಎಂದು ಕೊಡುವುದರಿಂದ ಯಾಗದ ಫಲವು ಸಫಲವಾಗುವುದಿಲ್ಲ. ಅನಿಷ್ಟರೂಪವಾದ ಸುಖವಿಲ್ಲದ ಲೋಕಗಳೂ ಉಂಟಾಗುತ್ತವೆ. ಇದನ್ನು ಪರಿಹರಿಸಬೇಕೆಂಬ ಬಯಕೆಯಿಂದ ತನ್ನನ್ನು ದಕ್ಷಿಣಾರೂಪದಲ್ಲಿ ಕೊಡುವುದರಿಂದಾದರೂ ತಂದೆಗೆ ಯಾಗದ ಫಲ ಮತ್ತು ಅನಿಷ್ಟನಿವೃತ್ತಿಯು ಮಗನಾದ ನನ್ನಿಂದ ದೊರಕಲಿ ಎಂದು ಯೋಚಿಸಿದನು.

ಎಲೈ ತಂದೆಯೇ ! ಯಾವ ಋತ್ವಿಕ್ಕಿಗೆ ನನ್ನನ್ನು ದಕ್ಷಿಣೆಯಾಗಿ ಕೊಡುವೆ. ಮಗನಾದ ನಾನು ನಿನ್ನ ಅಸಾಧಾರಣವಾದ ಸ್ವತ್ತಲ್ಲವೆ ? ಆದುದರಿಂದ ನನ್ನನ್ನೂ ದಾನ ಕೊಡು ಎಂದು ಹೇಳಿದನು, ಆಗ ತಂದೆಯು ಈತನು ಬಾಲಕನು. ಅರ್ಥದ ಅರಿವಿಲ್ಲದೆ ಹೇಳುತ್ತಾನೆ, ಎಂದು ಕೇಳಿಸದವನಂತೆ ಉದಾಸೀನನಾಗಿದ್ದನು. ಆದರೆ ಆಸಕ್ತನಾದ ನಚಿಕೇತನು ಎರಡು ಮೂರು ಸಲ 'ನನ್ನನ್ನು ಯಾರಿಗೆ ಕೊಡುವೆ' ಎಂದು ಕೇಳಿದನು. ಆಗ ತಂದೆಯು ಈತನು ಬಾಲಸ್ವಭಾವದಿಂದ ಹೇಳುತ್ತಿಲ್ಲ ಬುದ್ಧಿಪೂರ್ವಕವಾಗಿಯೇ ಹೇಳುತ್ತಿದ್ದಾನೆಂದು ತಿಳಿದು ಸಿಟ್ಟಿನಿಂದ ಕೂಡಲೇ ನಿನ್ನನ್ನು 'ಮೃತ್ಯುವಿಗೆ ಕೊಡುತ್ತೇನೆ' ಎಂದು ಹೇಳಿದನು.



## ಮಂತ್ರ ೭

वैश्वानरः प्रविशत्यतिथिर्ब्राह्मणो गृहान् ।
तस्यैतां शान्तिं कुर्वन्ति हर वैवस्वतोदकम् ॥

ವೈಶ್ವಾನರಃ ಪ್ರವಿಶತ್ಯತಿಥಿರ್ಬ್ರಾಹ್ಮಣೋ ಗೃಹಾನ್ ।
ತಸ್ಯೈತಾಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಮ್ ॥

### ಪ್ರತಿಪದಾರ್ಥ

ವೈಶ್ವಾನರಃ—ಅಗ್ನಿಯೇ. ಬ್ರಾಹ್ಮಣಃ—ಬ್ರಾಹ್ಮಣರೂಪದಲ್ಲಿ, ಅತಿಥಿಃ (ಸನ್)—ಅತಿಥಿಯಾಗಿ ಗೃಹಾನ್—ಮನೆಯನ್ನು, ಪ್ರವಿಶತಿ—ಪ್ರವೇಶಿಸುತ್ತಾನೆ. ತಸ್ಯ—ಆ ಅತಿಥಿಗೆ, ಏತಾಮ್—ಈ (ಆಯಾಸ ಪರಿಹಾರಕವಾದ), ಶಾಂತಿಮ್—(ಅರ್ಘ್ಯಪಾದ್ಯ ಮುಂತಾದ) ಶಾಂತಿಯನ್ನು, ಕುರ್ವಂತಿ—(ಸತ್ಪುರುಷರು) ಮಾಡುತ್ತಾರೆ. (ಆದುದರಿಂದ) ವೈವಸ್ವತ—ಎಲೈ ಯಮನೇ ! ಉದಕಮ್—(ಅರ್ಘ್ಯ ಮುಂತಾದವುಗಳಿಗೆ) ನೀರನ್ನು, ಹರ—ತೆಗೆದುಕೊಂಡು ಬಾ (ಎಂದು ವೃದ್ಧರಾದ ದ್ವಾರಪಾಲಕರು ಹೇಳಿದರು).

### ತಾತ್ಪರ್ಯ

ನಚಿಕೇತನು ಯಮಸದನಕ್ಕೆ ಹೋದನು. ಅಲ್ಲಿ ಯಮನಿರಲಿಲ್ಲ. ಮೂರು ದಿನಗಳ ನಂತರ ಯಮನು ತನ್ನ ಮನೆಗೆ ಹಿಂತಿರುಗಿದನು. ಆಗ ದ್ವಾರಪಾಲಕರು ಎಲೈ ಯಮಧರ್ಮ ರಾಜನೇ ! ಅಗ್ನಿಯೇ ಬ್ರಾಹ್ಮಣರೂಪದಲ್ಲಿ ಅತಿಥಿಯಾಗಿ ಬರುತ್ತಾನೆ. ಅತಿಥಿಗಳನ್ನು ಅರ್ಘ್ಯಪಾದ್ಯ ಮೊದಲಾದವುಗಳಿಂದ ಸತ್ಕರಿಸುವುದು ಧರ್ಮ. ಆದ್ದರಿಂದ ಈಗ ಅತಿಥಿಯಾಗಿ ಬಂದಿರುವ ನಚಿಕೇತನನ್ನು ಸತ್ಕರಿಸಲು ನೀರನ್ನು ತರಿಸು ಎಂದು ಹೇಳಿದರು.

### ರಂಗರಾಮಾನುಜಭಾಷ್ಯಮ್

ಏವಮುಕ್ತ್ವಾ ಪ್ರೇಷಿತಃ ಪ್ರೋಷಿತಸ್ಯ ಮೃತ್ಯೋರ್ದ್ವಾರಿ ತಿಸ್ರೋ ರಾತ್ರೀರನಶ್ನನ್ ಉವಾಸ । ತತಃ ಪ್ರೋಷ್ಯ ಆಗತಂ ಯಮಂ ದ್ವಾಸ್ಸ್ಥಾ ವೃದ್ಧಾ ಊಚುಃ, ವೈಶ್ವಾನರಃ.... ....ವೈವಸ್ವತೋದಕಮ್ । ಸಾಕ್ಷಾದಗ್ನಿರೇವ ಅತಿಥಿಬ್ರಾಹ್ಮಣಸ್ಸನ್ ಗೃಹಾನ್ ಪ್ರವಿಶತಿ । ತಸ್ಯಾಗ್ನೇರೇತಾಂ ಪಾದ್ಯಾಸನದಾನಾದಿಲಕ್ಷಣಾಂ ಶಾಂತಿಂ ಕುರ್ವಂತಿ ಸಂತಃ, 'ತದಪಚಾರೇಣ ದಗ್ಧಾ ಮಾ ಭೂಮ' ಇತಿ । ಅತಃ ಹೇ ವೈವಸ್ವತ ! ನಚಿಕೇತಸೇ ಪಾದ್ಯಾರ್ಥಮುದಕಂ ಹರ—ಆಹರ ಇತ್ಯರ್ಥಃ ॥

### ಅನುವಾದ

ಹೀಗೆ ಹೇಳಿದ ನಂತರ ತಂದೆಯಿಂದ ನಚಿಕೇತನು ಯಮನ ಬಳಿ ಕಳುಹಿಸಲ್ಪಟ್ಟನು. ಪ್ರವಾಸದಲ್ಲಿದ್ದ ಮೃತ್ಯುವಿನ (ಅರಮನೆಯ) ಬಾಗಿಲಲ್ಲಿ ಮೂರು ರಾತ್ರಿ ಉಪವಾಸವಿದ್ದು ಕಳೆದನು. ಅನಂತರ ಪ್ರವಾಸದಿಂದ ಹಿಂತಿರುಗಿದ ಯಮನನ್ನು ಕುರಿತು ಬಾಗಿಲಲ್ಲಿದ್ದ ಹಿರಿಯರು ಹೇಳಿದರು. ವೈಶ್ವಾನರಃ........ವೈವಸ್ವತೋದಕಮ್ । ಅಗ್ನಿಯೇ ಬ್ರಾಹ್ಮಣ

ರೂಪದಲ್ಲಿ ಅತಿಥಿಯಾಗಿ ಮನೆಗೆ ಬರುತ್ತಾನೆ. ಆ ಅಗ್ನಿಗೆ ಪಾದ್ಯ–ಆಸನ ಮುಂತಾದುವು ಗಳನ್ನು ಕೊಡುವ ರೂಪದಲ್ಲಿ ಸತ್ಪುರುಷರು ಶಾಂತಿಯನ್ನು ಮಾಡುವರು. ಅತಿಥಿಗೆ ಮಾಡುವ (ಅನಾದರರೂಪವಾದ) 'ಅಪಚಾರದಿಂದ ನಾಶವಾಗದಿರೋಣ' ಎಂದು. ಅದ್ದರಿಂದ ಎಲೈ ಯಮನೇ! ನಚಿಕೇತನಿಗೆ ಪಾದ್ಯಕ್ಕಾಗಿ ನೀರನ್ನು ಹರ–ತೆಗೆದುಕೊಂಡು ಬಾ.

## ಭಾಷ್ಯಸಾರ

ನಚಿಕೇತನು ಹೀಗೆ ಹೇಳಿದ ನಂತರ ತಂದೆಯು ನಚಿಕೇತನನ್ನು ಯಮನ ಬಳಿ ಕಳುಹಿಸಿದನು. ನಚಿಕೇತನು ಯಮನ ಆವಾಸಸ್ಥಾನಕ್ಕೆ ಬಂದಾಗ ಯಮನು ಪ್ರವಾಸ ಹೋಗಿದ್ದನು. ಅಲ್ಲಿ ನಚಿಕೇತನು ಉಪವಾಸವಿದ್ದು ಮೂರು ರಾತ್ರಿಗಳನ್ನು ಕಳೆದನು. ನಂತರ ಯಮನು ಪ್ರವಾಸದಿಂದ ಹಿಂತಿರುಗಿದನು. ಆಗ ವೃದ್ಧರಾದ ದ್ವಾರಪಾಲಕರು ಯಮನನ್ನು ಕುರಿತು ಹೇಳಿದರು—'ಸಾಕ್ಷಾದಗ್ನಿಯೇ ಬ್ರಾಹ್ಮಣನ ರೂಪದಲ್ಲಿ ಅತಿಥಿಯಾಗಿ ಮನೆಗೆ ಬರುತ್ತಾನೆ. ಅತಿಥಿರೂಪದ ಅಗ್ನಿಗೆ ಉಂಟಾದ ತಾಪ ಪರಿಹಾರಕ್ಕಾಗಿ ಅರ್ಘ್ಯ, ಪಾದ್ಯ, ಆಸನ ಮುಂತಾದವುಗಳಿಂದ ಶಾಂತಿಯನ್ನು ಮಾಡಬೇಕು. ಹಾಗೆ ಮಾಡದಿದ್ದಲ್ಲಿ ಅಪಚಾರ ಮಾಡಿದಂತಾಗುತ್ತದೆ. ಇದರಿಂದ ಅನೇಕ ಅನಿಷ್ಟಗಳುಂಟಾಗುತ್ತವೆ. ಕುಲವೇ ನಾಶವಾಗುತ್ತದೆ. ಆದುದರಿಂದ ಸೂರ್ಯಪುತ್ರನಾದ ಯಮನೇ ! ಬಂದ ಅತಿಥಿಯನ್ನು ಪಾದ್ಯಾದಿಗಳಿಂದ ಸತ್ಕರಿಸಲು ನೀರನ್ನು ತೆಗೆದುಕೊಂಡು ಬಾ' ಎಂದು ಹೇಳಿದರು.



## ಮಂತ್ರ ೬

**अनुपश्य यथा पूर्वे प्रतिपश्य तथा(ऽ)परे ।**
**सस्यमिव मर्त्यः पच्यते सस्यमिवाऽऽजायते पुनः ॥**

ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾ(ಽ)ಪರೇ ।
ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವಾಽಽಜಾಯತೇ ಪುನಃ ॥

### ಪ್ರತಿಪದಾರ್ಥ

**ಪೂರ್ವೇ**-ನಮ್ಮ ತಾತ ಮುತ್ತಾತಂದಿರು, **ಯಥಾ**-ಯಾವ ರೀತಿ(ಸುಳ್ಳಾಡದೆ) ಇದ್ದರೋ (ಅವರನ್ನು), **ಅನುಪಶ್ಯ**-ನೋಡಿ, **ತಥಾ**-ಹಾಗೇ, **ಅಪರೇ**-ಇತರರನ್ನು (ಈಗ ಜೀವಿಸಿರುವ ಸತ್ಪುರುಷರನ್ನೂ), **ಪ್ರತಿಪಶ್ಯ**-ನೋಡಿ (ಅವರಂತೆಯೇ ಆಚರಿಸಬೇಕು,) **ಮರ್ತ್ಯಃ**-ಮಾನವನು, **ಸಸ್ಯಮಿವ**-ಸಸ್ಯದಂತೆ, **ಪಚ್ಯತೇ**-(ಅತ್ಯಲ್ಪ ಕಾಲದಲ್ಲಿ) ಹಣ್ಣಾಗುತ್ತಾನೆ, (ಮರಣಾನಂತರ) **ಸಸ್ಯಮಿವ**-ಸಸ್ಯದಂತ, **ಪುನಃ**-ತಿರುಗಿ, **ಆಜಾಯತೇ**-ಹುಟ್ಟುತ್ತಾನೆ.

### ತಾತ್ಪರ್ಯ

ಎಲೈ ತಂದೆಯೇ ! ನಮ್ಮ ತಾತ–ಮುತ್ತಾತಂದಿರು ಮಾತಿಗೆ ತಪ್ಪಿದವರಲ್ಲ. ಈಗಲೂ ಅನೇಕ ಸತ್ಪುರುಷರು ಆಡಿದ ಮಾತಿಗೆ ತಪ್ಪದೇ ನಡೆಯುತ್ತಿದ್ದಾರೆ. ಅವರೆಲ್ಲರನ್ನೂ ನೋಡಿಯಾದರೂ ನೀನು ಆಡಿದ ಮಾತಿಗೆ ತಪ್ಪದೆ ನಡಿ. ಮಾನವ ಸಸ್ಯದಂತೆ ಅತ್ಯಲ್ಪ ಕಾಲದಲ್ಲಿ ಹಣ್ಣಾಗಿ ಸಾಯುತ್ತಾನೆ. ಪುನಃ ಹುಟ್ಟುತ್ತಾನೆ. ಈ ಅತ್ಯಲ್ಪಕಾಲವಿರುವ ಈ ಶರೀರಕ್ಕಾಗಿ ಸುಳ್ಳಾಡಬಾರದು ಎಂದನು.

### ರಂಗರಾಮಾನುಜಭಾಷ್ಯಮ್

ಸಾಧ್ವಸರೋಷಾವೇಶಹೀನಮಿದೃಶಂ ಪುತ್ರವಾಕ್ಯಂ ಶ್ರುತ್ವಾ, 'ಕ್ರೋಧಾವೇಶಾತ್ ಮಯಾ ಮೃತ್ಯವೇ ತ್ವಾ ದದಾಮಿ ಇತ್ಯುಕ್ತಮ್ । ನ ಈದೃಶಂ ಪುತ್ರಂ ಮೃತ್ಯವೇ ದಾತುಮುತ್ಸಹೇ' ಇತಿ ಪಶ್ಚಾತ್ತಪ್ತಹೃದಯಂ ಪಿತರಮ್ ಆಲೋಕ್ಯ ಉವಾಚ **ಅನುಪಶ್ಯ....ತಥಾಽಪರೇ ।** ಪಿತಾಮಹಾದಯಃ ಯಥಾ ಮೃಷಾವಾದಂ ವಿನೈವ ಸ್ಥಿತಾಃ, ಯಥಾ ಚ ಅಪರೇ ಸಾಧವೋಽದ್ಯಾಪಿ ತಿಷ್ಠಂತಿ, ತಾನ್ ಅನ್ವೀಕ್ಷ್ಯ ತಥಾ ವರ್ತಿತವ್ಯಮಿತಿ ಭಾವಃ। **ಸಸ್ಯಮಿವ.... ಪುನಃ ।** ಮರ್ತ್ಯಃ ಸಸ್ಯಮಿವ ಅಲ್ಪೇನಾಪಿ ಕಾಲೇನ ಜೀರ್ಯತಿ । ಜೀರ್ಣಶ್ಚ ಮೃತ್ವಾ ಸಸ್ಯಮಿವ ಪುನರಾಜಾಯತೇ । ಏವಮನಿತ್ಯೇ ಜೀವಲೋಕೇ ಕಿಂ ಮೃಷಾಕರಣೇನ ? ಪಾಲಯ ಸತ್ಯಮ್ ಪ್ರೇಷಯ ಮಾಂ ಮೃತ್ಯವೇ ಇತಿ ಭಾವಃ ॥

### ಅನುವಾದ

ಭಯ–ಕೋಪ–ಉದ್ವೇಗಗಳಿಲ್ಲದೆ ನಚಿಕೇತನು ಹೇಳಿದ ಮಾತನ್ನು ಕೇಳಿ, 'ಕೋಪವು ಅಧಿಕವಾದುದರಿಂದ ನಾನು ಯಮನಿಗೆ ನಿನ್ನನ್ನು ಕೊಡುತ್ತೇನೆ ಎಂದು ಹೇಳಿದೆನು.

ಇಂತಹ ಮಗನನ್ನು ಯಮನಿಗೆ ಕೊಡಲಾರೆನು' ಎಂದು ಪಶ್ಚಾತ್ತಾಪದಿಂದ ನೊಂದ ಮನಸ್ಸುಳ್ಳ ತಂದೆಯನ್ನು ನೋಡಿ ಹೇಳಿದನು **ಅನುಪಶ್ಯ........ತಥಾಪರೇ.**

ನಮ್ಮ ಅಜ್ಜಂದಿರೇ ಮುಂತಾದವರು ಹೇಗೆ ಸುಳ್ಳಾಡದೇ ಇದ್ದರೋ ಮತ್ತೆ ಕೆಲವು ಸತ್ಪುರುಷರು ಈಗಲೂ ಹೇಗೆ ಸುಳ್ಳಾಡದೆ ಇರುವರೋ, ಅವರನ್ನು ನೋಡಿ ಅವರಂತೆ ಆಚರಿಸಬೇಕು.

**ಸಸ್ಯಮಿವ........ಪುನಃ** ಮಾನವನು ಸಸ್ಯಗಳಂತೆ ಅಲ್ಪಕಾಲದಲ್ಲಿಯೇ ಜೀರ್ಣನಾಗುತ್ತಾನೆ. ನಂತರ ಸಾಯುತ್ತಾನೆ. ಸತ್ತು ಪುನಃ ಸಸ್ಯದಂತೆ ಹುಟ್ಟುತ್ತಾನೆ. ಹೀಗೆ ಅನಿತ್ಯವಾದ ಈ ಜೀವಲೋಕದಲ್ಲಿ ಸುಳ್ಳಾಡುವುದರಿಂದ ಏನು ಪ್ರಯೋಜನ ? ಸತ್ಯವನ್ನು ಪಾಲಿಸು. ಯಮನ ಬಳಿ ನನ್ನನ್ನು ಕಳುಹಿಸು ಎಂದು ತಾತ್ಪರ್ಯ.

## ಭಾಷ್ಯಸಾರ

'ಮೃತ್ಯು' ಎಂದಕೂಡಲೇ ಯಾರಾದರೂ ಹೆದರುವುದು ಸಹಜ. ಆದರೆ ನಚಿಕೇತನು ಭಯವಾಗಲೀ, ಕೋಪವಾಗಲೀ ಇಲ್ಲದೆ ಶಾಂತನಾಗಿದ್ದನು ; ಯಮನಿಗೆ ಕೊಡುತ್ತೇನೆಂದು ಹೇಳಿದಾಗಲೂ ಮಗನ ಶಾಂತಿಯನ್ನೂ, ಧೈರ್ಯವನ್ನೂ ನೋಡಿ ತಂದೆ ಪಶ್ಚಾತ್ತಾಪ ಪಟ್ಟನು. 'ನಾನು ಸಿಟ್ಟಿನಿಂದ ಯಮನಿಗೆ ಕೊಡುತ್ತೇನೆ ಎಂದು ಹೇಳಿದೆ. ಆದರೆ ಇಂತಹ ಮಗನನ್ನು ಯಮನಿಗೆ ಕೊಡಲಾರೆ ಎಂದು ಪಶ್ಚಾತ್ತಾಪಪಟ್ಟನು. ನೊಂದ ತಂದೆಯ ಈ ಮನೋಧರ್ಮವನ್ನು ಅರಿತ ನಚಿಕೇತನು ಮಾತಿಗೆ ತಪ್ಪಬಾರದೆಂದು ತಂದೆಯನ್ನು ಎಚ್ಚರಿಸುತ್ತಾನೆ.

ಎಲೈ ತಂದೆಯೇ ! ನಮ್ಮ ಹಿರಿಯರಾದ ತಾತ-ಮುತ್ತಾತಂದಿರು ಆಡಿದ ಮಾತಿಗೆ ತಪ್ಪುತ್ತಿರಲಿಲ್ಲ. ಸತ್ಯಪಾಲನೆಗಾಗಿ-ಯಾವುದೇ ಕಷ್ಟವನ್ನು ಅನುಭವಿಸಲು ಸಿದ್ಧರಿದ್ದರು. ಯಾವುದೇ ತ್ಯಾಗವನ್ನು ಮಾಡಲೂ ಹಿಂಜರಿಯುತ್ತಿರಲಿಲ್ಲ. ಈಗಲೂ ಅನೇಕ ಸತ್ಪುರುಷರು ಇದೇ ಧರ್ಮವೆಂದು ಪಾಲಿಸುತ್ತಿರುವರು. ಇವರನ್ನು ನೋಡಿ ನೀನೂ ಅವರಂತೆಯೇ ಸತ್ಯವನ್ನು ಪಾಲಿಸು. ನಾನು ಯಮನ ಬಳಿ ಹೋಗುವುದನ್ನು ತಡೆಯಬೇಡ.

ಪ್ರಾಣಿಗಳ ಜೀವನ ನಶ್ವರ. ಈ ಜೀವನಕ್ರಮವನ್ನು ನೋಡಿ ವಿಮರ್ಶಿಸಿದರೂ ಸತ್ಯವನ್ನೇ ಪಾಲಿಸಬೇಕೆಂಬುದು ತಿಳಿಯುತ್ತದೆ. ಮುಪ್ಪು-ಸಾವುಗಳಿಲ್ಲದ ಪ್ರಾಣಿಗಳಾವುದೂ ಇಲ್ಲ. ಸಸ್ಯಗಳಂತೆ ಮಾನವರು ಅತ್ಯಲ್ಪಕಾಲದಲ್ಲೇ ಮುಪ್ಪಡರಿ ಸಾವನ್ನು ಅಪ್ಪುತ್ತಾರೆ. ಭೂಮಿಯಲ್ಲಿ ಹಾಕಿದ ಬೀಜವು ಪುನಃ ಹುಟ್ಟುವಂತೆ ಮಾನವನೂ ಸತ್ತು ಹುಟ್ಟುತ್ತಾನೆ. ಹೀಗೆ ನಶ್ವರವಾದ ಈ ಮಾನವ ಜನ್ಮದಲ್ಲಿ ಸತ್ಯಕ್ಕೆ ಚ್ಯುತಿ ತಂದುಕೊಳ್ಳಬಾರದು. ಅದರಿಂದ ಏನೂ ಲಾಭವಿಲ್ಲ. ಆದುದರಿಂದ ನನ್ನಲ್ಲಿರುವ ಮೋಹವನ್ನು ಬಿಡು. ಸತ್ಯವನ್ನು ಪಾಲಿಸು. ನನ್ನನ್ನು ಯಮನ ಬಳಿ ಕಳುಹಿಸು ಎಂದು ಹೇಳಿದನು.

## ಮಂತ್ರ ೫

**बहूनामेमि प्रथमो बहूनामेमि मध्यमः ।**
**किं स्वित् यमस्य कर्तव्यं यन्मयाऽद्य करिष्यति ॥**

ಬಹೂನಾಮೇಮಿ ಪ್ರಥಮೋ ಬಹೂನಾಮೇಮಿ ಮಧ್ಯಮಃ।
ಕಿಂ ಸ್ವಿತ್ ಯಮಸ್ಯ ಕರ್ತವ್ಯಂ ಯನ್ಮಯಾಽದ್ಯ ಕರಿಷ್ಯತಿ ॥

### ಪ್ರತಿಪದಾರ್ಥ

ಬಹೂನಾಮ್-(ಯಮನ ಬಳಿ ಸಾರುವ) ಅನೇಕರಿಗೆ, ಪ್ರಥಮಃ-ಮುಂಭಾಗದಲ್ಲಿ, ಏಮಿ-ಹೋಗುತ್ತೇನೆ. ಬಹೂನಾಮ್-(ಅಥವಾ ಯಮನ ಬಳಿಹೋಗುವ) ಅನೇಕರಿಗೆ, ಮಧ್ಯಮಃ-ಮಧ್ಯದಲ್ಲಿ, ಏಮಿ-ಹೋಗುತ್ತೇನೆ. ಅದ್ಯ-ಈಗ (ಯಮನು) ಮಯಾ-ನನ್ನಿಂದ, ಯತ್-ಯಾವುದನ್ನು, ಕರಿಷ್ಯತಿ-ಮಾಡುವನೋ, (ತತ್-ಆ) ಕರ್ತವ್ಯಮ್- ಪ್ರಯೋಜನವು. ಯಮಸ್ಯ-ಯಮನಿಗೆ, ಕಿಂ ಸ್ವಿತ್-ಯಾವುದು ?

### ತಾತ್ಪರ್ಯ

ಎಲೈ ತಂದೆಯೇ ! ಯಮನ ಬಳಿ ಸಾಗುವವರಲ್ಲಿ ಮೊದಲಿಗನಾಗಿ ಅಥವಾ ಮಧ್ಯದಲ್ಲಿ ಹೋಗುತ್ತೇನೆ. ಕೊನೆಯಲ್ಲಿ ಹೋಗುವುದಿಲ್ಲ. ಬಾಲಕನಾದ ನನ್ನಿಂದ ಯಮನಿಗೆ ಆಗಬಹುದಾದ ಪ್ರಯೋಜನವಾದರೂ ಏನು ? ಎಂದು ಚಿಂತಿಸುತ್ತೇನೆ ಎಂದು ಹೇಳಿದನು.

### ರಂಗರಾಮಾನುಜಭಾಷ್ಯಮ್

ಏವಮುಕ್ತೋಽಪಿ ಪುತ್ರಃ ವಿಗತಸಾಧ್ವಸಶೋಕಃ ಪಿತರಮ್ ಉವಾಚ-ಬಹೂನಾಮೇಮಿ........। ಸರ್ವೇಷಾಂ ಮೃತ್ಯುಸದನಗಂತೃಣಾಂ ಪುರತೋ ಮಧ್ಯೇ ವಾ ಗಚ್ಛಾಮಿ, ನ ತು ಮಂಥರಃ ಪಶ್ಚಾತ್ । ಮೃತ್ಯುಸದನಗಮನೇ ನ ಕೋಽಪಿ ಮಮ ವಿಚಾರ ಇತಿ ಭಾವಃ ।

ಕಿಂ ತರ್ಹಿ ಇತ್ಯತ್ರಾಹ ಕಿಂ ಸ್ವಿತ್........ಕರಿಷ್ಯತಿ । ಮೃತ್ಯುರ್ಯದದ್ಯ ಮಯಾ ಕರಿಷ್ಯತಿ, ತತ್ತಾದೃಶಂ ಯಮಸ್ಯ ಕರ್ತವ್ಯಂ ಕಿಂ ವಾ ? ಪೂರ್ಣಕಾಮಸ್ಯ ಮೃತ್ಯೋಃ ಮಾದೃಶೇನ ಬಾಲಿಶೇನ ಕಿಂ ಪ್ರಯೋಜನಂ ಸ್ಯಾತ್ ? ಯೇನ ಋತ್ವಿಗ್ಭ್ಯಃ ಇವ ತಸ್ಮೈ ಮದರ್ಪಣಂ ಸಫಲಂ ಸ್ಯಾತ್ । ಅತ ಏತದೇವಾನುಶೋಚಾಮೀತಿ ಭಾವಃ ॥

### ಅನುವಾದ

ತಂದೆಯು ಹೀಗೆ ಹೇಳಿದರೂ, ಮಗನಾದ ನಚಿಕೇತನು ಭಯಗೊಳ್ಳಲಿಲ್ಲ. ದುಃಖಿಸಲಿಲ್ಲ. ಅವನು ತಂದೆಯನ್ನು ಕುರಿತು ಬಹೂನಾಮೇಮಿ—ಎಂದುಹೇಳಿದನು. ಯಮನ ಬಳಿ ಹೋಗುವವರಲ್ಲಿ ಮುಂದೆ ಅಥವಾ ಮಧ್ಯೆ ಹೋಗುತ್ತೇನೆ. ಕೊನೆಯಲ್ಲಿ ಹೋಗುವುದಿಲ್ಲ. ಯಮನ ಬಳಿ ಹೋಗುವಲ್ಲಿ ನನಗೆ ಯಾವುದೇ ಚಿಂತೆಯೂ ಇಲ್ಲ ಎಂದು ತಾತ್ಪರ್ಯ.

ಯಮನು ಈಗ ನನ್ನಿಂದ ಯಾವುದನ್ನು ಮಾಡಬಹುದೋ, ಅಂತಹ ಕರ್ತವ್ಯವಾದರೂ ಏನು ? ಪೂರ್ಣಕಾಮನಾದ (ಯಾವ ಆಸೆಗಳೂ ಇಲ್ಲದ) ಯಮನಿಗೆ ನನ್ನಂತಹ ಬಾಲಕನಿಂದ ಏನು ಪ್ರಯೋಜನ ಬಂದೀತು ? ಋತ್ವಿಕ್ಕುಗಳಿಗೆ ನನ್ನನ್ನು ಕೊಡುವುದರಿಂದ ಯಾವ ಫಲವು ಬಂದೀತು. ಆದ್ದರಿಂದ ಇದನ್ನೇ ಆಲೋಚಿಸುತ್ತಿದ್ದೇನೆ ಎಂದು ಭಾವ.

### ಭಾಷ್ಯಸಾರ

ತಂದೆಯು ಸಿಟ್ಟಿನಿಂದ ಯಮನಿಗೆ ಕೊಡುತ್ತೇನೆಂದು ಹೇಳಿದ ಮಾತನ್ನು ಕೇಳಿ ನಚಿಕೇತನು ಸ್ವಲ್ಪವೂ ಹೆದರಲಿಲ್ಲ. ದುಃಖಿಸಲೂ ಇಲ್ಲ. ತಂದೆಯನ್ನು ಕುರಿತು ಎಲೈ ತಂದೆಯೇ ! ಯಮನ ಬಳಿ ಹೋಗಬೇಕಾದ ಜನರಲ್ಲಿ ನಾನು ಮೊದಲಿಗನಾಗಿ ಹೋಗುತ್ತೇನೆ, ಅಥವಾ ಅವರ ಮಧ್ಯದಲ್ಲಿ ಹೋಗುತ್ತೇನೆ. ಭಯದಿಂದ ಎಲ್ಲರಿಗಿಂತ ಕೊನೆಯವನಾಗಿ ಮಾತ್ರ ಹೋಗುವುದಿಲ್ಲ. ಅಂದರೆ ನಿನ್ನ ಆಜ್ಞೆಯಂತೆ ಯಮನ ಬಳಿ ಹೋಗಲು ನನಗೆ ಚಿಂತೆಯಾಗಲೀ, ಭಯವಾಗಲೀ ಇಲ್ಲ. ನಿನ್ನ ಆಜ್ಞೆಯನ್ನು ಪಾಲಿಸಿಯೇ ಪಾಲಿಸುತ್ತೇನೆ ಎಂದು ತಾತ್ಪರ್ಯ.

ಆದರೆ ನಾನು ಅಲ್ಲಿಗೆ ಹೋದರೆ ನನ್ನಿಂದ ಯಮನಿಗೆ ಏನು ಪ್ರಯೋಜನ ? ಪ್ರಯೋಜನವಿದ್ದಲ್ಲಿ ಇತರ ಋತ್ವಿಕ್ಕುಗಳಿಗೆ ಕೊಟ್ಟ ದಾನದಂತೆ ಸಾರ್ಥಕವಾದೀತು. ಯಮನಿಗೆ ಯಾವುದೇ ಬಯಕೆಯಿಲ್ಲ. ಅವನ ಕಾಮಗಳೆಲ್ಲವೂ ಪೂರ್ಣಗೊಂಡಿವೆ. ಇಂತಹ ಯಮನಿಗೆ ಉಪಯೋಗಕ್ಕೆ ಬಾರದ ಬಾಲಕನಾದ ನನ್ನಿಂದ ಏನು ಲಾಭ ? ನಾನು ಅವನಿಗೆ ಏನು ತಾನೆ ಸೇವೆ ಮಾಡಲಾದೀತು ? ನೀನು ಪ್ರಯೋಜನವನ್ನು ಆಲೋಚಿಸದೆ, ಕೋಪದಿಂದ ಯಮನಿಗೆ ನನ್ನನ್ನು ಕೊಟ್ಟ ವಿಷಯದಲ್ಲಿ ದುಃಖಿಸುತ್ತೇನೆ ಎಂದು ಹೇಳಿದನು.

ನಚಿಕೇತನು, ತಂದೆಯು ಯಮನಿಗೆ ಕೊಡುತ್ತೇನೆಂದು ಹೇಳಿದ ಮಾತನ್ನು ಕೇಳಿದನು. ಅನಂತರ ಆತನು ಹೀಗೆ ಆಲೋಚಿಸಿದನು. 'ನಾನು ಮೃತ್ಯುವಿಗೆ ಹೆದರಿ ದುಃಖಿಸುವುದಿಲ್ಲ. ಯಮನ ಬಳಿ ಸಾರುವವರಲ್ಲಿ ಮೊದಲಿಗನಾಗಿ ಅಥವಾ ಮಧ್ಯೆ ಹೋಗುತ್ತೇನೆ. ಕೊನೆಯವನಾಗಿ ಹೋಗುವುದಿಲ್ಲ. ಆಜ್ಞೆಯನ್ನು ನಿರೀಕ್ಷಿಸದೆ ಯಜಮಾನನಿಗೆ ಬೇಕಾದ ಸೇವೆ ಮಾಡುವ ಸೇವಕನು ಉತ್ತಮ, ಆಜ್ಞೆಯನ್ನು ಪಾಲಿಸುವವನು ಮಧ್ಯಮ, ಆಜ್ಞೆಯನ್ನು ಪಾಲಿಸದೇ ಇರುವವನು ಅಧಮ. ಈಗ ಯಮನಿಗೆ ನನ್ನಿಂದ ಆಗಬೇಕಾದುದೇನೂ ಇಲ್ಲ. ನನ್ನನ್ನು ಯಮನಿಗೆ ಕೊಟ್ಟು ನನ್ನ ತಂದೆ ಏನು ಗಳಿಸಬೇಕಾಗಿದೆ. ವರಿಸದ ಋತ್ವಿಕ್ಕುಗಳಿಗೆ ಕೊಟ್ಟ ದಕ್ಷಿಣೆಯಲ್ಲಿರುವ ನ್ಯೂನತೆಯನ್ನು ಹೋಗಲಾಡಿಸಲು ನನ್ನನ್ನು ಯಾರಿಗಾದರೂ ಒಬ್ಬರಿಗಿತ್ತು ಅವರ ಅನುಗ್ರಹವನ್ನು ಸಂಪಾದಿಸಬೇಕಾಗಿತ್ತು. ಇದೇ ನನ್ನನ್ನು ಬಾಧಿಸುತ್ತಿರುವುದು ಎಂದು ಆಲೋಚಿಸಿದನು ! ಎಂದು ಸುಬೋಧಿನೀಕಾರರು ವಿವರಿಸುತ್ತಾರೆ.



# ಮಂತ್ರ ೮

आशाप्रतीक्षे सङ्गतं सूनृताञ्च इष्टापूर्ते पुत्रपशूंश्च सर्वान् ।
एतद्वृङ्क्ते पुरुषस्याल्पमेधसो यस्यानश्नन् वसति ब्राह्मणो गृहे ॥

ಆಶಾಪ್ರತೀಕ್ಷೇ ಸಂಗತಂ ಸೂನೃತಾಂಚ ಇಷ್ಟಾಪೂರ್ತೇ
ಪುತ್ರಪಶೂಂಶ್ಚ ಸರ್ವಾನ್ ।
ಏತದ್ವೃಂಕ್ತೇ ಪುರುಷಸ್ಯಾಲ್ಪಮೇಧಸೋ ಯಸ್ಯಾನಶ್ನನ್
ವಸತಿ ಬ್ರಾಹ್ಮಣೋ ಗೃಹೇ ॥

## ಪ್ರತಿಪದಾರ್ಥ

ಅಲ್ಪಮೇಧಸಃ—ಅಲ್ಪಬುದ್ಧಿಯುಳ್ಳ, ಯಸ್ಯ—ಯಾವನ, ಗೃಹೇ—ಮನೆಯಲ್ಲಿ, ಅನಶ್ನನ್—(ಅತಿಥಿಯು) ಊಟ ಮಾಡದೆ, ವಸತಿ—ವಾಸಿಸುವನೋ, (ತಸ್ಯ-ಆ) ಪುರುಷಸ್ಯ—ಮನುಷ್ಯನ, ಆಶಾಪ್ರತೀಕ್ಷೇ—(ಇಲ್ಲದ ವಸ್ತುವಿನ ಆಸೆಯೂ, ಇರುವ ವಸ್ತುವನ್ನು ಪಡೆಯುವ ಇಚ್ಛೆಯೂ, ಆಸೆಪ್ರತೀಕ್ಷೆಗಳು) ಇವುಗಳನ್ನು, ಸಂಗತಮ್—ಸತ್ಪುರುಷರ ಸಹವಾಸದ ಫಲವನ್ನೂ, ಸೂನೃತಾಮ್—ಸತ್ಯವೂ, ಪ್ರಿಯವೂ, ಆದ ಮಾತನ್ನು, ಇಷ್ಟಾಪೂರ್ತೇ[1]—ಯಾಗ ಮತ್ತು ಕೊಳಗಳ ನಿರ್ಮಾಣದ ಫಲಗಳನ್ನೂ, ಪುತ್ರಪಶೂಂಶ್ಚ—ಮಕ್ಕಳು, ಪಶುಗಳೂ, ಸರ್ವಾನ್—(ಈ) ಎಲ್ಲವನ್ನೂ, ಏತತ್—ಈ ಪಾಪವು, ವೃಂಕ್ತೇ—ನಾಶಮಾಡುತ್ತದೆ.

## ತಾತ್ಪರ್ಯ

ಅತಿಥಿಯು ಯಾವ ಯಜಮಾನನ ಮನೆಯಲ್ಲಿ ಸತ್ಕಾರ ಪಡೆಯದೇ ಉಪವಾಸವಿರುವನೋ ಅಂತಹ ಯಜಮಾನನಿಗೆ ಪಾಪ ಉಂಟಾಗುತ್ತದೆ. ಈ ಪಾಪವು ಯಜಮಾನನ ಆಸೆ–ಪ್ರತೀಕ್ಷೆಗಳನ್ನೂ, ಸತ್ಪುರುಷರ ಸಹವಾಸಜನ್ಯಫಲವನ್ನೂ, ಸತ್ಯವೂ, ಪ್ರಿಯವೂ ಆದ ಮಾತನ್ನೂ, ಯಾಗ ಮತ್ತು ಕೆರೆಕಟ್ಟೆಗಳ ನಿರ್ಮಾಣದಿಂದಾಗುವ ಫಲವನ್ನೂ, ಪಶು–ಪುತ್ರರನ್ನೂ ನಾಶಗೊಳಿಸುತ್ತದೆ.

## ರಂಗರಾಮಾನುಜಭಾಷ್ಯಮ್

ಅಕರಣೇ ಪ್ರತ್ಯವಾಯಂ ಚ ದರ್ಶಯಂತಿ ಸ್ಮ–ಆಶಾಪ್ರತೀಕ್ಷೇ ಸಂಗತಮ್....ಗೃಹೇ ॥ ಯಸ್ಯ ಅಲ್ಪಮೇಧಸಃ–ಅಲ್ಪಪ್ರಜ್ಞಸ್ಯ ಪುರುಷಸ್ಯ ಗೃಹೇ ಅನಶ್ನನ್–ಅಭುಂಜಾನಃ ಅತಿಥಿಃ ವಸತಿ, ತಸ್ಯ ಆಶಾಪ್ರತೀಕ್ಷೇ–ಕಾಮಸಂಕಲ್ಪೌ । ಯದ್ವಾ ಅನುತ್ಪನ್ನವಸ್ತುವಿಷಯೇಚ್ಛಾ ಆಶಾ ; ಉತ್ಪನ್ನವಸ್ತುಪ್ರಾಪ್ತೀಚ್ಛಾ ಪ್ರತೀಕ್ಷಾ। ಸಂಗತಂ–ಸತ್ಸಂಗಮಮ್ । ಸೂನೃತಾಮ್–ಸತ್ಯಪ್ರಿಯವಾಚಮ್ । ಇಷ್ಟಾಪೂರ್ತೇ ಇಷ್ಟಮ್–ಯಾಗಾದಿ, ಪೂರ್ತಂ–ಖಾತಾದಿ ।

---

1 ಇಷ್ಟಾಪೂರ್ತೇ—ಇಷ್ಟಂಚ ಪೂರ್ತಂಚ ಇಷ್ಟಾಪೂರ್ತೇ । ಪೃಷೋದರಾದಿಯಾದುದರಿಂದ 'ಇಷ್ಟ' ಶಬ್ದಕ್ಕೆ ಸಮಾಸದಲ್ಲಿ ದೀರ್ಘ ಬಂದಿದೆ.

ಪುತ್ರಾನ್ ಪಶೂಂಶ್ಚ ಏತತ್–ಅನಶನರೂಪಂ ಪಾಪಂ ವೃಂಕ್ತೇ–ವರ್ಜಯತಿ, ನಾಶಯತೀ ತ್ಯರ್ಥಃ । 'ವೃಜೀ ವರ್ಜನೇ' (ಪಾ.ಧಾ, 1029) । ರುಧಾದಿತ್ವಾತ್ ಶ್ನಮ್ । 'ವೃಜೀ ವರ್ಜನೇ' (ಪಾ.ಧಾ.1029) ಇತ್ಯಸ್ಮಾದ್ಧಾತೋರ್ವಾ ಇದಿತೋ ನುಮ್। ಅದಾದಿತ್ವಾತ್ ಶಪೋ ಲುಕ್ ॥

## ಅನುವಾದ

ಅತಿಥಿಗಳಿಗೆ ಶಾಂತಿಯನ್ನು ಮಾಡದಿದ್ದರೆ ಉಂಟಾಗುವ ದೋಷಗಳನ್ನು ಹೇಳುತ್ತಾರೆ. ಆಶಾಪ್ರತೀಕ್ಷೇ ಸಂಗತಮ್.......ಗೃಹೇ । ಯಸ್ಯ ಅಲ್ಪಮೇಧಸಃ–ಯಾವ ಅಲ್ಪಬುದ್ಧಿಯುಳ್ಳ ಮನುಷ್ಯನ ಗೃಹೇ–ಮನೆಯಲ್ಲಿ ಅನಶ್ನನ್–ಊಟಮಾಡದೆ ಅತಿಥಿಯು ವಸತಿ–(ವಾಸಮಾಡು ತ್ತಾನೋ) ಅವನ ಆಶಾಪ್ರತೀಕ್ಷೇ–ಕಾಮಸಂಕಲ್ಪಗಳು ಅಥವಾ ಸಿದ್ಧವಾಗದಿರುವ ವಸ್ತುಗಳಲ್ಲಿ ರುವ ಆಸೆ, ಇರುವ ವಸ್ತುಗಳನ್ನು ಪಡೆಯಬೇಕೆಂಬ ಇಚ್ಛೆ ಪ್ರತೀಕ್ಷಾ. ಸಂಗತಮ್–ಸತ್ಪುರು ಷರ ಸಹವಾಸ. ಸೂನೃತಾಮ್–ಸತ್ಯವೂ, ಪ್ರಿಯವೂ ಆದ ಮಾತು. ಇಷ್ಟಾಪೂರ್ತೇ– ಇಷ್ಟಮ್–ಯಾಗಮೊದಲಾದುವು, ಪೂರ್ತಮ್–ಕೆರೆ-ಕಟ್ಟೆ-ಬಾವಿ ತೆಗೆಸುವುದರಫಲ, ಪುತ್ರರು, ಪಶುಗಳು (ಈ ಎಲ್ಲವನ್ನೂ) ಏತತ್–ಉಪವಾಸರೂಪವಾದ ಪಾಪವು ವೃಂಕ್ತೇ– ನಾಶಪಡಿಸುತ್ತದೆ ಎಂದರ್ಥ. 'ವೃಜೀವರ್ಜನೇ' (ಪಾ.ಧಾ. 1029) ಎಂಬುದು ಧಾತು. ರುಧಾದಿಯಾದುದರಿಂದ 'ಶ್ನಮ್' ಪ್ರತ್ಯಯ ಬಂದಿದೆ ಅಥವಾ 'ವೃಜೀವರ್ಜನೇ' (ಪಾ.ಧಾ. 1029) ಎಂಬ ಧಾತುವಿಗೆ 'ಇದಿತೋನುಮ್' (ಪಾ. ಸೂ. 7–1–58) ಸೂತ್ರದಂತೆ 'ನುಮ್' ಆಗಮ. ಅದಾದಿಯಾದುದರಿಂದ 'ಶಪ್'ಗೆ ಲೋಪ.

## ಭಾಷ್ಯಸಾರ

ಅತಿಥಿಗಳನ್ನು ಸತ್ಕರಿಸದಿದ್ದಲ್ಲಿ ಉಂಟಾಗುವ ಅನರ್ಥಗಳನ್ನು ದ್ವಾರಪಾಲಕರು ಹೇಳುತ್ತಾರೆ :— ಯಜಮಾನನು ತನ್ನ ಮನೆಗೆ ಬಂದ ಅತಿಥಿಯನ್ನು ಸತ್ಕರಿಸದೆ, ಅತಿಥಿಯು ಉಪವಾಸವಿದ್ದರೆ ಆ ಉಪವಾಸವೇ ಪಾಪ. ಇದು ಯಜಮಾನನನ್ನು ಸೇರುತ್ತದೆ. ಈ ಪಾಪವು ಇಲ್ಲದ ವಸ್ತುಗಳನ್ನು ಪಡೆಯಬೇಕೆಂಬ ಇಚ್ಛಾರೂಪವಾದ ಆಸೆಯನ್ನು ನಾಶಗೊಳಿ ಸುತ್ತದೆ. ಇರುವ ವಸ್ತುಗಳನ್ನು ಪಡೆಯಬೇಕೆಂಬ ಇಚ್ಛಾರೂಪವಾದ ಪ್ರತೀಕ್ಷೆಯನ್ನೂ ನಾಶಗೊಳಿಸುತ್ತದೆ. ಅವನ ಸತ್ಸಹವಾಸದ ಫಲವನ್ನೂ, ಮತ್ತು ಸತ್ಯವೂ, ಪ್ರಿಯವೂ ಆದ ಮಾತನ್ನು ಆಡುವುದರಿಂದ ಉಂಟಾಗುವ ಫಲವನ್ನೂ ನಾಶಮಾಡುತ್ತದೆ. ಯಾಗ ಮಾಡು ವುದರಿಂದಲೂ, ಕೆರೆ–ಕಟ್ಟೆಗಳನ್ನು ಕಟ್ಟಿಸುವುದರಿಂದಲೂ ಉಂಟಾಗುವ ಫಲಗಳನ್ನು ನಾಶ ಗೊಳಿಸುತ್ತದೆ. ಇವು ಪುಣ್ಯಕಾರ್ಯಗಳು. ಇದರಿಂದ ಬರುವ ಪುಣ್ಯವೂ ನಾಶವಾಗು ತ್ತದೆ ಎಂದು ತಾತ್ಪರ್ಯ. ಅಂತೆಯೇ ಅವನ ಮಕ್ಕಳು–ಮರಿಗಳನ್ನೂ, ಪಶುಗಳನ್ನೂ ನಾಶ ಮಾಡಿ ಕುಲನಾಶಕ್ಕೂ ಕಾರಣವಾಗುತ್ತದೆ.

ಆದ್ದರಿಂದ ಯಾವುದೇ ಪರಿಸ್ಥಿತಿಯಲ್ಲೂ ಅತಿಥಿಯಾದ ಬ್ರಾಹ್ಮಣನನ್ನು ಉಪೇಕ್ಷಿಸ ಬಾರದು, ಸತ್ಕರಿಸಲೇಬೇಕು. ಎಲೈ ಮೃತ್ಯುವೇ ! ನೀನು ಒಳ್ಳೆಯ ಸ್ಥಿತಿಯಲ್ಲಿರು ವವನು. ಆದ್ದರಿಂದ ಅತಿಥಿಯಾಗಿ ಬಂದಿರುವ ಈತನನ್ನು ಸತ್ಕರಿಸಲು ಪಾದ್ಯಾದಿಗಳನ್ನು ಜಾಗ್ರತೆ ತೆಗೆದುಕೊಂಡು ಬಾ ಎಂದು ಹೇಳಿದರು ಎಂದು ತಾತ್ಪರ್ಯ.

## ಮಂತ್ರ ೯

**तिस्रो रात्रीर्यदवात्सीर्गृहे मेऽनश्नन् ब्रह्मन्नतिथिर्नमस्यः ।**
**नमस्तेऽस्तु ब्रह्मन् स्वस्ति मेऽस्तु तस्मात् प्रति त्रीन् वरान् वृणीष्व ॥**

ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನನ್
ಬ್ರಹ್ಮನ್ನತಿಥಿರ್ನಮಸ್ಯಃ ।
ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು ತಸ್ಮಾತ್ ಪ್ರತಿ
ತ್ರೀನ್ ವರಾನ್ ವೃಣೀಷ್ವ ॥

### ಪ್ರತಿಪದಾರ್ಥ

ಬ್ರಹ್ಮನ್—ಪೂಜಾರ್ಹನೇ ! ನಮಸ್ಯಃ—ನಮಸ್ಕಾರಾರ್ಹನಾದ (ನೀನು). ಅತಿಥಿಃ—ಅತಿಥಿಯು. ಯತ್—ಯಾವಕಾರಣದಿಂದ, ಮೇ—ನನ್ನ, ಗೃಹೇ—ಮನೆಯಲ್ಲಿ, ತಿಸ್ರೋ ರಾತ್ರೀಃ—ಮೂರು ರಾತ್ರಿಗಳನ್ನು, ಅನಶ್ನನ್—ಊಟಮಾಡದೆ, ಅವಾತ್ಸೀಃ—ಕಳೆದಿರುವೆಯೋ (ಅದುದರಿಂದ , ತೇ—ನಿನಗೆ, ನಮೋಽಸ್ತು—ನಮಸ್ಕಾರವು. ಬ್ರಹ್ಮನ್—ಪೂಜ್ಯನೇ ! ಮೇ-ನನಗೆ, ಸ್ವಸ್ತ್ಯಸ್ತು—ಮಂಗಳವುಂಟಾಗಲಿ. ತಸ್ಮಾತ್—ನನಗೆ ಒಳ್ಳೆಯದಾಗಲಿಕ್ಕಾಗಿ, ಪ್ರತಿ—(ಮೂರು ರಾತ್ರಿಗಳನ್ನು) ಕುರಿತು, ತ್ರೀನ್ ವರಾನ್—ಮೂರು ವರಗಳನ್ನು, ವೃಣೀಷ್ವ—ಪ್ರಾರ್ಥಿಸು.

### ತಾತ್ಪರ್ಯ

ಎಲೈ ಪೂಜಾರ್ಹನೇ ! ನನ್ನ ಮನೆಯಲ್ಲಿ ಮೂರು ರಾತ್ರಿಗಳನ್ನು ಉಪವಾಸದಿಂದ ಕಳೆದಿರುವೆ. ಅತಿಥಿಯೂ ಆಗಿರುವೆ. ಆದುದರಿಂದ ನೀನು ನಮಸ್ಕಾರಾರ್ಹನು. ಇದೋ ನಿನಗೆ ನಮಸ್ಕಾರವು. ನನಗೆ ಒಳ್ಳೆಯದಾಗಲಿ. ಒಳ್ಳೆಯದಾಗಲು ಊಟಮಾಡದೆ ಮೂರು ರಾತ್ರಿಗಳನ್ನು ಕಳೆದಿರುವುದರಿಂದ ಅದಕ್ಕನುಸಾರವಾಗಿ ಮೂರು ವರಗಳನ್ನು ಪ್ರಾರ್ಥಿಸು ಎಂದು ಯಮನು ಹೇಳಿದನು.

### ರಂಗರಾಮಾನುಜಭಾಷ್ಯಮ್

ಏವಂ ವೃದ್ಧೈಃ ಉಕ್ತಃ ಮೃತ್ಯುಃ ನಚಿಕೇತಸಮ್ ಉವಾಚ—ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನನ್ ಬ್ರಹ್ಮನ್ ಅತಿಥಿರ್ನಮಸ್ಯಃ । ಮೇ ಗೃಹೇ ಯಸ್ಮಾದ್ಧೇತೋಃ ಹೇ ಬ್ರಹ್ಮನ್! ನಮಸ್ಕಾರಾರ್ಹಃ ಅತಿಥಿಃ ತ್ವಮ್ ತಿಸ್ರೋ ರಾತ್ರೀಃ ಅಭುಂಜಾನ ಏವ ಅವಾತ್ಸೀಃ ಇತ್ಯರ್ಥಃ । 'ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು' । ಸ್ಪಷ್ಟೋಽರ್ಥಃ । ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ । ತಸ್ಮಾದ್ಧೇತೋಃ—ಮಹ್ಯಂ ಸ್ವಸ್ತಿ ಯಥಾಸ್ಯಾದಿತ್ಯೇವಮರ್ಥಂ ತ್ರೀನ್ ವರಾನ್ ಪ್ರತಿ—ಉದ್ದಿಶ್ಯ, ವೃಣೀಷ್ವ—ಪ್ರಾರ್ಥಯಸ್ವ । ತವ ಲಿಪ್ಸಾ-ಭಾವೇಽಪಿ ಮದನುಗ್ರಹಾರ್ಥಮ್ ಅನಶನರಾತ್ರಿಸಮಸಂಖ್ಯಾಕಾನ್ ತ್ರೀನ್ ವರಾನ್ ವೃಣೀಷ್ವ ಇತಿ ಭಾವಃ.

## ಅನುವಾದ

ಹಿರಿಯರು ಹೇಳಿದ ಮಾತನ್ನು ಕೇಳಿದ ಯಮನು ನಚಿಕೇತನನ್ನು ಕುರಿತು ಹೇಳಿದನು **ತಿಸ್ರೋ ರಾತ್ರೀರ್ಯದವಾತ್ಸೀರ್ಗೃಹೇ ಮೇಽನಶ್ನನ್ ಬ್ರಹ್ಮನ್ ಅತಿಥಿರ್ನಮಸ್ಯಃ। ಮೇ**–(ಎಲೈ ಬ್ರಾಹ್ಮಣನೇ !) ನನ್ನ ಮನೆಯಲ್ಲಿ ನಮಸ್ಕಾರ ಮಾಡಲು ಅರ್ಹನಾದ, ಅತಿಥಿಯಾಗಿ ಬಂದ ನೀನು ಯಾವ ಕಾರಣದಿಂದ ಮೂರು ರಾತ್ರಿ ಊಟ ಮಾಡದೆಯೇ ಕಳೆದಿರುವೆಯೋ ಎಂದರ್ಥ. **ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿಮೇಽಸ್ತು** (ನಿನಗೆ ನಮಸ್ಕಾರ ನನಗೆ ಒಳ್ಳೆಯದಾಗಲಿ), ಅರ್ಥ ಸ್ಪಷ್ಟವಾಗಿದೆ. **ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ**–ಆ ಕಾರಣದಿಂದ ನನಗೆ ಶ್ರೇಯಸ್ಸು ಹೇಗೆ ಉಂಟಾಗಬೇಕೋ ಹಾಗೆ ಮೂರು ವರಗಳನ್ನು ವೃಣೀಷ್ವ–ಪ್ರಾರ್ಥಿಸು. ನಿನಗೆ ಆಸೆಯಿಲ್ಲದಿದ್ದರೂ ನನ್ನನ್ನು ಅನುಗ್ರಹಿಸಲು ಉಪವಾಸವಿದ್ದ ರಾತ್ರಿಗಳ ಸಂಖ್ಯೆಗನುಗುಣವಾಗಿ ಮೂರು ವರಗಳನ್ನು ಕೇಳು ಎಂದು ತಾತ್ಪರ್ಯ.

## ಭಾಷ್ಯಸಾರ

ಯಮನ ಅರಮನೆಯ ಬಾಗಿಲಲ್ಲಿದ್ದ ಹಿರಿಯರು ಹೇಳಿದಂತೆ ಯಮನು ನಚಿಕೇತನಿಗೆ ಪಾದ್ಯಾದಿಗಳಿಗಾಗಿ ನೀರನ್ನು ತಂದನು. ಪಾದ್ಯಾದಿಗಳಿಂದ ಸತ್ಕರಿಸಿದನು. ಅನಂತರ ಎಲೈ ನಚಿಕೇತನೇ ! ನೀನು ಬ್ರಾಹ್ಮಣ ಅತಿಥಿ. ಆದ್ದರಿಂದ ನಮಸ್ಕಾರ ಯೋಗ್ಯನು. ಅಲ್ಲದೆ ನಾನು ಇಲ್ಲದ ಕಾರಣ ಮೂರು ದಿನಗಳು ಇಲ್ಲಿ ಉಪವಾಸ ಮಾಡಿರುವೆ. ಇದೋ ನಿನಗೆ ನಮಸ್ಕಾರ.

ಈ ಮೂರು ದಿನಗಳಲ್ಲಿ ಅತಿಥಿಯಾದ ನಿನ್ನನ್ನು ಸತ್ಕರಿಸಲಾಗಲಿಲ್ಲ. ಇದರಿಂದ ಮೃತ್ಯುದೇವತೆಯಾದರೂ ನನಗೂ ದೋಷ ತಗುಲಿದೆ. ಈ ದೋಷದಿಂದ ನಾನು ಪಾಪಿಯೆನಿಸಿರುವೆ. ಈ ಪಾಪ ಪರಿಹಾರವಾಗಿ, ಮಂಗಳವುಂಟಾಗಲಿ ಎಂದು ಹರಸು.

ನೀನು ಮೂರು ರಾತ್ರಿ ಉಪವಾಸವಿದ್ದೆ. ಅದಕ್ಕೆ ಅನುಗುಣವಾಗಿ ಮೂರು ವರ ಕೇಳು. ಬ್ರಾಹ್ಮಣನಾದ ನಿನಗೆ ವರದಲ್ಲಿ ಅಭಿಲಾಷೆಯಿಲ್ಲದಿರಬಹುದು. ಆದರೂ ನನ್ನನ್ನು ಅನುಗ್ರಹಿಸುವುದಕ್ಕಾಗಿ ಮೂರುವರಗಳನ್ನು ಕೇಳು ಎಂಬುದಾಗಿ ಹೇಳಿದನೆಂದು ತಾತ್ಪರ್ಯ.



# ಮಂತ್ರ ೧೦

शान्तसङ्कल्पः सुमना यथा स्याद्वीतमन्युर्गौतमो माऽभि मृत्यो ।
त्वत्प्रसृष्टं माऽभिवदेत् प्रतीत एतत् त्रयाणां प्रथमं वरं वृणे ॥

ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾದ್ವೀತಮನ್ಯು
ಗೌರ್ತಮೋ ಮಾಽಭಿ ಮೃತ್ಯೋ ।
ತ್ವತ್ಪ್ರಸೃಷ್ಟಂ ಮಾಽಭಿವದೇತ್ ಪ್ರತೀತ ಏತತ್
ತ್ರಯಾಣಾಂ ಪ್ರಥಮಂ ವರಂ ವೃಣೇ ॥

## ಪ್ರತಿಪದಾರ್ಥ

ಹೇ ಮೃತ್ಯೋ—ಯಮನೇ ! ಮಾ ಅಭಿ- ನನ್ನನ್ನು ಕುರಿತು, ಗೌತಮಃ—ಗೌತಮನೆಂಬ ನನ್ನ ತಂದೆಯು, ಶಾಂತಸಂಕಲ್ಪಃ—ಚಿಂತಾರಹಿತನಾಗಿ, ಸುಮನಾಃ—ಸಮಾಧಾನವಾದಮನಸ್ಸುಳ್ಳವನಾಗಿ. ವೀತಮನ್ಯುಃ—ಕೋಪರಹಿತನಾಗಿ, ಸ್ಯಾತ್—ಆಗಲಿ, (ಮತ್ತು) ತ್ವತ್ಪ್ರಸೃಷ್ಟಮ್—ನಿನ್ನಿಂದ ಬೀಳ್ಕೊಡಲ್ಪಟ್ಟ ಮಾಽಭಿ—ನನ್ನನ್ನು ಕುರಿತು, ಪ್ರತೀತಃ—ಮೊದಲಿನಂತೆ ಪ್ರೀತಿವಿಶಿಷ್ಟನಾಗಿ. ಅಭಿವದೇತ್—ಆಶೀರ್ವದಿಸಲಿ. ತ್ರಯಾಣಾಮ್—ಮೂರು ವರಗಳಲ್ಲಿ, ಏತತ್—ಈ(ತಂದೆಗೆ ಸಂತೋಷಕರವಾದ), ಪ್ರಥಮಮ್—ಮೊದಲನೆಯ, ವರಮ್—ವರವನ್ನು, ವೃಣೇ—ಪ್ರಾರ್ಥಿಸುತ್ತೇನೆ

## ತಾತ್ಪರ್ಯ

ಎಲೈ ಮೃತ್ಯುವೇ ! ನನ್ನ ತಂದೆಯು ನನ್ನ ಬಗ್ಗೆ ಚಿಂತಾರಹಿತನಾಗಿ ಸಮಾಧಾನ ಹೊಂದಲಿ. ಅವನ ಕೋಪವು ಹೋಗಲಿ. ನಿನ್ನಿಂದ ಬೀಳ್ಕೊಡಲ್ಪಟ್ಟು ಮನೆಗೆ ಹಿಂದಿರುಗಿದ ನನ್ನನ್ನು ಮೊದಲಿನಂತೆಯೇ ಪ್ರೀತಿಯಿಂದ ಆಶೀರ್ವದಿಸಲಿ, ನೀನಿತ್ತ ಮೂರುವರಗಳಲ್ಲಿ ಇವುಗಳನ್ನು ಮೊದಲನೆಯ ವರವಾಗಿ ಕೇಳುತ್ತೇನೆ.

## ರಂಗರಾಮಾನುಜಭಾಷ್ಯಮ್

ಏವಂ ಪ್ರಾರ್ಥಿತೋ ನಚಿಕೇತಾಸ್ತ್ವಾಹ–ಶಾಂತಸಂಕಲ್ಪಸ್ಸುಮನಾ ಯಥಾ ಸ್ಯಾದ್ವೀತ–ಮನ್ಯುರ್ಗೌತಮೋ ಮಾಽಭಿ ಮೃತ್ಯೋ । ಹೇ ಮೃತ್ಯೋ ! ಮತ್ಪುತ್ರೋ ಯಮಂ ಪ್ರಾಪ್ಯ ಕಿಂಕರಿಷ್ಯತೀತಿ ಮದ್ವಿಷಯಚಿಂತಾರಹಿತಃ ಪ್ರಸನ್ನಮನಾಃ. ಮಾಽಭಿ—ಮಾಂ ಪ್ರತಿ ಮಮ ಪಿತಾ ಗೌತಮಃ ವೀತಮನ್ಯುಃ—ವೀತರೋಷಶ್ಚ ಯಥಾ ಸ್ಯಾದಿತ್ಯರ್ಥಃ । ಕಿಂಚ ತ್ವತ್ಪ್ರಸೃಷ್ಟಂ ಮಾಽಭಿವದೇತ್ ಪ್ರತೀತಃ । ತ್ವಯಾ ಗೃಹಾಯ ಪ್ರೇಷಿತಂ ಮಾ ಅಭಿ–ಮಾಂ ಪ್ರತಿ ಪ್ರತೀತಃ–ಯಥಾಪೂರ್ವಂ ಪ್ರೀತಸ್ಸನ್ ವದೇತ್ । ಯದ್ವಾ ಅಭಿವದೇತ್ ಆಶಿಷಂ ಪ್ರಯುಂಕ್ತಾಮ್ । 'ಅಭಿವದತಿ ನಾಽಭಿವಾದಯತೇ' ಇತಿ ಸ್ಮೃತಿಷು ಅಭಿವದನಸ್ಯ ಆಶೀರ್ವಾದೇ ಪ್ರಯೋಗಾತ್ । ಏತತ್ ತ್ರಯಾಣಾಂ ಪ್ರಥಮಂ ವರಂ ವೃಣೇ—ಸ್ಪಷ್ಟೋಽರ್ಥಃ ॥

## ಅನುವಾದ

ಹೀಗೆ ಪ್ರಾರ್ಥಿಸಲ್ಪಟ್ಟ ನಚಿಕೇತನು ಹೇಳಿದನು. ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾದ್ವೀತಮನ್ಯುರ್ಗೌತಮೋ ಮಾಭಿ ಮೃತ್ಯೋ. ಎಲೈ ಯಮನೇ ! ನನ್ನ ಮಗನು ಯಮನನ್ನು ಸೇರಿ ಏನು ಮಾಡುವನೋ ಎಂದು (ಯೋಚಿಸುತ್ತಿರುವ ನನ್ನ ತಂದೆಯು) ನನ್ನ ಬಗ್ಗೆ ಚಿಂತಾರಹಿತನಾಗಿ ಶಾಂತ ಮನಸ್ಸುಳ್ಳವನಾಗಲಿ. ಮಾಭಿ–ನನ್ನನ್ನು ಕುರಿತು ನನ್ನ ತಂದೆಯಾದ ಗೌತಮನು ವೀತಮನ್ಯುಃ–ಕೋಪವಿಲ್ಲದವನಾಗಲಿ, ಮತ್ತು ತ್ವತ್ಪ್ರಸೃಷ್ಟಂ ಮಾಭಿ ವದೇತ್ ಪ್ರತೀತಃ–ನೀನು ನನ್ನನ್ನು ಮನೆಗೆ ಕಳುಹಿಸಿದಾಗ ಮಾಭಿ– ನನ್ನನ್ನು ಕುರಿತು ಪ್ರತೀತಃ- ಹಿಂದಿನಂತೆಯೇ ಪ್ರೀತಿಯುಳ್ಳವನಾಗಿ ಮಾತನಾಡಿಸಲಿ. ಅಥವಾ ಅಭಿವದೇತ್– ಆಶೀರ್ವದಿಸಲಿ. 'ಅಭಿವದತಿ ನಾಭಿವಾದಯತೇ'–ಎಂದು ಸ್ಮೃತಿ ಗ್ರಂಥಗಳಲ್ಲಿ 'ಅಭಿವದನ' ಎಂಬ ಪದವನ್ನು ಆಶೀರ್ವಾದ ಎಂಬ ಅರ್ಥದಲ್ಲಿ ಪ್ರಯೋಗಿಸಿರುವರು. ಏತತ್ ತ್ರಯಾಣಾಂ ಪ್ರಥಮಂ ವರಂ ವೃಣೇ ಅರ್ಥ ಸ್ಪಷ್ಟವಾಗಿದೆ. (ಮೂರು ವರಗಳಲ್ಲಿ ಇದನ್ನು ಮೊದಲನೆಯ ವರವಾಗಿ ಕೇಳುತ್ತೇನೆ.)

## ಭಾಷ್ಯಸಾರ

ಯಮನು ನಚಿಕೇತನನ್ನು ಮೂರು ವರಗಳನ್ನು ಕೇಳಿ ನನ್ನನ್ನು ಅನುಗ್ರಹಿಸು ಎಂದು ಪ್ರಾರ್ಥಿಸಿದನು. ಆಗ ನಚಿಕೇತನು 'ಮೃತ್ಯು ದೇವತೆಯೇ' ! ನನ್ನ ತಂದೆ ಗೌತಮನು ಮೃತ್ಯುವಿನ ಬಳಿ ಸಾರಿದ ನನ್ನ ಮಗನು ಹೇಗಿರುವನೋ ? ಏನು ಮಾಡುತ್ತಿರುವನೋ ? ಎಂಬ ಚಿಂತೆಯಿಲ್ಲದವನಾಗಲಿ.. ನೆಮ್ಮದಿಯುಳ್ಳವನಾಗಲಿ. ನನ್ನನ್ನು ನಿನ್ನಲ್ಲಿ ಕಳುಹಿಸಲು ಕೋಪವೇ ಕಾರಣ. ಆ ಕೋಪವಿಲ್ಲದವನಾಗಲಿ. ಪ್ರಸನ್ನನಾದ ನೀನು ನನ್ನನ್ನು ಹಿಂತಿರುಗಿ ಕಳುಹಿಸುವೆ. ಆಗ ಮನೆಗೆಹೋದ ನನ್ನನ್ನು ನೋಡಿ ನನ್ನ ತಂದೆಯು 'ನಾನು ಕಳುಹಿಸಿದ ನನ್ನ ಮಗನೇ ಇವನು' ಎಂದು ನಂಬಿಕೆಯುಳ್ಳವನಾಗಲಿ ಮತ್ತು ಪ್ರೀತಿಯಿಂದ ನನ್ನನ್ನು ಮೊದಲಿನಂತೆಯೇ ಮಾತನಾಡಿಸಲಿ ಅಥವಾ ಮೊದಲಿನಂತೆಯೇ ನನ್ನನ್ನು ಆಶೀರ್ವದಿಸಲಿ. ನೀನಿತ್ತ ಮೂರು ವರಗಳಲ್ಲಿ 'ಮೊದಲಿನ ವರವಾಗಿ ನನ್ನ ತಂದೆಗೆ ತೃಪ್ತಿಯುಂಟುಮಾಡಲು ಇವುಗಳನ್ನು ಅನುಗ್ರಹಿಸು' ಎಂದು ಹೇಳಿದನು.



# ಮಂತ್ರ ೧೧

**यथा पुरस्ताद्भविता प्रतीत औद्दालकिरारुणिर्मत्प्रसृष्टः (ष्टम्) ।
सुखं रात्रीश्शयिता वीतमन्युस्त्वां ददृशिवान् मृत्युमुखात्प्रमुक्तम् ॥**

ಯಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮ
ತ್ಪ್ರಸೃಷ್ಟಃ (ಷ್ಟಮ್) ।
ಸುಖಂ ರಾತ್ರೀಶ್ಶಯಿತಾ ವೀತಮನ್ಯುಸ್ತ್ವಾಂ (?) ದೃಶಿವಾನ್
ಮೃತ್ಯುಮುಖಾತ್ ಪ್ರಮುಕ್ತಮ್ ॥

### ಪ್ರತಿಪದಾರ್ಥ

ಔದ್ದಾಲಕಿಃ — ಉದ್ದಾಲಕನಮಗನೂ, ಆರುಣಿಃ — ಅರುಣಗೋತ್ರದಲ್ಲಿ ಜನಿಸಿದವನೂ (ಆದ ನಿನ್ನ ತಂದೆಯು), ಮತ್ಪ್ರಸೃಷ್ಟಃ — ನನ್ನ ಅನುಗ್ರಹದಿಂದ, ಯಥಾ ಪುರಸ್ತಾತ್ — ಹಿಂದಿನಂತೆಯೇ, ಪ್ರತೀತಃ — ಪ್ರೀತಿಯುಳ್ಳವನಾಗಿ, ಭವಿತಾ — ಆಗುವನು. ಮೃತ್ಯುಮುಖಾತ್ — ಮೃತ್ಯುವಿನ ಬಳಿಯಿಂದ, ಪ್ರಮುಕ್ತಮ್ — ಬಿಡಲ್ಪಟ್ಟ (ನಿನ್ನನ್ನು), ದೃಶಿವಾನ್ — ಪ್ರೀತಿಯಿಂದ ನೋಡಿದವನಾಗಿ, ವೀತಮನ್ಯುಃ — ಕೋಪವಿಲ್ಲದವನಾಗಿ, ರಾತ್ರೀಃ — (ಮುಂದಿನ) ರಾತ್ರಿಗಳಲ್ಲಿ, ಸುಖಮ್ — ಸುಖವಾಗಿ, ಶಯಿತಾ — ಮಲಗುವನು.

### ತಾತ್ಪರ್ಯ

ಎಲೈ ನಚಿಕೇತನೇ ! ಅರುಣ ಗೋತ್ರದಲ್ಲಿ ಉದ್ದಾಲಕನ ಮಗನಾಗಿ ಜನಿಸಿದ ನಿನ್ನ ತಂದೆಯು ನನ್ನ ಅನುಗ್ರಹದಿಂದ ನಿನ್ನಲ್ಲಿ ಹಿಂದಿನಂತೆಯೇ ಪ್ರೀತಿಯುಳ್ಳವನಾಗುತ್ತಾನೆ. ನನ್ನ ಸಮೀಪದಿಂದ ಹಿಂತಿರುಗಿದ ನಿನ್ನನ್ನು ಪ್ರೀತಿಯಿಂದ ಕಾಣುತ್ತಾನೆ. ಕೋಪವು ಶಾಂತವಾಗಿ ರಾತ್ರಿ ಸುಖವಾಗಿ ಮಲಗುವನು.

### ರಂಗರಾಮಾನುಜಭಾಷ್ಯಮ್

ಏವಮುಕ್ತೋಮೃತ್ಯುಃ ಪ್ರತ್ಯುವಾಚ–ಯಥಾ ಪುರಸ್ತಾದ್ಭವಿತಾ.ಪ್ರತೀತಃ । ಯಥಾ ಪೂರ್ವಂ ತ್ವಯಿ ಹೃಷ್ಟೋ ಭವಿತಾ । ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ (ಷ್ಟಮ್) । ಉದ್ದಾಲಕ ಏವ ಔದ್ದಾಲಕಿಃ । ಅರುಣಸ್ಯ ಅಪತ್ಯಂ ಆರುಣಿಃ । ದ್ವ್ಯಾಮುಷ್ಯಾಯಣೋ ವಾ । ಉದ್ದಾಲಕಸ್ಯ ಅಪತ್ಯಮ್ ಅರುಣಸ್ಯ ಗೋತ್ರಾಪತ್ಯಮಿತಿವಾಽರ್ಥಃ । ಮತ್ಪ್ರಸೃಷ್ಟಃ ಮದನುಜ್ಞಾತಃ ಮದನುಗೃಹೀತಸ್ಸನ್ । ಮದನುಗ್ರಹಾದಿತ್ಯರ್ಥಃ । ಸುಖಂ ರಾತ್ರೀಶ್ಶಯಿತಾ ವೀತಮನ್ಯುಸ್ತ್ವಾಂ ದೃಶಿವಾನ್ ಮೃತ್ಯುಮುಖಾತ್ಪ್ರಮುಕ್ತಮ್–ತ್ವಯಿ ವಿಗತಮನ್ಯುಸ್ಸನ್ ಉತ್ತರಾ ಅಪಿ ರಾತ್ರೀಸ್ಸುಖಂ ಶಯಿತಾ । ಲುಟ್ । ಸುಖನಿದ್ರಾಂ ಪ್ರಾಪ್ಸ್ಯತೀತಿ ಯಾವತ್ । ದೃಶಿವಾನ್ (?) ದೃಷ್ಟವಾನ್ ಸನ್ನಿತ್ಯರ್ಥಃ । ಕ್ವಸಂತೋಽಯಂ ಶಬ್ದಃ । 'ದೃಶೇಶ್ಚೇತಿ ವಕ್ತವ್ಯಮ್' ಇತಿ ಕ್ವಸೋರಿಟ್ । ಛಾಂದಸೋದ್ವಿರ್ವಚನಾಭಾವಃ ಮತ್ಪ್ರಸೃಷ್ಟಂ ಇತಿ ದ್ವಿತೀಯಾಂತಪಾಠೇ ಮತ್ಪ್ರೇಷಿತಂ ತ್ವಾಮಿತಿ ಯೋಜನಾ ॥

## ಅನುವಾದ

ನಚಿಕೇತನು (ಯಮನನ್ನು ಕುರಿತು) ಹೀಗೆ ಕೇಳಲು ಯಮನು ಉತ್ತರಿಸಿದನು. ಯಥಾ ಪುರಸ್ತಾತ್ಪಿತಾ ಪ್ರತೀತಃ–ನಿನ್ನ ವಿಷಯದಲ್ಲಿ ಹಿಂದಿನಂತೆಯೇ (ನಿನ್ನ ತಂದೆಯು) ಸಂತೋಷವುಳ್ಳವನಾಗುವನು. ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ (ಷ್ಯಮ್) ಉದ್ದಾಲಕ ಎಂಬರ್ಥದಲ್ಲಿಯೇ ಔದ್ದಾಲಕಿ ಎಂದು ಬಂದಿದೆ. ಅರುಣನ ಮಗ ಆರುಣಿ. ಅಥವಾ ದ್ವ್ಯಾಮುಷ್ಯಾಯಣ[1] ಅಥವಾ ಉದ್ದಾಲಕನ ಮಗ, ಅರುಣಗೋತ್ರದಲ್ಲಿ ಜನಿಸಿದವನು ಎಂದಾದರೂ ಅರ್ಥವಾಗುವುದು. ಮತ್ಪ್ರಸೃಷ್ಟಃ-ನನ್ನ ಅನುಗ್ರಹವನ್ನು ಪಡೆದವನಾಗಿ ಅಂದರೆ ನನ್ನ ಅನುಗ್ರಹದಿಂದ ಸುಖಂ ರಾತ್ರೀಃ ಶಯಿತಾ ವೀತಮನ್ಯುಸ್ತ್ವಾಂ ದದೃಶಿವಾನ್ ಮೃತ್ಯುಮುಖಾತ್ಪ್ರಮುಕ್ತಮ್–ಮೃತ್ಯುವಿನಿಂದ ಬಿಡಲ್ಪಟ್ಟ ನಿನ್ನನ್ನು ನೋಡಿ ನಿನ್ನಲ್ಲಿ ಕೋಪವಿಲ್ಲದವನಾಗಿ ಮುಂದಿನ ರಾತ್ರಿಗಳಲ್ಲೂ ಸುಖವಾಗಿ ಮಲಗುವನು. 'ಲುಟ್' ಲಕಾರ. ಸುಖವಾದ ನಿದ್ರೆಯನ್ನು ಹೊಂದುತ್ತಾನೆ ಎಂದು ತಾತ್ಪರ್ಯ. ದದೃಶಿವಾನ್ (?) (ನಿನ್ನನ್ನು) ನೋಡಿದವನಾಗಿ ಎಂದರ್ಥ. ಕ್ವಸಂತ ಶಬ್ದ. 'ದೃಶೇಶ್ಚೇತಿ ವಕ್ತವ್ಯಮ್' ಎಂಬುವುದರಿಂದ 'ಕ್ವಸ್'ಗೆ 'ಇಟ್' ಆಗಮ ಬಂದಿದೆ ಮತ್ತು ದ್ವಿತ್ವ ಬಾರದಿರುವುದು ವೈದಿಕಪ್ರಯೋಗವಾದುದರಿಂದ ಸಾಧು. ಮತ್ಪ್ರಸೃಷ್ಟಮ್–ಎಂದು ದ್ವಿತೀಯಾವಿಭಕ್ತ್ಯಂತ ಪಾಠವಿದ್ದಲ್ಲಿ ನಾನು ಕಳುಹಿಸಿದ ಎಂದು ಅನ್ವಯ ಮಾಡಿಕೊಳ್ಳಬೇಕು.

## ಭಾಷ್ಯಸಾರ

ಯಮನ ಸೂಚನೆಯಂತೆ ನಚಿಕೇತನು ತಂದೆಗೆ ಹಿತಕರವಾದ ಮೊದಲ ವರವನ್ನು ಕೇಳಿದನು. ಅದನ್ನು ಯಮನು ಸಲ್ಲಿಸುತ್ತಾ ಹೇಳುತ್ತಾನೆ. ಎಲೈ ನಚಿಕೇತನೇ! ನೀನು ಇಲ್ಲಿಗೆ ಬರುವ ಮೊದಲು ನಿನ್ನಲ್ಲಿ ನಿನ್ನ ತಂದೆಯೂ ಅರುಣಪುತ್ರನೂ ಆದ ಔದ್ದಾಲಕಿಯು ಹೇಗೆ ಪ್ರೀತಿಯಿಂದ ಇದ್ದನೋ ಹಾಗೇ ಪ್ರೀತಿಯನ್ನೂ ತೋರಿಸುತ್ತಾನೆ. ನೀನು ಇಲ್ಲಿಂದ ಹೋದ ಬಳಿಕ 'ನನ್ನ ಮಗನೇ ಇವನು' ಎಂದು ಅರಿಯುತ್ತಾನೆ. ನನ್ನ ಬಳಿಯಿಂದ ಹಿಂತಿರುಗಿದ ನಿನ್ನನ್ನು ನೋಡಿ ಕೋಪಿಸುವುದಿಲ್ಲ. ಶಾಂತಚಿತ್ತನಾಗಿ ರಾತ್ರಿಯಲ್ಲಿ ಸುಖವಾಗಿ ನಿದ್ರಿಸುತ್ತಾನೆ. ನನ್ನ ಅನುಗ್ರಹದಿಂದ ನೀನು ಕೇಳಿದಂತೆ ನಿನ್ನ ತಂದೆಗೆ ಸಂತೋಷವನ್ನು ಉಂಟುಮಾಡುವ ಎಲ್ಲ ವಿಷಯಗಳೂ ಉಂಟಾಗುವುವು ಎಂದು ತಾತ್ಪರ್ಯ.



1 ಪ್ರಖ್ಯಾತನಾದ ಉದ್ದಾಲಕನ ಮಗ ಆಮುಷ್ಯಾಯಣ. ಜನಕ ಮತ್ತು ಸ್ವೀಕಾರ ಪಡೆದ ತಂದೆ ಇಬ್ಬರಿಗೂ ಮಗನಾಗಿರುವವನು ದ್ವ್ಯಾಮುಷ್ಯಾಯಣನು. ಔದ್ದಾಲಕಿಃ ಆರುಣಿಃ–ಉದ್ದಾಲಕನೆ ಔದ್ದಾಲಕಿ. ಈತನು ಅರುಣಪುತ್ರ ಅಥವಾ ಉದ್ದಾಲಕಗೋತ್ರದಲ್ಲಿ ಜನಿಸಿದವನು ಎಂದು ರಾಮಾನಂದರು ಹೇಳುತ್ತಾರೆ.

# ಮಂತ್ರ ೧೨

**स्वर्गे लोके न भयं किञ्च नास्ति न तत्र त्वं न जरया बिभेति ।**
**उभे तीर्त्वाऽशनायापिपासे शोकातिगो मोदते स्वर्गलोके ॥**

ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ ನ ತತ್ರ ತ್ವಂ
ನ ಜರಯಾ ಬಿಭೇತಿ ।
ಉಭೇ ತೀರ್ತ್ವಾಽಶನಾಯಾಪಿಪಾಸೇ ಶೋಕಾತಿಗೋ
ಮೋದತೇ ಸ್ವರ್ಗಲೋಕೇ ॥

## ಪ್ರತಿಪದಾರ್ಥ

ಸ್ವರ್ಗೇ ಲೋಕೇ–ಸ್ವರ್ಗಶಬ್ದದಿಂದ ಹೇಳುವ ಲೋಕದಲ್ಲಿ, ಭಯಮ್-(ಸಾಂಸಾರಿಕವಾದ) ಭಯವು, ಕಿಂಚ ನ—ಯಾವುದೂ, ನಾಸ್ತಿ—ಇರುವುದಿಲ್ಲ. ತತ್ರ—ಅಲ್ಲಿ, ತ್ವಮ್—ನೀನು, ನ—ಇಲ್ಲ (ಪ್ರಭಾವ ಬೀರಲಾರೆ), ಜರಯಾ—ಮುಪ್ಪಿನಿಂದ (ಅಲ್ಲಿ), ನ ಬಿಭೇತಿ—(ಯಾರೂ) ಹೆದರುವುದಿಲ್ಲ. ಅಶನಾಯಾಪಿಪಾಸೇ ಉಭೇ—ಹಸಿವು-ಬಾಯಾರಿಕೆಗಳೆರಡನ್ನೂ, ತೀರ್ತ್ವಾ—ದಾಟಿ, ಶೋಕಾತಿಗಃ—ದುಃಖವಿಲ್ಲದವನಾಗಿ, ಸ್ವರ್ಗೇ ಲೋಕೇ—(ಅತ್ಯಂತ ಸುಖವುಳ್ಳ) ಸ್ವರ್ಗಲೋಕದಲ್ಲಿ, ಮೋದತೇ—ಆನಂದವನ್ನು ಅನುಭವಿಸುತ್ತಾನೆ.

## ತಾತ್ಪರ್ಯ

ನಚಿಕೇತನು ಎರಡನೇ ವರವನ್ನು ಎರಡು ಮಂತ್ರಗಳಿಂದ ಕೇಳುತ್ತಾನೆ. ಅದರಲ್ಲಿ ಸ್ವರ್ಗಲೋಕದ ಹಿರಿಮೆಯನ್ನು ಇಲ್ಲಿ ಹೇಳುತ್ತಾನೆ. ಸ್ವರ್ಗದಲ್ಲಿ ಸಾಂಸಾರಿಕ ಭಯವಿಲ್ಲ. ಯಮನ ಪ್ರಭಾವವೂ ಇಲ್ಲ. ಮುಪ್ಪು ಮುಂತಾದುವುಗಳ ಕಾಟವಿಲ್ಲ. ಹಸಿವು–ಬಾಯಾರಿಕೆಗಳಿಲ್ಲ. ದುಃಖದಿಂದ ಪಾರಾಗಿ ಸ್ವರ್ಗಲೋಕದಲ್ಲಿ ಅಪಾರವಾದ ಆನಂದವನ್ನು ಅನುಭವಿಸುತ್ತಾನೆ.

## ರಂಗರಾಮಾನುಜಭಾಷ್ಯಮ್

ನಚಿಕೇತಾ ವರಂ ದ್ವಿತೀಯಂ ಪ್ರಾರ್ಥಯತೇ–'ಸ್ವರ್ಗೇ ಲೋಕೇ' ಇತ್ಯಾದಿನಾ ಮಂತ್ರದ್ವಯೇನ । ಸ್ವರ್ಗೇ ಲೋಕೇ ನ ಭಯಂ ಕಿಂಚ ನಾಸ್ತಿ । ಅತ್ರ 'ಸ್ವರ್ಗ' ಶಬ್ದೋ ಮೋಕ್ಷಸ್ಥಾನಪರಃ । ಯಥಾ ಚ ಏತತ್ ತಥಾ ಉತ್ತರತ್ರ ವಕ್ಷ್ಯತೇ । ನ ತತ್ರ ತ್ವಮ್, ನ ಜರಯಾ ಬಿಭೇತಿ । ಹೇ ಮೃತ್ಯೋ ! ತ್ವಂ ತತ್ರ ನ ಪ್ರಭವಸಿ । ಜರಾಯುಕ್ತಸ್ಸನ್ನ ಬಿಭೇತಿ । ಜರಾತೋ ನ ಬಿಭೇತಿ । ತತ್ರ ವರ್ತಮಾನಃ ಪುರುಷಃ ಇತಿ ಶೇಷಃ । **ಉಭೇ ತೀರ್ತ್ವಾ ಅಶನಾಯಾಪಿಪಾಸೇ ಶೋಕಾತಿಗೋ ಮೋದತೇ ಸ್ವರ್ಗಲೋಕೇ ।** ಅಶನಾಯಾ–ಬುಭುಕ್ಷಾ । ಅತ್ರಾಪಿ ಸ್ವರ್ಗಶಬ್ದೋ ಮೋಕ್ಷಸ್ಥಾನಪರಃ ॥

## ಅನುವಾದ

'ಸ್ವರ್ಗೇ ಲೋಕೇ....' ಮೊದಲಾದ ಎರಡು ಮಂತ್ರಗಳಿಂದ ನಚಿಕೇತನು ಎರಡನೇ ವರವನ್ನು ಪ್ರಾರ್ಥಿಸುತ್ತಾನೆ—**ಸ್ವರ್ಗೇಲೋಕೇ ನ ಭಯಂ ಕಿಂಚ ನಾಸ್ತಿ.** ಇಲ್ಲಿ ಸ್ವರ್ಗಶಬ್ದವು ಮೋಕ್ಷಸ್ಥಾನವಾಚಕವಾಗಿದೆ. ಇದು ಹೇಗೆ ಎಂಬುದನ್ನು ಮುಂದೆ ಹೇಳಲಾಗುವುದು. ನ ತತ್ರ ತ್ವಮ್, ನ ಜರಯಾ ಬಿಭೇತಿ–ಎಲೈ ಯಮನೇ! ಅಲ್ಲಿ ನಿನ್ನ ಪ್ರಭಾವವಿರುವುದಿಲ್ಲ, ಮುಪ್ಪಿನಿಂದ (ಯಾರೂ) ಹೆದರುವುದಿಲ್ಲ. ಅಲ್ಲಿರುವವರು ಎಂಬುದನ್ನು ಸೇರಿಸಿಕೊಳ್ಳಬೇಕು. **ಉಭೇ ತೀರ್ತ್ವಾ ಅಶನಾಯಾಪಿಪಾಸೇ ಶೋಕಾತಿಗೋ ಮೋದತೇ ಸ್ವರ್ಗಲೋಕೇ**– (ಹಸಿವು–ಬಾಯಾರಿಕೆಗಳನ್ನು ಜಯಿಸಿ ಸ್ವರ್ಗಲೋಕದಲ್ಲಿ ವಿಹರಿಸುತ್ತಾನೆ.) **ಅಶನಾಯ**– ಹಸಿವು. ಇಲ್ಲಿಯೂ ಸ್ವರ್ಗಶಬ್ದವು ಮೋಕ್ಷವಾಚಕವಾಗಿದೆ.

## ಭಾಷ್ಯಸಾರ

ನಚಿಕೇತನು 'ಸತ್ವಮಗ್ನಿಮ್' ಎಂಬ ಮುಂದಿನ ಮಂತ್ರದಲ್ಲಿ ಅಗ್ನಿ ವಿದ್ಯೆಯನ್ನು ಎರಡನೇ ವರವಾಗಿ ಕೇಳುತ್ತಾನೆ. ಈ ಅಗ್ನಿವಿದ್ಯೆಯಿಂದ ಸ್ವರ್ಗವು ಸಿಗುವುದು. ಫಲರೂಪವಾದ ಆ ಸ್ವರ್ಗದ ಮಹತ್ವವನ್ನು ನಚಿಕೇತನು ಈ ಮಂತ್ರದಲ್ಲಿ ಕೊಂಡಾಡುತ್ತಾನೆ. ಇಲ್ಲಿ ಸ್ವರ್ಗಶಬ್ದವು ಮೋಕ್ಷಪರವಾಗಿದೆ. ಈ ಮೋಕ್ಷವು ಅಪ್ರಾಕೃತಲೋಕವಾದ ವೈಕುಂಠವಾಗಿದೆ. ಈ ಲೋಕಕ್ಕೆ ಹೋದ ಮುಕ್ತರಿಗೆ ಅಸಾಧಾರಣವಾದ ಅಪಹತಪಾಪ್ಮತ್ವ ಮುಂತಾದ ಎಂಟು ಗುಣಗಳು ವಿಕಾಸವಾಗುತ್ತವೆ–ಎಂದು 'ನ ಭಯಂ ಕಿಂಚನಾಸ್ತಿ' ಎಂಬುದರಿಂದ ತಿಳಿಸುತ್ತಾನೆ. ಪ್ರಸಿದ್ಧವಾದ ಸ್ವರ್ಗವು ಧ್ರುವಲೋಕ ಮತ್ತು ಸೂರ್ಯಲೋಕಗಳ ಮಧ್ಯೆ 14 ಲಕ್ಷ ಯೋಜನೆಗಳಷ್ಟು ವಿಸ್ತಾರವಾಗಿದೆ ಎಂದು ಪುರಾಣಗಳಲ್ಲಿ ನಿಶ್ಚಯಿಸಿದ್ದಾರೆ. ಈ ಲೋಕದಲ್ಲಿರುವವರಿಗೆ ಅಪಹತಪಾಪ್ಮತ್ವ ಮುಂತಾದ ಎಂಟು ಗುಣಗಳು ವಿಕಾಸ ಹೊಂದುತ್ತವೆ ಎಂದು ಆ ಗ್ರಂಥಗಳಲ್ಲಿ ಎಲ್ಲೂ ಹೇಳಿರುವುದಿಲ್ಲ. ಆದುದರಿಂದ ಇಲ್ಲಿ ಹೇಳಿರುವ ಸ್ವರ್ಗಶಬ್ದವು ಈ ಸ್ವರ್ಗಕ್ಕಿಂತ ಭಿನ್ನವಾದ ಮೋಕ್ಷಸಾಮ್ರಾಜ್ಯಪರವಾದುದು.

ಈ ಮಂತ್ರದಲ್ಲಿ 'ನ ಭಯಂ ಕಿಂಚ ನಾಸ್ತಿ' ಎಂಬುದರಿಂದ ಅಪಹತಪಾಪ್ಮತ್ವವನ್ನೂ, 'ನ ತತ್ರ ತ್ವಮ್' ಎಂಬುದರಿಂದ ವಿಮೃತ್ಯುತ್ವವನ್ನು 'ನ ಜರಯಾ' ಎಂಬುದರಿಂದ ವಿಜರತ್ವವನ್ನೂ, 'ಉಭೇ ತೀರ್ತ್ವಾ ಅಶನಾಯಾಪಿಪಾಸೇ' ಎಂಬುದರಿಂದ ವಿಜಿಘತ್ಸತ್ವ ಮತ್ತು ಅಪಿಪಾಸತ್ವವನೂ 'ಶೋಕಾತಿಗಃ' ಎಂಬುದರಿಂದ ಆನಂದಾನುಭವಕ್ಕೆ ಕಾರಣವಾದ ಸತ್ಯಕಾಮತ್ವ ಸತ್ಯಸಂಕಲ್ಪತ್ವಗಳನ್ನೂ ಹೇಳಲಾಗಿದೆ. ಆದುದರಿಂದ ಸ್ವರ್ಗಶಬ್ದವು ಮೋಕ್ಷಸ್ಥಾನವನ್ನು ಸೂಚಿಸುತ್ತದೆ.

'ಅನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ'[1] (ಕೇ.ಉ. 4–3) ಎಂದೂ, 'ತೇನ ಧೀರಾ ಅಪಿಯಂತಿ ಬ್ರಹ್ಮವಿದಃ ಸ್ವರ್ಗಂ ಲೋಕಮಿತ ಊರ್ಧ್ವಂ ವಿಮುಕ್ತಾಃ'[2] (ಬೃ.ಉ. 6–4–8) 'ತಸ್ಯ ಹಿರಣ್ಮಯಃ ಕೋಶಃ ಸ್ವರ್ಗೋ ಲೋಕೋ ಜ್ಯೋತಿಷಾವೃತಃ

1 ಶಾಶ್ವತವೂ ಅತ್ಯಂತ ಶ್ರೇಷ್ಠವೂ ಆದ ಮೋಕ್ಷಸ್ಥಾನದಲ್ಲಿ ಸ್ಥಿರವಾಗಿ ನೆಲಸುವನು.

2 ಬ್ರಹ್ಮಜ್ಞಾನಿಗಳು ಈ ಶರೀರ ವಿಯೋಗಾನಂತರ ಅರ್ಚಿರಾದಿ ಮಾರ್ಗದಿಂದ ಭಗವಂತನ ಲೋಕವನ್ನು (ಮೋಕ್ಷ) ಹೊಂದುತ್ತಾರೆ.

(ತೈ.ಆ.ಸಂ. 1–26) ಅಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಹೀಯತೇ'[1] ॥ (ಐ.ಉ. 4–6) ಎಂದು ಹೇಳಿರುವುದರಿಂದ ಸ್ವರ್ಗಶಬ್ದಕ್ಕೆ ಅಪ್ರಸಿದ್ಧವಾದ ಮೋಕ್ಷಪರವಾಗಿ ಅರ್ಥಕಲ್ಪಿಸಲು ಸಾಧ್ಯವಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

ಸ್ವರ್ಗಕಾಮಾಧಿಕರಣದಲ್ಲಿ ಸ್ವರ್ಗಶಬ್ದಕ್ಕೆ ನಿರತಿಶಯಪ್ರೀತಿ ಎಂದು ಅರ್ಥ ಮಾಡಿರುವುದರಿಂದ ಇಲ್ಲಿ ಸ್ವರ್ಗಶಬ್ದಕ್ಕೆ ಮೋಕ್ಷ ಎಂಬುದೇ ಮುಖ್ಯಾರ್ಥವಾಗಿದೆ. ಪುರಾಣ ಪ್ರಸಿದ್ಧವಾದ ಸ್ವರ್ಗಶಬ್ದಕ್ಕೆ ಸಾಮಾನ್ಯ ಪ್ರೀತಿ ಎಂಬ ಅರ್ಥಹೇಳಿರುವುದರಿಂದ ಅಲ್ಲಿ ಸ್ವರ್ಗ ಶಬ್ದವು ಗೌಣವಾಗಿದೆ. ಹೀಗೆ ಉಪಚಾರದಿಂದ ಉಂಟಾದ ಪ್ರಸಿದ್ಧಿಯು ಅನುಪಯುಕ್ತ.

ಸಾಕೇತವೆಂದು ಪ್ರಸಿದ್ಧವಾದ ಮೋಕ್ಷಸ್ಥಾನದಲ್ಲಿ ಭಯಕ್ಕೆ ಕಾರಣವಾದ ಪುಣ್ಯಪಾಪಗಳ ಸಂಬಂಧವು ನಾಶವಾಗಿರುವುದರಿಂದ ಯಾವುದೇ ಭಯವೂ ಇಲ್ಲ. ಪುರಾಣಗಳಲ್ಲಿ ಹೇಳಿರುವ ಸ್ವರ್ಗವು ಪುಣ್ಯದಿಂದ ಲಭಿಸುತ್ತದೆ. ಈ ಸ್ವರ್ಗದಲ್ಲಿರುವ ಇಂದ್ರ ಮುಂತಾದ ದೇವತೆಗಳಿಗೆ ವೃತ್ರಾಸುರ ಮುಂತಾದವರಿಂದ ಉಂಟಾದ ಭಯವನ್ನು ಪುರಾಣಗಳಲ್ಲಿ ವರ್ಣಿಸಿರುತ್ತಾರೆ. ಇದರಿಂದ ಪುರಾಣಪ್ರಸಿದ್ಧವಾದ ಸ್ವರ್ಗದಲ್ಲಿ ಭಯವಿದೆ ಎಂದು ತಿಳಿಯುತ್ತದೆ. ಆದುದರಿಂದ 'ನ ಭಯಂ ಕಿಂಚ ನಾಸ್ತಿ' ಎಂದು ಹೇಳಿರುವ ಸ್ವರ್ಗ, ಮೋಕ್ಷಸ್ಥಾನವೇ. ಪ್ರಸಿದ್ಧವಾದ ಸಾಮಾನ್ಯ ಸ್ವರ್ಗವನ್ನು ಇಲ್ಲಿ ಗ್ರಹಿಸಲಾಗುವುದಿಲ್ಲ.

ಎಲೈ ಮೃತ್ಯುವೇ ! ಆ ವೈಕುಂಠದಲ್ಲಿ ನೀನು ಪ್ರಭಾವ ಬೀರಲಾರೆ, ಮೋಕ್ಷದಲ್ಲಿ ಜರಾ-ಮರಣಗಳಿಲ್ಲದಿರುವುದರಿಂದ ಅಲ್ಲಿ ಹೋದ ಜೀವನು, ಮುಪ್ಪಿನಿಂದ ಹೆದರುವುದಿಲ್ಲ. ಹಸಿವು–ಬಾಯಾರಿಕೆಗಳೆರಡೂ ಅಲ್ಲಿರುವುದಿಲ್ಲ. ಸಾಕೇತವೆಂಬ ವೈಕುಂಠದಲ್ಲಿ ಜೀವನು ಮೆಟ್ಟಿನಿಂತು ಸಂತೋಷಪಡುತ್ತಾನೆ. 'ಯಂ ಕಾಮಂ ಕಾಮಯತೇ ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠಂತಿ ತೇನ ಸಂಪನ್ನೋ ಮಹೀಯತೇ'[2] (ಛಾಂ.ಉ. 8–2–110) ಮುಂತಾದ ಶ್ರುತಿಗಳು ಸತ್ಯಕಾಮತ್ವ–ಸತ್ಯಸಂಕಲ್ಪತ್ವ ಮುಂತಾದ ಗುಣಗಳ ಆವಿರ್ಭಾವವನ್ನು ಬೋಧಿಸುತ್ತದೆ. ಇದರಿಂದ ಪಿತೃಲೋಕದಲ್ಲಿರುವವರಿಗೆ ಪಿತೃಲೋಕಾದಿಗಳಲ್ಲಿನ ಎಲ್ಲ ಬಯಕೆಗಳೂ ಸಂಕಲ್ಪಮಾತ್ರದಿಂದ ಸಿದ್ಧಿಸುವುದರಿಂದ ಎಲ್ಲ ವಿಧದಿಂದಲೂ ಆನಂದವನ್ನು ಹೊಂದುತ್ತಾನೆ ಎಂದು ತಾತ್ಪರ್ಯ.



1 ದೇವತೆಗಳ ಪಟ್ಟಣವೆನಿಸಿದ ಸ್ವರ್ಗವು ಸ್ವರ್ಣಸದೃಶವಾದ ಕೋಶದಿಂದ ಕೂಡಿದೆ. ಇದು ಜ್ಯೋತಿಯಿಂದ ಆವರಿಸಲ್ಪಟ್ಟಿದೆ. ಇದರಿಂದ ಈ ಸ್ವರ್ಗದಲ್ಲಿ ಎಲ್ಲ ಬಯಕೆಗಳನ್ನೂ ಪಡೆದು ಜನನ-ಮರಣ ಶೂನ್ಯನಾಗುತ್ತಾನೆ.

2 ಮೋಕ್ಷದಲ್ಲಿರುವವನು ಬಯಸುವುದೆಲ್ಲವೂ ಅವನಿಗೆ ಇಚ್ಛಾಮಾತ್ರದಿಂದಲೇ ಸಿದ್ಧಿಸುತ್ತವೆ. ಇಚ್ಛಾಮಾತ್ರದಿಂದ ಸಿದ್ಧವಾದ ಪದಾರ್ಥಗಳಿಂದ ಆತನು ಪೂಜಾರ್ಹನಾಗುತ್ತಾನೆ.

# ಮಂತ್ರ ೧೩

**स त्वमग्निं स्वर्ग्यमध्येषि मृत्यो प्रब्रूहि तँ श्रद्दधानाय मह्यम् ।**
**स्वर्गलोका अमृतत्वं भजन्ते एतद् द्वितीयेन वृणे वरेण ॥**

ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ
ತಂ ಶ್ರದ್ದಧಾನಾಯ ಮಹ್ಯಮ್ ।
ಸ್ವರ್ಗಲೋಕಾ ಅಮೃತತ್ವಂ ಭಜಂತೇ ಏತತ್ ದ್ವಿತೀಯೇನ
ವೃಣೇ ವರೇಣ ॥

### ಪ್ರತಿಪದಾರ್ಥ

ಮೃತ್ಯೋ—ಎಲೈ ಯಮನೇ ! ಸಃ—ಪ್ರಸಿದ್ಧನಾದ, ತ್ವಮ್—ನೀನು, ಸ್ವರ್ಗ್ಯಮ್—ಮೋಕ್ಷ ಸಾಧಕವಾದ, ಅಗ್ನಿಮ್—ಅಗ್ನಿ(ವಿದ್ಯೆ)ಯನ್ನು, ಅಧ್ಯೇಷಿ—ತಿಳಿದಿರುವೆ. ತಮ್—ಆ ಅಗ್ನಿಯನ್ನು ನೀನು ಶ್ರದ್ದಧಾನಾಯ—ಶ್ರದ್ಧೆಯುಳ್ಳ, ಮಹ್ಯಮ್—ನನಗೆ, ಪ್ರಬ್ರೂಹಿ—ಹೇಳಿಕೊಡು. ಸ್ವರ್ಗಲೋಕಾಃ—ಸ್ವರ್ಗಲೋಕದಲ್ಲಿರುವವರು, ಅಮೃತತ್ವಮ್—ಜರಾಮರಣವಿಲ್ಲದಿರುವಿಕೆಯನ್ನು ಅಥವಾ ಬ್ರಹ್ಮತತ್ವವನ್ನು ಅಂದರೆ ಬ್ರಹ್ಮಸಾಮ್ಯವನ್ನು, ಭಜಂತೇ—ಹೊಂದುತ್ತಾರೆ. (ಎಂದು ಕೇಳಿರುವೆನು) ಏತತ್—ಇದನ್ನು ದ್ವಿತೀಯೇನ—ಎರಡನೆಯ, ವರೇಣ – ವರದಿಂದ, ವೃಣೇ—ಪ್ರಾರ್ಥಿಸುತ್ತೇನೆ

### ರಂಗರಾಮಾನುಜಭಾಷ್ಯಮ್

ಸ ತ್ವಮಗ್ನಿಂ ಸ್ವರ್ಗಮಧ್ಯೇಷಿ ಮೃತ್ಯೋ । ಪುರಾಣಾದಿಪ್ರಸಿದ್ಧಸಾರ್ವಜ್ಞ್ಯಸ್ತ್ವಂ ಸ್ವರ್ಗಪ್ರಯೋಜಕಮಗ್ನಿಂ ಜಾನಾಸಿ । 'ಸ್ವರ್ಗಾದಿಭ್ಯೋ ಯದ್ವಕ್ತವ್ಯಃ' ಇತಿ ಪ್ರಯೋಜನ ಮಿತ್ಯರ್ಥೇ ಯತ್ । ಸ್ಥಂಡಿಲರೂಪಾಗ್ನೇಃ ಸ್ವರ್ಗಪ್ರಯೋಜನಕತ್ವಂ ಚ ಉಪಾಸನಾ ದ್ವಾರೇತಿ ಉತ್ತರತ್ರ ಸ್ಫುಟಮ್ । ಪ್ರಬ್ರೂಹಿ ತು ಶ್ರದ್ದಧಾನಾಯ ಮಹ್ಯಮ್ । ಶ್ರದ್ದ ಧಾನಾಯ—ಮೋಕ್ಷಶ್ರದ್ಧಾವತೇ । ಸ್ವರ್ಗಲೋಕೇನ ತವ ಕಿಂ ಸಿದ್ಧ್ಯತೀತ್ಯತ್ರಾಹ—ಸ್ವರ್ಗ ಲೋಕಾ ಅಮೃತತ್ವಂ ಭಜಂತೇ । ಸ್ವರ್ಗೋ ಲೋಕೋ ಯೇಷಾಂ ತೇ । ಪರಮಪದಂ ಪ್ರಾಪ್ತಾ ಇತ್ಯರ್ಥಃ । 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' (ಛಾಂ.ಉ. 8–3–4) ಇತಿ ದೇಶ–ವಿಶಿಷ್ಟ–ಬ್ರಹ್ಮಪ್ರಾಪ್ತಿಪೂರ್ವಕತ್ವಾತ್ ಸ್ವರೂಪಾ ವಿರ್ಭಾವಲಕ್ಷಣ ಮೋಕ್ಷಲಬ್ಧಿತಾಮೃತತ್ವಸ್ಯೇತಿ ಭಾವಃ । ಏತದ್ದ್ವಿತೀಯೇನ ವೃಣೇ ವರೇಣ । ಸ್ಪಷ್ಟಮ್ ॥

### ಅನುವಾದ

**ಸ ತ್ವಮಗ್ನಿಂ ಸ್ವರ್ಗಮಧ್ಯೇಷಿ ಮೃತ್ಯೋ.** ಪುರಾಣ ಮುಂತಾದವುಗಳಲ್ಲಿ ಸರ್ವಜ್ಞನೆಂದು ಪ್ರಸಿದ್ಧನಾದ ನೀನು ಸ್ವರ್ಗಸಾಧನವಾದ ಅಗ್ನಿಯನ್ನು ತಿಳಿದಿರುವೆ. 'ಸ್ವರ್ಗಾದಿಭ್ಯೋ ಯದ್ವಕ್ತವ್ಯಃ' ಎಂಬ ಸೂತ್ರದಿಂದ ಪ್ರಯೋಜನ ಎಂಬರ್ಥದಲ್ಲಿ 'ಯತ್' ಪ್ರತ್ಯಯ

ಬಂದಿದೆ. ಯಾಗ ವೇದಿಕೆಯಲ್ಲಿರುವ ಅಗ್ನಿಯು ಉಪಾಸನೆಯ ಮೂಲಕ ಮೋಕ್ಷಕ್ಕೆ ಕಾರಣವಾಗುತ್ತದೆ ಎಂಬುದನ್ನು ಮುಂದೆ ಹೇಳಲಾಗುವುದು. ಪ್ರಬ್ರೂಹಿ[1] ತಂ ಶ್ರದ್ದಧಾನಾಯ ಮಹ್ಯಮ್–ಮೋಕ್ಷಶ್ರದ್ಧಾಳುವಾದ ನನಗೆ ಆ ವಿಷಯವನ್ನು ಹೇಳು ಎಂದಾಗ ಶ್ರದ್ದಧಾನಾಯ–ಮೋಕ್ಷದಲ್ಲಿ ಶ್ರದ್ಧೆಯುಳ್ಳ ನಿನಗೆ ಸ್ವರ್ಗಲೋಕದಿಂದ ಏನು ಲಾಭ ಎಂಬ ಯಮನ ಪ್ರಶ್ನೆಗೆ ನಚಿಕೇತನು ಹೇಳುತ್ತಾನೆ। ಸ್ವರ್ಗಲೋಕಾ ಅಮೃತತ್ತ್ವಂ ಭಜಂತೇ। ಯಾರಿಗೆ ಸ್ವರ್ಗಲೋಕವುಂಟೋ ಅವರು. ಪರಮಪದವನ್ನು ಹೊಂದಿದವರು ಎಂದರ್ಥ. 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'[2] ಎಂದು ಸ್ವಸ್ವರೂಪದ ಆವಿರ್ಭಾವ ರೂಪವಾದ, ಮೋಕ್ಷಶಬ್ದದಿಂದ ಹೇಳಲ್ಪಟ್ಟ, ಅಮೃತತ್ವವು ದೇಶ–ವಿಶೇಷದಲ್ಲಿರುವ ಬ್ರಹ್ಮಪ್ರಾಪ್ತಿ ಮೂಲಕವಾದುದು ಎಂದು ತಾತ್ಪರ್ಯ. ಏತದ್ದ್ವಿತೀಯೇನ ವೃಣೇ ವರೇಣ. (ಇದನ್ನೇ ಎರಡನೇ ವರವಾಗಿ ಕೇಳುತ್ತಾನೆ.) (ಅರ್ಥ) ಸ್ಪಷ್ಟವಾಗಿದೆ.

## ಭಾಷ್ಯಸಾರ

ನಚಿಕೇತನು ಸ್ವರ್ಗಸಾಧನವಾದ ಅಗ್ನಿವಿದ್ಯೆಯನ್ನು ಉಪದೇಶಿಸು ಎಂದು ಎರಡನೇ ವರವಾಗಿ ಕೇಳುತ್ತಾನೆ. ಎಲೈ ಮೃತ್ಯುದೇವತೆಯೇ! ನೀನು ಸರ್ವಜ್ಞ. ಇದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಆದುದರಿಂದ ಈ ಅಗ್ನಿವಿದ್ಯೆಯನ್ನು ನೀನು ಚೆನ್ನಾಗಿ ತಿಳಿದಿರುವೆ. ಈ ಅಗ್ನಿವಿದ್ಯೆಯು ನಿರತಿಶಯಸುಖರೂಪವಾದ ಮೋಕ್ಷಕ್ಕೆ ಕಾರಣವಾಗಿದೆ. ಇದನ್ನು ಅರಿಯಬೇಕೆಂಬ ಆಸಕ್ತಿ ನನಗೆ ಮೂಡಿದೆ. ನಿನ್ನಲ್ಲಿ ಭಕ್ತಿವಿಶಿಷ್ಟವಾಗಿ ನಿನಗೆ ಶಿಷ್ಯನಾಗಿರುವೆನು. ಆದುದರಿಂದ ಈ ಅಗ್ನಿವಿದ್ಯೆಯನ್ನು ನನಗೆ ಉಪದೇಶಿಸು ಎಂದು ಕೇಳಿದನು. ಈ ಅಗ್ನಿಯು ಉಪಾಸನೆಯ ಮೂಲಕ ಮೋಕ್ಷಸಾಧನವಾಗುತ್ತದೆ ಎಂದು ತಿಳಿಯಬೇಕು.

ಯಮನು ಎಲೈ ನಚಿಕೇತನೇ! ಈ ವಿಷಯದಲ್ಲಿ ನನ್ನನ್ನೇಕೆ ಹೇಳು ಎಂದು ಪ್ರೇರೇಪಿಸುತ್ತಿರುವೆ ಎಂದಲ್ಲಿ 'ಸ್ವರ್ಗಲೋಕಾ ಅಮೃತತ್ತ್ವಂ ಭಜಂತೇ' ಎಂದು ಹೇಳುತ್ತಾನೆ. ಸ್ವರ್ಗಲೋಕಾಃ ಅಂದರೆ ಮೋಕ್ಷವನ್ನು ಪಡೆದವರು ಎಂದರ್ಥ. 'ಅಮೃತತ್ವಮ್' ಅಂದರೆ ಸ್ವಸ್ವರೂಪಾವಿರ್ಭಾವ ರೂಪವಾದ ಮೋಕ್ಷವನ್ನು–ಭಜಂತೇ–ಪಡೆಯುತ್ತಾರೆ. ಆದುದರಿಂದ ಈ ಮೋಕ್ಷದಲ್ಲಿ ಆಸಕ್ತನಾದ ನಾನು ಈ ಅಗ್ನಿವಿದ್ಯೆಯ ರಹಸ್ಯವನ್ನು ತಿಳಿಸಬೇಕೆಂದು ಎರಡನೇ ವರವಾಗಿ ಪ್ರಾರ್ಥಿಸುತ್ತೇನೆ.



---

1 ಪ್ರಬ್ರೂಹಿ—ಎಂಬಲ್ಲಿರುವ 'ಪ್ರ' ಎಂಬ ಉಪಸರ್ಗವು ನನಗೆ ತಿಳಿಯುವಂತೆ ಉಪದೇಶಿಸು ಎಂಬ ಅರ್ಥವನ್ನು ಸೂಚಿಸುತ್ತದೆ.

2 ಈ ಜೀವನು ದುಃಖಕ್ಕೆ ನೆಲೆಯಾದ ಈ ಶರೀರವನ್ನು ಬಿಟ್ಟು ಹೊರಟು ಉತ್ತಮವಾದ ಬೇರೊಂದು ಲೋಕದಲ್ಲಿರುವ ಪರಮಾತ್ಮನನ್ನು ಹೊಂದಿ ಸ್ವಸ್ವರೂಪಾವಿರ್ಭಾವವನ್ನು ಹೊಂದುತ್ತಾನೆ.

# ಮಂತ್ರ ೧೪

**प्र ते ब्रवीमि तदु मे निबोध स्वर्ग्यमग्निं नचिकेतः प्रजानन् ।**
**अनन्तलोकाप्तिमथो प्रतिष्ठां विद्धि त्वमेतन्निहितं गुहायाम् ॥**

ಪ್ರ ತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ
ನಚಿಕೇತಃ ಪ್ರಜಾನನ್ ।
ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ ವಿದ್ಧಿ
ತ್ವಮೇತನ್ನಿಹಿತಂ ಗುಹಾಯಾಮ್ ॥

## ಪ್ರತಿಪದಾರ್ಥ

ನಚಿಕೇತಃ—ಎಲೈ ನಚಿಕೇತನೇ! ತೇ—ನಿನಗೆ, ತದು—ಅದನ್ನೇ (ಮೋಕ್ಷಸಾಧಕವಾದ ಅಗ್ನಿಯನ್ನೇ), ಪ್ರ ಬ್ರವೀಮಿ—ಚೆನ್ನಾಗಿ ಹೇಳುತ್ತೇನೆ. ಮೇ—ನನ್ನಿಂದ, ನಿಬೋಧ—ತಿಳಿ. ಸ್ವರ್ಗ್ಯಮಗ್ನಿಮ್—ಮೋಕ್ಷ ಸಾಧಕವಾದ ಅಗ್ನಿಯನ್ನು ಅಥವಾ ತೇಜೋರೂಪನಾದ ಪರಮಾತ್ಮನನ್ನು, ಪ್ರಜಾನನ್-ಚೆನ್ನಾಗಿ ತಿಳಿದವನಾಗಿ, ಅಥೋ—ಅನಂತರ, ಅನಂತಲೋಕಾಪ್ತಿಮ್—ವಿಷ್ಣುಲೋಕಪ್ರಾಪ್ತಿಯನ್ನು, ಪ್ರತಿಷ್ಠಾಮ್—ಶಾಶ್ವತವಾಗಿ ಅಲ್ಲೇ ನೆಲೆಸುವಿಕೆಯನ್ನೂ (ಹೊಂದುವೆ). (ಆದುದರಿಂದ), ತ್ವಮ್—ನೀನು, ಗುಹಾಯಾಂ ನಿಹಿತಮ್—ಹೃದಯ ಗುಹೆಯಲ್ಲಿ ನೆಲೆಸಿರುವ, ಏತತ್—ಹಿಂದೆ ಹೇಳಿದ ಪರಮಾತ್ಮನನ್ನು, ವಿದ್ಧಿ—ತಿಳಿ.

## ತಾತ್ಪರ್ಯ

ಎಲೈ ನಚಿಕೇತನೇ ! ನೀನು ಕೇಳಿದ ಮೋಕ್ಷಸಾಧಕವಾದ ಅಗ್ನಿವಿದ್ಯೆಯನ್ನು ನಿನಗೆ ಉಪದೇಶಿಸುತ್ತೇನೆ. ನನ್ನಿಂದ ಈ ವಿಷಯವನ್ನು ತಿಳಿದು ನೀನು ವಿಷ್ಣುಲೋಕವನ್ನು ಪಡೆಯುವೆ ಮತ್ತು ಅಲ್ಲೇ ಶಾಶ್ವತವಾಗಿ ನೆಲೆಸುವೆ. ಆದುದರಿಂದ ರಹಸ್ಯವಾದ ಈ ಅಗ್ನಿ ವಿದ್ಯೆಯನ್ನು ಇತರರು ತಿಳಿಯಲಾರರು, ನನ್ನ ಉಪದೇಶದಿಂದ ನೀನುತಿಳಿ ಎಂದು ಹೇಳಿದನು.

## ರಂಗರಾಮಾನುಜಭಾಷ್ಯಮ್

ಏವಮುಕ್ತೋ ಮೃತ್ಯುಃ ಆಹ, ಪ್ರ ತೇ ಬ್ರವೀಮಿ ತದು ಮೇ ನಿಬೋಧ । ಪ್ರಾರ್ಥಿತ ಮತೇ ತುಭ್ಯಂ ಪ್ರ ಬ್ರವೀಮಿ । 'ವ್ಯವಹಿತಾಶ್ಚ' (ಪಾ.ಸೂ. 1–4–82) ಇತಿ ವ್ಯವಹಿತ ಪ್ರಯೋಗಃ । ಮೇ ಮಮ ಉಪದೇಶಾಜ್ಜಾನೀಹೀತ್ಯರ್ಥಃ । ಜ್ಞಾನಸ್ಯ ಫಲಂ ದರ್ಶಯತಿ–ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ಅನಂತಲೋಕಾಪ್ತಿಮಥೋ ಪ್ರತಿಷ್ಠಾಮ್ । ಅನಂತಸ್ಯ ವಿಷ್ಣೋಃ ಲೋಕಃ; ತತ್ಪ್ರಾಪ್ತಿಮ್ । 'ತದ್ವಿಷ್ಣೋಃ ಪರಮಂ ಪದಮ್' ಇತ್ಯುತ್ತರತ್ರ ವಕ್ಷ್ಯಮಾಣತ್ವಾತ್ । ಅಥೋ–ತತ್ಪ್ರಾಪ್ತ್ಯನಂತರಂ ಪ್ರತಿಷ್ಠಾಮ್-ಅಪುನರಾವೃತ್ತಿಂ ಚ । ಲಭತ ಇತಿ ಶೇಷಃ । ತಜ್ಜ್ಞಾನಸ್ಯೈವಂವಿಧಸಾಮರ್ಥ್ಯಂ ಕಥಂ ಸಂಭವತೀತಿ ಮನ್ಯಮಾನಂ ಪ್ರತ್ಯಾಹ–ವಿದ್ಧಿ ತ್ವಮೇತನ್ನಿಹಿತಂ ಗುಹಾಯಾಮ್ । ಬ್ರಹ್ಮೋಪಾಸನಾಂಗತಯಾ ಏತದ್ ಜ್ಞಾನಸ್ಯ ಮೋಕ್ಷಹೇತುತ್ವಲಕ್ಷಣಮೇತತ್ಸ್ವರೂಪಂ ಗುಹಾಯಾಂ ನಿಹಿತಮನ್ಯೇ ನ ಜಾನಂತಿ।

ತ್ವಂ ಜಾನೀಹೀತಿ ಭಾವಃ । ಯದ್ವಾ ಜ್ಞಾನಾರ್ಥಕಸ್ಯ ವಿದೇರ್ಲಾಭಾರ್ಥಕತ್ವಸಂಭವಾತ್ ಅಗ್ನಿಂ ಪ್ರಜಾನನ್ ತ್ವಮನಂತಲೋಕಾಪ್ತಿಂ ಪ್ರತಿಷ್ಠಾಂ ಲಭಸ್ವ ಇತ್ಯುಕ್ತೇ ಹೇತುಹೇತುಮದ್ಭಾವಸ್ಸಿದ್ಧೋ ಭವತಿ। ಪ್ರಜಾನನ್। 'ಲಕ್ಷಣಹೇತ್ವೋಃ....' (ಪಾ.ಸೂ. 3–2–126) ಇತಿ ಶತೃಪ್ರತ್ಯಯಃ ।

## ಅನುವಾದ

ನಚಿಕೇತನು (ಎರಡನೇ ವರವನ್ನು) ಕೇಳಲು ಯಮನು ಹೇಳಿದನು. ಪ್ರ ತೇ ಬ್ರವೀಮಿ ತದು ಮೇ ನಿಬೋಧ. ಪ್ರಾರ್ಥಿಸಿದ ನಿನಗೆ ಪ್ರ ಬ್ರವೀಮಿ (ಹೇಳುತ್ತೇನೆ.) 'ವ್ಯವಹಿತಾಶ್ಚ' (ಪಾ.ಸೂ. 1–4–82) ಎಂಬ ಅನುಶಾಸನವೇ ಪ್ರಮಾಣ. ಮೇ–ನನ್ನ ಉಪದೇಶದಿಂದ ತಿಳಿ ಎಂದರ್ಥ. ಜ್ಞಾನದ ಫಲವನ್ನು ತಿಳಿಸುತ್ತಾನೆ. ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ಅನಂತಲೋಕಾಪ್ತಿಮಥೋ ಪ್ರತಿಷ್ಠಾಮ್ । ಅನಂತಸ್ಯ–ವಿಷ್ಣುವಿನ ಲೋಕವು ಅದನ್ನು ಹೊಂದುವಿಕೆಯನ್ನು; ಕಾರಣ 'ತದ್ವಿಷ್ಣೋಃ ಪರಮಂ ಪದಮ್' ಎಂದು ಮುಂದೆ ಹೇಳಲಾಗುವುದು. ಅಥೋ–ಆ ಲೋಕವನ್ನು ಪಡೆದ ನಂತರ, ಪ್ರತಿಷ್ಠಾಮ್– ಹಿಂತಿರುಗಿ ಬಾರದಿರುವಿಕೆಯನ್ನೂ ಹೊಂದುತ್ತಾನೆ ಎಂದು ಪೂರ್ಣಗೊಳಿಸಬೇಕು. ಈ ಜ್ಞಾನಕ್ಕೆ ಇಂತಹ ಶಕ್ತಿ ಹೇಗೆ ? ಎಂದು ಯೋಚಿಸುವ (ನಚಿಕೇತನನ್ನು) ಕುರಿತು ಹೇಳುತಾನೆ. ವಿದ್ಧಿ ತ್ವಮೇತನ್ನಿಹಿತಂ ಗುಹಾಯಾಮ್–ಬ್ರಹ್ಮೋಪಾಸನೆಗೆ ಅಂಗವಾಗಿ ಈ ಜ್ಞಾನವು ಮೋಕ್ಷಕ್ಕೆ ಕಾರಣವಾಗುವುದೆಂಬ ಇದರ ರಹಸ್ಯವಾದ ಸ್ವರೂಪವನ್ನು ಬೇರೆಯವರು (ಜನರು) ಅರಿತಿಲ್ಲ. ನೀನು ತಿಳಿ ಎಂದು ತಾತ್ಪರ್ಯ. ಅಥವಾ ಜ್ಞಾನವೆಂಬ ಅರ್ಥವುಳ್ಳ 'ವಿದಿ' ಧಾತುವಿಗೆ 'ಲಾಭ' ಎಂಬರ್ಥವೂ ಆಗುವುದರಿಂದ ಅಗ್ನಿಯನ್ನು ತಿಳಿದು ನೀನು ಶಾಶ್ವತ ಲೋಕಪ್ರಾಪ್ತಿಯನ್ನೂ, ಹಿಂತಿರುಗಿಬಾರದಿರುವಿಕೆಯನ್ನೂ ಹೊಂದು ಎಂದು ಹೇಳಿದಲ್ಲಿ ಕಾರ್ಯಕಾರಣಭಾವವು ಸಿದ್ಧವಾಗುತ್ತದೆ. ಪ್ರಜಾನನ್–'ಲಕ್ಷಣಹೇತ್ವೋಃ....' (ಪಾ.ಸೂ. 3–2–126) ಎಂಬುದರಿಂದ 'ಶತೃ' ಪ್ರತ್ಯಯ ಬಂದಿದೆ.

## ಭಾಷ್ಯಸಾರ

ಯಮನ ಪ್ರಾರ್ಥನೆಯಂತೆ ನಚಿಕೇತನು ಎರಡನೆಯ ವರವಾಗಿ ಮೋಕ್ಷಕ್ಕೆ ಕಾರಣವಾದ ಅಗ್ನಿವಿದ್ಯೆಯನ್ನು ಉಪದೇಶಿಸುವಂತೆ ಯಮನನ್ನು ಕೇಳಿದನು. ಆಗ ಯಮನು ಎಲೈ ನಚಿಕೇತನೇ ! ಸ್ವರ್ಗಕ್ಕೆ ಸಾಧನವಾದ ಅಗ್ನಿವಿದ್ಯೆಯನ್ನು ನಾನು ಚೆನ್ನಾಗಿ ತಿಳಿದಿರುವೆನು. ನಾನು ವಿಶದವಾಗಿ ನಿನಗೆ ಉಪದೇಶಿಸುತ್ತೇನೆ. ನೀನು ಸಾವಧಾನವಾಗಿ ಕೇಳು.

ಅನಂತವಾದ ಅಂದರೆ ನಾಶರಹಿತವಾದ ಅಂದರೆ ನಿತ್ಯವಾದ ಲೋಕ ಮೋಕ್ಷ. ಅನಂತ ಶಬ್ದಕ್ಕೆ ವಿಷ್ಣು ಎಂದು ಅರ್ಥಮಾಡಿದರೆ ವಿಷ್ಣುವಿನ ಲೋಕ ಅಂದರೆ ವೈಕುಂಠ ಎಂದು ಅರ್ಥವಾಗುವುದು. (ರಾಮಾನಂದರು ಇದನ್ನು ಸಾಕೇತವೆಂದು ಹೇಳುವರು.) ಅದಕ್ಕೆ ಸಾಧನ ವಾದುದು ಈ ಅಗ್ನಿರಹಸ್ಯ. ಅಲ್ಲಿಂದ ಹಿಂತಿರುಗದೇ ಅಲ್ಲೇ ಸ್ಥಿರವಾಗಿ ನೆಲೆಸುವುದಕ್ಕೂ ಇದು ಸಾಧನವಾದುದು. ಇದು ಅತಿರಹಸ್ಯವಾದುದು. ಇತರರಿಗೆ ಸುಲಭವಾಗಿ ತಿಳಿಯುವುದಿಲ್ಲ. ನಿನ್ನಲ್ಲಿ ನನಗುಂಟಾದ ಪ್ರೀತಿಯಿಂದ ನಿನಗೆ ಉಪದೇಶಿಸುತ್ತೇನೆ ಗಮನ ವಿಟ್ಟು ಕೇಳು ಎಂದು ತಾತ್ಪರ್ಯ.

ಅಥವಾ 'ವಿದ್ಧಿ' ಎಂಬಲ್ಲಿನ 'ವಿದಿ' ಧಾತುವಿಗೆ 'ಲಾಭ' ಎಂಬರ್ಥವಿದೆ. ಇದರಂತೆ ನೀನು ಕೇಳಿದ ಅಗ್ನಿವಿದ್ಯೆಯನ್ನು ಉಪದೇಶಿಸುತ್ತೇನೆ. ಇದನ್ನು ಗಮನವಿಟ್ಟು ಕೇಳಿ ತಿಳಿ. ಇದು ಬಹಳ ರಹಸ್ಯವಾದುದು. ಉಪಾಸನಾಂಗಭೂತವಾದುದು. ಇದನ್ನು ತಿಳಿದು ಮೋಕ್ಷವನ್ನು ಹೊಂದು; ಮತ್ತು ಇದರಿಂದ ಅಲ್ಲೇ ಸ್ಥಿರವಾಗಿ ನೆಲೆಸುವ ಲಾಭವನ್ನೂ ಹೊಂದು ಎಂದು ಹೇಳಿದನು.



## ಮಂತ್ರ ೧೫

**लोकादिमग्निं तमुवाच तस्मै या इष्टका यावतीर्वा यथा वा ।**
**स चापि तत् प्रत्यवदत् यथोक्तमथास्य मृत्युः पुनराह तुष्टः ॥**

ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ
ಯಾವತೀರ್ವಾ ಯಥಾವಾ ।
ಸ ಚಾಪಿ ತತ್ ಪ್ರತ್ಯವದತ್ ಯಥೋಕ್ತಮಥಾಸ್ಯ ಮೃತ್ಯುಃ
ಪುನರಾಹ ತುಷ್ಟಃ ॥

### ಪ್ರತಿಪದಾರ್ಥ

ಲೋಕಾದಿಮ್—(ಮೇಲೆ ತಿಳಿಸಿದ ಸ್ಥಾನವಾದ) ಮೋಕ್ಷಕ್ಕೆ ಕಾರಣವಾದ, ತಮ್—ಆ, ಅಗ್ನಿಮ್—ಅಗ್ನಿಯನ್ನು (ಯಮನು), ತಸ್ಮೈ—ನಚಿಕೇತನಿಗೆ, ಉವಾಚ—ಹೇಳಿದನು. ಯಾ ಇಷ್ಟಕಾಃ—ಯಾವ (ಲಕ್ಷಣಗಳುಳ್ಳ) ಇಟ್ಟಿಗೆಗಳು, ಯಾವತೀಃ ವಾ—ಎಷ್ಟಿರಬೇಕೆಂಬುದನ್ನೂ, ಯಥಾ ವಾ—ಯಾವ ರೀತಿಯಲ್ಲಿ (ಜೋಡಿಸಬೇಕೆಂಬುದನ್ನೂ) ಹೇಳಿದನು. ಸ ಚಾಪಿ—ಆ ನಚಿಕೇತನೂ, ಯಥೋಕ್ತಮ್—ಯಮನು ಹೇಳಿದ ರೀತಿಯಲ್ಲಿ, ತತ್—ಅದೆಲ್ಲವನ್ನೂ, ಪ್ರತ್ಯವದತ್—ಯಮನು ಹೇಳಿದಂತೆಯೇ ಹೇಳಿದನು. ಅಥ—ಅನಂತರ, ಮೃತ್ಯುಃ—ಯಮನು, ಅಸ್ಯ—ಈ ನಚಿಕೇತನ, (ಗ್ರಹಣ-ಧಾರಣಶಕ್ತಿಯ ಬಗ್ಗೆ) ತುಷ್ಟಃ—ಸಂತೋಷಗೊಂಡವನಾಗಿ, ಪುನಃ—ತಿರುಗಿ, ಆಹ—ಹೇಳಿದನು.

### ತಾತ್ಪರ್ಯ

ಯಮನು ಅಗ್ನಿಯನ್ನು ಕುರಿತು ಉಪದೇಶಿಸುತ್ತಾ ಅಗ್ನಿಚಯನ ಸಾಧಕವಾದ ಇಟ್ಟಿಗೆಗಳ ಲಕ್ಷಣವನ್ನೂ, ಎಷ್ಟು ಇಟ್ಟಿಗೆಗಳು ಇರಬೇಕೆಂಬುದನ್ನೂ, ಹೇಗೆ ಅವುಗಳನ್ನು ಜೋಡಿಸಬೇಕೆಂಬುದನ್ನೂ ಹೇಳಿದನು. ನಚಿಕೇತನು ಅದನು ಕೇಳಿ ಯಮನು ಹೇಳಿದಂತೆಯೇ ಗ್ರಹಿಸಿ ಒಪ್ಪಿಸಿದನು. ಆಗ, ಯಮನು ನಚಿಕೇತನ ಗ್ರಹಣಸಾಮರ್ಥ್ಯಕ್ಕೆ ಸಂತೋಷಗೊಂಡು ಪುನಃ ಹೀಗೆ ಹೇಳಿದನು.

### ರಂಗರಾಮಾನುಜಭಾಷ್ಯಮ್

ಅನಂತರಂ ಶ್ರುತಿವಾಕ್ಯಮ್—ಲೋಕಾದಿಮಗ್ನಿಂ ತಮುವಾಚ ತಸ್ಮೈ । ಲೋಕಸ್ಯ-ಆದಿಮ್ ಹೇತುಮ್ ; ಸ್ವರ್ಗ್ಯಮಿತಿ ಯಾವತ್ । ತಮಗ್ನಿಮುವಾಚ । ಯಾ ಇಷ್ಟಕಾ ಯಾವತೀರ್ವಾ ಯಥಾ ವಾ । ಯಲ್ಲಕ್ಷಣಾ ಇಷ್ಟಕಾಶ್ಚೇತವ್ಯಾಃ, ಯತ್ಸಂಖ್ಯಾಕಾಃ, ಯೇನ ಪ್ರಕಾರೇಣ ಚೇತವ್ಯಾಃ, ತತ್ ಸರ್ವಮುಕ್ತವಾನ್ ಇತ್ಯರ್ಥಃ । ಯಾವತೀರಿತಿ ಪೂರ್ವಸವರ್ಣಶ್ಛಾಂದಸಃ । ಸ ಚಾಪಿ ತತ್ ಪ್ರತ್ಯವದತ್ ಯಥೋಕ್ತಮ್ । ಸ ಚ ನಚಿಕೇತಾಃ ತತ್ ಉಕ್ತಂ (ಶ್ರುತಂ) ಸರ್ವಂ ತಥೈವಾನೂದಿತವಾನ್ ಇತ್ಯರ್ಥಃ । ಅಥಾಸ್ಯ ಮೃತ್ಯುಃ ಪುನರಾಹ ತುಷ್ಟಃ। ಶಿಷ್ಯಸ್ಯ ಗ್ರಹಣಸಾಮರ್ಥ್ಯದರ್ಶನೇನ ಸಂತುಷ್ಟಸ್ಸನ್ ಮೃತ್ಯುಃ ಪುನರಪಿ ಉಕ್ತವಾನ್ ಇತ್ಯರ್ಥಃ ॥

ಅನಂತರ ಶ್ರುತಿವಾಕ್ಯವು. ಲೋಕಾದಿಮಗ್ನಿಂ ತಮುವಾಚ ತಸ್ಮೈ–ಲೋಕಕ್ಕೆ ಕಾರಣವಾದ, ಸ್ವರ್ಗ(ಮೋಕ್ಷ)ಸಾಧಕವಾದ ಎಂದು ತಾತ್ಪರ್ಯ. ಸ್ವರ್ಗಸಾಧಕವಾದ ಅಗ್ನಿಯನ್ನು ಉಪದೇಶಿಸಿದನು. ಯಾ ಇಷ್ಟಕಾ ಯಾವತೀರ್ವಾ ಯಥಾ ವಾ–ಯಾವರೀತಿಯ ಇಟ್ಟಿಗೆಗಳನ್ನು ಒಟ್ಟುಗೂಡಿಸಬೇಕು. ಇಟ್ಟಿಗೆಗಳ ಸಂಖ್ಯೆ ಎಷ್ಟು ? ಯಾವ ರೀತಿ ಜೋಡಿಸಬೇಕು–ಈ ಎಲ್ಲವನ್ನೂ ಹೇಳಿದನೆಂದರ್ಥ. 'ಯಾವತ್ಯಃ' ಎಂಬುದಕ್ಕೆ ಬದಲಾಗಿ 'ಯಾವತೀಃ' ಎಂಬ ರೂಪದಲ್ಲಿ 'ಇ'ಕಾರ ಸವರ್ಣವು ಬಂದಿರುವುದು ಆರ್ಷಪ್ರಯೋಗ. ಸ ಚಾಪಿ ತತ್ ಪ್ರತ್ಯವದತ್ ಯಥೋಕ್ತಮ್. ಸ ಚ–ನಚಿಕೇತನು, ತತ್–ಯಮನು ಉಪದೇಶಿಸಿದ (ತಾನು ಕೇಳಿದುದನ್ನು) ಎಲ್ಲವನ್ನೂ ಹಾಗೆಯೇ ಹೇಳಿದನು. ಅಥಾಸ್ಯ ಮೃತ್ಯುಃ ಪುನರಾಹ ತುಷ್ಟಃ–ಶಿಷ್ಯನ (ನಚಿಕೇತನ) ತಿಳಿಯುವ ಸಾಮರ್ಥ್ಯವನ್ನು ನೋಡಿ ಸಂತೋಷಗೊಂಡವನಾಗಿ ಯಮನು ತಿರುಗಿ ಹೇಳಿದನು ಎಂದರ್ಥ.

### ಭಾಷ್ಯಸಾರ

ಶ್ರುತಿಯು ನಮ್ಮನ್ನು ಎಚ್ಚರಿಸಲು ಈ ಮಾತನ್ನು ಹೇಳುತ್ತಿದೆ. ಯಮನು ಉಪಾಸನೆಯಿಂದ ಮೋಕ್ಷವನ್ನು (ನಾಕೇತವನ್ನು) ಪಡೆಯಲು ಕಾರಣವಾದ (ನಚಿಕೇತನು ಪ್ರಾರ್ಥಿಸಿದ) ಅಗ್ನಿವಿದ್ಯೆಯನ್ನು ನಚಿಕೇತನಿಗೆ ಉಪದೇಶಿಸಿದನು. ಅಗ್ನಿವಿದ್ಯೆಯ ಅನುಷ್ಠಾನಕ್ಕೆ ಯಾವ ರೀತಿಯ ಇಟ್ಟಿಗೆಗಳು ಬೇಕು ? ಎಷ್ಟು ಬೇಕು ? ಅವುಗಳನ್ನು ಯಾವ ರೀತಿಯಲ್ಲಿ ಜೋಡಿಸಬೇಕು ? ಎಂಬ ಎಲ್ಲ ವಿಷಯಗಳನ್ನೂ ಹೇಳಿದನು. ಈ ಅಗ್ನಿವಿದ್ಯೆಯು ಉಪಾಸನಾಂಗವಾದ ಕ್ರಿಯೆ. ಈ ಕ್ರಿಯೆಗೆ ಬೇಕಾದ ಯಜ್ಞವೇದಿಕಾ ನಿರ್ಮಾಣದಿಂದ ಹಿಡಿದು ಎಲ್ಲವನ್ನೂ ವಿವರವಾಗಿ ಹೇಳಿದನು ಎಂದು ತಾತ್ಪರ್ಯ.

ನಚಿಕೇತನು ಮೃತ್ಯುವು ಉಪದೇಶಿಸಿದ ವಿಷಯಗಳನ್ನು ಸಾವಧಾನದಿಂದ ಆಲಿಸಿದನು. ತನ್ನ ಗ್ರಹಣ–ಧಾರಣಶಕ್ತಿಗಳಿಂದ ಮೃತ್ಯು ಉಪದೇಶಿಸಿದಂತೆಯೇ ಒಪ್ಪಿಸಿದನು. ಆಗ ನಚಿಕೇತನ ಗ್ರಹಣ–ಧಾರಣ–ಅನುವಚನ ಸಾಮರ್ಥ್ಯವನ್ನು ಕಂಡು ಸಂತೋಷಗೊಂಡ ಯಮನು ಮುಂದಿನ ಮಂತ್ರದಲ್ಲಿ ತಿಳಿಸುವಂತೆ ಮತ್ತೊಂದು ವರವನ್ನು ಕೊಡುವುದಾಗಿ ಹೇಳಿದನು.

'ಈ ಮಂತ್ರದಲ್ಲಿ 'ಇಷ್ಟಕಾ' ಎಂಬ ಪದದಿಂದ ಒಂದು ಸಂವತ್ಸರದಲ್ಲಿ ಪ್ರಾತಃಕಾಲ–ಸಂಧ್ಯಾಕಾಲಗಳಲ್ಲಿ ಮಾಡಬೇಕಾದ ಅಗ್ನಿಕಾರ್ಯಗಳು ವಿವಕ್ಷಿತವಾಗಿವೆ. ಈ ಅಗ್ನಿಕಾರ್ಯಗಳು ಒಟ್ಟು 720. ಈ ಅಗ್ನಿವಿದ್ಯೆಯ ಇಟ್ಟಿಗೆಗಳ ಸಂಖ್ಯೆಯೂ 720. 'ಯಥಾ' ಎಂಬ ಶಬ್ದದಿಂದ ಇಟ್ಟಿಗೆಗಳನ್ನು ಕುರಿತ ಯಾವ ಯಾವ ಮಂತ್ರಗಳಿವೆಯೋ ಆಯಾಯಾ ಮಂತ್ರಗಳೊಡನೆ ಯಮನು ನಚಿಕೇತನಿಗೆ ಅಗ್ನಿವಿದ್ಯೆಯನ್ನು ಉಪದೇಶಿಸಿದನು. ನಚಿಕೇತನೂ ಆಯಾಯಾ ಮಂತ್ರಗಳನ್ನು ಪುನರುಚ್ಚರಿಸಿದನು ಎಂದು ತಾತ್ಪರ್ಯ. ಇದರ ಬಗ್ಗೆ ವಿಶೇಷ ವಿಷಯಗಳನ್ನು ಚಯನ ಪ್ರಕರಣದಿಂದ ತಿಳಿಯಬಹುದು' ಎಂದು ರಾಮಾನಂದರು ತಿಳಿಸಿರುತ್ತಾರೆ.

## ಮಂತ್ರ ೧೬

**तमब्रवीत् प्रीयमाणो महात्मा वरं तवेहाद्य ददानि(मि)भूयः ।**
**तवैव नाम्ना भविताऽयमग्निः सृङ्कांञ्चेमामनेकरूपां गृहाण ॥**

ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ ವರಂ
ತವೇಹಾದ್ಯ ದದಾನಿ(ಮಿ) ಭೂಯಃ ।
ತವೈವ ನಾಮ್ನಾ ಭವಿತಾಽಯಮಗ್ನಿಃ ಸೃಂಕಾಂ ಚೇಮಾಮನೇಕ
ರೂಪಾಂ ಗೃಹಾಣ ॥

### ಪ್ರತಿಪದಾರ್ಥ

**ಮಹಾತ್ಮಾ**—ಉದಾರಿಯಾದ (ಯಮನು), **ಪ್ರೀಯಮಾಣಃ**—ಪ್ರೀತಿಯುಳ್ಳವನಾಗಿ, **ತಮ್**—ಆ ನಚಿಕೇತನನ್ನು (ಕುರಿತು), **ಅಬ್ರವೀತ್**—ಹೇಳಿದನು. **ತವ**—ನಿನಗೆ, **ಇಹ**—ಈ ಲೋಕದಲ್ಲಿ (ಪ್ರಸಿದ್ಧವಾದ), **ವರಮ್**—ವರವನ್ನು, **ಭೂಯಃ**—ತಿರುಗಿ, **ಅದ್ಯ**—ಈಗ, **ದದಾಮಿ**—(ನಾಲ್ಕನೆಯ ವರವನ್ನು) ಕೊಡುತ್ತೇನೆ. **ಅಯಮ್**—ಈ, **ಅಗ್ನಿಃ**—ಅಗ್ನಿಯು, **ತವೈವ ನಾಮ್ನಾ**—ನಿನ್ನ ಹೆಸರಿನಿಂದಲೇ, **ಭವಿತಾ**—ಪ್ರಸಿದ್ಧವಾಗುತ್ತದೆ. **ಅನೇಕರೂಪಾಮ್**—ಅನೇಕ ವಿಧವಾದ ಅಂದರೆ ವಿಚಿತ್ರವಾದ, **ಇಮಾಮ್**—ಈ, **ಸೃಂಕಾಂ ಚ**—ಧ್ವನಿ ಮಾಡುವ ರತ್ನಹಾರವನ್ನೂ, **ಗೃಹಾಣ**—ಸ್ವೀಕರಿಸು.

### ತಾತ್ಪರ್ಯ

ಉದಾರಿಯಾದ ಯಮನು ನಚಿಕೇತನ ಬುದ್ಧಿಶಕ್ತಿಗೆ ಮೆಚ್ಚಿ ಹೇಳಿದನು. ನಿನಗೆ ನಾನು ಮತ್ತೊಂದು ವರವನ್ನು ಕರುಣಿಸುವೆ. ನಿನಗೆ ನಾನು ಉಪದೇಶಿಸಿದ ಈ ಅಗ್ನಿಯು 'ನಾಚಿಕೇತಾಗ್ನಿ' ಎಂದು ಪ್ರಸಿದ್ಧವಾಗುವುದು. ಅಲ್ಲದೆ ವಿಚಿತ್ರ ಕಾಂತಿಯಿಂದ ಕೂಡಿ, ಧ್ವನಿಮಾಡುವ ಈ ರತ್ನಹಾರವನ್ನೂ ಸ್ವೀಕರಿಸು ಎಂದು ಹೇಳಿದನು.

### ರಂಗರಾಮಾನುಜಭಾಷ್ಯಮ್

**ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ** । ಸಂತುಷ್ಯನ್ ಮಹಾಮನಾ ಮೃತ್ಯುಃ ನಚಿಕೇತಸಮ್ ಅಬ್ರವೀತ್ । ವರಂ **ತವೇಹಾದ್ಯ** ದದಾನಿ(ಮಿ) ಭೂಯಃ । ಪುನಃ ಚತುರ್ಥಂ ವರಂ ದದಾನಿ–ಪ್ರಯಚ್ಛಾನೀತಿ (ವರಂ ಪ್ರಯಚ್ಛಾಮೀತಿ) । ಕಿಂ ತತ್ ? ತತ್ರಾಹ–**ತವೈವ ನಾಮ್ನಾ ಭವಿತಾಯಮಗ್ನಿಃ** । ಮಯಾ ಉಚ್ಯಮಾನಃ ಅಗ್ನಿಃ ತವೈವ ನಾಮ್ನಾ 'ನಾಚಿಕೇತಃ' ಇತಿ ಪ್ರಸಿದ್ಧೋ ಭವಿತಾ । ಕಿಂಚ **ಸೃಂಕಾಮ್ ಚೇಮಾಮನೇಕ ರೂಪಾಂ ಗೃಹಾಣ**–ವಿಚಿತ್ರಾಂ ಸೃಂಕಾಮ್ ಶಬ್ದವತೀಂ ರತ್ನಮಾಲಾಂ ಸ್ವೀಕುರು ಇತ್ಯರ್ಥಃ ॥

## ಅನುವಾದ

ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ–ಉದಾರಿಯಾದ ಯಮನು ಸಂತುಷ್ಟನಾಗಿ ನಚಿಕೇತನನ್ನು ಕುರಿತು ಹೇಳಿದನು. ವರಂ ತವೇಹಾದ್ಯ ದದಾನಿ(ಮಿ) ಭೂಯಃ–ಪುನಃ ನಾಲ್ಕನೆಯ ವರವನ್ನು ಕೊಡುತ್ತೇನೆ ಎಂದು. ಆ ವರವಾವುದು ? ಎಂಬಲ್ಲಿ ಹೇಳುತ್ತಾನೆ. ತವೈವ ನಾಮ್ನಾ ಭವಿತಾಽಯಮಗ್ನಿಃ–ನಾನು ಉಪದೇಶಿಸುವ ಅಗ್ನಿಯು ನಿನ್ನ ಹೆಸರಿನಿಂದಲೇ ಅಂದರೆ ನಾಚಿಕೇತಾಗ್ನಿ ಎಂದೇ ಪ್ರಸಿದ್ಧವಾಗುವುದು ಮತ್ತು ಸೃಂಕಾಂ ಚೇಮಾಮನೇಕರೂಪಾಂ ಗೃಹಾಣ–ವಿಚಿತ್ರ(ಆಶ್ಚರ್ಯ)ಕರವಾದ ಸೃಂಕಾಮ್–ಧ್ವನಿಗೈಯ್ಯುತ್ತಿರುವ ಈ ರತ್ನಹಾರವನ್ನು ತೆಗೆದುಕೋ ಎಂದರ್ಥ.

## ಭಾಷ್ಯಸಾರ

ಯಮನು ನಚಿಕೇತನ ಗ್ರಹಣಧಾರಣಪಟುತ್ವವನ್ನೂ, ತಿಳಿದ ವಿಷಯವನ್ನು ಚಾಚೂ ತಪ್ಪದೇ ಒಪ್ಪಿಸುವ ಸಾಮರ್ಥ್ಯವನ್ನೂ ಕಂಡು ಸಂತೋಷಗೊಂಡನು. ಇವರಿಂದ ಅವನಿಗೆ ನಚಿಕೇತನಲ್ಲಿ ಪ್ರೀತಿ ಹೆಚ್ಚಿತು. ಯಮನು ಮೊದಲೇ ಉದಾರಿ. ಇದರ ಮೇಲೆ ಪ್ರೀತಿಯ ಆಧಿಕ್ಯ. ಕೂಡಲೇ ಎಲೈ ನಚಿಕೇತನೇ ! ನಿನ್ನಲ್ಲಿ ನಾನು ಪ್ರಸನ್ನನಾಗಿರುವೆನು. ಆದಕಾರಣ, ನಿನಗೆ ನಾನು ಮತ್ತೊಂದು ವರವನ್ನು ಕೊಡಲು ಇಚ್ಛಿಸುತ್ತೇನೆ. ಅದರಂತೆ ನಾನು ನಿನಗೆ ಉಪದೇಶಿಸಿದ ಈ ಅಗ್ನಿಯು 'ನಾಚಿಕೇತಾಗ್ನಿ' ಎಂದು ಪ್ರಸಿದ್ಧಿ ಹೊಂದುವುದು. ಕೆಂಪು, ನೀಲಿ, ಬಿಳಿ, ಹಸಿರು ಬಣ್ಣಗಳಿಂದ ಕೂಡಿ ಆಶ್ಚರ್ಯಕರವಾಗಿರುವ, ಕಿವಿಗಿಂಪಾದ ಧ್ವನಿ ಮಾಡುತ್ತಿರುವ ಈ ರತ್ನಹಾರವನ್ನೂ ಸ್ವೀಕರಿಸು ಎಂದನು.



## ಮಂತ್ರ ೧೭

**त्रिणाचिकेतस्त्रिभिरेत्य सन्धिं त्रिकर्मकृत् तरति जन्ममृत्यू ।**
**ब्रह्मजज्ञं देवमीड्यं विदित्वा[1] निचाय्येमां[2] शान्तिमत्यन्तमेति ॥**

ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ ತರತಿ
ಜನ್ಮಮೃತ್ಯೂ ।
ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ ನಿಚಾಯ್ಯೇಮಾಂ
ಶಾಂತಿಮತ್ಯಂತಮೇತಿ ॥

### ಪ್ರತಿಪದಾರ್ಥ

ತ್ರಿಣಾಚಿಕೇತಃ—ನಾಚಿಕೇತಾಗ್ನಿಯನ್ನು ಮೂರು ಸಲ ಚಯನ ಮಾಡಿದವನು, ತ್ರಿಕರ್ಮಕೃತ್—ಯಜನ-ಅಧ್ಯಯನ-ದಾನಗಳನ್ನು ಮಾಡುವಾತನು ಅಥವಾ ಪಾಕಯಜ್ಞ-ಹವಿರ್ಯಜ್ಞ-ಸೋಮಯಜ್ಞಗಳನ್ನು ಮಾಡಿದವನು.ತ್ರಿಭಿಃ—ಮೂರುಸಲ ಅಗ್ನಿಚಯನ ಮಾಡುವುದರಿಂದ, ಸಂಧಿಮ್-ಪರಮಾತ್ಮನ ಉಪಾಸನೆಯಿಂದ (ಜೀವ-ಪರಮಾತ್ಮ) ಸಂಬಂಧವನ್ನು, ಏತ್ಯ—ಹೊಂದಿ (ತಿಳಿದು), ಜನ್ಮಮೃತ್ಯೂ—ಜನನ ಮರಣಗಳನ್ನು, ತರತಿ—ದಾಟುತ್ತಾನೆ (ಮೋಕ್ಷವನ್ನು ಹೊಂದುತ್ತಾನೆ.) ಬ್ರಹ್ಮಜಜ್ಞಮ್-ಜೀವಸ್ವರೂಪವನ್ನು, ವಿದಿತ್ವಾ—ತಿಳಿದು, ಈಡ್ಯಂ—ಸ್ತುತಿಗೆ ಅರ್ಹನಾದ, ದೇವಮ್—ಪರಮಾತ್ಮನನ್ನು, ನಿಚಾಯ್ಯ—ಸಾಕ್ಷಾತ್ಕಾರ ಮಾಡಿಕೊಂಡು, ಇಮಾಮ್—(ಸಾಂಸಾರಿಕ ದುಃಖಪರಿಹಾರಕವಾದ) ಈ, ಶಾಂತಿಮ್—ಶಾಂತಿಯನ್ನು. ಅತ್ಯಂತಮೇತಿ—ವಿಶೇಷವಾಗಿ ಹೊಂದುತ್ತಾನೆ.

### ತಾತ್ಪರ್ಯ

'ಅಯಂ ವಾವ ಯಃ ಪವತೇ' ಇತ್ಯಾದಿ ಅನುವಾಕತ್ರಯವನ್ನು ಅಧ್ಯಯನ ಮಾಡಿದವನು, ಯಜನ–ಅಧ್ಯಯನ–ದಾನಕರ್ಮಗಳನ್ನು ಮಾಡಿದವನು ಅಥವಾ ಪಾಕಯಜ್ಞ, ಹವಿರ್ಯಜ್ಞ, ಸೋಮಯಜ್ಞಗಳನ್ನು ಮಾಡಿದವನು ನಾಚಿಕೇತಾಗ್ನಿಯನ್ನು ಚಯನ ಮಾಡುವುದರಿಂದ ಪರಮಾತ್ಮೋಪಾಸನದಿಂದ ಜೀವ-ಪರಮಾತ್ಮ ಸಂಬಂಧವನ್ನು ಹೊಂದುತ್ತಾನೆ. ಇದರಿಂದ ಮೋಕ್ಷ ಲಭಿಸುತ್ತದೆ. ಮೋಕ್ಷಕ್ಕೆ ಕಾರಣವಾದ ಪರಮಾತ್ಮೋಪಾಸನ ಸ್ವರೂಪವನ್ನು ವಿವರಿಸುತ್ತಾನೆ. ಉಪಾಸಕನಾದ ಜೀವಾತ್ಮನ ಸ್ವರೂಪವನ್ನೂ, ಉಪಾಸ್ಯನಾದ ಪರಮಾತ್ಮನ ಸ್ವರೂಪವನ್ನೂ ಸಾಕ್ಷಾತ್ಕರಿಸಿ ಮೋಕ್ಷದಲ್ಲಿ ಪಡೆಯಬಹುದಾದ ನಿರತಿಶಯವಾದ ಶಾಂತಿಯನ್ನೂ ಹೊಂದುತ್ತಾನೆ.

---

1 'ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' ಎಂದು ಸಾಮಾನಾಧಿಕರಣ್ಯವು ತೋರುವುದರಿಂದ ಜೀವಬ್ರಹ್ಮರಿಗೆ ಅಭೇದವು ಭಾಸವಾಗುತ್ತದೆ ಎಂಬ ಸಂದೇಹ ಸಲ್ಲದು. ಜೀವಬ್ರಹ್ಮರಿಗೆ ಅಭೇದ ಅಸಂಭವ. ಪರಮಾತ್ಮನನ್ನೇ ಆತ್ಮವಾಗಿವುಳ್ಳ ಎಂದು ಅರ್ಥಮಾಡುವುದರಿಂದ ಸಾಮಾನಾಧಿಕರಣ್ಯವನ್ನು ಸುಲಭವಾಗಿ ಪ್ರತಿಪಾದಿಸಬಹುದು.

2 'ಇಮಾಮ್' ಎಂಬ ವಿಶೇಷಣದಿಂದ ಶಾಂತಿಯು ಬುದ್ಧಿಗೆ ನಿಲುಕುತ್ತದೆ ಎಂದು ಸೂಚಿತವಾಗುತ್ತದೆ.

## ರಂಗರಾಮಾನುಜಭಾಷ್ಯಮ್

ಪುನರಪಿ ಕರ್ಮ ಸ್ತೌತಿ–ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ। ತ್ರಿಣಾಚಿಕೇತಃ–'ಅಯಂ ವಾವ ಯಃ ಪವತೇ' ಇತ್ಯಾದ್ಯನುವಾಕತ್ರಯಾಧ್ಯಾಯೀ। ತ್ರಿಕರ್ಮಕೃತ್–ಯಜನಾಧ್ಯಯನದಾನ[1]ಕೃತ್ ಪಾಕಯಜ್ಞ–ಹವಿರ್ಯಜ್ಞ–ಸೋಮಯಜ್ಞ[2]ಕೃದ್ವಾ, ತ್ರಿಭಿಃ ಅಗ್ನಿಭಿಃ ತ್ರಿರನುಷ್ಠಿತೈರಗ್ನಿಭಿಃ[3] (ಹೇತುಭಿಃ ?) ಸಂಧಿಮ್–ಪರಮಾತ್ಮೋಪಾಸನೇನ ಸಂಬಂಧಮ್, ಏತ್ಯ–ಪ್ರಾಪ್ಯ ಜನ್ಮಮೃತ್ಯೂ ತರತೀತ್ಯರ್ಥಃ; 'ಕರೋತಿ ತತ್ ಯೇನ ಪುನರ್ನ ಜಾಯತೇ'[4] (ಕ.ಉ. 1–19) ಇತಿ ಅನೇನ ಐಕಾರ್ಥ್ಯಾತ್। ಏವಮೇವ ಹಿ ಅಯಮ್ ಮಂತ್ರಃ 'ತ್ರಯಾಣಾಮೇವ ಚೈವಮ್' (1–4–6) ಇತಿ ಸೂತ್ರೇ ವ್ಯಾಸಾರ್ಯೈರ್ವಿವೃತಃ। ತ್ರಿಭಿರೇತ್ಯ ಸಂಧಿಮಿತಿ ನಿರ್ದಿಷ್ಟಮಂಗಿಭೂತಂ ಪರಮಾತ್ಮೋಪಾಸನಮಾಹ–ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ। ಅಯಂ ಮಂತ್ರಖಂಡಃ, 'ವಿಶೇಷಣಾಚ್ಚ' (1–2–12) ಇತಿ ಸೂತ್ರಭಾಷ್ಯೇ, 'ಬ್ರಹ್ಮಜಜ್ಞಂ–ಜೀವಃ। ಬ್ರಹ್ಮಣೋ ಜಾತತ್ವಾತ್ ಜ್ಞತ್ವಾಚ್ಚ। ತಂ ದೇವಮೀಡ್ಯಂ ವಿದಿತ್ವಾ–ಜೀವಾತ್ಮಾನಮುಪಾಸಕಂ ಬ್ರಹ್ಮಾತ್ಮಕತ್ವೇನ ಅವಗಮ್ಯ ಇತ್ಯರ್ಥಃ' ಇತಿ ವಿವೃತಃ। ದೇವಶಬ್ದಸ್ಯ ಪರಮಾತ್ಮವಾಚಿತಯಾ ಜೀವಪರಯೋಶ್ಚ ಐಕ್ಯಾಸಂಭವಾದತ್ರತ್ಯ ದೇವಶಬ್ದಸ್ಯ ಪರಮಾತ್ಮಾತ್ಮಕತ್ವಪರ್ಯಂತೋಽರ್ಥಃ ಇತಿ ಭಾಷ್ಯಾಭಿಪ್ರಾಯಃ। ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ। ನಿಚಾಯ್ಯ–ಬ್ರಹ್ಮಾತ್ಮಕಂ ಸ್ವಾತ್ಮಾನಂ ಸಾಕ್ಷಾತ್ಕೃತ್ಯ। ಇಮಾಮ್ 'ತ್ರಿಕರ್ಮಕೃತ್ತರತಿ' ಇತಿ ಪೂರ್ವಮಂತ್ರನಿರ್ದಿಷ್ಟಾಂ ಸಂಸಾರರೂಪಾನರ್ಥಶಾಂತಿಮೇತಿ ಇತ್ಯರ್ಥಃ ॥

## ಅನುವಾದ

ಪುನಃ ಕರ್ಮವನ್ನು ಸ್ತುತಿಸುತ್ತಾನೆ. ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ। ತ್ರಿಣಾಚಿಕೇತಃ–'ಅಯಂ ವಾವ ಯಃ ಪವತೇ' (ತೈ.ಬ್ರಾ. 3–11–7) ಮುಂತಾದ ಮೂರು ಅನುವಾಕಗಳನ್ನು ಅಧ್ಯಯನ ಮಾಡಿರುವವನು. ತ್ರಿಕರ್ಮಕೃತ್–ಯಜನ–ಅಧ್ಯಯನ–ದಾನ ಮಾಡುವವನು, ಅಥವಾ ಪಾಕಯಜ್ಞ–ಹವಿರ್ಯಜ್ಞ-ಸೋಮಯಜ್ಞ ಮಾಡುವವನು ತ್ರಿಭಿಃ-ಮೂರು ಸಲ ಅನುಷ್ಠಿತೈಃ ಅಗ್ನಿಭಿಃ ಅನುಷ್ಠಿಸಿದ ಅಗ್ನಿಗಳಿಂದ,

---

1 ಯಜನ–ಜ್ಯೋತಿಷ್ಟೋಮ ಮುಂತಾದ ಯಾಗಗಳು. ಅಧ್ಯಯನ–ಗುರುವಿನ ಉಚ್ಚಾರಣೆಯನ್ನು ಅನುಸರಿಸಿ ವೇದಭಾಗದ ಉಚ್ಚಾರಣೆ. ದಾನ–ವಸ್ತು–ವೇದಿ–ಪಾತ್ರ-ಪುರುಷರಿಗಾಗಿ ವಸ್ತುಗಳನ್ನು ಕೊಡುವುದು.

2 ಪಾಕಯಜ್ಞ-ಹವಿರ್ಯಜ್ಞ-ಸೋಮಯಜ್ಞ—ದೇವತೆಗಳಿಗೆ ತಮ್ಮ ವಸ್ತುಗಳನ್ನು ಕೊಡುವುದು ಯಜ್ಞ. ಯಜ್ಞವು ಇಪ್ಪತ್ತೊಂದು (7 ಪಾಕಯಜ್ಞ, 7 ಹವಿರ್ಯಜ್ಞ, 7 ಸೋಮಯಜ್ಞ) ವಿಭಾಗಗಳನ್ನೊಳಗೊಂಡಿದೆ. ಪಾಕಯಜ್ಞ ಔಪಾಸನ–ವೈಶ್ವದೇವ–ಪಾರ್ವಣಾ–ಅಷ್ಟಕಾ–ಮಾಸಿಶ್ರಾದ್ಧ–ಸರ್ಪಬಲಿ–ಈಶಾನಬಲಿ ಇವು ಏಳು. ಹವಿರ್ಯಜ್ಞ—ಅಗ್ನಿಹೋತ್ರ-ದರ್ಶಪೂರ್ಣಮಾಸ-ಆಗ್ರಯಣ-ಪಿಂಡಪಿತೃಯಜ್ಞ-ಚಾತುರ್ಮಾಸ್ಯ-ನಿರೂಢಪಶುಬಂಧ-ಸೌತ್ರಾಮಣಿ ಇವು ಏಳು. ಸೋಮಯಜ್ಞ—ಅಗ್ನಿಷ್ಟೋಮ-ಅತ್ಯಗ್ನಿಷ್ಟೋಮ-ಉಕ್ಥ್ಯ, ಷೋಡಶೀ-ವಾಜಪೇಯ-ಅತಿರಾತ್ರ-ಅಪ್ತೋರ್ಯಾಮ ಇವು ಏಳು.

3 ಅನುಷ್ಠಿತೈಃ ಅಗ್ನಿಭಿಃ—ಅಗ್ನಿಚಯನ ಎಂದರ್ಥ. ಅಗ್ನಿಚಯನ ಎಂದರೆ ಇಟ್ಟಿಗೆಗಳಿಂದ ವೇದಿಕಾ ನಿರ್ಮಾಣ ಮೊದಲ್ಗೊಂಡು ಮಾಡಬೇಕಾದ ಯಾಗದ ಕ್ರಿಯೆಗಳೆಲ್ಲವೂ ಚಯನ ಎನಿಸಿಕೊಳ್ಳುತ್ತದೆ. ಹೀಗೆ ನಾಚಿಕೇತಾಗ್ನಿಯನ್ನು ಮೂರು ಸಲ ಚಯನ ಮಾಡಿದವರಿಗೆ ಪರಮಾತ್ಮನ ಉಪಾಸನೆಯೊಡನೆ ಸಂಬಂಧ ಏರ್ಪಡುತ್ತದೆ ಎಂದು ತಾತ್ಪರ್ಯ.

4 ನಜಾಯತೇ—ಯಾವನು ತಾನು ಬ್ರಹ್ಮವನ್ನು ಆತ್ಮವನ್ನಾಗಿ ಉಳ್ಳವನು ಎಂದರಿತು ನಾಚಿಕೇತಾಗ್ನಿಚಯನ ಮಾಡುವನೋ ಅವನು ಪುನಃ ಹುಟ್ಟುವುದಿಲ್ಲ.

(ಕಾರಣಗಳಿಂದ) ಸಂಧಿಮ್–ಪರಮಾತ್ಮೋಪಾಸನೆಯೊಡನೆ ಸಂಬಂಧವನ್ನು ಏತ್ಯ–ಹೊಂದಿ, ಜನನ–ಮರಣಗಳನ್ನು ದಾಟುತ್ತಾನೆ ಎಂದರ್ಥ. ಇದು ' ಕರೋತಿ ತತ್‌ಯೇನ ಪುನಃ ನ ಜಾಯತೇ' (ಕ.ಉ. 1–19) ಎಂಬುದರೊಡನೆ ಸಮಾನವಾದ ಅರ್ಥವುಳ್ಳದ್ದಾಗಿದೆ. ಈ ಮಂತ್ರವನ್ನು 'ತ್ರಯಾಣಾಮೇವ ಚೈವಮ್' (ಬ್ರ.ಸೂ. 1–4–6) ಎಂಬ ಸೂತ್ರದಲ್ಲಿ ಶ್ರುತಪ್ರಕಾಶಿಕಾಚಾರ್ಯರು ವಿವರಿಸಿರುವರು. 'ತ್ರಿಭಿರೇತ್ಯಸಂಧಿಮ್' ಎಂಬುದರಿಂದ ಹೇಳಿದ ಅಂಗಿಯೆನಿಸಿದ ಪರಮಾತ್ಮನ ಉಪಾಸನೆಯನ್ನು 'ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' ಎಂಬುದರಿಂದ ತಿಳಿಸುತ್ತಾನೆ. ಈ ಮಂತ್ರಭಾಗವನ್ನು 'ವಿಶೇಷಣಾಚ್ಚ' (ಬ್ರ.ಸೂ. 1–2–12) ಎಂಬ ಸೂತ್ರಭಾಷ್ಯದಲ್ಲಿ (ಬ್ರಹ್ಮನಿಂದ ಜನಿಸಿದ್ದರಿಂದಲೂ, ತಿಳಿದಿದ್ದರಿಂದಲೂ) ಬ್ರಹ್ಮಜಜ್ಞಃ ಅಂದರೆ ಜೀವನು ತಂ ದೇವಮೀಡ್ಯಂ ವಿದಿತ್ವಾ–ಉಪಾಸಕನಾದ ಜೀವಾತ್ಮನನ್ನು, ಬ್ರಹ್ಮವನ್ನು ಆತ್ಮವಾಗಿ ಉಳ್ಳವನೆಂದು ತಿಳಿದು ಎಂದರ್ಥ' ಎಂದು ವಿವರಿಸಿರುವರು. ದೇವ ಶಬ್ದವು ಪರಮಾತ್ಮವಾಚಕವಾದುದರಿಂದ, ಜೀವ–ಪರಮಾತ್ಮರಲ್ಲಿ ಐಕ್ಯಸಂಭವಿಸದ ಕಾರಣ ಇಲ್ಲಿರುವ ದೇವ ಶಬ್ದಕ್ಕೆ ಪರಮಾತ್ಮನನ್ನು ಆತ್ಮವನ್ನಾಗಿ ಉಳ್ಳವನು ಎಂಬುವವರೆಗೂ ಅರ್ಥ ಎಂದು ಭಾಷ್ಯದ ಅಭಿಪ್ರಾಯ. ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ. ನಿಚಾಯ್ಯ–ಜೀವಾತ್ಮನು ಬ್ರಹ್ಮವನ್ನು ಆತ್ಮವಾಗಿ ಉಳ್ಳವನು ಎಂಬುದನ್ನು ಅರಿತು ಇಮಾಮ್–'ತ್ರಿಕರ್ಮಕೃತ್ತರತಿ' ಎಂಬ ಮಂತ್ರದ ಪೂರ್ವಾರ್ಧದಲ್ಲಿ ಹೇಳಿರುವ ಸಂಸಾರವೆಂಬ ಅನರ್ಥದ ಶಾಂತಿಯನ್ನು ಹೊಂದುತ್ತಾನೆ ಎಂದರ್ಥ.

## ಭಾಷ್ಯಸಾರ

ಯಮನು ತಾನು ಉಪದೇಶಿಸಿದ ಅಗ್ನಿವಿದ್ಯೆಯು ನಾಚಿಕೇತಾಗ್ನಿ ಎಂದು ಪ್ರಸಿದ್ಧವಾಗಲಿ ಎಂದು ಅನುಗ್ರಹಿಸಿದನು. ಈ ಅಗ್ನಿಕರ್ಮವನ್ನು ಪುನಃ ಪ್ರಶಂಸಿಸುತ್ತಾನೆ. ಯಜನ–ಅಧ್ಯಯನ–ದಾನವೆಂಬ ಮೂರು ಕರ್ಮಗಳನ್ನು ಮಾಡಿದವನು. ಅಥವಾ 'ಅಯಂ ವಾವ ಯಃ ಪವತೇ' ಎಂಬ ಮೂರು ಅನುವಾಕಗಳನ್ನು ಅಧ್ಯಯನ ಮಾಡಿದವನು ಅಥವಾ ಪಾಕಯಜ್ಞ–ಹವಿರ್ಯಜ್ಞ–ಸೋಮಯಜ್ಞಗಳನ್ನು ಮಾಡಿದವನು. ಮೂರು ಸಲ ನಾಚಿಕೇತಾಗ್ನಿಯನ್ನು ಅನುಷ್ಠಿಸಿ, ಪರಮಾತ್ಮೋಪಾಸನೆಯ ಸಂಬಂಧವನ್ನು ಹೊಂದುತ್ತಾನೆ. ಇದರಿಂದ ಜನನ–ಮರಣಗಳಿಂದ ಪಾರಾಗುತ್ತಾನೆ. ಪರಮಾತ್ಮನ ಉಪಾಸನಾ ರೂಪವಾಗಿ ಅನುಷ್ಠಿಸಿದ ನಾಚಿಕೇತಾಗ್ನಿಯು ಮೋಕ್ಷಕ್ಕೆ ಕಾರಣವಾಗುತ್ತದೆ ಎಂದು ತಾತ್ಪರ್ಯ.

ಪರಮಾತ್ಮೋಪಾಸನೆ ಅಂಗಿ. ನಾಚಿಕೇತಾಗ್ನಿ ಅಂಗ. ಈ ಅಂಗಿರೂಪವಾದ ಪರಮಾತ್ಮನ ಉಪಾಸನಾ ಸ್ವರೂಪವನ್ನು ಮುಂದೆ ಹೀಗೆ ವಿವರಿಸುತ್ತಾನೆ. ಬ್ರಹ್ಮ ಸಕಲ ಜಗತ್ತಿಗೂ ಕಾರಣ. ಈತನಿಂದ ಜನಿಸಿದವನು ಜೀವ. ಬ್ರಹ್ಮವನ್ನು ಅರಿತವನು. ಪರಮಾತ್ಮನು ಸ್ತುತಿಗೆ ಅರ್ಹನು. ಎಲ್ಲ ಕಡೆಯಲ್ಲೂ ಪ್ರಕಾಶಿಸುವವನು ಈ ದೇವನು. ಜೀವನಿಗೂ ಆತ್ಮವಾಗಿ ಉಳ್ಳವನು. ಹೀಗೆ ಪರಮಾತ್ಮನನ್ನು ಆತ್ಮವಾಗಿ ಉಳ್ಳ ಜೀವಸ್ವರೂಪವನ್ನು ಶಾಸ್ತ್ರದಿಂದ ಅಥವಾ ಗುರುವಿನ ಉಪದೇಶದಿಂದ ಅರಿಯಬೇಕು ಅಥವಾ ಬ್ರಹ್ಮನಿಂದ ಜನಿಸಿದವನೂ, ಅವನನ್ನು ತಿಳಿದಿರುವವನೂ ಆದ ಜೀವನ ಸ್ವರೂಪವನ್ನೂ, ಸ್ತುತ್ಯರ್ಹನೂ, ಎಲ್ಲ ಕಡೆಯೂ ಪ್ರಕಾಶಿಸುವವನೂ ಆದ ಪರಮಾತ್ಮನ ಸ್ವರೂಪವನ್ನೂ ಗುರೂಪದೇಶದಿಂದ ಅರಿಯಬೇಕು. ಧ್ಯಾನದಿಂದ ಸಾಕ್ಷಾತ್ಕರಿಸಿಕೊಳ್ಳಬೇಕು. ಆ ಸಂಸಾರರೂಪದಲ್ಲಿರುವ ಅನರ್ಥಗಳೆಲ್ಲವೂ ನಶಿಸಿ ಶಾಶ್ವತವಾದ ತನ್ನ ಬುದ್ಧಿಗೆ ಸಮೀಪವಾಗಿ ನಿಲುಕಬಹುದಾದ ಶಾಂತಿಯನ್ನು ಪಡೆಯುತ್ತಾನೆ.

# ಮಂತ್ರ ೧೮

**त्रिणाचिकेतस्त्रयमेतत् विदित्वा य एवं विद्वांश्चिनुते नाचिकेतम् ।**
**स मृत्युपाशान् पुरतः प्रणोद्य शोकातिगो मोदते स्वर्गलोके ॥**

ತ್ರಿಣಾಚಿಕೇತಸ್ತ್ರಯಮೇತತ್ ವಿದಿತ್ವಾ ಯ ಏವಂ
ವಿದ್ವಾಂಶ್ಚಿನುತೇ ನಾಚಿಕೇತಮ್ ।
ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ ಶೋಕಾತಿಗೋ
ಮೋದತೇ ಸ್ವರ್ಗಲೋಕೇ ॥

## ಪ್ರತಿಪದಾರ್ಥ

ಏತತ್—(ಹಿಂದೆ ಹೇಳಿದ) ಈ, ತ್ರಯಮ್—ಮೂರನ್ನೂ (ಜೀವಸ್ವರೂಪ-ಪರಮಾತ್ಮಸ್ವರೂಪ-ಅಗ್ನಿಸ್ವರೂಪಗಳನ್ನು), ವಿದಿತ್ವಾ-ಅರಿತು, ಏವಂ ವಿದ್ವಾನ್-ಹೀಗೆ ಅರಿತ, ಯಃ-ಯಾವನು, ನಾಚಿಕೇತಮ್-ನಾಚಿಕೇತಾಗ್ನಿಯನ್ನು, ಚಿನುತೇ—ಚಯನ ಮಾಡುವನೋ, ಸಃ—ಆ, ತ್ರಿಣಾಚಿಕೇತಃ—ಮೂರು ಸಲ ನಾಚಿಕೇತಾಗ್ನಿಯನ್ನು ಉಪಾಸನೆ ಮಾಡಿದವನು, ಮೃತ್ಯುಪಾಶಾನ್—ರಾಗದ್ವೇಷ ಮುಂತಾದವುಗಳನ್ನು, ಪುರತಃ—(ದೇಹಾವಸಾನಕ್ಕೆ) ಮೊದಲು, ಪ್ರಣೋದ್ಯ—ಬಿಟ್ಟು, ಶೋಕಾತಿಗಃ—ಶೋಕ (ಸ್ಥಾನವೆನಿಸಿದ ಸ್ವರ್ಗಾದಿಗಳನ್ನು) ವನ್ನು ಮೀರಿ, ಸ್ವರ್ಗಲೋಕೇ—ಬ್ರಹ್ಮಲೋಕದಲ್ಲಿ, ಮೋದತೇ—ಆನಂದಿಸುತ್ತಾನೆ.

## ತಾತ್ಪರ್ಯ

ಜೀವಾತ್ಮ, ಪರಮಾತ್ಮ, ಅಗ್ನಿಸ್ವರೂಪಗಳನ್ನು ಅರಿತು ನಾಚಿಕೇತಾಗ್ನಿಯನ್ನು ಮೂರು ಸಲ ಚಯನ ಮಾಡಿದವನು 'ತ್ರಿಣಾಚಿಕೇತಃ' ಎನಿಸುವನು. ಹೀಗೆ ನಾಚಿಕೇತಾಗ್ನಿಯನ್ನು ಚಯನಮಾಡಿದವನು ದೇಹಾವಸಾನಕ್ಕೆ ಮೊದಲೇ ರಾಗ-ದ್ವೇಷಾದಿಗಳನ್ನು ಬಿಟ್ಟು, ಶೋಕದಿಂದ ಪಾರಾಗಿ ವೈಕುಂಠಲೋಕದಲ್ಲಿ ಆನಂದವನ್ನು ಅನುಭವಿಸುತ್ತಾನೆ.

## ರಂಗರಾಮಾನುಜಭಾಷ್ಯಮ್

**ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ।** ತ್ರಿಣಾಚಿಕೇತಃ ; ಉಕ್ತೋಽರ್ಥಃ। ತ್ರಯಮೇತತ್ [ವಿದಿತ್ವಾ] 'ಬ್ರಹ್ಮಜಜ್ಞಂ ದೇವಮೀಡ್ಯಮ್' ಇತಿ ಮಂತ್ರನಿರ್ದಿಷ್ಟಬ್ರಹ್ಮಸ್ವರೂಪಂ ತದಾತ್ಮಕಸ್ವಾತ್ಮಸ್ವರೂಪಂ 'ತ್ರಿಭಿರೇತ್ಯ ಸಂಧಿಮ್' ಇತಿ ನಿರ್ದಿಷ್ಟಮಗ್ನಿಸ್ವರೂಪಂ ಚ ವಿದಿತ್ವಾ-ಗುರೂಪದೇಶೇನ ಶಾಸ್ತ್ರತೋ ವಾ ಜ್ಞಾತ್ವಾ । ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಮ್। ಏತಾದೃಶಾರ್ಥತ್ರಯಾನುಸಂಧಾನಪೂರ್ವಕಂ ನಾಚಿಕೇತಮಗ್ನಿಂ ಯಶ್ಚಿನುತೇ। ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ। ಸಃ ಮೃತ್ಯುಪಾಶಾನ್-ರಾಗದ್ವೇಷಾದಿಲಕ್ಷಣಾನ್ । ಪುರತಃ-ಶರೀರಪಾತಾತ್ಪೂರ್ವಮೇವ । ಪ್ರಣೋದ್ಯ-ತಿರಸ್ಕೃತ್ಯ । ಜೀವದ್ದಶಾಯಾಮೇವ ರಾಗಾದಿರಹಿತಸ್ಸನ್ ಇತ್ಯರ್ಥಃ । ಶೋಕಾತಿಗೋ ಮೋದತೇ ಸ್ವರ್ಗಲೋಕೇ[1] । ಪೂರ್ವಮೇವ ವ್ಯಾಖ್ಯಾತಮ್ ॥

---

1 ಶೋಕಾತಿಗೋ...ಸ್ವರ್ಗಲೋಕೇ-ಶರೀರವಿಯೋಗವಾದ ನಂತರ ವೈಕುಂಠಲೋಕದಲ್ಲಿ ಆನಂದವನ್ನು ಅನುಭವಿಸುತ್ತಾನೆ ಎಂದರ್ಥ.

## ಅನುವಾದ

ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ ; ತ್ರಿಣಾಚಿಕೇತಃ–ಅರ್ಥವನ್ನು ಹಿಂದೆ ಹೇಳಿದೆ. (ಮೂರುಸಲ ಅಗ್ನಿಚಯನ ಮಾಡಿದವನು) ತ್ರಯಃಮೇತತ್–'ಬ್ರಹ್ಮಜಜ್ಞಂ ದೇವ ಮೀಡ್ಯಮ್' ಎಂಬ ಮಂತ್ರದಲ್ಲಿ ಹೇಳಿರುವ ಬ್ರಹ್ಮಸ್ವರೂಪವನ್ನೂ, ಆ ಬ್ರಹ್ಮವನ್ನೇ ಆತ್ಮ ವಾಗಿ ಉಳ್ಳ ಜೀವಾತ್ಮಸ್ವರೂಪವನ್ನೂ, 'ತ್ರಿಭಿರೇತ್ಯಸಂಧಿಮ್' ಎಂದು ಹೇಳಿರುವ ಅಗ್ನಿ ಸ್ವರೂಪವನ್ನೂ ವಿದಿತ್ವಾ–ಗುರೂಪದೇಶದಿಂದಾಗಲೀ, ಶಾಸ್ತ್ರದಿಂದಾಗಲೀ ತಿಳಿದು, ಯಃ ಏವಂ ವಿದ್ವಾಂಶ್ಚಿನುತೇ ನಾಚಿಕೇತಮ್ । ಮೇಲೆ ಹೇಳಿದ ಮೂರು ಅರ್ಥಗಳನ್ನು ಮನನ ಮಾಡುತ್ತಾ ನಾಚಿಕೇತಾಗ್ನಿಯನ್ನು ಚಯನ ಮಾಡುತ್ತಾನೋ, ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ । ಸಃ ಮೃತ್ಯುಪಾಶಾನ್–ಅವನು ರಾಗ–ದ್ವೇಷರೂಪವಾದ ಬಂಧನವನ್ನು ಪುರತಃ–ಶರೀರ ನಾಶವಾಗುವ ಮೊದಲೇ ಪ್ರಣೋದ್ಯ–ತಿರಸ್ಕರಿಸಿ, ಅಂದರೆ ಜೀವಿತಕಾಲ ದಲ್ಲಿಯೇ ರಾಗದ್ವೇಷಾದಿಗಳಿಂದ ಬಿಡಲ್ಪಟ್ಟವನಾಗಿ ಎಂದರ್ಥ. ಶೋಕಾತಿಗೋ ಮೋದತೇ ಸ್ವರ್ಗಲೋಕೇ–(ಮೋಕ್ಷದಲ್ಲಿ ಆನಂದವನ್ನು ಅನುಭವಿಸುತ್ತಾನೆ) ಎಂದು ಅರ್ಥ ಮೊದಲೇ ಹೇಳಿದೆ.

## ಭಾಷ್ಯಸಾರ

ಪರಮಾತ್ಮ ಉಪಾಸನಾರೂಪವಾಗಿ ನಾಚಿಕೇತಾಗ್ನಿಯನ್ನು ಚಯನ ಮಾಡಿದರೆ ಆಗುವ ಫಲವನ್ನು ಹೇಳುತ್ತಾನೆ. ಹಿಂದೆ 'ಬ್ರಹ್ಮಜಜ್ಞಂ–ದೇವಂ–ತ್ರಿಭಿರೇತ್ಯಸಂಧಿಮ್' ಎಂಬುದ ರಿಂದ ಹೇಳಿದ ಜೀವಾತ್ಮ–ಪರಮಾತ್ಮ ಮತ್ತು ಅಗ್ನಿಸ್ವರೂಪಗಳನ್ನು ಗುರುಗಳ ಉಪದೇಶ ದಿಂದ ಅಥವಾ ಶಾಸ್ತ್ರಗಳಿಂದ ಅರಿಯಬೇಕು. ಅರಿತು ಯಮನು ಹೇಳಿದಂತೆ ನಾಚಿಕೇತಾಗ್ನಿ ಯನ್ನು ಮೂರು ಸಲ ಉಪಾಸನೆ ಮಾಡಿದವನು ತನ್ನ ಜೀವಿತ ಕಾಲದಲ್ಲಿಯೇ ಯಮನ ಪಾಶರೂಪವಾದ ರಾಗ–ದ್ವೇಷಾದಿಗಳಿಂದ ಪಾರಾಗುತ್ತಾನೆ. ಈ ರಾಗ–ದ್ವೇಷಾದಿಗಳನ್ನು ಕ್ಲೇಶವೆಂದು ಹೇಳುತ್ತಾರೆ. ಈ ಕ್ಲೇಶವನ್ನು ಮೀರಿ (ಸಾಕೇತವೆಂಬ) ಮೋಕ್ಷದಲ್ಲಿ ಸ್ವಸ್ವರೂಪಾವಿರ್ಭಾವವನ್ನು ಪಡೆದು ಆನಂದವನ್ನು ಅನುಭವಿಸುತ್ತಾನೆ.



## ಮಂತ್ರ ೧೮

**यो वा ए(प्ये) तां ब्रह्मजज्ञात्मभूतां चितिं विदित्वा चिनुते नाचिकेतम् ।**
**स एव भूत्वा ब्रह्मजज्ञात्मभूतः करोति तद् येन पुनर्न जायते ॥**

ಯೋ ವಾ ಏ(ಪ್ಯೇ) ತಾಂ ಬ್ರಹ್ಮಜಜ್ಞಾತ್ಮಭೂತಾಂ ಚಿತಿಂ
ವಿದಿತ್ವಾ ಚಿನುತೇ ನಾಚಿಕೇತಮ್ ।
ಸ ಏವ ಭೂತ್ವಾ ಬ್ರಹ್ಮಜಜ್ಞಾತ್ಮಭೂತಃ ಕರೋತಿ
ತದ್ ಯೇನ ಪುನರ್ನ ಜಾಯತೇ ॥

### ಪ್ರತಿಪದಾರ್ಥ

ಯಃ ವಾ ಅಪಿ—ಯಾವನೊಬ್ಬನು, ಏತಾವತ್—ಹಿಂದೆ ಹೇಳಿದ, **ಬ್ರಹ್ಮಜಜ್ಞಾತ್ಮಭೂತಾಮ್**—ಬ್ರಹ್ಮಜಜ್ಞನಾದ ಜೀವನಿಗೆ ಆತ್ಮಭೂತವಾದ (ಪರಮಾತ್ಮನ ಉಪಾಸನಾರೂಪವಾದ), **ಚಿತಿಮ್**—ಅಗ್ನಿಕರ್ಮವನ್ನು, ವಿದಿತ್ವಾ—ತಿಳಿದು, ನಾಚಿಕೇತಮ್—ನಾಚಿಕೇತಾಗ್ನಿಯನ್ನು, **ಚಿನುತೇ**—ಚಯನ ಮಾಡುವನೋ, ಸ ಏವ—ಅವನೇ, ಬ್ರಹ್ಮಜಜ್ಞಾತ್ಮಭೂತಃ—ಬ್ರಹ್ಮವೇ ತನಗೆ ಆತ್ಮವಾಗಿದೆ ಎಂದು, **ಭೂತ್ವಾ**—ಅನುಸಂಧಾನ ಮಾಡಿ, ಯೇನ—ಈ ಯಾವ ಜ್ಞಾನದಿಂದ, ತತ್—ಆ ಪರಮಾತ್ಮನ ಉಪಾಸನೆಯನ್ನು, **ಕರೋತಿ**—ಮಾಡುತ್ತಾನೋ (ಸಃ—ಅವನು), **ಪುನಃ**—ತಿರುಗಿ, ನ **ಜಾಯತೇ**—ಹುಟ್ಟುವುದಿಲ್ಲ.

### ತಾತ್ಪರ್ಯ

ಈ ಜೀವನಿಗೆ ಪರಮಾತ್ಮನು ಆತ್ಮ. ಈ ಪರಮಾತ್ಮನ ಉಪಾಸನೆಗೆ ಈ ನಾಚಿಕೇತಾಗ್ನಿ ಕ್ರಿಯೆಯು ಅಂಗ ಎಂದು ತಿಳಿದು ಆಚರಿಸುವವನು ಬ್ರಹ್ಮಜಜ್ಞಾತ್ಮಭೂತನೆನಿಸುವನು. ಈ ಭಾವನೆಯಿಂದ ಕೂಡಿದವನಾಗಿ ಪರಮಾತ್ಮನ ಉಪಾಸನೆ ಮಾಡುವವನು ಜನನ–ಮರಣಗಳಿಂದ ಪಾರಾಗುತ್ತಾನೆ.

### ರಂಗರಾಮಾನುಜಭಾಷ್ಯಮ್

ಯೋ ವಾ ಏ(ಪ್ಯೇ) ತಾಂ....ಯೇನ ಪುನರ್ನ ಜಾಯತೇ । ಯಃ ಏತಾಂ ಚಿತಿಂ ಬ್ರಹ್ಮಜಜ್ಞಾತ್ಮಭೂತಾಂ ವಿದಿತ್ವಾ—ಬ್ರಹ್ಮಾತ್ಮಕಸ್ವರೂಪತಯಾಽನುಸಂಧಾಯ ನಾಚಿಕೇತಮಗ್ನಿಂ ಚಿನುತೇ, ಸ ಏವ ಬ್ರಹ್ಮಾತ್ಮಕಸ್ವಾತ್ಮಾನುಸಂಧಾನಶಾಲೀ ಸನ್ ಅಪುನರ್ಭವಹೇತುಭೂತಂ ಯದ್ಭಗವದುಪಾಸನಮ್, ತದನುತಿಷ್ಠತಿ । ತತಶ್ಚಾಗ್ನೌ ಭಗವದಾತ್ಮಕಸ್ವಾತ್ಮತ್ವಾ(ಸ್ವಾತ್ಮಾ)ನುಸಂಧಾನಪೂರ್ವಕಮೇವ ಚಯನಂ 'ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ' ಇತಿ ಪೂರ್ವಮಂತ್ರೇ ಭಗವದುಪಾಸನದ್ವಾರಾ ಮೋಕ್ಷಸಾಧನತಯಾ ನಿರ್ದಿಷ್ಟಮ್ ; ನ ಅನ್ಯದಿತಿ ಭಾವಃ । ಅಯಂ ಚ ಮಂತ್ರಃ ಕೇಷುಚಿತ್ ಕೋಶೇಷು ನ ದೃಷ್ಟಃ ; ಕೈಶ್ಚಿದವ್ಯಾಕೃತಶ್ಚ । ಅಥಾಪಿ ಪ್ರತ್ಯಯಿತತಮವ್ಯಾಖ್ಯಾತಾಚಾರ್ಯಾದಿಭಿರೇವ ವ್ಯಾಖ್ಯಾತತ್ವಾತ್ ನ ಪ್ರಕ್ಷೇಪಶಂಕಾ ಕಾರ್ಯಾ ॥

## ಅನುವಾದ

ಯೋ ವಾ ಏ(ಪ್ಯೇ)ತಾಂ....ಯೇನ ಪುನರ್ನ ಜಾಯತೇ—ಯಾವನು ಈ ಅಗ್ನಿಚಯನ ವನ್ನು ಬ್ರಹ್ಮಜಜ್ಞಾತ್ಮಭೂತಾಂ ವಿದಿತ್ವಾ-ಬ್ರಹ್ಮವನ್ನೇ ಆತ್ಮವಾಗಿ ಉಳ್ಳ ತನ್ನ ಆತ್ಮಸ್ವರೂಪ ವನ್ನು ಮನನ ಮಾಡಿ, ನಾಚಿಕೇತಾಗ್ನಿಯನ್ನು ಚಯನ ಮಾಡುತ್ತಾನೋ ಅವನೇ ಬ್ರಹ್ಮವೇ ಆತ್ಮವಾಗಿಉಳ್ಳ ತನ್ನ ಆತ್ಮವನ್ನು ಅನುಸಂಧಾನ ಮಾಡುವವನಾಗಿ ಪುನರ್ಜನ್ಮವಿಲ್ಲದಿರುವುದಕ್ಕೆ ಕಾರಣವಾದ ಭಗವಂತನ ಉಪಾಸನೆಯನ್ನು ಮಾಡುತ್ತಾನೆ. ಅನಂತರ ಭಗವಂತನನ್ನು ತನಗೆ ಆತ್ಮವೆಂದು ಅನುಸಂಧಾನ ಮಾಡುತ್ತಾ ಅಗ್ನಿಯಲ್ಲಿಮಾಡುವ ಈ ಚಯನವನ್ನು 'ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ' ಎಂದು ಹಿಂದಿನ ಮಂತ್ರದಲ್ಲಿ ಭಗವಂತನ ಉಪಾಸನೆಯ ಮೂಲಕ ಮೋಕ್ಷಕ್ಕೆ ಸಾಧನವೆಂದು ಹೇಳಿದೆ, ಬೇರಾವುದೂ ಅಲ್ಲ ಎಂದು ತಾತ್ಪರ್ಯ. ಈ ಮಂತ್ರವು ಕೆಲವು ಪುಸ್ತಕಗಳಲ್ಲಿ ಕಾಣಸಿಗದು. ಕೆಲವರು ವ್ಯಾಖ್ಯಾನವನ್ನು ಮಾಡಿಲ್ಲ. ಆದರೂ ವಿಶ್ವಾಸಾರ್ಹರಾದವರು (ಶ್ರುತಪ್ರಕಾಶಿಕಾಚಾರ್ಯರೇ ಮುಂತಾದವರು) ವ್ಯಾಖ್ಯಾನಮಾಡಿರುವುದರಿಂದ ಇದು 'ಪ್ರಕ್ಷಿಪ್ತ' ಎಂದು ಶಂಕಿಸಬಾರದು.

## ಭಾಷ್ಯಸಾರ

ಹಿಂದಿನ ಮಂತ್ರದಲ್ಲಿ ಅಗ್ನಿಸ್ವರೂಪವನ್ನು ಅರಿತು ಚಯನಮಾಡಬೇಕೆಂದು ಹೇಳಿದೆ. ಈ ನಾಚಿಕೇತಾಗ್ನಿಯನ್ನು ಹೇಗೆ ಚಯನ ಮಾಡಬೇಕೆಂದು ಈ ಮಂತ್ರದಲ್ಲಿ ವಿವರಿಸುತ್ತಾರೆ. ಈ ಜೀವನು ಬ್ರಹ್ಮನಿಂದ ಜನಿಸಿದವನು ; ಬ್ರಹ್ಮವನ್ನು ಅರಿತವನು. ಈ ಬ್ರಹ್ಮವೇ-ಜೀವನಿಗೆ ಆತ್ಮವಾಗಿದೆ. ಅಂದರೆ ಬ್ರಹ್ಮನಿಗೆ ಈ ಜೀವ-ಶರೀರ ಎಂಬ ಜೀವಸ್ವರೂಪವನ್ನು, ಈ ಜೀವಕ್ಕೆ ಬ್ರಹ್ಮ ಆತ್ಮ ಎಂಬ ಪರಮಾತ್ಮಸ್ವರೂಪವನ್ನೂ ಅರಿತು ಯಾವನು ಈ ನಾಚಿಕೇತಾಗ್ನಿಯನ್ನು ಚಯನ ಮಾಡುತ್ತಾನೋ ಅವನು ಬ್ರಹ್ಮಜಜ್ಞಾತ್ಮಭೂತನಾಗು ವನು. ಇಂತಹವನು ಹೀಗೆ ಪರಮಾತ್ಮನ ಉಪಾಸನೆ ಮಾಡಿದರೆ ಅವನು ಪುನಃ ಹುಟ್ಟುವು ದಿಲ್ಲ. ಅಂದರೆ ಮುಕ್ತನಾಗುತ್ತಾನೆ. ಈ ಭಾವನೆಯಿಲ್ಲದಿದ್ದಲ್ಲಿ ಇಲ್ಲ ಎಂದು ತಾತ್ಪರ್ಯ.

ಕೆಲವರು ಈ ಮಂತ್ರಕ್ಕೆ ವ್ಯಾಖ್ಯಾನ ಮಾಡಿಲ್ಲ. ಕೆಲವು ಗ್ರಂಥಗಳಲ್ಲಿ ಈ ಮಂತ್ರವೂ ಇಲ್ಲ. ಆದರೆ ವಿಶ್ವಾಸಾರ್ಹರಾದ ಶ್ರುತಪ್ರಕಾಶಿಕಾಚಾರ್ಯರು ಈ ಮಂತ್ರಕ್ಕೆ ವ್ಯಾಖ್ಯಾನ ಮಾಡಿರುವುದರಿಂದ ಇದು ಅಧಿಕಪಾಠವೆಂದು ಹೇಳಲಾಗದು ಎಂದು ರಾಮಾನಂದರು ಹೇಳಿರುವರು.

ಸುಬೋಧಿನೀಕಾರರು ಈ ಮಂತ್ರಕ್ಕೆ ವ್ಯಾಖ್ಯಾನ ಮಾಡಿಲ್ಲ. ಅವರ ಗ್ರಂಥದಲ್ಲಿ ಈ ಮಂತ್ರವೂ ಇಲ್ಲ.



## ಮಂತ್ರ ೨೦

**एष तेऽग्निर्नचिकेतः स्वर्ग्यो यमवृणीथा द्वितीयेन वरेण ।**
**एतमग्निं तवैव प्रवक्ष्यन्ति जनासस्तृतीयं वरं नचिकेतो वृणीष्व ॥**

ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯೋ, ಯಮವೃಣೀಥಾ
ದ್ವಿತೀಯೇನ ವರೇಣ ।
ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಸ್ತೃತೀಯಂ
ವರಂ ನಚಿಕೇತೋ ವೃಣೀಷ್ವ ॥

### ಪ್ರತಿಪದಾರ್ಥ

ನಚಿಕೇತಃ—ಎಲೈ ನಚಿಕೇತನೇ! ದ್ವಿತೀಯೇನ ವರೇಣ—ಎರಡನೇ ವರದಿಂದ, ಯಮ್—ಯಾವುದನ್ನು, ಅವೃಣೀಥಾಃ—ಕೇಳಿದೆಯೋ, ಏಷಃ—ಈ, ಸ್ವರ್ಗ್ಯಃ—ಮೋಕ್ಷಸಾಧನವಾದ, ಅಗ್ನಿಃ—ಅಗ್ನಿವಿದ್ಯೆಯು (ಉಪದಿಷ್ಟಃ—ನನ್ನಿಂದ ಉಪದೇಶಿಸಲ್ಪಟ್ಟಿತು.) ಏತಮ್-ಅಗ್ನಿಮ್—ಈ ಅಗ್ನಿಯನ್ನು, ತವೈವ ನಾಮ್ನಾ—ನಿನ್ನ ಹೆಸರಿನಿಂದಲೇ, ಪ್ರವಕ್ಷ್ಯಂತಿ ಜನಾಸಃ—ಜನರು ವ್ಯವಹರಿಸುತ್ತಾರೆ. ನಚಿಕೇತಃ—ನಚಿಕೇತನೇ! ತೃತೀಯಂ ವರಮ್—ಮೂರನೇ ವರವನ್ನು. ವೃಣೀಷ್ವ—ಕೇಳು.

### ತಾತ್ಪರ್ಯ

'ಎಲೈ ನಚಿಕೇತನೇ! ನೀನು ಎರಡನೆಯ ವರವಾಗಿ ಕೇಳಿದ ಮೋಕ್ಷಸಾಧನವಾದ ಅಗ್ನಿವಿದ್ಯೆಯನ್ನು ನಿನಗೆ ಉಪದೇಶಿಸಿದೆನು. ಈ ಅಗ್ನಿಯು 'ನಾಚಿಕೇತಾಗ್ನಿ' ಎಂದು ನಿನ್ನ ಹೆಸರಿನಿಂದ ಪ್ರಸಿದ್ಧ ವಾಗುವುದು. ಮೂರನೇ ವರವನ್ನು ಕೇಳು. ಇಲ್ಲದಿದ್ದಲ್ಲಿ ನಾನು ಋಣ ಮುಕ್ತನಾಗುವುದಿಲ್ಲ' ಎಂದು ಯಮನು ಹೇಳಿದನು.

### ರಂಗರಾಮಾನುಜಭಾಷ್ಯಮ್

ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯಃ । ಉಪದಿಷ್ಟ ಇತಿ ಶೇಷಃ । ಯಮವೃಣೀಥಾ ದ್ವಿತೀಯೇನ ವರೇಣ । ಸ್ಪಷ್ಟೋಽರ್ಥಃ । ಕಿಂಚ ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಃ । ಜನಾಸ್ತವೈವ ನಾಮ್ನಾ ಏತಮಗ್ನಿಂ ಪ್ರವಕ್ಷ್ಯಂತಿ ಇತ್ಯರ್ಥಃ । ತೃತೀಯಂ ವರಂ ನಚಿಕೇತೋ ವೃಣೀಷ್ವ । ಸ್ಪಷ್ಟೋಽರ್ಥಃ ।

### ಅನುವಾದ

ಏಷ ತೇಽಗ್ನಿರ್ನಚಿಕೇತಃ ಸ್ವರ್ಗ್ಯಃ–(ಸ್ವರ್ಗಸಾಧ್ಯವಾದ ಈ ನಾಚಿಕೇತಾಗ್ನಿಯನ್ನು ನಿನಗೆ) ಉಪದೇಶಿಸಿದೆ ಎಂದು ಪೂರ್ಣಗೊಳಿಸಿಕೊಳ್ಳಬೇಕು. ಯಮವೃಣೀಥಾ ದ್ವಿತೀಯೇನ ವರೇಣ. ಅರ್ಥ ಸ್ಪಷ್ಟವಾಗಿದೆ. (ಎರಡನೇ ವರವಾಗಿ ಕೇಳಿದುದನ್ನು) ಮತ್ತು ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಃ–ಜನರು ನಿನ್ನ ಹೆಸರಿನಿಂದಲೇ ಈ ಅಗ್ನಿಯನ್ನು ಕರೆಯುತ್ತಾರೆ ಎಂದರ್ಥ. ತೃತೀಯಂ ವರಂ ನಚಿಕೇತೋ ವೃಣೀಷ್ವ–ಅರ್ಥಸ್ಪಷ್ಟವಾಗಿದೆ. (ಮೂರನೇ ವರವನ್ನು ಕೇಳು.)

## ಭಾಷ್ಯಸಾರ

ಎಲೈ ನಚಿಕೇತನೇ ! ಇದು ಪ್ರಾಕೃತ ದೇಶ. ಪ್ರಕೃತಿ ಸಂಬಂಧವಿಲ್ಲದ ಈ ಪ್ರಾಕೃತ ದೇಶವನ್ನೇ ಮೋಕ್ಷವೆನ್ನುತ್ತಾರೆ. ಈ ಮೋಕ್ಷಕ್ಕೆ ಸಾಧನವಾದ ಅಗ್ನಿವಿದ್ಯೆಯನ್ನು ಎರಡನೇ ವರದಿಂದ ಕೇಳಿದೆ. ಅದನ್ನು ನಿನಗೆ ಉಪದೇಶಿಸಿದ್ದೇನೆ. ಈ ಅಗ್ನಿಯನ್ನು ಜನರು ನಾಚಿಕೇತಾಗ್ನಿ ಎಂದು ನಿನ್ನ ಹೆಸರಿನಿಂದಲೇ ಕರೆಯುತ್ತಾರೆ. ಇದರಿಂದ ನಿನ್ನ ಹೆಸರು ಶಾಶ್ವತವಾಗುತ್ತದೆ. ನಿನಗಿಷ್ಟವಾದ ಮೂರನೇ ವರವನ್ನು ಕೇಳು. ಈ ವರವನ್ನು ನೀನು ಕೇಳದಿದ್ದಲ್ಲಿ ನನ್ನ ಪ್ರತಿಜ್ಞೆ ಪೂರ್ಣವಾಗುವುದಿಲ್ಲ. ಆದುದರಿಂದ ಮೂರನೇ ವರವನ್ನು ಕೇಳಿ ನನ್ನನ್ನು ಋಣಮುಕ್ತನನ್ನಾಗಿ ಮಾಡು ಎಂದು ತಾತ್ಪರ್ಯ.

### (ಸ್ವರ್ಗಪದಮಿಹ ಮೋಕ್ಷಪರಮಿತಿ ನಿರೂಪಣಮ್)

ನನು-ಏತತ್ ಪ್ರಕರಣಗತಾನಾಂ 'ಸ್ವರ್ಗ'ಶಬ್ದಾನಾಂ ಮೋಕ್ಷಪರತ್ವೇ ಕಿಂ ಪ್ರಮಾಣಮಿತಿ ಚೇತ್ ?—ಉಚ್ಯತೇ । ಭಗವತೈವ ಭಾಷ್ಯಕೃತಾ 'ಸ್ವರ್ಗ್ಯಮಗ್ನಿಮ್' ಇತಿ ಮಂತ್ರಂ ಪ್ರಸ್ತುತ್ಯ, 'ಸ್ವರ್ಗಶಬ್ದೇನಾತ್ರ ಪರಮಪುರುಷಾರ್ಥಲಕ್ಷಣಮೋಕ್ಷೋಽಭಿಧೀಯತೇ । 'ಸ್ವರ್ಗಲೋಕಾ ಅಮೃತತ್ವಂ ಭಜಂತೇ' ಇತಿ ತತ್ರಸ್ಥಸ್ಯ ಜನನಮರಣಾಭಾವಶ್ರವಣಾತ್ । 'ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ' ಇತಿ ಚ ಪ್ರತಿವಚನಾತ್ । ತೃತೀಯವರಪ್ರಶ್ನೇ ನಚಿಕೇತಸಾ ಕ್ಷಯಿಫಲಾನಾಂ ನಿಂದಿಷ್ಯಮಾಣತಯಾ ಕ್ಷಯಿಫಲವಿಮುಖೇನ ನಚಿಕೇತಸಾ ಕ್ಷಯಿಷ್ಣುಸ್ವರ್ಗಫಲಸಾಧನಸ್ಯ ಪ್ರಾರ್ಥ್ಯಮಾನತ್ವಾನುಪಪತ್ತೇಶ್ಚ । ಸ್ವರ್ಗಶಬ್ದಸ್ಯ ಪ್ರಕೃಷ್ಟಸುಖವಚನತಯಾ ನಿರವಧಿಕಾನಂದರೂಪಮೋಕ್ಷಸ್ಯ ಸ್ವರ್ಗಶಬ್ದವಾಚ್ಯತ್ವಸಂಭವಾತ್ ' ಇತಿ ಕಂಠತಃ ತಾತ್ಪರ್ಯತಶ್ಚ ಪ್ರತಿಪಾದಿತತ್ವಾತ್ ನ ಶಂಕಾವಕಾಶಃ ।

### (ಮುಖ್ಯಾರ್ಥತ್ಯಾಗಾಯೋಗ ಇತಿ ದೀಕ್ಷಿತ ಪೂರ್ವಪಕ್ಷಃ)

ನನು—

'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ ನ ತತ್ರ ತ್ವಂ ನ ಜರಯಾ ಬಿಭೇತಿ ।
ಉಭೇ ತೀರ್ತ್ವಾ ಅಶನಾಯಾಪಿಪಾಸೇ ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥
ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ ಶ್ರದ್ದಧಾನಾಯ ಮಹ್ಯಮ್ ।
ಸ್ವರ್ಗಲೋಕಾ ಅಮೃತತ್ವಂ ಭಜಂತ ಏತದ್ದ್ವಿತೀಯೇನ ವೃಣೇ ವರೇಣ' ॥

ಇತಿ ದ್ವಿತೀಯವರಪ್ರಶ್ನಮಂತ್ರದ್ವಯೇ ಚತುರಭ್ಯಸ್ತಸ್ಯ ಸ್ವರ್ಗಶಬ್ದಸ್ಯ ಮೋಕ್ಷಪರತ್ವಂ ಕಿಂ ಮುಖ್ಯಯಾ ವೃತ್ತ್ಯಾ ? ಉತ ಅಮುಖ್ಯಯಾ ?

ನಾದ್ಯಃ ; 'ಸ್ವರ್ಗಾಪವರ್ಗಮಾರ್ಗಾಭ್ಯಾಮ್', 'ಸ್ವರ್ಗಾಪವರ್ಗಯೋರೇಕಮ್', 'ನ ಸ್ವರ್ಗಂ ನಾ ಪುನರ್ಭವಮ್', 'ಸ ಸ್ವರ್ಗಸ್ಸ್ಯಾತ್ ಸರ್ವಾನ್ ಪ್ರತ್ಯವಿಶಿಷ್ಟತ್ವಾತ್' ಇತ್ಯಾದಿ ಪ್ರಯೋಗೇಷು. ಅಪವರ್ಗಪ್ರತಿದ್ವಂದ್ವಿವಾಚಿತಯಾ ಲೋಕವೇದಪ್ರಸಿದ್ಧಸ್ಯ ಸ್ವರ್ಗಶಬ್ದಸ್ಯ ಮೋಕ್ಷವಾಚಿತ್ವಾಭಾವಾತ್ ।

'ಧ್ರುವಸೂರ್ಯಾಂತರಂ ಯತ್ತು ನಿಯುತಾನಿ ಚತುರ್ದಶ ।
ಸ್ವರ್ಗಲೋಕಸ್ಸ ಕಥಿತೋ ಲೋಕಸಂಸ್ಥಾನಚಿಂತಕೈಃ' ॥

ಇತಿ ಪುರಾಣವಚನಾನುಸಾರೇಣ ಸೂರ್ಯಧ್ರುವಾಂತರ್ವರ್ತಿಲೋಕವಿಶೇಷಸ್ಯೈವ ಸ್ವರ್ಗಶಬ್ದವಾಚ್ಯತಯಾ ತತ್ರೈವ ಲೌಕಿಕವೈದಿಕವ್ಯವಹಾರದರ್ಶನೇನ ಮೋಕ್ಷಸ್ಥಾನಸ್ಯಾತಥಾತ್ವಾತ್।

ನಾಪಿ ಅಮುಖ್ಯೇತಿ ದ್ವಿತೀಯಃ ಪಕ್ಷಃ, ಮುಖ್ಯಾರ್ಥೇ ಬಾಧಕಾಭಾವಾತ್ । ಕಿಮತ್ರ ಪ್ರಶ್ನವಾಕ್ಯಗತಂ ಜರಾ–ಮರಣರಾಹಿತ್ಯ–ಅಮೃತತ್ವಭಾಕ್ತ್ವಾದಿಕಂ ಬಾಧಕಮ್ ? ಉತ ಪ್ರತಿವಚನಗತಜರಾಮೃತ್ಯ್ವತ್ಯತರಣಾದಿ ? [ಉತ] ಕ್ಷಯಿಷ್ಣುಸ್ವರ್ಗಸ್ಯ ಸರ್ವಕಾಮವಿಮುಖನಚಿಕೇತಃ ಪ್ರಾರ್ಥ್ಯಮಾನತ್ವಾನುಪಪತ್ತಿರ್ವಾ ?

(ಪೂರ್ವಪಕ್ಷಿಣಾ ಬಾಧಕತ್ರಯನಿರಾಸಃ)

ನಾದ್ಯಃ ; ಸ್ವರ್ಗಲೋಕವಾಸಿನಾಂ ಜರಾಮರಣಕ್ಷುತ್ಪಿಪಾಸಾಶೋಕಾದಿರಾಹಿತ್ಯಸ್ಯ ಅಮೃತಪಾನಾದಮೃತತ್ವಪ್ರಾಪ್ತೇಶ್ಚ ಪುರಾಣೇಷು ಸ್ವರ್ಗಸ್ವರೂಪಕಥನಪ್ರಕರಣೇಷು ದರ್ಶನಾತ್, 'ಆಭೂತಸಂಪ್ಲವ ಸ್ಥಾನಮಮೃತತ್ವಂ ಹಿ ಭಾಷ್ಯತೇ' ಇತಿ ಸ್ಮರಣಾತ್, ಅತ್ರೈವ 'ಅಜೀರ್ಯತಾಮಮೃತಾನಾಮುಪೇತ್ಯ' ಇತಿ (?) ಮೃತ್ಯಾವಪ್ಯಮೃತಶಬ್ದ ಪ್ರಯೋಗದರ್ಶನಾಚ್ಚ, ಸ್ವರ್ಗಲೋಕವಾಸಿನಾಮೇವ ಬ್ರಹ್ಮೋಪಾಸನದ್ವಾರಾ 'ತೇ ಬ್ರಹ್ಮಲೋಕೇ ತು ಪರಾಂತಕಾಲೇ' ಇತಿ ಶ್ರುತ್ಯುಕ್ತರೀತ್ಯಾ ಅಮೃತತ್ವಪ್ರಾಪ್ತೇಸ್ಸಂಭವೇನ 'ಸ್ವರ್ಗಲೋಕಾ ಅಮೃತತ್ವಂ ಭಜಂತೇ' ಇತ್ಯಸ್ಯೋಪಪತ್ತೇಶ್ಚ ಆಪೇಕ್ಷಿಕಾಮೃತತ್ವಪರತಯಾ ಲೋಕವೇದನಿರೂಢೌಪಸಂಹಾರಿಕಾಮೃತಶಬ್ದಾನುಸಾರೇಣ ಪ್ರಕ್ರಮಸ್ಥಾಭ್ಯಸ್ತಾನನ್ಯಥಾಸಿದ್ಧವಿಶೇಷ್ಯವಾಚಿಸ್ವರ್ಗಶಬ್ದಸ್ಯ ಅನ್ಯಥಾನಯನಾಸಂಭವಾತ್ । ನ ಹಿ ದೇವದತ್ತೋಽಭಿರೂಪ ಇತ್ಯುಕ್ತೇ ಅಭಿರೂಪಪದಸ್ವಾರಸ್ಯಾನುಸಾರೇಣ ದೇವದತ್ತಪದಸ್ಯ ಅತ್ಯಂತಾಭಿರೂಪಯಜ್ಞದತ್ತಪರತ್ವಮಾಶ್ರೀಯತೇ ॥

ನ ದ್ವಿತೀಯಃ ; 'ತ್ರಿಣಾಚಿಕೇತಸ್ತ್ರಿಭಿಃ' ಇತಿ ಮಂತ್ರಸ್ಯ ಸ್ವರ್ಗಸಾಧನಸ್ಯೈವಾಗ್ನೇಸ್ತ್ರಿರಭ್ಯಾಸೇ ಜನ್ಮಮೃತ್ಯುತರಣಹೇತುಭೂತಬ್ರಹ್ಮವಿದ್ಯಾಹೇತುತ್ವಮಸ್ತೀತ್ಯೇತದರ್ಥಕತಯಾ ಸ್ವರ್ಗಶಬ್ದಸ್ಯ ಮುಖ್ಯಾರ್ಥಪರತ್ವಾಬಾಧಕತ್ವಾತ್ । ಅತ ಏವ ತತ್ತುಲ್ಯಾರ್ಥಸ್ಯ 'ಕರೋತಿ ತದ್ಯೇನ ಪುನರ್ನ ಜಾಯತೇ' ಇತ್ಯಸ್ಯಾಪಿ ನ ಸ್ವರ್ಗಶಬ್ದಮುಖ್ಯಾರ್ಥಬಾಧಕತ್ವಮ್ ॥

ನಾಪಿ ಕ್ಷಯಿಷ್ಣೋಃ ಸ್ವರ್ಗಸ್ಯ ಫಲಾಂತರವಿಮುಖನಚಿಕೇತಃ ಪ್ರಾರ್ಥ್ಯಮಾನತ್ವಾನುಪಪತ್ತಿಃ ಇತಿ ತೃತೀಯಃ ಪಕ್ಷಃ । ಸ್ವರ್ಗಸಾಧನಾಗ್ನಿಪ್ರಶ್ನಂ ಪ್ರತಿಬ್ರುವತಾ ಹಿತೈಷಿಣಾ ಮೃತ್ಯುನಾ, ಅಪೃಷ್ಟೇಽಪಿ ಮೋಕ್ಷಸ್ವರೂಪೇ, 'ಅನಂತಲೋಕಾಪ್ತಿಮಥೋ ಪ್ರತಿಷ್ಠಾಮ್', 'ತ್ರಿಣಾಚಿಕೇತಸ್ತ್ರಿಭಿರೇತ್ಯ ಸಂಧಿಂ ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ' ಇತ್ಯಾದಿನಾ ಉಪಕ್ಷಿಪ್ತೇ ಉತ್ಪನ್ನಾ ।ಮುಮುಕ್ಷಾ 'ಅನ್ಯಂ ವರಂ ನಚಿಕೇತೋ ವೃಣೀಷ್ವ' ಇತಿ ಪ್ರತಿಷೇಧೇನ ದೃಢೀಕೃತಾ । ತಸ್ಯಾಂ ಚ ದಶಾಯಾಂ ಕ್ರಿಯಮಾಣಾ ಕ್ಷಯಿಷ್ಣುಫಲನಿಂದಾ ಪ್ರಾಚೀನಸ್ವರ್ಗಪ್ರಾರ್ಥನಾಯಾಃ ಕಥಂ ಬಾಧಿಕಾ ಸ್ಯಾತ್ । ಕಿಂಚ 'ಶ್ವೋಽಭಾವಾ ಮರ್ತ್ಯಸ್ಯ' ಇತ್ಯಾದೌ ಮರ್ತ್ಯಭೋಗ(ಗ್ಯ)ನಿಂದಾಯಾ ಏವ ದರ್ಶನೇನ ಸ್ವರ್ಗನಿಂದಾಯಾ ಅದರ್ಶನಾತ್;

ಸ್ವರ್ಗಶಬ್ದಸ್ಯ ಮೋಕ್ಷಪರತ್ವೇ ತಸ್ಯ ಜ್ಞಾನೈಕಸಾಧ್ಯತಯಾ ತತ್ರ ಯೋಜನಕತ್ವಸ್ಯಾಗ್ನಾವ ಭಾವಾತ್(ವೇನ) ಉಪಕ್ರಮೋಪಸಂಹಾರಮಧ್ಯಾಭ್ಯಸ್ತಸ್ವರ್ಗಶಬ್ದ ಪೀಡಾ ಪ್ರಸಂಗಾಚ್ಚ । ಸಂತು ವಾ ಪ್ರತಿವಚನೇ ಬಾಧಕಾನಿ ; ಅಥಾಪಿ ಉಪಕ್ರಮಾಧಿಕರಣನ್ಯಾಯೇನ ಪ್ರಕ್ರಮಸ್ಥ ಪ್ರಶ್ನವಾಕ್ಯಸ್ಥಸ್ವರ್ಗಶಬ್ದಸ್ಯೈವ ಪ್ರಬಲತ್ವಾತ್ । ನ ಚ–'ಭೂಯಸಾಂ ಸ್ಯಾತ್ ಸಧರ್ಮತ್ವಮ್' ಇತಿ ನ್ಯಾಯಾತ್ ಭೂಯೋಽನುಗ್ರಹಾರ್ಥಮ್ ಅಲ್ಪಸ್ಯೋಪಕ್ರಮಸ್ಯ ಬಾಧ್ಯತ್ವಮಸ್ತ್ವಿತಿ–ವಾಚ್ಯಮ್ ; 'ಮುಖ್ಯಂ ವಾ ಇತಿ (12–2–23) ಸೂತ್ರೇ ಔಪಸಂಹಾರಿಕ ಬಹ್ವಪೇಕ್ಷಯಾಽಪಿ ಮುಖ್ಯಸ್ಯೈವ ಪ್ರಾಬಲ್ಯೋಕ್ತೇಃ। ತಸ್ಮಾತ್ ಸ್ವರ್ಗಶಬ್ದಸ್ಯ ಮುಖ್ಯಾರ್ಥ ಪರಿತ್ಯಾಗೇ ನ ಕಿಂಚಿತ್ ಕಾರಣಮಿತಿ ॥

### (ಮೋಕ್ಷಪರತ್ವಸಿದ್ಧಾಂತಃ)

ಅತ್ರೋಚ್ಯತೇ–ಸ್ವರ್ಗಶಬ್ದಸ್ಯ ಮುಖ್ಯೈವವೃತ್ತ್ಯಾ ಮೋಕ್ಷವಾಚಿತ್ವಮ್ । ಸ್ವರ್ಗ ಕಾಮಾಧಿಕರಣೇ, 'ನಾಗೃಹೀತವಿಶೇಷಣಾನ್ಯಾಯೇನ (1–3–10) ಸ್ವರ್ಗಶಬ್ದಸ್ಯ ಪ್ರೀತಿ ವಚನತ್ವಮೇವ, ನ ಪ್ರೀತಿವಿಶಿಷ್ಟದ್ರವ್ಯವಾಚಿತಾ' ಇತ್ಯುಕ್ತ್ವಾ—'ನನು ಸ್ವರ್ಗಶಬ್ದಸ್ಯ ನಾಗೃಹೀತವಿಶೇಷಣಾನ್ಯಾಯೇನ ಪ್ರೀತಿವಚನತ್ವೇ ಸಿದ್ಧೇಽಪಿ ದೇಹಾಂತರದೇಶಾಂತರ ಭೋಗ್ಯ ಪ್ರೀತಿ ವಾಚಿತಾ ನ ಸಿದ್ಧ್ಯೇತ್ । ನ ಚ 'ಯಸ್ಮಿನ್ನೋಷ್ಣಮ್' ಇತಿ ವಾಕ್ಯ ಶೇಷಾತ್ ವಿಧ್ಯುದ್ದೇಶಸ್ಥಸ್ವರ್ಗಶಬ್ದಸ್ಯ ಪ್ರೀತಿವಿಶೇಷವಾಚಿತಾನಿಶ್ಚಯ ಇತಿ ವಾಚ್ಯಮ್ ; ಪ್ರೀತಿಮಾತ್ರವಾಚಿತ್ವೇನ ನಿರ್ಣೀತಶಕ್ತಿಕತಯಾ ಸಂದೇಹಾಭಾವೇನ 'ಸಂದಿಗ್ಧೇಷು ವಾಕ್ಯ ಶೇಷಾತ್' ಇತಿ (1–4–29) 'ನ್ಯಾಯಸ್ಯಾನವತಾರಾತ್' ಇತಿ ಪರಿಚೋದ್ಯ–'ಯದ್ಯಪಿ ಲೋಕ ಏವ ಸ್ವರ್ಗಶಬ್ದಸ್ಯ ನಿರ್ಣೀತಾರ್ಥತಾ, ತಥಾಽಪಿ ಲೋಕಾವಗತಸಾತಿಶಯಸುಖ ವಾಚಿತ್ವೇ ತತ್ಸಾಧನತ್ವಂ ಜ್ಯೋತಿಷ್ಟೋಮಾದೀನಾಂ ಸ್ಯಾತ್ । ತಥಾ ಚ ಅಲ್ಪಧನ ನರಾಯಾಸಸಾಧ್ಯೇ ಲೌಕಿಕೇ ತದುಪಾಯಾಂತರೇ ಸಂಭವತಿ ನ ಬಹುಧನ ನರಾಯಾಸಮಧ್ಯೇ ಬಹ್ವಂತರಾಯೇ ಜ್ಯೋತಿಷ್ಟೋಮಾದೌ ಪ್ರೇಕ್ಷಾವಾನ್ ಪ್ರವರ್ತತ ಇತಿ ಪ್ರವರ್ತಕತ್ವಂ ಜ್ಯೋತಿಷ್ಟೋಮಾದಿವಿಧೇರ್ನಸ್ಯಾತ್ । ಅತಃ ವಾಕ್ಯಶೇಷಾವಗತೇ ನಿರತಿಶಯಪ್ರೀತಿ ವಿಶೇಷ ಸ್ವರ್ಗಶಬ್ದಸ್ಯ ಶಕ್ತೌ ನಿಶ್ಚಿತಾಯಾಂ ವಾಕ್ಯಶೇಷಾಭಾವಸ್ಥಲೇಽಪಿ ವ್ಯವಹಾರಾದಿಷ್ವಿವ ಸ ಏವಾರ್ಥಃ । ಲೌಕಿಕೇ ಸಾತಿಶಯಪ್ರೀತಿಭರಿತೇ ಗುಣಯೋಗಾದೇವ ವೃತ್ತೇರುಪಪತ್ತೇಃ ನ ಶಕ್ತ್ಯಂತರಕಲ್ಪನಾ । ನ ಚ–ಪ್ರೀತಿಮಾತ್ರವಚನಸ್ಯೈವ ಸ್ವರ್ಗಶಬ್ದಸ್ಯ ವೇದೇ ನಿರತಿಶಯ ಪ್ರೀತಿವಾಚಿತ್ವಮಸ್ತ್ವಿತಿ ವಾಚ್ಯಮ್ । ನಿರತಿಶಯತ್ವಾಂಶಸ್ಯಾನ್ಯತೋಽನವಗತತ್ವೇನ ತತ್ರಾಪಿ ಶಕ್ತ್ಯವಶ್ಯಂಭಾವೇನ ಸ್ವರ್ಗಶಬ್ದಸ್ಯ ಲೋಕವೇದಯೋರನೇಕಾರ್ಥತಾ[ಹಿ ?] ಸ್ಯಾತ್(?) । ಯದಾ ತು ವೈದಿಕಪ್ರಯೋಗಾವಗತನಿರತಿಶಯಪ್ರೀತಿವಾಚಿತಾ, ತದಾ ಸಾತಿಶಯೇ ಲೌಕಿಕೇ ಪ್ರೀತಿತ್ವಸಾಮಾನ್ಯಯೋಗಾದ್ಗೌಣೀ ವೃತ್ತಿಃ'–ಇತಿ ಮೀಮಾಂಸಕೈಃ ನಿರತಿಶಯಸುಖ ವಾಚಿತ್ವಸ್ಯೈವ (6–1–1) ಸಮರ್ಥಿತತಯಾ ಮೋಕ್ಷಸ್ಯ ಸ್ವರ್ಗಶಬ್ದವಾಚ್ಯತ್ವೇ ವಿವಾದಾ ಯೋಗಾತ್ ; ಪಾರ್ಥಶಬ್ದಸ್ಯ ಅರ್ಜುನ ಇವ ತದಿತರಪೃಥಾಪುತ್ರೇಷು ಪ್ರಚುರಪ್ರಯೋಗಾ ಭಾವೇಽಪಿ ಪಾರ್ಥಶಬ್ದಮುಖ್ಯಾರ್ಥತ್ವಾನಪಾಯವತ್ ಸ್ವರ್ಗಶಬ್ದಸ್ಯ ಸೂರ್ಯಧ್ರುವಾಂತ ವರ್ತಿಲೋಕಗತಸುಖವಿಶೇಷ ಏವ ಅನ್ಯತ್ರ ಪ್ರಚುರಪ್ರಯೋಗಾಭಾವೇಽಪಿ ವಾಚ್ಯತ್ವಾನ ಪಾಯಾತ್ । 'ಬರ್ಹಿರಾಜ್ಯಾದಿಶಬ್ದಾನಾಮ್ ಅಸಂಸ್ಕೃತತೃಣಘೃತಾದಿಷ್ವಾರ್ಯೈರಪ್ರಯುಜ್ಯ ಮಾನಾನಾಮಪಿ ಅಸ್ತ್ಯೇವ ತದ್ವಾಚಿತ್ವಮ್ । ಕೇಷಾಂಚಿತ್ ಅಪ್ರಯೋಗಮಾತ್ರಸ್ಯ

ಶಕ್ತ್ಯಭಾವಾಸಾಧಕತ್ವಾತ್। ಅತಃ ತೃಣತ್ವಾದಿಜಾತಿವಚನಾ ಏವ ಬರ್ಹಿರಾದಿಶಬ್ದಾಃ' ಇತಿ ಬರ್ಹಿರಾಜ್ಯಾಧಿಕರಣೇ (1–1–10) ಸ್ಥಿತತ್ವಾತ್। ತದುಕ್ತಂ ವಾರ್ತಿಕೇ (ತಂತ್ರ 1–4–10)

'ಏಕದೇಶೇಽಪಿ ಯೋ ದೃಷ್ಟಃ ಶಬ್ದೋ ಜಾತಿನಿಬಂಧನಃ ।
ತದತ್ಯಾಗಾನ್ನ ತಸ್ಯಾಸ್ತಿ ನಿಮಿತ್ತಾಂತರಗಾಮಿತಾ' ।

ಇತಿ । ತತಶ್ಚ ಸ್ವರ್ಗಶಬ್ದೋ ಮೋಕ್ಷಸಾಧಾರಣ ಏವ ॥

(ಬರ್ಹಿರಾದಿವೈಷಮ್ಯಶಂಕಾ)

ನನು ಬರ್ಹಿರಾಜ್ಯಾದಿಶಬ್ದೇಷು ಅಸಂಸ್ಕೃತತೃಣಘೃತಾದೌ ಆರ್ಯಪ್ರಯೋಗಾಭಾವೇಽಪಿ ಅನಾರ್ಯಪ್ರಯೋಗಸತ್ತ್ವಾತ್ ಅಸಂಸ್ಕೃತವಾಚಿತಾಽಸ್ತು ನಾಮ । ಸ್ವರ್ಗಶಬ್ದಸ್ಯ ಸೂರ್ಯಧ್ರುವಾಂತರ್ವರ್ತಿಲೋಕಸುಖವಿಶೇಷಾತಿರಿಕ್ತಸ್ಥಲೇ ನಿಯಮೇನಾಪ್ರಯೋಗಾತ್ ತದ್ವ್ಯಾವೃತ್ತ್ಯೈವ ಶಕ್ತಿರಭ್ಯುಪಗಂತವ್ಯಾ । ಅತ ಏವ ಪ್ರೋದ್ಗಾತ್ರಧಿಕರಣೇ (3–5–7) ಉದ್ಗಾತೃಶಬ್ದಸ್ಯ ಋತ್ವಿಗ್ವಿಶೇಷೇ ಇತರವ್ಯಾವೃತ್ತಪ್ರಯೋಗವಿಶೇಷೇಣ ರೂಢತ್ವಾತ್ ತಸ್ಯ ಚೋದ್ಗಾತುರೇಕತ್ವೇನ, 'ಪ್ರೈತು ಹೋತುಶ್ಚಮಸಃ ಪ್ರೋದ್ಗಾತೄಣಾಮ್' ಇತಿ ಬಹುವಚನಾರ್ಥಬಹುತ್ವಾಸಂಭವಾತ್ ತದನ್ವಯಾರ್ಥಂ ರೂಢಿಪೂರ್ವಕಲಕ್ಷಣಯಾ ಅಪಸುಬ್ರಹ್ಮಣ್ಯಾನಾಮ್ ಏಕಸ್ತೋತ್ರಸಂಬಂಧಿನಾಂ ತ್ರಯಾಣಾಂ ವಾ, ಸಸುಬ್ರಹ್ಮಣ್ಯಾನಾಂ ಚತುರ್ಣಾಂ ವಾ ಉದ್ಗಾತ್ರಾದೀನಾಂ ಛಂದೋಗಾನಾಂ ಗ್ರಹಣಮಿತಿ । ಏತದ್ವಿರುಧ್ಯೇತ । ತಥಾ ಅಹೀನಾಧಿಕರಣೇ (3–3–8) 'ತಿಸ್ರ ಏವ ಸಾಹ್ನಸ್ಯೋಪಸದಃ ದ್ವಾದಶಾಹೀನಸ್ಯ' ಇತ್ಯತ್ರ ಅಹೀನಶಬ್ದಸ್ಯ 'ಅಹ್ನಃ ಖಃ ಕ್ರತೌ' ಇತಿ ವ್ಯಾಕರಣಸ್ಮೃತ್ಯಾ ಖಪ್ರತ್ಯಯಾಂತತಯಾ ಅಹರ್ಗಣಸಾಮಾನ್ಯವಾಚಿತಯಾ ವ್ಯುತ್ಪಾದಿತಸ್ಯಾಪಿ, ಅಹೀನಶಬ್ದಸ್ಯ ನಿಯಮೇನ ಸತ್ರೇ ಅಪ್ರಯೋಗಾದಹರ್ಗಣವಿಶೇಷರೂಢಿಮಂಗೀಕೃತ್ಯ, ಜ್ಯೋತಿಷ್ಟೋಮಸ್ಯಾಹರ್ಗಣ ವಿಶೇಷತ್ವಾಭಾವಾತ್, ನ ಹೀನ ಇತಿ ಯೋಗಸ್ಯ ರೂಢಿಪರಾಹತತ್ವೇನ ಯೋಗೇನ ಜ್ಯೋತಿಷ್ಟೋಮೇ ವೃತ್ತ್ಯಸಂಭವಾತ್ ಜ್ಯೋತಿಷ್ಟೋಮಪ್ರಕರಣಾಧೀತಾಯಾ ಅಪಿ ದ್ವಾದಶಾಹೀನಸ್ಯೇತಿ ದ್ವಾದಶೋಪಸತ್ತಾಯಾಃ ಅಹರ್ಗಣವಿಶೇಷೇ ಉತ್ಕರ್ಷ ಇತ್ಯುಕ್ತಮ್ । ತಥಾ 'ಪಾಯ್ಯಸಾನ್ನಾಯ್ಯನಿಕಾಯ್ಯಧಾಯ್ಯಾಮಾನಹವಿರ್ನಿವಾಸಸಾಮಿಧೇನೀಷು' ಇತಿ ವ್ಯಾಕರಣಸ್ಮೃತ್ಯಾ ಸಾಮಿಧೇನೀಮಾತ್ರವಾಚಿತಯಾ ವ್ಯುತ್ಪಾದಿತಸ್ಯಾಪಿ ಧಾಯ್ಯಾಶಬ್ದಸ್ಯ ನ ಸಾಮಿಧೇನಿಮಾತ್ರವಚನತ್ವಮ್ ; ನಾಪಿ ಧೀಯಮಾನತ್ವರೂಪಯೋಗಾರ್ಥವಶೇನ ಧೀಯಮಾನಮಾತ್ರವಚನತ್ವಮ್, ಸ್ತುತಶಸ್ತ್ರಾರ್ಥತಯಾ ಧೀಯಮಾನಾಸು ಋಕ್ಷು ಸಾಮಿಧೇನೀಮಾತ್ರೇ ಚ ಧಾಯ್ಯಾಶಬ್ದಾಪ್ರಯೋಗಾತ್ ; ಅಪಿ ತು 'ಪೃಥುಪಾಜವತ್ಯೌ ಧಾಯ್ಯೇ ಭವತಃ' ಇತ್ಯಾದಿವೈದಿಕಪ್ರಯೋಗವಿಷಯೇಷು ಪೃಥುಪಾಜವತ್ಯಾದಿಷ್ವೇವ ಧಾಯ್ಯಾಶಬ್ದಸ್ಯ ಶಕ್ತಿರಿತಿ 'ಸಮಿಧ್ಯಮಾನವತೀಂ ಸಮಿದ್ಧವತೀಂ ಚ ಅಂತರೇಣ ಧಾಯ್ಯಾಸ್ಸ್ಯುಃ' ಇತಿ ಪಾಂಚಮಿಕಾಧಿಕರಣೇ (5–3–3) ಸ್ಥಿತಮ್ । ಏವಮಾದಿಕಂ ಸರ್ವಂ ವಿರುಧ್ಯೇತ । ಸ್ವರ್ಗಶಬ್ದೇ ತ್ವದುಕ್ತರೀತ್ಯಾ ಪ್ರಯೋಗಾಭಾವೇಽಪಿ ಶಕ್ತಿಸಂಭವೇ ಉದ್ಗಾತ್ರಾದಿಶಬ್ದಾನಾಂ ಋತ್ವಿಗ್ವಿಶೇಷಾದಿಷು ರೂಢೇಃ ಅಕಲ್ಪನೀಯತ್ವಾದಿತಿ ಚೇತ್—

(ತತ್ಪರಿಹಾರಃ)

ಸತ್ಯಮ್ । ಯದಿ ಸರ್ವಾತ್ಮನಾ ತದತಿರಿಕ್ತೇ ಸ್ವರ್ಗಶಬ್ದಪ್ರಯೋಗೋ ನ ಸ್ಯಾತ್, ತದಾ ತದ್ವ್ಯಾವೃತ್ತಾ ರೂಢಿರಭ್ಯುಪಗಂತವ್ಯಾ ಸ್ಯಾತ್ । ಅಸ್ತಿ ಹಿ ತತ್ರಾಪಿ ಪ್ರಯೋಗಃ । (ತೈ.ಆ.1–27–115) 'ತಸ್ಯಾಂ ಹಿರಣ್ಮಯಃ ಕೋಶಃ ಸ್ವರ್ಗೋ ಲೋಕೋ ಜ್ಯೋತಿಷಾಽಽವೃತಃ', 'ಯೋ ವೈ ತಾಂ ಬ್ರಹ್ಮಣೋ ವೇದ', 'ತೇನ ಧೀರಾ ಅಪಿಯಂತಿ ಬ್ರಹ್ಮವಿದಃ ಸ್ವರ್ಗಂ ಲೋಕಮಿತ ಊರ್ಧ್ವಂ ವಿಮುಕ್ತಾಃ', 'ಅಪಹತ್ಯ ಪಾಪ್ಮಾನಮನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ' ಇತಿ ತೈತ್ತಿರೀಯಕ–ಬೃಹದಾರಣ್ಯಕ–ತಲವಕಾರಾದಿಷು ಅಧ್ಯಾತ್ಮಶಾಸ್ತ್ರೇಷು ಪ್ರಯೋಗದರ್ಶನಾತ್ ಪೌರಾಣಿಕಪರಿಕಲ್ಪಿತಸ್ವರ್ಗಶಬ್ದರೂಢೇಃ ಸಾಂಖ್ಯಪರಿಕಲ್ಪಿತಾವ್ಯಕ್ತ ಶಬ್ದರೂಢಿವತ್ ಅನಾದರಣೀಯತ್ವಾತ್। ಅಸ್ಮಿನ್ನೇವ ಪ್ರಕರಣೇ,

'ತ್ರಿಣಾಚಿಕೇತಸ್ತ್ರಯಮೇತತ್ ವಿದಿತ್ವಾ ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಮ್ ।
ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ ಶೋಕಾತಿಗೋ ಮೋದತೇ ಸ್ವರ್ಗಲೋಕೇ॥

'ಇತಿಮಂತ್ರೇ ಕರ್ಮಜ್ಞಾನಸಮುಚ್ಚಯಸಾಧ್ಯವಾಚಕತಯಾಶ್ರೂಯಮಾಣಸ್ಯ ಸ್ವರ್ಗಲೋಕಶಬ್ದಸ್ಯ ಸೂರ್ಯಧ್ರುವಾಂತರ್ವರ್ತಿಲೋಕವ್ಯತಿರಿಕ್ತ ವೈರಾಜಪದವಾಚಕತಯಾ ಪರೈರಪಿ ವ್ಯಾಖ್ಯಾತತ್ವಾಚ್ಚ । ನನು ಸೂರ್ಯಲೋಕೋರ್ಧ್ವವರ್ತಿಲೋಕತ್ವಸ್ಯೈವ ಪ್ರವೃತ್ತಿನಿಮಿತ್ತತಯಾ ತಸ್ಯ ಚ ವೈರಾಜಪದೇಽಪಿ ಸತ್ತ್ವಾತ್ ನಾಮುಖ್ಯಾರ್ಥತ್ವಮಿತಿ ಚೇತ್–ತರ್ಹಿ ಭಗವಲ್ಲೋಕೇಽಪಿ ಊರ್ಧ್ವವರ್ತಿತ್ವಾವಿಶೇಷೇಣ ಮುಖ್ಯಾರ್ಥತ್ವಾನಪಾಯಾತ್। 'ಸ್ವರ್ಗಾ-ಪವರ್ಗಮಾರ್ಗಾಭ್ಯಾಮ್' ಇತ್ಯಾದಿ ವ್ಯವಹಾರಸ್ಯ 'ಬ್ರಾಹ್ಮಣ ಪರಿವ್ರಾಜಕನ್ಯಾಯೇನ' ಉಪಪತ್ತೇಶ್ಚ ।

ಅಸ್ತು ವಾ ಅಮುಖ್ಯಾರ್ಥತ್ವಮ್ । ಮುಖ್ಯಾರ್ಥೇ ಬಾಧಕಸತ್ತ್ವಾತ್ । ಕಿಮತ್ರ ಬಾಧಕಮಿತಿ ಚೇತ್–ಶ್ರೂಯತಾಮವಧಾನೇನ। 'ಸ್ವರ್ಗೇ ಲೋಕೇ ನ ಭಯಂ ಕಿಂಚ ನಾಸ್ತಿ' ಇತಿ ಪ್ರಥಮಪ್ರಶ್ನಮಂತ್ರೇ 'ನ ಭಯಂ ಕಿಂಚ ನಾಸ್ತಿ' ಇತಿ ಅಪಹತಪಾಪ್ಮತ್ವಂ ಪ್ರತಿಪಾದ್ಯತೇ । ಕಥಮ್ ? ಸ್ವರ್ಗೇಽಪಿ ಪಾತಭೀತಸ್ಯ' ಇತ್ಯುಕ್ತರೀತ್ಯಾ ಕೇನ ಪಾಪೇನ ಕದಾ ಪತಿಷ್ಯಾಮಿ ಇತಿ ಭೀತ್ಯಭಾವಃ ಪ್ರತಿಪಾದ್ಯತೇ ; ಸ ಹಿ ಅಪಹತಪಾಪ್ಮನ ಏವ ಸಂಭವತಿ। 'ನ ತತ್ರ ತ್ವಂ ನ ಜರಯಾ ಬಿಭೇತಿ ' ಇತ್ಯನೇನ ವಿಜರತ್ವವಿಮೃತ್ಯುತ್ವೇ ಪ್ರತಿಪಾದ್ಯೇತೇ । 'ಉಭೇ ತೀರ್ತ್ವಾ ಅಶನಾಯಾಪಿಪಾಸೇ' ಇತ್ಯನೇನ ವಿಜಿಘತ್ಸತ್ವಾಪಿಪಾಸತ್ವೇ ಪ್ರತಿಪಾದ್ಯೇತೇ । 'ಶೋಕಾತಿಗಃ' ಇತ್ಯನೇನ ವಿಶೋಕತ್ವಮ್ । 'ಮೋದತೇ ಸ್ವರ್ಗಲೋಕೇ' ಇತ್ಯನೇನ ' ಸ ಯದಿ ಪಿತೃಲೋಕಕಾಮೋ ಭವತಿ, ಸಂಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠಂತಿ । ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ' ಇತಿ ಶ್ರುತಿಸಂದರ್ಭಪ್ರತಿಪಾದ್ಯೇ ಸತ್ಯಕಾಮತ್ವ-ಸತ್ಯಸಂಕಲ್ಪತ್ವೇ ಪ್ರತಿಪಾದ್ಯೇತೇ। ತತಶ್ಚಾಧ್ಯಾತ್ಮಸಿದ್ಧಸ್ಯಾಪಹತಪಾಪ್ಮತ್ವಾದಿಬ್ರಾಹ್ಮಗುಣಾಷ್ಟಕಾವಿರ್ಭಾವಸ್ಯೇಹ ಪ್ರತೀಯಮಾನತಯಾ ತಸ್ಯೈವೇಹ ಗ್ರಹಣಸಂಭವೇ ಪೌರಾಣಿಕಸ್ವರ್ಗಲೋಕಗತಾಪೇಕ್ಷಿಕಜರಾ—ಮರಣಾದ್ಯಭಾವಸ್ವೀಕಾರಸ್ಯಾನುಚಿತತ್ವಾತ್ ।

ಅತ ಏವ ಸಪ್ತಮೇ ವಿಧ್ಯಂತಾಧಿಕರಣೇ (7–4–1) ಅನುಪದಿಷ್ಟೇತಿಕರ್ತವ್ಯತಾಕಾಸು ಸೌರ್ಯಾದಿವಿಕೃತಿಭಾವನಾಸು ಇತಿಕರ್ತವ್ಯತಾಕಾಂಕ್ಷಾಯಾಂ ವೈತಾನಿಕ ಕರ್ಮಾಧಿಕಾರಪ್ರವೃತ್ತತ್ರಯೀವಿಹಿತತ್ವಸಾಮಾನ್ಯಾತ್ ವೈದಿಕ್ಯೇವ ದರ್ಶಪೌರ್ಣಮಾಸೀ ಇತಿಕರ್ತವ್ಯತಾ ಉಪತಿಷ್ಠಿತ ಇತ್ಯುಕ್ತಮ್ । ಉಕ್ತಂ ಚ ಶಾಸ್ತ್ರದೀಪಿಕಾಯಾಮ್—

'ವೈದಿಕೀ ವೈದಿಕತ್ವೇನ ಸಾಮಾನ್ಯೇನೋಪತಿಷ್ಠತೇ ।
ಲೌಕಿಕೀತ್ವಸಮಾನತ್ವಾನ್ನೋಪಸ್ಥಾಸ್ಯತ್ಯಪೇಕ್ಷಿತಾ ।' ಇತಿ।

ನ ಚ–'ಯದ್ಯೇಕಂ ಯೂಪಮುಪಸ್ಪೃಶೇತ್, ಏಷ ತೇ ವಾಯಾವಿತಿ ಬ್ರೂಯಾತ್' ಇತಿ ವಿಹಿತಸ್ಯ 'ಏಷ ತೇ ವಾಯೌ' ಇತಿ ವಚನಸ್ಯ ವೈದಿಕತ್ವಸಾಮಾನ್ಯೇನ ವಿಹಿತವೈದಿಕ ಯೂಪಸ್ಪರ್ಶನಿಮಿತ್ತಕತ್ವಮೇವ ಸ್ಯಾತ್ । ನ ಚೇಷ್ಟಾಪತ್ತಿಃ । 'ಲೌಕಿಕೇ ದೋಷಸಂಯೋಗಾತ್' ಇತಿ (ಪೂ.ಮೀ. 9–3–9) ನಾವಮಿಕಾಧಿಕರಣವಿರೋಧಪ್ರಸಂಗಾತ್ ಇತಿ—ವಾಚ್ಯಮ್ ; 'ಯೂಪೋ ವೈ ಯಜ್ಞಸ್ಯ ದುರಿಷ್ಟಮಾಮುಂಚತೇ ತಸ್ಮಾತ್ ಯೂಪೋ ನೋಪಸ್ಪೃಶ್ಯಃ' ಇತಿ ಪ್ರತಿಷಿಧ್ಯ, 'ಯದ್ಯೇಕಂ ಯೂಪಮುಪಸ್ಪೃಶೇತ್ ಏಷ ತೇ ವಾಯಾವಿತಿ ಬ್ರೂಯಾತ್' ಇತಿ ಅನಂತರಮೇವ ವಿಹಿತಸ್ಯ ಪ್ರತಿಷಿದ್ಧ-ಪ್ರಾಯಶ್ಚಿತ್ತಸಾಕಾಂಕ್ಷ ಲೌಕಿಕ ಸ್ಪರ್ಶವಿಷಯತ್ವಾ ವಶ್ಯಂಭಾವೇನ ವೈದಿಕವಿಷಯತ್ವಾಸಂಭವೇಽಪಿ ಅಸತಿ ಬಾಧಕೇ ವೈದಿಕ ವಿಷಯತ್ವಸ್ಯ ಯುಕ್ತತ್ವಾತ್ ।

ಅತ ಏವ, 'ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್ ತಾವತೋ ವಾರುಣಾನ್ ಚತುಷ್ಕಪಾಲಾನ್ನಿರ್ವಪೇತ್' (ಪೂ. ಮೀ. 3–4–34) ಇತಿ ವಿಹಿತೇಷ್ಟಿರ್ವೈದಿಕ ಏವಾಶ್ವ ದಾನೇ, ನ ತು 'ನ ಕೇಸರಿಣೋ ದದಾತಿ' ಇತಿ ನಿಷಿದ್ಧೇ ಪ್ರಾಯಶ್ಚಿತ್ತಸಾಪೇಕ್ಷೇ ಸುಹೃದಾದಿಭ್ಯಃ ಸ್ನೇಹಾದಿನಾ ಕ್ರಿಯಮಾಣೇ ಇತಿ ನಿರ್ಣೀತಂ ತೃತೀಯೇ ।

ತಥಾ 'ಯೋಗಿನಃ ಪ್ರತಿ ಸ್ಮರ್ಯತೇ ಸ್ಮಾರ್ತೇ ಚೈತೇ' (ಬ್ರ.ಸೂ. 4–2–20) ಇತಿ ಸೂತ್ರೇ ಸ್ಮಾರ್ತಸ್ಯ ವೇದಾಂತೇ ಪ್ರತ್ಯಭಿಜ್ಞಾ ಮಿತ್ಯುಕ್ತಂ ಪರೈಃ। ತತಶ್ಚ 'ಸ್ವರ್ಗೇ ಲೋಕೇ' ಇತಿ ಮಂತ್ರೇ ಅಧ್ಯಾತ್ಮಶಾಸ್ತ್ರಸಿದ್ಧಸ್ಯ ಅಪಹತಪಾಪ್ಮತ್ವಾದಿಬ್ರಾಹ್ಮಗುಣಾಷ್ಟಕಸ್ಯೈವ ಗ್ರಹಣಮುಚಿತಮ್। 'ಸ್ವರ್ಗಲೋಕಾ ಅಮೃತತ್ವಂ ಭಜಂತೇ' ಇತಿ ದ್ವಿತೀಯ ಪ್ರಶ್ನಮಂತ್ರೇ ಅಮೃತತ್ವ ಭಾಕ್ತ್ವಶ್ರವಣಾತ್; ಅಮೃತತ್ವಶಬ್ದಸ್ಯಾಧ್ಯಾತ್ಮಶಾಸ್ತ್ರೇ ಮೋಕ್ಷ ಏವ ಪ್ರಯೋಗಾತ್। 'ಅಜೀರ್ಯತಾಮಮೃತಾನಾಮ್' ಇತ್ಯತ್ರ ಅಮೃತಶಬ್ದಸ್ಯಾಪಿ ಮುಕ್ತಪರತ್ವೇನಾಪೇಕ್ಷಿಕಾಮೃತತ್ವ ಪರತ್ವಾಭಾವಾತ್। ಉತ್ತರತ್ರ 'ತತೋ ಮಯಾ ನಾಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್', 'ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ' ಇತಿ ಪರಸ್ಯೈವ ಬ್ರಹ್ಮಣೋ ನಾಚಿಕೇತಾಗ್ನಿಪ್ರಾಪ್ಯತ್ವಕಥನೇನ ಸ್ವರ್ಗಶಬ್ದಸ್ಯ ಪ್ರಸಿದ್ಧಸ್ವರ್ಗ ಪರತ್ವಾಸಂಭವಾತ್ । 'ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ' ಇತಿ ಬ್ರಹ್ಮೇತರವಿಮುಖತಯಾ ಪ್ರತಿಪಾದಿತಸ್ಯ ನಚಿಕೇತಸಃ ಕ್ಷಯಿಷ್ಣುಸ್ವರ್ಗಪ್ರಾರ್ಥನಾನುಪಪತ್ತೇಶ್ಚ । 'ಮುಖ್ಯಂ ವಾ ಪೂರ್ವಚೋದನಾಲ್ಲೋಕವತ್' (ಪೂ.ಮೀ. 12–2–23) ಇತ್ಯತ್ರ—'ಸಮಸಂಖ್ಯಾಕಯೋಃ ಪರಸ್ಪರವಿರೋಧ ಏವ ಮುಖ್ಯಸ್ಯ ಪ್ರಾಬಲ್ಯಮ್। ನ ಹಿ ಅಲ್ಪವೈಗುಣ್ಯೇ ಸಂಭವತಿ ಬಹುವೈಗುಣ್ಯಂ ಪ್ರಯೋಗವಚನಂ ಕ್ಷಮತೇ। ಅತಃ ಯತ್ರ ಜಘನ್ಯಾನಾಂ ಭೂಯಸ್ತ್ವಂ, ತತ್ರ 'ಭೂಯಸಾಂ ಸ್ಯಾತ್ ಸಧರ್ಮತ್ವಮ್' ಇತಿ ನ್ಯಾಯ ಏವ ಪ್ರವರ್ತತೇ 'ಇತ್ಯೇವ ಮೀಮಾಂಸಕೈಃ ಸ್ಥಿರೀಕೃತ್ಯ ಸಿದ್ಧಾಂತಿತತ್ವಾತ್; ಪ್ರತರ್ದನವಿದ್ಯಾಯಾಮ್, 'ಏಷಹ್ಯೇವ ಸಾಧು ಕರ್ಮಕಾರಯತಿ', 'ಏಷ ಲೋಕಾಧಿಪತಿರೇಷ ಲೋಕಪಾಲಃ–ಆನಂದೋಽಜರೋಽಮೃತಃ'

ಇತ್ಯೌಪಸಂಹಾರಿಕಪರಮಾತ್ಮಧರ್ಮಬಾಹುಲ್ಯೇನ ಪ್ರಕ್ರಮಶ್ರುತಜೀವಲಿಂಗಬಾಧಸ್ಯ 'ಪ್ರಾಣಸ್ತಥಾನುಗಮಾತ್' (ಬ್ರ.ಸೂ. 1–1–29) ಇತ್ಯತ್ರಪ್ರತಿಪಾದಿತತ್ವಾತ್ ಇತ್ಯಲಮ್ ಅತಿಚರ್ಚಯಾ । ಪ್ರಕೃತಮನುಸರಾಮಃ ॥

## ಅನುವಾದ

### ಸ್ವರ್ಗಶಬ್ದಾರ್ಥ ವಿಚಾರ

ಈ ಪ್ರಕರಣದಲ್ಲಿರುವ 'ಸ್ವರ್ಗ'ಶಬ್ದಗಳಿಗೆ ಮೋಕ್ಷಪರವಾಗಿ ಅರ್ಥಮಾಡಲು ಪ್ರಮಾಣವೇನು ? ಎಂದು ಕೇಳಿದರೆ ಅದಕ್ಕೆ ಉತ್ತರ ಹೀಗಿದೆ:—ಪೂಜ್ಯರಾದ ಭಾಷ್ಯಕಾರರು 'ಸ್ವರ್ಗ್ಯಮಗ್ನಿಮ್' ಎಂಬ ಮಂತ್ರವನ್ನು ಪ್ರಸ್ತಾಪಿಸಿ 'ಇಲ್ಲಿರುವ ಸ್ವರ್ಗಶಬ್ದವು ಪರಮಪುರುಷಾರ್ಥವೆನಿಸಿದ ಮೋಕ್ಷವನ್ನು ತಿಳಿಸುತ್ತದೆ' ಎಂದು ತಿಳಿಸಿರುವರು. ಸ್ವರ್ಗವಾಸಿಗಳು ಅಮರರಾಗುತ್ತಾರೆ ಅಂದರೆ ಸ್ವರ್ಗದಲ್ಲಿರುವವನಿಗೆ ಜನನ–ಮರಣಗಳಿಲ್ಲ ಎಂದು ತಿಳಿದುಬರುವುದರಿಂದಲೂ. ಯಮನು 'ತ್ರಿಣಾಚಿಕೇತಸ್ತ್ರಿಭಿರೇತ್ಯಸಂಧಿಂ ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ' ಎಂದು ಉತ್ತರಿಸಿರುವುದರಿಂದಲೂ 'ಮೋಕ್ಷ' ಎಂಬ"ಅರ್ಥವೇ ಸರಿ. ಮೂರನೇ ವರವನ್ನು ಕೇಳಿದ ನಚಿಕೇತನು ನಶ್ವರವಾದ ಸುಖಗಳನ್ನು ನಿಂದಿಸಿರುವುದರಿಂದ ನಶ್ವರವಾದ ಫಲಗಳಿಂದ ವಿಮುಖನಾದ ನಚಿಕೇತನು ಅಶಾಶ್ವತವಾದ ಸ್ವರ್ಗಫಲವನ್ನು ಕೇಳುತ್ತಾನೆ ಎಂಬುದು ಅಸಂಗತವಾಗುತ್ತದೆ. ಸ್ವರ್ಗಶಬ್ದವು ಅತ್ಯಂತ ಹಿರಿದಾದ ಸುಖವನ್ನು ಬೋಧಿಸುವುದರಿಂದ ಅತ್ಯಧಿಕ ಆನಂದರೂಪವಾದ ಮೋಕ್ಷವನ್ನು ಸ್ವರ್ಗಶಬ್ದದಿಂದ ಉಲ್ಲೇಖಿಸಬಹುದು ಎಂದು ವಾಚ್ಯವಾಗಿಯೂ ತಾತ್ಪರ್ಯರೂಪದಲ್ಲೂ ಪ್ರತಿಪಾದಿಸಿರುವುದರಿಂದ ಮೇಲೆ ಹೇಳಿದ ಆಶಂಕೆಗೆ ಅವಕಾಶವಿಲ್ಲ.

' ಸ್ವರ್ಗೇಲೋಕೇ ನ ಭಯಂ— ಶೋಕಾತಿಗೋಮೋದತೇ ಸ್ವರ್ಗಲೋಕೇ । —ಏತದ್ದಿತೀಯೇನ ವೃಣೇ ವರೇಣ'ಎಂದು ನಚಿಕೇತನು ಎರಡನೆ ವರವಾಗಿ ಕೇಳುವ ಎರಡು ಮಂತ್ರಗಳಲ್ಲಿ 'ಸ್ವರ್ಗ'ಶಬ್ದವು ನಾಲ್ಕುಸಲ ಬಂದಿದೆ. ಈ ಸ್ವರ್ಗ ಶಬ್ದವು ನೇರವಾಗಿ ಮೋಕ್ಷವನ್ನು ತಿಳಿಸಬಲ್ಲದೇ ? ಅಥವಾ ಪರ್ಯಾಯವಾಗಿ (ಲಕ್ಷಣಾ ವೃತ್ತಿಯಿಂದ) ತಿಳಿಸುತ್ತದೆಯೋ ? ಎಂದು ನೇರವಾಗಿ ಹೇಳಲಾಗದು. 'ಸ್ವರ್ಗಾಪವರ್ಗಮಾರ್ಗಾಭ್ಯಾಮ್' 'ಸ್ವರ್ಗಾಪವರ್ಗಯೋರೇಕಮ್' 'ನ ಸ್ವರ್ಗಂ ನಾಪುನರ್ಭವಮ್' ಮುಂತಾದ ಪ್ರಯೋಗಗಳಲ್ಲಿ ಮೋಕ್ಷ (ಅಪವರ್ಗ)ಕ್ಕೆ ಪ್ರತಿದ್ವಂದಿಯಾಗಿ ' ಸ್ವರ್ಗ ' ಶಬ್ದವನ್ನು ಪ್ರಯೋಗಿಸಿರುವುದರಿಂದ ವ್ಯವಹಾರ ಮತ್ತು ವೇದಗಳಲ್ಲಿ ಪ್ರಸಿದ್ಧವಾದ ಸ್ವರ್ಗಶಬ್ದವು ಮೋಕ್ಷವಾಚಿಯಾಗಲಾರದು. ' ಧ್ರುವ ಸೂರ್ಯಾಂತರಂ ಯತ್ತು..........ಲೋಕಸಂಸ್ಥಾನ ಚಿಂತಕೈಃ' ಎಂಬ ಪುರಾಣದ ಉಕ್ತಿಗನುಸಾರವಾಗಿ ಧ್ರುವಲೋಕ ಮತ್ತು ಸೂರ್ಯಲೋಕಗಳ ಮಧ್ಯೆ ಇರುವ ಲೋಕಕ್ಕೆ ಸ್ವರ್ಗಲೋಕವೆಂದು ಹೆಸರು ಎಂದು ಹೇಳಿರುವುದರಿಂದ ಈ ಪ್ರಸಿದ್ಧವಾದ ಸ್ವರ್ಗದಲ್ಲಿಯೇ ಲೌಕಿಕ–ವೈದಿಕ ವ್ಯವಹಾರವಿದೆ. ಮೋಕ್ಷಸ್ಥಾನವು ಸೂರ್ಯಲೋಕ–ಧ್ರುವಲೋಕಗಳ ಮಧ್ಯೆ ಇಲ್ಲದಿರುವುದರಿಂದ ಸ್ವರ್ಗಶಬ್ದವು ಮೋಕ್ಷವಾಚಿಯಾಗಲಾರದು. ಮುಖ್ಯಾರ್ಥದಲ್ಲಿ ಯಾವುದೇ ಬಾಧಕವೂ ಇಲ್ಲದುದರಿಂದ ಪರ್ಯಾಯವಾಗಿ ಅಂದರೆ ಲಕ್ಷಣಾವೃತ್ತಿಯೆಂಬ ಎರಡನೇ ಪಕ್ಷವೂ ಸರಿಯಲ್ಲ.

## ಬಾಧಕತ್ರಯಪರಿಹಾರ



ಪ್ರಶ್ನವಾಕ್ಯದಲ್ಲಿರುವ ಮುಪ್ಪು-ಮರಣಗಳಿಲ್ಲದಿರುವಿಕೆ ಮತ್ತು ಅಮೃತತ್ವಪ್ರಾಪ್ತಿ ಬಾಧಕವೇ ? ಅಥವಾ ಉತ್ತರವಾಕ್ಯದಲ್ಲಿರುವ ಮುಪ್ಪು-ಮರಣಗಳಿಂದ ಪಾರಾಗುವಿಕೆ ಬಾಧಕವೇ ? ಅಥವಾ ಎಲ್ಲ ಬಯಕೆಗಳಿಂದಲೂ ವಿಮುಖನಾದ ನಚಿಕೇತನು ನಶ್ವರವಾದ ಸ್ವರ್ಗವನ್ನು ಪ್ರಾರ್ಥಿಸಲಾರ ಎಂಬುದು ಬಾಧಕವೇ ?

ಮೊದಲು ಹೇಳಿದ ಪ್ರಶ್ನವಾಕ್ಯದಲ್ಲಿರುವ ಮಾತುಗಳು ಬಾಧಕವಾಗಲಾರದು. ಪುರಾಣಗಳಲ್ಲಿ ಸ್ವರ್ಗಸ್ವರೂಪವನ್ನು ಹೇಳಿರುವೆಡೆಗಳಲ್ಲಿ ಮುಪ್ಪು-ಮರಣ-ಹಸಿವು-ಬಾಯಾರಿಕೆ ಮತ್ತು ಶೋಕಗಳಿಲ್ಲದಿರುವಿಕೆಯೂ, ಅಮೃತ ಪಾನದಿಂದ ಅಮೃತತ್ವ ಪ್ರಾಪ್ತಿಯೂ ಹೇಳಲ್ಪಟ್ಟಿವೆ. 'ಆಭೂತ ಸಂಪ್ಲವಂ ಸ್ಥಾನಮಮೃತತ್ವಂ ಹಿ ಭಾಷ್ಯತೇ[1]' ಎಂದು ಸ್ಮೃತಿಗಳಲ್ಲಿ ಹೇಳಿದೆ. 'ಅಜೀರ್ಯತಾಮಮೃತಾನಾಮುಪೇತ್ಯ' ಎಂದು ಮೃತ್ಯುವಿನಲ್ಲೂ ಅಮೃತ ಶಬ್ದವು ಕಂಡುಬರುತ್ತಿದೆ. 'ತೇ ಬ್ರಹ್ಮಲೋಕೇ ತು ಪರಾಂತಕಾಲೇ' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಸ್ವರ್ಗಲೋಕವಾಸಿಗಳಿಗೆ ಬ್ರಹ್ಮೋಪಾಸನೆಯ ಮೂಲಕ ಅಮರತ್ವವುಂಟಾಗುವುದರಿಂದ 'ಸ್ವರ್ಗಲೋಕಾ ಅಮೃತತ್ವಂ ಭಜಂತೇ' ಎಂಬ ಮಾತೂ ಸರಿಹೊಂದುತ್ತದೆ. ಈ ಎಲ್ಲ ಕಾರಣಗಳಿಂದ ಸ್ವರ್ಗಶಬ್ದವು ದೀರ್ಘಕಾಲದ ಮರಣರಾಹಿತ್ಯವನ್ನು ಹೇಳುತ್ತದೆ ಎಂದು ಲೌಕಿಕ ಮತ್ತು ವೈದಿಕವಾಗಿ ಪ್ರಸಿದ್ಧವಾದ, ಕೊನೆಯ ಅಮೃತ ಶಬ್ದಕ್ಕೆ ಅನುಸಾರವಾಗಿ ಆರಂಭದಲ್ಲಿ ಪುನಃ ಪುನಃ ಹೇಳಲ್ಪಟ್ಟ, ಬೇರೊಂದರಿಂದ ಹೇಳಲ್ಪಡದ, ವಿಶೇಷವಾದ ಅರ್ಥವುಳ್ಳ ಸ್ವರ್ಗಶಬ್ದಕ್ಕೆ ಬೇರೊಂದು ರೀತಿಯಲ್ಲಿ ಅರ್ಥ ಹೇಳುವುದು ಸರಿಹೊಂದಲಾರದು. 'ದೇವದತ್ತನು ರೂಪವಂತನು' ಎಂದು ಹೇಳಿದರೆ ರೂಪವಂತ ಎಂಬ ಪದದ ಸ್ವಾರಸ್ಯಕ್ಕನುಗುಣವಾಗಿ ದೇವದತ್ತ ಎಂಬ ಶಬ್ದಕ್ಕೆ ಅತ್ಯಂತ ರೂಪವಂತನಾದ ಯಜ್ಞದತ್ತ ಎಂದು ಅರ್ಥಮಾಡಲಾಗದು.

ಎರಡನೇ ಪಕ್ಷವೂ ಬಾಧಕವಾಗಲಾರದು. 'ತ್ರಿಣಾಚಿಕೇತ ಸ್ತ್ರಿಭಿರೇತ್ಯಸಂಧಿಮ್' ಎಂಬ ಮಂತ್ರದಲ್ಲಿ ಸ್ವರ್ಗಸಾಧನವಾದ ನಾಚಿಕೇತಾಗ್ನಿಯನ್ನು ಮೂರುಸಲ ಚಯನ ಮಾಡಿದರೆ ಜನ್ಮಮರಣಗಳಿಂದ ಪಾರಾಗಲು ಕಾರಣವಾದ ಬ್ರಹ್ಮವಿದ್ಯೆಯನ್ನು ದೊರಕಿಸಿ ಕೊಡುವುದು ಎಂದು ಅರ್ಥವಾಗುವುದರಿಂದ ಸ್ವರ್ಗಶಬ್ದಕ್ಕೆ ಮುಖ್ಯಾರ್ಥದಲ್ಲಿ ಬಾಧಕವಿಲ್ಲ. ಆದುದರಿಂದ ಅದಕ್ಕೆ ಸಮಾನವಾದ ಅರ್ಥವುಳ್ಳ 'ಕರೋತಿ ತದ್ಯೇನ ಪುನರ್ನಜಾಯತೇ' ಎಂಬುದೂ ಸ್ವರ್ಗಶಬ್ದದ ಮುಖ್ಯಾರ್ಥದಲ್ಲಿ ಬಾಧಕವಾಗಲಾರದು.

ನಾಶ ಹೊಂದುವ ಸ್ವರ್ಗದ ಬಗ್ಗೆ ಇತರ ಫಲಗಳಲ್ಲಿ ಆಸಕ್ತನಾಗದ ನಚಿಕೇತನು ಪ್ರಾರ್ಥಿಸುತ್ತಾನೆಂಬುದು ಸರಿಹೊಂದಲಾರದು ಎಂಬ ಮೂರನೆಯ ಮಾತೂ ಬಾಧಕವಾಗಲಾರದು. ಸ್ವರ್ಗಸಾಧನವಾದ ಅಗ್ನಿಯ ಬಗ್ಗೆ ಕೇಳಿದ ಪ್ರಶ್ನೆಗೆ ಹಿತೈಷಿಯಾದ ಯಮನು ಉತ್ತರಿಸುತ್ತಾ ನಚಿಕೇತನು ಮೋಕ್ಷಸ್ವರೂಪವನ್ನು ಪ್ರಶ್ನಿಸದಿದ್ದರೂ 'ಅನಂತಲೋಕಾಪ್ತಿಮಥೋಪ್ರತಿಷ್ಠಾಮ್ ತ್ರಿಣಾಚಿಕೇತಸ್ತ್ರಿಭಿರೇತ್ಯಸಂಧಿಂ ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ'

---

1 ಪಾಂಚಭೌತಿಕ ವಸ್ತುವಿನಾಶವೇ ಅಮೃತತ್ವವೆಂದು ಹೇಳಲ್ಪಡುತ್ತದೆ.

ಮುಂತಾದವುಗಳಿಂದ ಪ್ರಸ್ತಾಪಿಸಲ್ಪಟ್ಟ ಮೋಕ್ಷ ವಿಷಯದಲ್ಲಿ ಅಭಿಲಾಷೆಯು ಹುಟ್ಟಿ 'ಅನ್ಯಂ ವರಂ ನಚಿಕೇತೋವೃಣೀಷ್ವ' ಎಂಬ ನಿಷೇಧ ವಾಕ್ಯದಿಂದ ದೃಢಪಟ್ಟಿತು. ಆ ಸನ್ನಿವೇಶದಲ್ಲಿ ಮಾಡಿದ ನಶ್ವರಫಲಗಳ ನಿಂದೆಯು ಹಿಂದೆ ಹೇಳಿದ ಸ್ವರ್ಗದ ಪ್ರಾರ್ಥನೆಗೆ ಹೇಗೆ ಬಾಧಕವಾಗಬಲ್ಲದು? ಅಲ್ಲದೆ 'ಶ್ವೋಽಭಾವಾಮರ್ತ್ಯಸ್ಯ' ಮುಂತಾದವುಗಳಲ್ಲಿ ಮರ್ತ್ಯರ ಭೋಗನಿಂದೆಯೇ ಕಂಡುಬರುವುದರಿಂದ ಸ್ವರ್ಗನಿಂದೆ ತೋರುವುದಿಲ್ಲ. ಮತ್ತು ಸ್ವರ್ಗ ಶಬ್ದಕ್ಕೆ ಮೋಕ್ಷವು ಅರ್ಥ ಎಂದು ಹೇಳಿದಲ್ಲಿ, ಮೋಕ್ಷವು ಜ್ಞಾನವೊಂದರಿಂದಲೇ ಸಾಧ್ಯವಾಗುವುದರಿಂದಲೂ, ಅಗ್ನಿಯು ಮೋಕ್ಷಸಾಧನವೆಂದು ಹೇಳದಿರುವುದರಿಂದಲೂ, ಆದ್ಯಂತ ಮತ್ತು ಮಧ್ಯದಲ್ಲಿ ಅನೇಕಬಾರಿ ಬರುವ ಸ್ವರ್ಗಶಬ್ದಾರ್ಥದ ಸ್ವಾರಸ್ಯಕ್ಕೆ ಭಂಗವುಂಟಾದೀತು.

ಉತ್ತರದ ಮಾತುಗಳಲ್ಲಿ ಬಾಧಕವಿರಲಿ. ಆದರೂ 'ಉಪಕ್ರಮಾಧಿಕರಣನ್ಯಾಯ[1]'ದಂತೆ ಆರಂಭದ ಪ್ರಶ್ನವಾಕ್ಯದಲ್ಲಿರುವ ಸ್ವರ್ಗಶಬ್ದವೇ ಪ್ರಬಲ. 'ಭೂಯಸಾಂ ಸ್ಯಾತ್ ಸಧರ್ಮತ್ವಮ್' ಎಂಬ ನ್ಯಾಯದಂತೆ ಅನೇಕ ವಾಕ್ಯಗಳಿಂದ ಉತ್ತಮವಾದ ಅರ್ಥವನ್ನು ಹೇಳುವಾಗ ಆರಂಭದಲ್ಲಿ ಕೆಲವು ಸಲ ಹೇಳಿದ ಅರ್ಥವು ಬಾಧಿಸಲ್ಪಡುತ್ತದೆ ಎಂದು ಹೇಳಲಾಗದು. 'ಮುಖ್ಯಂವಾ' ಎಂಬ ಸೂತ್ರದಲ್ಲಿ ಉಪಸಂಹಾರದಲ್ಲಿ ಅನೇಕಸಲ ಹೇಳಿರುವುದಕ್ಕಿಂತಲೂ ಆರಂಭದಲ್ಲಿ ಹೇಳಿರುವ ಪ್ರಧಾನ ಅರ್ಥವೇ ಪ್ರಬಲವೆಂದು ಹೇಳಿದೆ. ಆದುದರಿಂದ ಸ್ವರ್ಗಶಬ್ದಕ್ಕೆ ಮುಖ್ಯವಾದ ಅರ್ಥವನ್ನು ಬಿಡುವಲ್ಲಿ ಯಾವ ಕಾರಣವೂ ಇಲ್ಲ.

## ಮೋಕ್ಷಪರ ಸಿದ್ಧಾಂತ

ಸ್ವರ್ಗ ಶಬ್ದವು ಮುಖ್ಯವೃತ್ತಿಯಿಂದಲೇ ಮೋಕ್ಷವನ್ನು ತಿಳಿಸುತ್ತದೆ. ಸ್ವರ್ಗಕಾಮಾಧಿಕರಣದಲ್ಲಿ 'ನಾಗೃಹೀತ ವಿಶೇಷಣ ನ್ಯಾಯದಿಂದ[2]' ಸ್ವರ್ಗಶಬ್ದವು ಪ್ರೀತಿವಾಚಕವೇ ಹೊರತು ಪ್ರೀತಿವಿಶಿಷ್ಟವಾಚಕವಲ್ಲ ಎಂದು ಹೇಳಿದೆ. ಸ್ವರ್ಗಶಬ್ದವು ಪ್ರೀತಿವಾಚಕವೆಂಬುದು ನಾಗೃಹೀತ ವಿಶೇಷಣ ನ್ಯಾಯದಿಂದ ಸಿದ್ಧವಾದರೂ ಬೇರೆ ದೇಹ, ಬೇರೆ ಲೋಕಗಳಲ್ಲಿ ಭೋಗ್ಯವಾದ ಪ್ರೀತಿವಾಚಕವೆಂದು ಹೇಳಲಾಗುವುದಿಲ್ಲ. 'ಯಸ್ಮಿನ್ನೋಷ್ಣಮ್' ಎಂಬ ವಾಕ್ಯವಿಶೇಷದಿಂದ ವಿಧಿವಾಕ್ಯದಲ್ಲಿ ಹೇಳಿರುವ ಸ್ವರ್ಗಶಬ್ದವು ಪ್ರೀತಿವಿಶೇಷವಾಚಕವೆಂಬ ನಿಶ್ಚಯವುಂಟಾಗುತ್ತದೆ ಎಂದು ಹೇಳಲಾಗದು. ಸ್ವರ್ಗಶಬ್ದವು ಪ್ರೀತಿವಾಚಕ ಎಂದು ನಿರ್ಣಯಿಸಲ್ಪಟ್ಟಿರುವುದರಿಂದ ಯಾವ ಸಂದೇಹವೂ ಉಂಟಾಗುವುದಿಲ್ಲ. ಆದುದರಿಂದ 'ಸಂದಿಗ್ಧೇ ತು ವಾಕ್ಯಶೇಷಾತ್' ಎಂಬ ನ್ಯಾಯವನ್ನು ಅನ್ವಯಿಸಲು ಅವಕಾಶವಿಲ್ಲ ಎಂದು ಮುಂದೆ ವಿಮರ್ಶಿಸಿದ್ದಾರೆ.

ವಸ್ತುತಃ ಸ್ವರ್ಗಶಬ್ದಕ್ಕೆ ಲೋಕ ಎಂದೇ ನಿರ್ಣಯವಾದ ಅರ್ಥವಿದೆ. ಆದರೂ ಆ ಲೋಕದಲ್ಲಿರುವ ಸೀಮಿತವಾದ ಸುಖವನ್ನು ತಿಳಿಸುತ್ತದೆ ಎಂದು ಹೇಳಿದರೆ, ಈ ಸುಖಕ್ಕೆ ಜ್ಯೋತಿಷ್ಟೋಮಾದಿಗಳು ಸಾಧನವೆಂದು ಹೇಳಬೇಕಾದೀತು. ಹಾಗೆ ಹೇಳೋಣವೆಂದರೆ ಸ್ವಲ್ಪ ಹಣ, ಕೆಲವು ಮನುಷ್ಯರು ಮತ್ತು ಅಲ್ಪ ಶ್ರಮದಿಂದ ಸಾಧ್ಯವಾಗುವ ಲೌಕಿಕವಾದ

1 ಉಪಸಂಹಾರಕ್ಕಿಂತಲೂ ಉಪಕ್ರಮು ಪ್ರಬಲ.

2 ವಿಶೇಷಣ ಜ್ಞಾನವಿಲ್ಲದೆ ವಿಶಿಷ್ಟಜ್ಞಾನವುಂಟಾಗಲಾರದು.

ಇತರ ಸಾಧನಗಳಿಂದ ಈ ಸೀಮಿತಸುಖವು ಸಿಗುವಲ್ಲಿ ಅಧಿಕವಾದ ಹಣ, ಅನೇಕ ಮನುಷ್ಯರು ಅತ್ಯಧಿಕ ಶ್ರಮಗಳಿಂದಲೂ, ಅನೇಕ ಅಡ್ಡಿ ಆತಂಕಗಳಿಂದಲೂ ಕೂಡಿದ ಜ್ಯೋತಿಷ್ಟೋಮ ಮುಂತಾದ ಯಾಗಗಳಲ್ಲಿ ಯಾವ ಬುದ್ಧಿವಂತನೂ ಪ್ರವರ್ತಿಸುವುದಿಲ್ಲ. ಇದರಿಂದ ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕೆಂಬ ವಿಧಿವಾಕ್ಯಗಳಿಗೆ ಪ್ರವರ್ತಕತ್ವವೇ ಇಲ್ಲದಂತಾಗುವುದು. ಆದುದರಿಂದ ವಾಕ್ಯಶೇಷದಿಂದ ತಿಳಿದ ಅತ್ಯಂತ ಹಿರಿದಾದ ಪ್ರೀತಿವಿಶೇಷವನ್ನು ತಿಳಿಸುವ ಶಕ್ತಿ ಸ್ವರ್ಗಶಬ್ದದಲ್ಲಿದೆ ಎಂದು ನಿಶ್ಚಯಿಸಲ್ಪಟ್ಟಲ್ಲಿ ವಾಕ್ಯಶೇಷವಿಲ್ಲದ ಕಡೆಗಳಲ್ಲೂ ಯವ-ವರಾಹ ಮುಂತಾದ ಶಬ್ದಗಳಿಗೆ ಅರ್ಥ ನಿರ್ಣಯಿಸುವಂತೆ, ಇಲ್ಲೂ 'ನಿರತಿಶಯಪ್ರೀತಿ' ಎಂಬುದೇ ಅರ್ಥವಾಗುತ್ತದೆ. ಲೌಕಿಕವಾದ ಸಾತಿಶಯಪ್ರೀತಿವಿಶಿಷ್ಟವಾದ ಸ್ವರ್ಗದಲ್ಲೂ ಪ್ರೀತಿರೂಪವಾದ ಗುಣವಿರುವುದರಿಂದ, ನೇರವಾಗಿ ಸಾಮಾನ್ಯಸ್ವರ್ಗವನ್ನೂ ಬೋಧಿಸುವುದರಿಂದ ಬೇರೊಂದು ಶಕ್ತಿಯನ್ನು ಕಲ್ಪಿಸಬೇಕಾದುದೂ ಇಲ್ಲ. ಅಂದರೆ ಸ್ವರ್ಗಶಬ್ದಕ್ಕೆ ಅನೇಕ ಅರ್ಥವೆಂದು ಹೇಳಬೇಕಾದುದೂ ಇಲ್ಲ ಎಂದು ತಾತ್ಪರ್ಯ.

ಪ್ರೀತಿ ಮಾತ್ರವನ್ನು ತಿಳಿಸುವ ಸ್ವರ್ಗಶಬ್ದಕ್ಕೆ ವೇದದಲ್ಲಿ ನಿರತಿಶಯಪ್ರೀತಿವಾಚಕ ಎಂಬ ಅರ್ಥವಿರಲಿ ಎಂದು ಹೇಳಲಾಗದು. 'ನಿರತಿಶಯ' ಎಂಬರ್ಥವು ಬೇರಾವುದರಿಂದಲೂ ತಿಳಿಯದಿರುವುದರಿಂದ 'ನಿರತಿಶಯ' ಎಂಬರ್ಥದಲ್ಲೂ ಶಕ್ತಿಯನ್ನು ಕಲ್ಪಿಸಬೇಕಾಗುವುದರಿಂದ ಲೌಕಿಕ ಮತ್ತು ವೇದಗಳಲ್ಲಿ ಭಿನ್ನ-ಭಿನ್ನ ಅರ್ಥಗಳನ್ನು ಹೇಳಬೇಕಾದೀತು. ವೈದಿಕ ಪ್ರಯೋಗಗಳಿಂದ ಸ್ವರ್ಗಶಬ್ದವು ನಿರತಿಶಯಪ್ರೀತಿವಾಚಕವೆಂದು ಯಾವಾಗ ತಿಳಿಯುವುದೋ ಆಗ ಲೌಕಿಕವಾದ ಸಾತಿಶಯಪ್ರೀತಿಯಲ್ಲಿಯೂ ಪ್ರೀತಿತ್ವವೆಂಬ ಸಾಮಾನ್ಯ ಧರ್ಮವು ಇರುವುದರಿಂದ ಸ್ವರ್ಗಶಬ್ದಕ್ಕೆ ಲೌಕಿಕ ಪ್ರೀತಿಯಲ್ಲಿ ಗೌಣೀವೃತ್ತಿಯೆಂದು ಮೀಮಾಂಸಕರು ತಿಳಿಸಿ, ನಿರತಿಶಯಪ್ರೀತಿವಾಚಕತ್ವವೇ ಸ್ವರ್ಗಶಬ್ದದ ಅರ್ಥ ಎಂದು ಸಮರ್ಥಿಸಿರುವುದರಿಂದ ಮೋಕ್ಷವು ಸ್ವರ್ಗಶಬ್ದವಾಚ್ಯ ಎಂಬುದರಲ್ಲಿ ಯಾವುದೇ ವಿವಾದಕ್ಕೂ ಎಡೆಯಿಲ್ಲ. ಪಾರ್ಥ ಶಬ್ದಪ್ರಯೋಗವು ಅರ್ಜುನನಲ್ಲಿರುವಂತೆ ಪೃಥೆ(ಕುಂತಿ)ಯ ಇತರ ಮಕ್ಕಳಲ್ಲಿ ಹೆಚ್ಚಾಗಿ ಪ್ರಯೋಗವಿಲ್ಲದಿದ್ದರೂ, ಪಾರ್ಥ ಶಬ್ದದ ಮುಖ್ಯಾರ್ಥವಾಗಲು ಹೇಗೆ ಬಾಧಕವಿಲ್ಲವೋ ಹಾಗೆಯೇ ಸ್ವರ್ಗಶಬ್ದವು ಸೂರ್ಯ-ಧ್ರುವಲೋಕಗಳ ಮಧ್ಯೆ ಇರುವ ಲೋಕದಲ್ಲಿರುವ ಸುಖವಿಶೇಷದಲ್ಲಿ ಪ್ರಸಿದ್ಧವಾಗಿರುವಂತೆ ಬೇರೆಡೆಯಲ್ಲಿರುವ ಸುಖಗಳಲ್ಲಿ ಹೆಚ್ಚು ಪ್ರಯೋಗವಿಲ್ಲದಿದ್ದರೂ ಸ್ವರ್ಗಶಬ್ದವಾಚ್ಯವಾಗಲು ಅಡ್ಡಿಯಿಲ್ಲ.

ಆರ್ಯರು ಬರ್ಹಿ-ಆಜ್ಯ ಮುಂತಾದ ಶಬ್ದಗಳನ್ನು ಸಂಸ್ಕಾರ ಹೊಂದದ ಹುಲ್ಲು-ತುಪ್ಪ ಮುಂತಾದವುಗಳಲ್ಲಿ ಪ್ರಯೋಗಿಸದೇ ಇದ್ದರೂ, ಬರ್ಹಿ-ಆಜ್ಯ ಮುಂತಾದ ಶಬ್ದಗಳಿಂದ ಹುಲ್ಲು-ತುಪ್ಪ ಮುಂತಾದವುಗಳು ಬೋಧಿಸಲ್ಪಟ್ಟೇಪಡುತ್ತವೆ. ಕೆಲವರ ಪ್ರಯೋಗವಿಲ್ಲದಿರುವುದರಿಂದಲೇ ಶಬ್ದಶಕ್ತಿಯಿಲ್ಲ ಎಂದು ಹೇಳಲಾಗುವುದಿಲ್ಲ. ಆದುದರಿಂದ ಬರ್ಹಿ ಮೊದಲಾದ ಶಬ್ದಗಳು ತೃಣತ್ವಜಾತಿವಾಚಕಗಳೆಂದು ಬರ್ಹಿರಾಜ್ಯಾಧಿಕರಣದಲ್ಲಿ ಪ್ರತಿಪಾದಿಸಿದ್ದಾರೆ. ಇದನ್ನೇ ತಂತ್ರವಾರ್ತಿಕದಲ್ಲಿ :—

'ವೇದದಲ್ಲಿ ಯಾವ ಪದವು ಜಾತಿಸೂಚಕವಾಗಿರುವುದೋ ಅದು ಎಲ್ಲಕಡೆಯಲ್ಲೂ ಜಾತಿಸೂಚಕಗಳಾಗಿರುತ್ತದೆ. ಅಂದರೆ ಶಬ್ದದ ಸ್ವಾಭಾವಿಕವಾದ ಪ್ರವೃತ್ತಿನಿಮಿತ್ತದಿಂದಲೇ ಆ ಅರ್ಥವನ್ನು ತಿಳಿಸುತ್ತದೆ ಎಂದರ್ಥ. ಆದುದರಿಂದ ಬರ್ಹಿರಾಜ್ಯಾದಿಶಬ್ದಗಳು ಜಾತಿ-

ವಾಚಕಗಳಾಗಿರುವುದರಿಂದ ಅಸಂಸ್ಕೃತ ತೃಣ–ಘೃತಾದಿಗಳನ್ನು ತಿಳಿಸುತ್ತವೆ. ಇದಕ್ಕಾಗಿ ಗೌಣೀವೃತ್ತಿಯನ್ನು ಆಶ್ರಯಿಸಬೇಕಾಗಿಲ್ಲ' ಎಂದು ಹೇಳಿದೆ. ಅದರಂತೆ ಸ್ವರ್ಗಶಬ್ದವು ಮೋಕ್ಷವನ್ನೂ ತಿಳಿಸುತ್ತದೆ.

(ಬರ್ಹಿರಾಜ್ಯಾದಿಶಬ್ದಗಳಿಗಿಂತ ಸ್ವರ್ಗಶಬ್ದ ಭಿನ್ನ ಎಂಬ ಆಶಂಕೆ ಮತ್ತು ಪರಿಹಾರ)

ಬರ್ಹಿರಾಜ್ಯ ಮುಂತಾದ ಶಬ್ದಗಳನ್ನು ಸಂಸ್ಕಾರರಹಿತವಾದ ತೃಣ–ಘೃತಾದಿಗಳಲ್ಲಿ ಆರ್ಯರು ಪ್ರಯೋಗಿಸದಿದ್ದರೂ ಅನಾರ್ಯರ ಪ್ರಯೋಗ ಕಂಡುಬರುವುದರಿಂದ ಸಂಸ್ಕಾರ ಹೊಂದದ ತೃಣ–ಘೃತಾದಿಗಳನ್ನು ಬರ್ಹಿ–ಆಜ್ಯ ಮುಂತಾದ ಶಬ್ದಗಳು ತಿಳಿಸುತ್ತವೆ ಎಂದು ಹೇಳೋಣ. ಸೂರ್ಯಲೋಕ–ಧ್ರುವಲೋಕಗಳ ಮಧ್ಯೆ ಇರುವ ಲೋಕದಲ್ಲಿನ ಸುಖ ವಿಶೇಷವನ್ನುಳಿದು ಬೇರೆಡೆಗಳಲ್ಲಿ ಎಲ್ಲೂ ಸ್ವರ್ಗಶಬ್ದದ ಪ್ರಯೋಗವಿಲ್ಲದಿರುವುದರಿಂದ ಮೋಕ್ಷವನ್ನುಳಿದು ಪ್ರಸಿದ್ಧ ಸ್ವರ್ಗವನ್ನು ಮಾತ್ರ ತಿಳಿಸುತ್ತದೆ ಎಂದು ಹೇಳಬೇಕು. ಆದುದರಿಂದಲೇ 'ಪ್ರೋದ್ಗಾತೃಧಿಕರಣ'ದಲ್ಲಿ ಉದ್ಗಾತೃ ಶಬ್ದಪ್ರಯೋಗವು ಇತರ ಋತ್ವಿಕ್ಕುಗಳನ್ನುಳಿದು ಋತ್ವಿಗ್ವಿಶೇಷದಲ್ಲಿ ರೂಢವಾಗಿರುವುದರಿಂದಲೂ, ಆ ಉದ್ಗಾತೃವು ಒಬ್ಬನೇ ಆಗಿರುವುದರಿಂದಲೂ 'ಪ್ರೈತು ಹೋತಶ್ಚಮಸಃ ಪ್ರೋದ್ಗಾತೃಣಾಮ್' ಎಂಬಲ್ಲಿ ಬಹುವಚನದ ಅರ್ಥವಾದ ಬಹುತ್ವವು ಹೊಂದುವುದಿಲ್ಲ. ಈ ಬಹುವಚನವನ್ನು ಸರಿಹೊಂದಿಸಲು ರೂಢಿಮೂಲಕವಾದ ಲಕ್ಷಣಾವೃತ್ತಿಯಿಂದ ಒಂದೇ ಸ್ಮೃತಿಗೆ ಸಂಬಂಧಿಸಿದ ಸುಬ್ರಹ್ಮಣ್ಯನನ್ನು ಬಿಟ್ಟು ಮೂರು ಜನ ಅಥವಾ ಸುಬ್ರಹ್ಮಣ್ಯಸಹಿತ ನಾಲ್ಕು ಜನ ಉದ್ಗಾತೃಗಳಾದ ಸಾಮವೇದಿಗಳನ್ನು ಗ್ರಹಿಸಬೇಕೆಂದು ಹೇಳಿದೆ. ಸ್ವರ್ಗಶಬ್ದವು ಪ್ರಯೋಗವಿಲ್ಲದಿದ್ದರೂ ಮೋಕ್ಷವನ್ನು ತಿಳಿಸುತ್ತದೆ ಎಂದು ಹೇಳಿದಲ್ಲಿ ಈ ರೂಢಿಪೂರ್ವಕಲಕ್ಷಣಾವೃತ್ತಿಯನ್ನು ಹೇಳಿರುವ ಅಂಶಕ್ಕೆ ವಿರೋಧವುಂಟಾಗುತ್ತದೆ.

ಹಾಗೆಯೇ 'ಅಹೀನಾಧಿಕರಣ'ದಲ್ಲಿ 'ತಿಸ್ರ ಏವ ಸಾಹ್ನಸ್ಯೋಪಸದಃ ದ್ವಾದಶಾಹೀನಸ್ಯ' ಎಂಬಲ್ಲಿ ಅಹೀನಶಬ್ದವು 'ಅಹ್ನಃ ಖಃ ಕ್ರತೌ' ಎಂಬ ವ್ಯಾಕರಣ ನಿಯಮದಂತೆ 'ಖ' ಪ್ರತ್ಯಯಾಂತವಾಗಿದೆ. ಆದುದರಿಂದ ಇದು ಅಹರ್ಗಣ ಸಾಮಾನ್ಯವನ್ನು ತಿಳಿಸುತ್ತದೆ ಎಂದು ವಿವರಣೆ ಕೊಟ್ಟರೂ ಅಹೀನಶಬ್ದವನ್ನು ಸತ್ರವೆಂಬ ಯಾಗದಲ್ಲಿ ನಿಯತವಾಗಿ ಪ್ರಯೋಗಿಸದೇ ಇರುವುದರಿಂದ ಅಹರ್ಗಣ ವಿಶೇಷದಲ್ಲಿ ರೂಢಿಯಾಗಿದೆ ಎಂದು ಅಂಗೀಕರಿಸಲಾಗಿದೆ. ಜ್ಯೋತಿಷ್ಟೋಮವು ಅಹರ್ಗಣ ವಿಶೇಷದಲ್ಲಿ ಸೇರದಿರುವುದರಿಂದಲೂ, ನ–ಹೀನಃ = ಅಹೀನಃ ಎಂಬ ಅವಯವಾರ್ಥ (ಯೌಗಿಕಾರ್ಥ)ವು ಪ್ರಬಲವಾದ ರೂಢ್ಯರ್ಥದಿಂದ ಬಾಧಿಸಲ್ಪಡುವುದರಿಂದ ಅವಯವಶಕ್ತಿಯ ಮೂಲಕ ಅಹೀನ ಶಬ್ದವು ಜ್ಯೋತಿಷ್ಟೋಮವನ್ನು ಬೋಧಿಸಲಾಗದುದರಿಂದಲೂ. ಜ್ಯೋತಿಷ್ಟೋಮಪ್ರಕರಣದಲ್ಲಿ ಹೇಳಿದ್ದರೂ ದ್ವಾದಶಾಹೀನವೆಂಬುದು ದ್ವಾದಶ ಉಪಸತ್ತೆಂಬ ಅಹರ್ಗಣವಿಶೇಷವನ್ನು ಹೇಳುವುದೇ ಉತ್ಕರ್ಷ[1] ವೆಂದು ಹೇಳಿದೆ.

ಅಂತೆಯೇ 'ಪಾಯ್ಯಸಾನ್ನಾಯ್ಯನಿಕಾಯ್ಯಾಧಾಯ್ಯಮಾನಹವಿರ್ನಿವಾಸಸಾಮಿಧೇನೀಷು'

---

1 ಯಾವ ವಿಷಯವು ಯಾವ ದೇಶ–ಕಾಲಗಳಲ್ಲಿ ಶ್ರುತ್ಯುಕ್ತವಾಗಿದೆಯೋ ಅದನ್ನು ಆ ದೇಶ–ಕಾಲಗಳನ್ನು ಬಿಟ್ಟು ಬೇರೆಡೆಗೆ ಒಯ್ಯುವುದು ಉತ್ಕರ್ಷವೆನಿಸುತ್ತದೆ.

ಎಂಬ ವ್ಯಾಕರಣನಿಯಮದಿಂದ ಧಾಯ್ಯಾ ಶಬ್ದವು ಸಾಮಿಧೇನೀ [1] ಸಾಮಾನ್ಯವನ್ನು ತಿಳಿಸುತ್ತದೆ ಎಂದು ವಿವರಿಸಿದ್ದರೂ ಎಲ್ಲ ಸಾಮಿಧೇನಿಗಳನ್ನು ಬೋಧಿಸುವುದಿಲ್ಲ. ಇಡಲ್ಪಡತಕ್ಕದ್ದು (ಉಪಯೋಗಿಸಲ್ಪಡತಕ್ಕದ್ದು) ಧಾಯ್ಯಾ ಎಂಬ ಯೌಗಿಕಾರ್ಥವನ್ನು ಮಾತ್ರ ತಿಳಿಸುವುದೂ ಇಲ್ಲ. ಸ್ತೋತ್ರ-ಶಸ್ತ್ರಗಳಿಗಾಗಿ ಉಪಯೋಗಿಸಲ್ಪಡುವ ಋಕ್ಕುಗಳಲ್ಲಾಗಲೀ, ಸಾಮಿಧೇನೀ ಮಾತ್ರದಲ್ಲಾಗಲೀ ಧಾಯ್ಯಾಶಬ್ದವನ್ನು ಪ್ರಯೋಗಿಸಿಯೂ ಇಲ್ಲ. 'ಪೃಥುಪಾಜವತ್ಯೌಧಾಯ್ಯೇಭವತಃ' ಮುಂತಾದ ವೈದಿಕಪ್ರಯೋಗಗಳಲ್ಲಿ ಕಂಡುಬರುವ (ಪೃಥುಪಾಜ ಅಮರ್ತ್ಯಃ. ಎಂಬ ಎರಡು ಋಕ್ಕುಗಳಲ್ಲಿಯೇ ಧ್ಯಾಯಾಶಬ್ದಶಕ್ತಿಯಿಂದೆ ಎಂದು 'ಸಮಿಧ್ಯಮಾನವತೀಂ ಸಮಿದ್ಧವತೀಂಚಾಂತರೇಣ ಧಾಯ್ಯಾಸ್ಸ್ಯುಃ' ಎಂದು ಪೂರ್ವಮೀಮಾಂಸಾಶಾಸ್ತ್ರದ ಐದನೇ ಅಧ್ಯಾಯದ ಒಂದು ಅಧಿಕರಣದಲ್ಲಿ ಹೇಳಿದೆ.

ಸ್ವರ್ಗಶಬ್ದವು ನೇರವಾಗಿಯೇ ಮೋಕ್ಷವನ್ನು ತಿಳಿಸುತ್ತದೆ ಎಂದು ಹೇಳಿದಲ್ಲಿ ಈ ಮೇಲೆ ಹೇಳಿದ ಎಲ್ಲ ನಿಯಮಗಳಿಗೂ ವಿರೋಧವುಂಟಾಗುತ್ತದೆ.

ನೀವು ಹೇಳುವಂತೆ ಸ್ವರ್ಗಶಬ್ದವು ಶಬ್ದಶಕ್ತಿಯಿಂದಲೇ ಮೋಕ್ಷವನ್ನು ತಿಳಿಸುತ್ತದೆ ಎಂದು ಹೇಳಿದಲ್ಲಿ ಉದ್ಗಾತೃ ಮುಂತಾದ ಶಬ್ದಗಳಿಗೆ ಋತ್ವಿಗ್ವಿಶೇಷಾದಿಗಳಲ್ಲಿ ರೂಢಿಕಲ್ಪನೆಯೇ ಬೇಕಾಗುವುದಿಲ್ಲ ಎಂದು ಹೇಳಿದಲ್ಲಿ ಅದು ನಿಜ. ಒಂದು ವೇಳೆ ಪ್ರಸಿದ್ಧಸ್ವರ್ಗವನ್ನುಳಿದು ಬೇರೆಡೆಗಳಲ್ಲಿ ಸ್ವರ್ಗಶಬ್ದಪ್ರಯೋಗವೇ ಇಲ್ಲದಿದ್ದಲ್ಲಿ ಪ್ರಸಿದ್ಧಸ್ವರ್ಗದಲ್ಲಿ ರೂಢಿಯನ್ನು ಒಪ್ಪಬೇಕಾಗುವುದು. ಆದರೆ ಮೋಕ್ಷದಲ್ಲೂ ಸ್ವರ್ಗಶಬ್ದಪ್ರಯೋಗವಿದೆಯಲ್ಲವೇ ! 'ತಸ್ಯಾಂ ಹಿರಣ್ಮಯಃ ಕೋಶಃ ಸ್ವರ್ಗೋ ಲೋಕೋ ಜ್ಯೋತಿಷಾವೃತಃ'; 'ಯೋವೈತಾಂ ಬ್ರಹ್ಮಣೋವೇದ ; ತೇನ ಧೀರಾಃ ಅಪಿಯಂತಿ ಬ್ರಹ್ಮವಿದಃ ಸ್ವರ್ಗಲೋಕಮಿತ ಊರ್ಧ್ವಂ ವಿಮುಕ್ತಾಃ'; 'ಅಪಹತ ಪಾಪ್ಮಾನಮನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ' ಎಂದು ತೈತ್ತರೀಯ-ಬೃಹದಾರಣ್ಯಕ–ತಲವಕಾರ ಮುಂತಾದ ಆಧ್ಯಾತ್ಮಶಾಸ್ತ್ರದಲ್ಲಿ (ಉಪನಿಷತ್ತುಗಳಲ್ಲಿ) ಮೋಕ್ಷಪರವಾಗಿ ಸ್ವರ್ಗಶಬ್ದಪ್ರಯೋಗವು ಕಂಡುಬರುತ್ತದೆ. ಆದುದರಿಂದ ಪುರಾಣಗಳಲ್ಲಿ ಕಲ್ಪಿಸಿದ ಸ್ವರ್ಗಶಬ್ದದ ರೂಢ್ಯರ್ಥವನ್ನು ಸಾಂಖ್ಯರು ಕಲ್ಪಿಸಿದ ಅವ್ಯಕ್ತಶಬ್ದದ ರೂಢ್ಯರ್ಥವು ಹೇಗೆ ಆದರಣೀಯವಲ್ಲವೊ ಹಾಗೆ ಆದರಿಸಬಾರದು. ಇದೇ ಪ್ರಕರಣದಲ್ಲಿ 'ತ್ರಿಣಾಚಿಕೇತಸ್ತ್ರಯಮೇತದ್ವಿದಿತ್ವಾ........ಮೋದತೇ ಸ್ವರ್ಗಲೋಕೇ' ಎಂಬ ಮಂತ್ರದಲ್ಲಿ ಕರ್ಮಜ್ಞಾನಗಳ ಸಮುಚ್ಚಯದಿಂದ ಲಭಿಸುವ ಸ್ಥಾನವನ್ನು ತಿಳಿಸುವ ಸ್ವರ್ಗಲೋಕವೆಂಬ ಶಬ್ದವು ಸೂರ್ಯಲೋಕ–ಧ್ರುವಲೋಕಗಳ ಮಧ್ಯೆ ಇರುವ ಲೋಕಕ್ಕಿಂತ ಭಿನ್ನವಾದ ವೈರಾಜಸ್ಥಾನ [2] ಬೋಧಕವೆಂದು ಬೇರೆಯವರೂ ಅರ್ಥಮಾಡಿರುವರು.

ಸೂರ್ಯಲೋಕಕ್ಕಿಂತ ಮೇಲಿರುವ ಲೋಕವೆಂಬುದು ಸ್ವರ್ಗಶಬ್ದದ ಪ್ರವೃತ್ತಿನಿಮಿತ್ತವಾಗಿರುವುದರಿಂದ ಅದು ವೈರಾಜಸ್ಥಾನದಲ್ಲೂ ಇದೆ. ಆದುದರಿಂದ ಅದು ಅಮುಖ್ಯವಾದ ಅರ್ಥವಲ್ಲ ಎಂದು ಹೇಳಿದರೆ ಭಗವಲ್ಲೋಕವೂ ಸೂರ್ಯಲೋಕದ ಮೇಲೆ ಇರುವುದರಿಂದ ಅದನ್ನು ಸ್ವರ್ಗಶಬ್ದದ ಮುಖ್ಯಾರ್ಥವೆನ್ನಲು ಯಾವ ತೊಂದರೆಯೂ ಇಲ್ಲ.

---

1 ಅಗ್ನಿಯು ಪ್ರಜ್ವಲಿಸುವಂತೆ ಮಾಡಲು ವಿನಿಯೋಗಿಸಲ್ಪಡುವ ಋಕ್ಕುಗಳು ಸಾಮಿಧೇನೀ ಎನಿಸುತ್ತವೆ.

2 ಸೃಷ್ಟಿಗೆ ಮೊದಲು ಅನಿರುದ್ಧನು ನೆಲಸಿರುವ ಸ್ಥಾನ.

'ಸ್ವರ್ಗಾಪವರ್ಗಮಾರ್ಗಾಭ್ಯಾಮ್' ಮುಂತಾದ ವ್ಯವಹಾರಗಳು 'ಬ್ರಾಹ್ಮಣ ಪರಿವ್ರಾಜಕ ನ್ಯಾಯ[1]'ದಿಂದ ಸರಿಹೊಂದುತ್ತದೆ.'

ಸ್ವರ್ಗಶಬ್ದಕ್ಕೆ ಮುಖ್ಯಾರ್ಥವಾದ ಪ್ರಸಿದ್ಧಸ್ವರ್ಗದಲ್ಲಿ ಬಾಧಕವಿರುವುದರಿಂದ ಗೌಣಾರ್ಥವೇ ಇರಲಿ. ಬಾಧಕವಾವುದೆಂದರೆ ಮನಸ್ಸಿಟ್ಟು ಆಲಿಸಿರಿ :—'ಸ್ವರ್ಗಲೋಕೇ ನ ಭಯಂ ಕಿಂಚನಾಸ್ತಿ' ಎಂಬ ಪ್ರಶ್ನರೂಪವಾದ ಮೊದಲ ಮಂತ್ರದಲ್ಲಿ 'ನ ಭಯಂ ಕಿಂಚ ನಾಸ್ತಿ' ಎಂಬುದರಿಂದ 'ಅಪಹತಪಾಪ್ಮತ್ವ[2]'ವೆಂಬ ಗುಣವು ಹೇಳಲ್ಪಡುತ್ತದೆ. ಇದರಿಂದ 'ಸ್ವರ್ಗೇಽಪಿ ಪಾಪಭೀತಸ್ಯ' ಎಂಬಂತೆ ಯಾವ ಪಾಪದಿಂದ ಯಾವಾಗ ಕೆಳಗುರುಳುವೆನೋ ಎಂಬ ಭಯವಿಲ್ಲ ಎಂದು ಹೇಳಲ್ಪಡುತ್ತದೆ. ಈ ಭಯವಿಲ್ಲದಿರುವಿಕೆ ಪಾಪವನ್ನು ಮಾಡಿದವನಿಗೆ ಮಾತ್ರ ಉಂಟಾಗುತ್ತದೆ. 'ನ ತತ್ರ ತ್ವಂ ಜರಯಾಬಿಭೇತಿ' ಎಂಬುದರಿಂದ ವಿಜರತ್ವ[3], ವಿಮೃತ್ಯುತ್ವ[4]ಗಳು ಹೇಳಲ್ಪಡುತ್ತವೆ. 'ಉಭೇ ತೀರ್ತ್ವಾ ಅಶನಾಯಾಪಿಪಾಸೇ' ಎಂಬುದರಿಂದ ವಿಜಿಘತ್ಸತ್ವ[5] ಅಪಿಪಾಸತ್ವ[6]ಗಳು ಹೇಳಲ್ಪಡುತ್ತವೆ. 'ಶೋಕಾತಿಗಃ' ಎಂಬುದರಿಂದ ವಿಶೋಕತ್ವವು[7] ಹೇಳಲ್ಪಡುತ್ತದೆ. 'ಮೋದತೇ ಸ್ವರ್ಗಲೋಕೇ' ಎಂಬುದರಿಂದ 'ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ, ತೇನ ಪಿತೃಲೋಕೇನ ಸಂಪನ್ನೋ ಮಹೀಯತೇ' ಎಂಬ ಶ್ರುತಿಯಿಂದ ಪ್ರತಿಪಾದಿತವಾದ ಸತ್ಯಕಾಮತ್ವ–ಸತ್ಯಸಂಕಲ್ಪತ್ವ[8]ಗಳು ಹೇಳಲ್ಪಡುತ್ತವೆ. ಇದರಿಂದ ಅಧ್ಯಾತ್ಮಶಾಸ್ತ್ರದಲ್ಲಿ ಸಿದ್ಧವಾಗಿರುವ ಅಪಹತಪಾಪ್ಮತ್ವ ಮೊದಲಾದ ಬ್ರಹ್ಮದ ಎಂಟು ಗುಣಗಳ ಆವಿರ್ಭಾವವೇ ಇಲ್ಲಿ ತಿಳಿದುಬರುವುದರಿಂದ ಅವುಗಳನ್ನೇ ಸ್ವೀಕರಿಸಬೇಕಾಗಿರುವಲ್ಲಿ ಪುರಾಣಗಳಲ್ಲಿ ಹೇಳಲ್ಪಟ್ಟ ಸ್ವರ್ಗದಲ್ಲಿರುವ ಆಪೇಕ್ಷಿಕವಾದ ಜರಾಮರಣಗಳ ಅಭಾವವೆಂಬ ಅರ್ಥವನ್ನು ಸ್ವೀಕರಿಸುವುದು ಉಚಿತವೆನಿಸುವುದಿಲ್ಲ. ಆದುದರಿಂದಲೇ ಏಳನೇ ಅಧ್ಯಾಯದ 'ವಿಧ್ಯಂತಾಧಿಕರಣ'ದಲ್ಲಿ ಅಂಗಕಲಾಪಗಳನ್ನು ಉಪದೇಶಿಸದಿರುವ ಕಡೆಗಳಲ್ಲಿ ಅಂದರೆ ಸೌರ್ಯ ಮುಂತಾದ ವಿಕೃತಿ ಇಷ್ಟಿಗಳಲ್ಲಿ ಅಂಗ ಯಾವುದು ಎಂಬ ಆಕಾಂಕ್ಷೆ ಉಂಟಾದಲ್ಲಿ ವೈತಾನಿಕ (ಯಾಜ್ಞಿಕ) ಕರ್ಮಾಧಿಕಾರದಲ್ಲಿ ಪ್ರವೃತ್ತವಾಗಿ, ವೇದವಿಹಿತವಾದುದರ ಸಾದೃಶ್ಯದಿಂದ ವೇದೋಕ್ತದರ್ಶಪೂರ್ಣಮಾಸದ ವಿಧಾನವೇ ಬರುತ್ತದೆ ಎಂದು ಹೇಳಿದೆ. ಶಾಸ್ತ್ರದೀಪಿಕೆಯಲ್ಲೂ 'ವೈದಿಕ ಕ್ರಿಯೆಗಳಲ್ಲಿ ಸಮಾನವಾದ ವೈದಿಕವಿಧಾನವೇ ಬರುತ್ತದೆ. ಲೌಕಿಕವು ಅಪೇಕ್ಷಿತವಾದರೂ ಸಮನಲ್ಲದುದರಿಂದ ವೈದಿಕವಿಧಾನದಲ್ಲಿ ಬರಲಾರದು' ಎಂದು ಹೇಳಿದೆ.

---

1 ಸಾಮಾನ್ಯವಾಚಕ ಶಬ್ದದ ಜೊತೆಯಲ್ಲಿ ವಿಶೇಷವಾಚಕ ಶಬ್ದಪ್ರಯೋಗಗಳಿರುವೆಡೆಗಳಲ್ಲಿ ವಿಶೇಷವಾದ ಅರ್ಥವನ್ನು ಬಿಟ್ಟು ಉಳಿದ (ಸಾಮಾನ್ಯವಾದ ಅರ್ಥಗಳನ್ನು ತಿಳಿಸುತ್ತವೆ) ಎಂಬಲ್ಲಿ ಈ ನ್ಯಾಯ ಪ್ರವರ್ತಿಸುತ್ತದೆ. ಬ್ರಾಹ್ಮಣರಿಗೆ ಭೋಜನ ಮಾಡಿಸು ಎಂಬಲ್ಲಿ ಪರಿವ್ರಾಜಕಶಬ್ದ ಬಂದಾಗ ಪರಿವ್ರಾಜಕನನ್ನುಳಿದು ಇತರ ಬ್ರಾಹ್ಮಣರನ್ನು 'ಬ್ರಾಹ್ಮಣ' ಶಬ್ದವು ತಿಳಿಸುತ್ತದೆ. ಅಂತೆಯೇ 'ಸ್ವರ್ಗಾಪವರ್ಗಮಾರ್ಗಾಭ್ಯಾಮ್' ಎಂಬಲ್ಲಿ ಅಪವರ್ಗವನ್ನುಳಿದ ಸ್ವರ್ಗವನ್ನು ಸ್ವರ್ಗಶಬ್ದವು ತಿಳಿಸುತ್ತದೆ.

2 ಸರ್ವದೋಷರಾಹಿತ್ಯ.

3 ಸ್ವಭಾವದಿಂದಲೇ ಮುಪ್ಪಿಲ್ಲದಿರುವಿಕೆ.

4 ಯಮನ ಭೀತಿಯಿಲ್ಲದಿರುವಿಕೆ.

5 ಹಸಿವೆಂಬ ದೋಷವಿಲ್ಲದಿರುವಿಕೆ.

6 ಬಾಯಾರಿಕೆಯಿಲ್ಲದಿರುವಿಕೆ.

7 ಮನಸ್ಸಿನ ದೋಷವಿಲ್ಲದಿರುವಿಕೆ.

8 ತಡೆಯಿಲ್ಲದ ಇಚ್ಛೆ–ತಡೆಯಿಲ್ಲದ ಸಂಕಲ್ಪ.

'ಯದ್ಯೇಕಂ ಯೂಪಮುಪಸ್ಪೃಶೇತ್, ಏಷತೇ ವಾಯಾವಿತಿ ಬ್ರೂಯಾತ್' ಒಂದು ವೇಳೆ ಒಂದು ಯೂಪವನ್ನು ಮುಟ್ಟಿದರೆ ಅವನು 'ಏಷತೇ ವಾಯಾವಿತಿ ಬ್ರೂಯಾತ್' ಎಂದು ಹೇಳಬೇಕು ಎಂದು ವಿಧಿಸಿರುವ 'ಏಷತೇ ವಾಯೌ' ಎಂಬ ಮಾತು ವೇದೋಕ್ತವಾದುದ ಕ್ಕೆಲ್ಲಾ ಸಮಾನವಾಗಿರುವುದರಿಂದ ವೈದಿಕಯೂಪಸ್ಪರ್ಶವನ್ನು ಮಾತ್ರ ಕುರಿತದ್ದಾಗಲಿ ಎಂದು ಹೇಳಬೇಕಾದೀತು. ಇದನ್ನು ಒಪ್ಪಲಾಗುವುದಿಲ್ಲ. 9ನೇ ಅಧಿಕರಣದಲ್ಲಿ ಹೇಳಿದ 'ಲೌಕಿಕೇ ಧ್ದೋಷಸಂಯೋಗಾತ್' ಎಂಬುದಕ್ಕೆ ವಿರೋಧವಾಗುತ್ತದೆ ಎಂದು ಹೇಳಲಾಗದು.

'ಯೂಪೋ ವೈ ಯಜ್ಞಸ್ಯ ದುರಿಷ್ಟಮಾಮುಂಚತೇ, ತಸ್ಮಾದ್ಯೂಪೋ ನ ಉಪಸ್ಪೃಶ್ಯಃ' ಎಂದು ನಿಷೇಧಮಾಡಿ 'ಯದ್ಯೇಕಂ ಯೂಪಮುಪಸ್ಪೃಶೇತ್, ಏಷತೇ ವಾಯಾವಿತಿ ಬ್ರೂಯಾತ್' ಎಂದು ಅನಂತರವೇ ಹೇಳಿರುವ ಯೂಪಸ್ಪರ್ಶವನ್ನು ನಿಷೇಧಮಾಡಿ ಏಷತೇ ವಾಯೌ ಎಂಬ ಪ್ರಾಯಶ್ಚಿತ್ತವು ಆಕಾಂಕ್ಷಾವಿಶಿಷ್ಟವಾದ ಲೌಕಿಕಸ್ಪರ್ಶವನ್ನೇ ವಿಷಯವಾಗಿಟ್ಟು ಕೊಂಡಿದೆ. ವೈದಿಕವಿಷಯವಾಗದಿದ್ದರೂ ಬಾಧಕವಿಲ್ಲದಿದ್ದಲ್ಲಿ ವೈದಿಕವಿಷಯಗಳನ್ನು ಅನ್ವಯಿಸಿಕೊಳ್ಳಬಹುದು.

ಆದುದರಿಂದ 'ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್ ತಾವತೋ ವಾರುಣಾನ್ ಚತುಷ್ಕಪಾಲಾನ್ ನಿರ್ವಪೇತ್' ಎಂದು ವಿಹಿತವಾದ ಯಾಗವು ವೈದಿಕವಾದ ಅಶ್ವದಾನವಿಷಯ ವನ್ನು ಕುರಿತದ್ದೇ. 'ನ ಕೇಸರಿಣೋ ದದಾತಿ' ಎಂದು ನಿಷೇಧಿಸಲ್ಪಟ್ಟಿದ್ದೂ ಪ್ರಾಯಶ್ಚಿತ್ತ ಸಾಪೇಕ್ಷವೂ, ಮಿತ್ರರಿಗಾಗಿ ಸ್ನೇಹದಿಂದ ಮಾಡುವುದೂ ಆದ ವಿಷಯವಲ್ಲ ಎಂದು ಮೂರನೇ ಅಧ್ಯಾಯದಲ್ಲಿ ನಿರ್ಣಯಿಸಲ್ಪಟ್ಟಿದೆ. ಅಂತೆಯೇ 'ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ' ಎಂಬ ಸೂತ್ರದಲ್ಲಿ ಸ್ಮೃತಿಗೆ ಸಂಬಂಧಿಸಿದುದನ್ನು ವೇದಾಂತದಲ್ಲಿ ಸ್ಮರಿಸಬೇಕಾಗಿಲ್ಲ ಎಂದು ಇತರರು ಹೇಳಿದ್ದಾರೆ. ಇದರಿಂದ ಸ್ಮೃತ್ಯುಕ್ತ ಪ್ರಸಿದ್ಧಸ್ವರ್ಗವನ್ನು ಈ ವೇದಾಂತದಲ್ಲಿ ಹೇಳಬೇಕಾಗಿಲ್ಲ ಎಂದು ತಿಳಿಯುತ್ತದೆ. ಅನಂತರ 'ಸ್ವರ್ಗೇ ಲೋಕೇ' ಎಂಬ ಮಂತ್ರದಲ್ಲಿ ಅಧ್ಯಾತ್ಮಶಾಸ್ತ್ರಸಿದ್ಧವಾದ 'ಅಪಹತಪಾಪ್ಮತ್ವ' ಮೊದಲಾದ ಬ್ರಹ್ಮ ಸಂಬಂಧಿಯಾದ ಎಂಟು ಗುಣಗಳನ್ನೇ ಗ್ರಹಿಸುವುದು ಉಚಿತ. 'ಸ್ವರ್ಗಲೋಕಾ ಅಮೃತತ್ವಂ ಭಜಂತೇ' ಎಂಬ ಎರಡನೇ ವರದ 2ನೇ ಪ್ರಶ್ನರೂಪವಾದ ಮಂತ್ರದಲ್ಲಿ ಅಮೃತತ್ವವನ್ನು ಪಡೆಯುತ್ತಾನೆ ಎಂದು ಹೇಳಿದೆ. ಅಮೃತತ್ವ ಶಬ್ದವನ್ನು ವೇದಾಂತದಲ್ಲಿ ಮೋಕ್ಷಪರವಾಗಿಯೇ ಪ್ರಯೋಗಿಸುತ್ತಾರೆ.

'ಅಜೀರ್ಯತಾಮಮೃತಾನಾಮ್' ಎಂಬಲ್ಲಿ ಅಮೃತಾನಾಂ ಎಂಬ ಶಬ್ದವು ಮುಕ್ತ ನನ್ನು ತಿಳಿಸುವುದರಿಂದ ಸೀಮಿತವಾದ ಅಮೃತತ್ವವನ್ನು ಹೇಳಲಾಗುವುದಿಲ್ಲ. ಮುಂದೆ 'ತತೋ ಮಯಾ ನಾಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್' 'ಅಭ ಯಂತಿಃ ತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ' ಎಂಬಲ್ಲಿ ಪರಬ್ರಹ್ಮವು ನಾಚಿಕೇತಾಗ್ನಿ ಪ್ರಾಪ್ಯವೆಂದು ಹೇಳಿರುವುದರಿಂದ ಸ್ವರ್ಗಶಬ್ದವು ಪ್ರಸಿದ್ಧಸ್ವರ್ಗಪರವಾಗಲಾರದು. 'ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ' ಎಂಬಲ್ಲಿ ಹೇಳಿರುವಂತೆ ಬ್ರಹ್ಮವನ್ನುಳಿದು ಇತರ ವಿಷಯಗಳಲ್ಲಿ ವಿಮುಖನಾದವನೆಂದು ಹೇಳಿರುವ ನಚಿಕೇತನು ನಶ್ವರವಾದ ಸ್ವರ್ಗವನ್ನು ಪ್ರಾರ್ಥಿಸುತ್ತಾ ನೆಂಬುದೂ ಸಮಂಜಸವಲ್ಲ. 'ಮುಖ್ಯಂ ವಾ ಪೂರ್ವಚೋದನಾಲ್ಲೋಕವತ್' ಎಂಬಲ್ಲಿ ಸಂಖ್ಯೆಯು ಸಮವಾಗಿರುವೆಡೆಗಳಲ್ಲಿ ಪರಸ್ಪರ ವಿರೋಧಬಂದಲ್ಲಿ ಪ್ರಧಾನವಾದುದು ಪ್ರಬಲ

ಎಂದು ಹೇಳಿದೆ. ಅಲ್ಪಗುಣವಿರುವೆಡೆಗಳಲ್ಲಿ ಬಹಳಗುಣವಿಲ್ಲದಿರುವುದನ್ನು ಹೇಳಬೇಕೆಂಬುದು ಸಹ್ಯವಲ್ಲ. ಆದುದರಿಂದ ಬಲ್ಬುಜವಾದುದೆಲ್ಲಿ ಹೆಚ್ಚಿರುವುದೋ ಅಲ್ಲಿ 'ಭೂಯಸಾಂ ಸ್ಯಾತ್ ಸ ಧರ್ಮತ್ವಮ್" ಎಂಬ ನ್ಯಾಯವೇ ಬರುತ್ತದೆ ಎಂದು ಮೀಮಾಂಸಕರು ಸಾಧಿಸಿ ಸಿದ್ಧಾಂತ ಮಾಡಿರುತ್ತಾರೆ. ಅಂತಯೇ ಪ್ರತರ್ದನವಿದ್ಯೆಯಲ್ಲಿ 'ಏಷಹ್ಯೇವ ಸಾಧುಕರ್ಮಕಾರಯತಿ, ಏಷ ಲೋಕಾಧಿಪತಿರೇಷಲೋಕಪಾಲಃ.......ಆನಂದೋಽಜರೋಽಮೃತಃ' ಎಂದು ಹೇಳಿರುವ ಉಪಸಂಹಾರದಲ್ಲಿ ಪರಮಾತ್ಮಧರ್ಮಗಳು ಅಧಿಕವಾಗಿರುವುದರಿಂದ ಉಪಕ್ರಮದಲ್ಲಿ ಹೇಳಿರುವ ಜೀವಧರ್ಮಗಳು ಬಾಧಿಸಲ್ಪಡುತ್ತವೆ ಎಂದು 'ಪ್ರಾಣಸ್ತಥಾನುಗಮಾತ್' ಎಂಬಲ್ಲಿ ಹೇಳಿರುತ್ತಾರೆ. ಹೀಗೆ ಈ ವಿಷಯದಲ್ಲಿ ಮಾಡಿರುವ ಚರ್ಚೆ ಸಾಕು. ಮುಂದು ವರೆಯೋಣ.



## ಮಂತ್ರ ೨೧

**येयं प्रेते विचिकित्सा मनुष्ये अस्तीत्येके नायमस्तीति चैके ।**
**एतद् विद्यामनुशिष्टस्त्वयाऽहं वराणामेष वरस्तृतीयः ॥**

ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ
ನಾಯಮಸ್ತೀತಿ ಚೈಕೇ ।
ಏತದ್ ವಿದ್ಯಾಮನುಶಿಷ್ಟಸ್ತ್ವಯಾಽಹಂ ವರಾಣಾಮೇಷ
ವರಸ್ತೃತೀಯಃ ॥

### ಪ್ರತಿಪದಾರ್ಥ

ಮನುಷ್ಯೇ—ಮನುಷ್ಯನು, ಪ್ರೇತೇ ಸತಿ—ಶರೀರವಿಮುಕ್ತನಾಗಲು, ಯಾ— ಯಾವ, ಇಯಮ್— ಈ (ಮುಂದೆ ಹೇಳುವ), ವಿಚಿಕಿತ್ಸಾ—ಸಂಶಯವು (ಇದೆ), ಯೇ ಕೇ—ಆಸ್ತಿಕರು, ಅಸ್ತೀತಿ—ಜೀವನು ಇರುವನೆಂದೂ, ಯೇ ಕೇ—ನಾಸ್ತಿಕರು. ಅಯಮ್—ಈ ಜೀವನು, ನಾಸ್ತೀತಿ ಚ—ಇಲ್ಲವೆಂದೂ (ಹೇಳುತ್ತಾರೆ), ತ್ವಯಾ—ನಿನ್ನಿಂದ, ಅನುಶಿಷ್ಟಃ—ಉಪದೇಶಿಸಲ್ಪಟ್ಟ, ಅಹಮ್—ನಾನು, ಏತತ್—ಇದನ್ನು ವಿದ್ಯಾಮ್—ತಿಳಿಯಲು ಇಚ್ಛಿಸುತ್ತೇನೆ, ವರಾಣಾಮ್—ನೀನು ಕೊಟ್ಟ ವರಗಳಲ್ಲಿ, ಏಷಃ—ಇದು, ತೃತೀಯಃ—ಮೂರನೆಯ, ವರಃ—ವರವು

### ತಾತ್ಪರ್ಯ

ಮೃತ್ಯುದೇವತೆಯೇ ! 'ಮನುಷ್ಯರ ಚರಮ ಶರೀರ ವಿಯೋಗಾನಂತರ ಈ ಜೀವನು ಸ್ವಸ್ವರೂಪಾವಿರ್ಭಾವ ಪಡೆಯುತ್ತಾನೆ ಎಂದು ಆಸ್ತಿಕರು ಹೇಳುತ್ತಾರೆ. ನಾಸ್ತಿಕರು ಮತ್ತು ಇತರರು ಜೀವನಿರುವುದಿಲ್ಲ ಎನ್ನುತ್ತಾರೆ. ಈ ಸಂಶಯವಿದೆ. ಇದರ ಬಗ್ಗೆ ನಿನ್ನ ಉಪದೇಶದಿಂದ ತಿಳಿಯಬಯಸುತ್ತೇನೆ. ಇದೇ ನನ್ನ ಮೂರನೆಯ ಪ್ರಶ್ನೆ' ಎಂದು ನಚಿಕೇತನು ಹೇಳಿದನು.

### ರಂಗರಾಮಾನುಜಭಾಷ್ಯಮ್

ನಚಿಕೇತಾ ಆಹ—ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ । ಏತದ್ ವಿದ್ಯಾಮನುಶಿಷ್ಟಸ್ತ್ವಯಾಽಹಂ ವರಾಣಾಮೇಷ ವರಸ್ತೃತೀಯಃ । 'ಅತ್ತಾಚರಾಚರಗ್ರಹಣಾತ್' (1–2–9) ಇತ್ಯಧಿಕರಣೇ ಇಮಂ ಮಂತ್ರಂ ಪ್ರಸ್ತುತ್ಯೇತ್ಥಂ ಹಿ ಭಗವತಾ ಭಾಷ್ಯಕೃತಾ—'ಅತ್ರ' ಪರಮಪುರುಷಾರ್ಥರೂಪಬ್ರಹ್ಮಪ್ರಾಪ್ತಿಲಕ್ಷಣಮೋಕ್ಷಯಾಥಾತ್ಮ್ಯವಿಜ್ಞಾನಾಯ ತದುಪಾಯಭೂತಪರಮಾತ್ಮೋಪಾಸನ– ಪರಾವರಾತ್ಮತತ್ತ್ವಜಿಜ್ಞಾಸಯಾಽಯಂ ಪ್ರಶ್ನಃ ಕ್ರಿಯತೇ । ಏವಂಚ 'ಯೇಯಂ ಪ್ರೇತೇ' ಇತಿ ನ ಶರೀರವಿಯೋಗಮಾತ್ರಾಭಿಪ್ರಾಯಮ್ ; ಅಪಿತು ಸರ್ವಬಂಧವಿನಿರ್ಮೋಕ್ಷಾಭಿಪ್ರಾಯಮ್ । ಯಥಾ 'ನ ಪ್ರೇತ್ಯ ಸಂಜ್ಞಾಽಸ್ತಿ' ಇತಿ । ಅಯಮರ್ಥಃ–ಮೋಕ್ಷಾಧಿಕೃತೇ ಮನುಷ್ಯೇ

ಪ್ರೇತೇ–ಸರ್ವಬಂಧವಿನಿರ್ಮುಕ್ತೇ ತತ್ಸ್ವರೂಪವಿಷಯಾ ವಾದಿವಿಪ್ರತಿಪತ್ತಿನಿಮಿತ್ತಾ ಅಸ್ತಿ ನಾಸ್ತ್ಯಾತ್ಮಿಕಾ ಯೇಯಂ ವಿಚಿಕಿತ್ಸಾ, ತದಪನೋದನಾಯ ತತ್ಸ್ವರೂಪಯಾಥಾತ್ಮ್ಯಂ–ತ್ವಯಾಽನುಶಿಷ್ಟೋಽಹಂ ವಿದ್ಯಾಮ್–ಜಾನೀಯಾಮಿತಿ। ತಥಾಹಿ ಬಹುಧಾ ವಿಪ್ರತಿಪದ್ಯಂತೇ ಕೇಚಿತ್ ವಿತ್ತಿಮಾತ್ರಸ್ಯಾಽಽತ್ಮನಃ ಸ್ವರೂಪೋಚ್ಛಿತ್ತಿಲಕ್ಷಣಂ ಮೋಕ್ಷಮಾಚಕ್ಷತೇ । ಅನ್ಯೇ ವಿತ್ತಿಮಾತ್ರಸ್ಯೈವ ಸತೋಽವಿದ್ಯಾಸ್ತಮಯಮ್ । ಪರೇ ಪಾಷಾಣಕಲ್ಪಸ್ಯಾತ್ಮನೋ ಜ್ಞಾನಾದ್ಯಶೇಷವೈಶೇಷಿಕಗುಣೋಚ್ಛೇದಲಕ್ಷಣಂ ಕೈವಲ್ಯರೂಪಮ್ । ಅಪರೇ ಅಪಹತಪಾಪ್ಮಾನಂ ಪರಮಾತ್ಮಾನಮಭ್ಯುಪಗಚ್ಛಂತಃ ತಸ್ಯೈವೋಪಾಧಿಸಂಸರ್ಗನಿಮಿತ್ತಜೀವಭಾವಸ್ಯೋಪಾಧ್ಯಪಗಮೇನ ತದ್ಭಾವಲಕ್ಷಣಂ ಮೋಕ್ಷಮಾತಿಷ್ಠಂತೇ । ತ್ರಯ್ಯಂತನಿಷ್ಣಾತಾಸ್ತು ನಿಖಿಲಜಗದೇಕಕಾರಣಸ್ಯಾಶೇಷಹೇಯಪ್ರತ್ಯನೀಕಾನಂತಜ್ಞಾನಾನಂದೈಕಸ್ವರೂಪಸ್ಯ ಸ್ವಾಭಾವಿಕಾನವಧಿಕಾತಿಶಯಾಸಂಖ್ಯೇಯಕಲ್ಯಾಣಗುಣಾಕರಸ್ಯ ಸಕಲೇತರವಿಲಕ್ಷಣಸ್ಯ ಸರ್ವಾತ್ಮಭೂತಸ್ಯ ಪರಸ್ಯ ಬ್ರಹ್ಮಣಃ ಶರೀರತಯಾ ಪ್ರಕಾರಭೂತಸ್ಯ ಅನುಕೂಲಾಪರಿಚ್ಛಿನ್ನಜ್ಞಾನಸ್ವರೂಪಸ್ಯ ಪರಮಾತ್ಮಾನುಭವೈಕರಸಸ್ಯ ಜೀವಸ್ಯ ಅನಾದಿಕರ್ಮರೂಪಾವಿದ್ಯೋಚ್ಛೇದಪೂರ್ವಕಸ್ವಾಭಾವಿಕಪರಮಾತ್ಮಾನುಭವಮೇವ ಮೋಕ್ಷಮಾಚಕ್ಷತೇ । ತತ್ರ ಮೋಕ್ಷಸ್ವರೂಪಂ ತತ್ಸಾಧನಂ ಚ ತ್ವತ್ಪ್ರಸಾದಾತ್ ವಿದ್ಯಾಮಿತಿ ನಚಿಕೇತಸಾ ಪೃಷ್ಟೋ ಮೃತ್ಯುಃ'– ಇತಿ ಭಾಷಿತಮ್ ॥ ತಥಾ 'ತ್ರಯಾಣಾಮೇವ ಚೈವಮ್....' (1–4–4) ಇತಿ ಸೂತ್ರೇ 'ತೃತೀಯೇನ ವರೇಣ ಮೋಕ್ಷಸ್ವರೂಪಪ್ರಶ್ನದ್ವಾರೇಣ ಉಪೇಯಸ್ವರೂಪಮುಪೇತೃಸ್ವರೂಪಮುಪಾಯಭೂತಕರ್ಮಾನುಗೃಹೀತೋಪಾಸನಸ್ವರೂಪಂ ಚ ಪೃಷ್ಟಮ್' ಇತಿ ಚ ಭಾಷಿತಮ್ । ಶ್ರುತಪ್ರಕಾಶಿಕಾಯಾಂ ಚ, 'ಯೇಯಮ್' ಇತ್ಯಾದಿ ಪ್ರಶ್ನವಾಕ್ಯೇ ಮೋಕ್ಷಸ್ವರೂಪಪ್ರಶ್ನಃ ಕಂಠೋಕ್ತಃ । ಪ್ರತಿವಚನಪ್ರಕಾರೇಣೋಪಾಸನಾದಿಪ್ರಶ್ನಶ್ಚಾರ್ಥಸಿದ್ಧಃ । ನಿರ್ವಿಶೇಷತಾಪತ್ತಿರ್ಮೋಕ್ಷಶ್ಚೇತ್, ವಾಕ್ಯಾರ್ಥಜ್ಞಾನಸ್ಯೋಪಾಯತಾ ಸ್ಯಾತ್ । ಉಭಯಲಿಂಗಕಂ ಪ್ರಾಪ್ಯಂ ಚೇತ್, ತಥಾತ್ವೇನೋಪಾಸನಮುಪಾಯಃ ಸ್ಯಾತ್ । ಅತಃ ಮೋಕ್ಷಸ್ವರೂಪಜ್ಞಾನಂ ತದನುಬಂಧಿಜ್ಞಾನಾಪೇಕ್ಷಮ್' ಇತಿ ವರ್ಣಿತಮ್ ।

ಅತಃ 'ಯೇಯಂ ಪ್ರೇತೇ' ಇತ್ಯಸ್ಯ ಮುಕ್ತಸ್ವರೂಪಪ್ರಶ್ನಪರತ್ವಮೇವ, ನ ದೇಹಾತಿರಿಕ್ತಪಾರಲೌಕಿಕಕರ್ಮಾನುಷ್ಠಾನೋಪಯೋಗಿಕರ್ತೃಭೋಕ್ತ್ರಾತ್ಮಕಜೀವಸ್ವರೂಪಮಾತ್ರಪರತ್ವಮ್ । ಅನ್ಯಥಾ ತಸ್ಯಾರ್ಥಸ್ಯ ದುರಧಿಗಮತ್ವಪ್ರದರ್ಶನ–ವಿವಿಧಭೋಗವಿತರಣ–ಪ್ರಲೋಭನಪರೀಕ್ಷಾಯಾ ಅಸಂಭವಾದಿತಿ ದ್ರಷ್ಟವ್ಯಮ್ । ನಚಿಕೇತಸೋ ಹಿ ಅಯಮಭಿಪ್ರಾಯಃ–ಹಿತೈಷಿವಚನಾದಾತ್ಮಾ ಪರಿತ್ಯಕ್ತಚರಮದೇಹಃ ಆವಿರ್ಭೂತಾಪಹತಪಾಪ್ಮತ್ವಾದಿಗುಣಾಷ್ಟಕೋ ಭವತೀತ್ಯುಪಶ್ರುತ್ಯ, 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' ಇತ್ಯಾದಿನಾ ಮಂತ್ರದ್ವಯೇನ ಮೋಕ್ಷಸಾಧನಭೂತಾಗ್ನಿಮಪ್ರಾಕ್ಷಮ್ । ಅಧುನಾ ತು ವಾದಿವಿಪ್ರತಿಪತ್ತ್ಯಾ ತದ್ವಿಷಯೇ ಸಂದೇಹೋ ಜಾಯತೇ । ಅಯಂ 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' ಇತ್ಯಾದಿನಾ ಮಯೋಪನ್ಯಸ್ತಾಪಹತಪಾಪ್ಮತ್ವಾದಿವಿಶಿಷ್ಟರೂಪ ಆತ್ಮಾ ಅಸ್ತೀತ್ಯೇಕೇ, ನಾಸ್ತೀತ್ಯಪರೇ, ತ್ವಯಾ ಉಪದಿಷ್ಟಃ ಏತಜ್ಜಾನೀಯಾಮಿತಿ । ಅತ ಏವ ಪ್ರತಿವಚನೇ, 'ಏತಚ್ಛ್ರುತ್ವಾ ಸಂಪ್ರತಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ । ಸ ಮೋದತೇ ಮೋದನೀಯಂ ಹಿ ಲಬ್ಧ್ವಾ' ಇತಿ ಏತತ್ಪ್ರಶ್ನಾನುಗುಣ್ಯಮೇವ ದೃಶ್ಯತೇ । ಅತೋ ಯಥೋಕ್ತ ಏವಾರ್ಥಃ ।

ಕೇಚಿತ್ತು—'ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ' ಸೂತ್ರೇ ತಿರೋಹಿತಮಿತಿ ನಿಷ್ಠಾಂತಪದೇ ಉಪಸರ್ಜನತಯಾ ನಿರ್ದಿಷ್ಟಸ್ಯ ತಿರೋಧಾ 'ದೇಹಯೋಗಾದ್ವಾ ಸೋಽಪಿ' (3–2–5)ಇತಿ ತದುತ್ತರಸೂತ್ರೇ, ಸೋಽಪಿ–ತಿರೋ ನಭಾವೋಽಪಿ ಇತಿ ಪುಲ್ಲಿಂಗತಚ್ಛಬ್ದೇನ ಪರಾಮರ್ಶದರ್ಶನಾತ್, 'ಗುಹಾಂ ಪ್ರವಿಷ್ಟಾ ತ್ಮಾನೌ ಹಿ ತದ್ದರ್ಶನಾತ್' ಇತ್ಯತ್ರಾಪಿ ಪ್ರವಿಷ್ಟಾವಿತಿ ಉಪಸರ್ಜನತಯಾ ನಿರ್ದಿಷ್ಟಸ್ಯ ವೇಶಸ್ಯ ತದ್ದರ್ಶನಾತ್, ಇತಿ ತಚ್ಛಬ್ದೇನಪರಾಮರ್ಶದರ್ಶನಾತ್ 'ಸರ್ವನಾಮ್ನಾಽನುಸಂಧಿ ರ್ತ್ತಿಚ್ಛನ್ನಸ್ಯ' ಇತಿ ವಾಮನಸೂತ್ರೇ ಕೃತ್ತದ್ಧಿತಾದಿವೃತ್ತಿನ್ಯಗ್ಭೂತಸ್ಯಾಪಿ ಸರ್ವನಾಮ್ನಾ ರಾಮರ್ಶಸ್ಯಾಂಗೀಕೃತತ್ವಾತ್, 'ಯೇಽಯಂ ಪ್ರೇತ' ಇತಿ ನಿಷ್ಠಾಂತಪ್ರೇತಶಬ್ದೇ ಉಪಸರ್ಜ ತಯಾ ನಿರ್ದಿಷ್ಟಸ್ಯಾಪಿ ಪ್ರಾಯಣಶಬ್ದಿತಮೋಕ್ಷಸ್ಯ ('ದೇಹಯೋಗಾದ್ವಾ ಸೋಽಪಿ' ಇತಿ ತ್) 'ನಾಯಮಸ್ತೀತಿ ಚೈಕೇ' ಇತ್ಯತ್ರ ಅಯಮಿತಿ ಪದೇನ ಪರಾಮರ್ಶೋಽಸ್ತು । ನ ವಂ ಭುಕ್ತವತ್ಯಸ್ಮಿನ್ ಭೋಜನಮಸ್ತಿ ವಾ ನ ವೇತಿ ವಾಕ್ಯವತ್, 'ಮುಕ್ತೇಽಸ್ಮಿನ್ ೇಕ್ಷೋಽಸ್ತಿ ನ ವಾ' ಇತಿ ಸಂದೇಹ ಕಥನಂ ವ್ಯಾಹತಾರ್ಥಮಿತಿ ವಾಚ್ಯಮ್ ; ಮೋಕ್ಷ ಮಾನ್ಯಮಭ್ಯುಪೇತ್ಯ ಮೋಕ್ಷವಿಶೇಷಸಂದೇಹಸ್ಯೋಪಪಾದಯಿತುಂ ಶಕ್ಯತ್ವಾತ್। ಅಯಂ ತ್ಯನೇನ ವಿಶೇಷಪರಾಮರ್ಶಸಂಭವಾತ್ । ನನು ನ ಪ್ರಾಯಣಶಬ್ದಸ್ಯ ಮೋಕ್ಷವಾಚಿತ್ವಂ ಚಿದ್ದೃಷ್ಟಮ್ । ಶರೀರವಿಯೋಗವಾಚಿತ್ವಾತ್ । ಶ್ರುತಪ್ರಕಾಶಿಕಾಯಾಂ ಶರೀರವಿಯೋಗ ಚಿತ್ವಮಭ್ಯುಪೇತ್ಯೈವ ಚರಮಶರೀರವಿಯೋಗಪರತಯಾ ವ್ಯಾಖ್ಯಾತತ್ವಾತ್ ಇತಿ ಚೇತ್ –ಅಸ್ತ್ವೇವಮ್ । ತಥಾಪಿ ಅಯಮಿತ್ಯನೇನ ಚರಮಶರೀರವಿಯೋಗಪರಾಮರ್ಶಸಂಭ ತ್ ತದ್ವಿಷಯಿಣ್ಯೇವ ವಿಚಿಕಿತ್ಸಾ ಅಸ್ತು।ನನು ತಸ್ಯ ನಿಶ್ಚಿತತ್ವಾತ್ ತದ್ವಿಷಯಿಣೀ ವಿಚಿಕಿತ್ಸಾ ೋಪಪದ್ಯತ ಇತಿ ಚೇತ್–ಸತ್ಯಮ್ । ಅಯಂ ಚರಮಶರೀರವಿಯೋಗಃ ಬ್ರಾಹ್ಮರೂಪಾ ರ್ಭಾವಪೂರ್ವಭಾವಿತ್ವೇನ ರೂಪೇಣಾಸ್ತಿ ನ ವೇತಿ ವಿಚಿಕಿತ್ಸಾಯಾಃ ಸೂಪಪಾದತ್ವಾತ್ ತಿ ವದಂತಿ ॥

## ಅನುವಾದ

ನಚಿಕೇತನು—'ಯೇಃ ಯಂ ಪ್ರೇತೇ....... ....ವರಸ್ತೃತೀಯಃ' ಎಂದು ಹೇಳಿದನು. ಅತ್ತಾಚರಾಚರಗ್ರಹಣಾತ್' (1–2–9) ಎಂಬ ಅತ್ರಧಿಕರಣದಲ್ಲಿ ಈ ಮಂತ್ರವನ್ನು ಉದಾಹರಿಸಿ ಪೂಜ್ಯರಾದ ಶ್ರೀಭಾಷ್ಯಕಾರರು 'ಇಲ್ಲಿ, ಪರಮಪುರುಷಾರ್ಥವಾದ ಬ್ರಹ್ಮಪ್ರಾಪ್ತಿ ರೂಪವಾದ ಮೋಕ್ಷವನ್ನು ಯಥಾವತ್ತಾಗಿ ತಿಳಿಯಲು ಅದಕ್ಕೆ ಸಾಧನವಾದ ಪರಮಾತ್ಮನ ಉಪಾಸನೆ, ಜೀವ–ಪರಮಾತ್ಮ ಸ್ವರೂಪಗಳನ್ನು ತಿಳಿಯಲು ಈ ಪ್ರಶ್ನೆಯನ್ನು ಕೇಳುತ್ತಾನೆ. ಇದರಿಂದ 'ಯೇಽಯಂ ಪ್ರೇತೇ' ಎಂಬುದು ಕೇವಲ ಶರೀರವಿಯೋಗವನ್ನು ಮಾತ್ರ ಹೇಳು ವುದಿಲ್ಲ. 'ನ ಪ್ರೇತ್ಯ ಸಂಜ್ಞಾಽಸ್ತಿ' ಮೋಕ್ಷ ಪಡೆದಾಗ ಯಾವುದೇ ಸಂಜ್ಞೆಯೂ ಇರುವುದಿಲ್ಲ ಎಂಬಲ್ಲಿ ಪ್ರೇತ ಶಬ್ದಕ್ಕೆ ಸರ್ವಬಂಧವಿಮೋಚನೆ ಎಂದು ಅರ್ಥಮಾಡಿರುವಂತೆ ಸಮಸ್ತವಾದ ಸಾಂಸಾರಿಕ ಬಂಧನವನ್ನು ಹೋಗಲಾಡಿಸುವ ಅಭಿಪ್ರಾಯವನ್ನು ಸೂಚಿಸುತ್ತದೆ.

ಈ ಮಂತ್ರಕ್ಕೆ ಹೀಗೆ ಅರ್ಥವಿದೆ :—ಮೋಕ್ಷ ಪಡೆಯಲು ಅರ್ಹನಾದ ಮನುಷ್ಯನ ವಿಷಯದಲ್ಲಿ ಪ್ರೇತೇ–ಎಲ್ಲ ಸಾಂಸಾರಿಕ ಬಂಧನದಿಂದಲೂ ಬಿಡುಗಡೆ ಹೊಂದಲು ಆ ಆತ್ಮ ಸ್ವರೂಪದ ಬಗ್ಗೆ ವಾದಿಗಳಲ್ಲಿ ಉಂಟಾದ 'ಇದೆ–ಇಲ್ಲ' ಎಂಬ ಯಾವ ಸಂಶಯವಿದೆಯೋ

ಅದನ್ನು ಹೋಗಲಾಡಿಸುವಲ್ಲಿ ಮುಕ್ತಾತ್ಮಸ್ವರೂಪದ ನೈಜರೂಪವನ್ನು ಕುರಿತು ನೀನು ಉಪದೇಶಿಸಿದಲ್ಲಿ ವಿದ್ವಾನ್'–ತಿಳಿಯುವೆನು ಎಂದು ಹೇಳಿದನು.

ಕೇಳಕಂಡಂತೆ ಈ ವಿಷಯದಲ್ಲಿ ಅಭಿಪ್ರಾಯಭೇದಗಳಿವೆ. ಕೆಲವರು ಜ್ಞಾನಸ್ವರೂಪವಾದ ಆತ್ಮದ ಸ್ವರೂಪ ನಾಶವೇ ಮೋಕ್ಷವೆನ್ನುತ್ತಾರೆ. ಮತ್ತೆ ಕೆಲವರು ಕೇವಲ ಜ್ಞಾನ ಸ್ವರೂಪವಾದ ಆತ್ಮದ ಅವಿದ್ಯಾನಾಶವನ್ನು ಮೋಕ್ಷವೆಂದು ಹೇಳುತ್ತಾರೆ. ಇತರರು ಪಾಷಾಣ ಸಾದೃಶ್ಯವಾದ ಆತ್ಮಕ್ಕೆ ಜ್ಞಾನ ಮುಂತಾದ ಸಮಸ್ತ ವಿಶೇಷ ಧರ್ಮಗಳ ನಾಶ ರೂಪವಾದ ಕೈವಲ್ಯವನ್ನು ಮೋಕ್ಷವೆಂದು ಹೇಳುತ್ತಾರೆ. ಪರಮಾತ್ಮನಿಗೆ ಅಪಹತಪಾಪ್ಮತ್ವಾದಿಗುಣಗಳುಂಟು[1] ಎಂದು ಒಪ್ಪಿರುವ ಕೆಲವರು, ಪರಮಾತ್ಮನಿಗೆ ಉಪಾಧಿಸಂಬಂಧದಿಂದ ಜೀವಭಾವ ಉಂಟಾಯಿತೆಂದೂ, ಉಪಾಧಿಸಂಬಂಧದ ಬಿಡುಗಡೆಯಿಂದ ಪರಮಾತ್ಮಭಾವವನ್ನು ಹೊಂದುವುದೇ ಮೋಕ್ಷವೆಂದು ಹೇಳುತ್ತಾರೆ.

ವೇದಾಂತದಲ್ಲಿ ನಿಷ್ಣಾತರಾದವರಾದರೋ ಸಮಸ್ತ ಪ್ರಪಂಚಕ್ಕೂ ಏಕೈಕ ಕಾರಣನೂ, ಸಮಸ್ತವಾದ ಹೇಯಗುಣಗಳಿಗೆ ವಿರುದ್ಧವಾದ ಅನಂತವಾದ ಜ್ಞಾನಾನಂದಗಳೇ ಸ್ವರೂಪವಾಗಿ ಉಳ್ಳವನೂ, ಸ್ವಾಭಾವಿಕವೂ, ಅವಧಿರಹಿತವೂ, ಅತಿಶಯವೂ ಆದ ಅನೇಕ ಮಂಗಳಕರಗುಣಗಳಿಗೆ ಆಶ್ರಯನೂ, ಸಮಸ್ತ ಇತರ ಎಲ್ಲ ವಸ್ತುಗಳಿಗಿಂತ ವಿಲಕ್ಷಣನೂ, ಎಲ್ಲದಕ್ಕೂ ಆತ್ಮನಾಗಿರುವವನೂ ಆದ ಪರಮಾತ್ಮನ ಶರೀರವಾಗಿರುವುದರಿಂದ ಅವನಿಗೆ ಪ್ರಕಾರವಾಗಿರುವ ಅನುಕೂಲವೂ, ಪರಿಚ್ಛೇದರಹಿತವೂ ಆದ ಜ್ಞಾನವೇಸ್ವರೂಪವಾಗಿರುವ, ಪರಮಾತ್ಮಾನುಭವವೊಂದರಲ್ಲಿಯೇ ಆಸಕ್ತನಾಗಿರುವ ಜೀವನಿಗೆ ಅನಾದಿಯಾದ ಕರ್ಮರೂಪ ಅವಿದ್ಯೆಯ ನಾಶದಿಂದುಂಟಾದ ಸ್ವಾಭಾವಿಕ ಪರಮಾತ್ಮಾನುಭವವೇ ಮೋಕ್ಷವೆಂದು ಹೇಳುತ್ತಾರೆ. ಆ ವಿಷಯದಲ್ಲಿ ಮೋಕ್ಷಸ್ವರೂಪವನ್ನೂ ಅದಕ್ಕೆ ಉಪಾಯವನ್ನೂ ನಿನ್ನ ಅನುಗ್ರಹದಿಂದ ತಿಳಿಯುವೆನು ಎಂದು ನಚಿಕೇತನಿಂದ ಕೇಳಲ್ಪಟ್ಟ ಯಮನು' ಎಂದು ಭಾಷ್ಯದಲ್ಲಿ ವಿವರಿಸಿರುವರು.

ಹಾಗೆಯೇ 'ತ್ರಯಾಣಾಮೇವ ಚೈವಮ್' (1–4–4) ಎಂಬ ಸೂತ್ರದಲ್ಲಿ ಮೂರನೇ ವರದಿಂದ ಮೋಕ್ಷಸ್ವರೂಪವನ್ನು ಪ್ರಶ್ನಿಸುವ ಮೂಲಕ 'ಉಪೇಯ–ಉಪೇತೃ–ಉಪಾಯವಾದ ಕರ್ಮಸಹಕೃತ ಉಪಾಸನ ಇವುಗಳ ಸ್ವರೂಪಗಳು ಕೇಳಲ್ಪಟ್ಟವು ಎಂದು ಭಾಷ್ಯ ಮಾಡಿರುವರು.

ಶ್ರುತ ಪ್ರಕಾಶಿಕೆಯಲ್ಲೂ 'ಯೇಯಂ ಪ್ರೇತೇ' ಎಂದು ಮೊದಲಾಗುವ ಪ್ರಶ್ನವಾಕ್ಯದಲ್ಲಿ ಮೋಕ್ಷಸ್ವರೂಪ ಪ್ರಶ್ನೆಯು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇದಕ್ಕೆ ಉತ್ತರ ರೂಪದಲ್ಲಿರುವ ವಾಕ್ಯಗಳಿಂದ ಉಪಾಸನೆ ಮುಂತಾದ ಪ್ರಶ್ನೆಗಳು ಅರ್ಥಸಿದ್ಧವಾಗುತ್ತದೆ. ನಿರ್ವಿಶೇಷವಾಗಿ ಆಗುವುದೇ ಮೋಕ್ಷವೆಂದಲ್ಲಿ ವಾಕ್ಯಾರ್ಥಜ್ಞಾನವು ಉಪಾಯವಾಗುವುದು. ಉಭಯಲಿಂಗವುಳ್ಳವನು ಪ್ರಾಪ್ಯನಾದಲ್ಲಿ ಆ ರೀತಿಯ ಉಪಾಸನೆಯು ಉಪಾಯವಾಗಿ (ಸಾಧನವಾಗಿ) ಆಗಲಿ, ಆದುದರಿಂದ ಮೋಕ್ಷಸ್ವರೂಪಜ್ಞಾನವು ಅದಕ್ಕನುಗುಣವಾದ (ಉಪಾಯೋಪೇಯ) ಜ್ಞಾನವನ್ನಪೇಕ್ಷಿಸುತ್ತದೆ ಎಂದು ವರ್ಣಿಸಿರುವರು.

---

1 ಗುಣಾಷ್ಟಕಗಳು :—ಅಪಹತಪಾಪ್ಮತ್ವ, ವಿಜರತ್ವ, ವಿಮೃತ್ಯುತ್ವ, ವಿಶೋಕತ್ವ, ವಿಜಿಘತ್ಸತ್ವ, ಅಪಿಪಾಸತ್ವ, ಸತ್ಯಕಾಮತ್ವ, ಸತ್ಯಸಂಕಲ್ಪತ್ವ ಈ ಎಂಟು ಗುಣಗಳು ಪರಮಾತ್ಮನಿಗೆ ಇವೆ.

ಆದುದರಿಂದ 'ಯೇಯಂ ಪ್ರೇತೇ' ಎಂಬುದು ಮುಕ್ತನಸ್ವರೂಪವನ್ನು ಕುರಿತ ಪ್ರಶ್ನೆ ಪರವಾಗಿದೆ. ದೇಹಕ್ಕಿಂತ ಭಿನ್ನವಾದ ಪರಲೋಕ ಸಂಬಂಧಿಯಾದ ಕರ್ಮಗಳ ಅನುಷ್ಠಾನಕ್ಕೆ ಉಪಯುಕ್ತವಾದ ಕರ್ತಾ, ಭೋಕ್ತಾ ಎನಿಸಿದ ಜೀವಸ್ವರೂಪವನ್ನು ಮಾತ್ರ ತಿಳಿಸುವುದಿಲ್ಲ. ಹಾಗಿಲ್ಲದಿದ್ದಲ್ಲಿ ಮೋಕ್ಷಸ್ವರೂಪವನ್ನು ತಿಳಿಯುವುದು ಕಷ್ಟ ಎಂದು ಹೇಳಿ ನಾನಾ ವಿಧವಾದ ಭೋಗಸಾಧಕ ವಸ್ತುಗಳನ್ನು ತೋರಿಸಿ, ಪ್ರಲೋಭಿಸಿ ಪರೀಕ್ಷಿಸಬೇಕಾದ ಆವಶ್ಯಕತೆಯೇ ಉಂಟಾಗುತ್ತಿರಲಿಲ್ಲ ಎಂದು ತಿಳಿಯಬೇಕು.

ಹಿತೈಷಿಗಳ ಮಾತಿನಿಂದ ಈ ಆತ್ಮನು ಚರಮಶರೀರವನ್ನು ಬಿಟ್ಟು ಅಪಹತಪಾಪ್ಮತ್ವವೇ ಮೊದಲಾದ ಅಷ್ಟಗುಣಾವಿರ್ಭಾವವುಳ್ಳವನಾಗಿ ಆಗುತ್ತಾನೆ ಎಂದು ಕೇಳಿ 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' ಇವೇ ಮೊದಲಾದ ಎರಡು ಮಂತ್ರಗಳಿಂದ ಮೋಕ್ಷಕ್ಕೆ ಸಾಧನವಾದ ಅಗ್ನಿಯನ್ನು ಕುರಿತು ಪ್ರಶ್ನಿಸಿದೆ. ಈಗಲಾದರೋ ವಾದಿಗಳಿಗಿರುವ ಅಭಿಪ್ರಾಯಭೇದಗಳಿಂದ (ಆ ವಿಷಯದಲ್ಲಿ) ಸಂದೇಹವುಂಟಾಗಿದೆ. 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' ಎಂಬುದರಿಂದ ನನ್ನಿಂದ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿಗುಣವಿಶಿಷ್ಟನಾದ ಈ ಆತ್ಮನು ಇದ್ದಾನೆಂದೂ, ಕೆಲವರು ಇಲ್ಲವೆಂದೂ ಹೇಳುತ್ತಾರೆ. ನಿನ್ನ ಉಪದೇಶದಿಂದ ಇದನ್ನು ತಿಳಿಯುವೆನು ಎಂದು ನಚಿಕೇತನ ಅಭಿಪ್ರಾಯ. ಆದ್ದರಿಂದಲೇ 'ಏತಚ್ಛ್ರುತ್ವಾ ಸಂಪ್ರತಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ । ಸ ಮೋದತೇ ಮೋದನೀಯಂ ಹಿ ಲಬ್ಧ್ವಾ' ಎಂಬ ಮಂತ್ರದಲ್ಲಿ ಈ ಪ್ರಶ್ನೆಗೆ ಅನುಗುಣವಾಗಿಯೇ ಉತ್ತರವಿದೆ.

ಕೆಲವರು—'ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹಿ ಅಸ್ಯ ಬಂಧವಿಪರ್ಯಯೌ' ಎಂಬ ಸೂತ್ರದಲ್ಲಿ ನಿಷ್ಠಾಪ್ರತ್ಯಯಾಂತ ತಿರೋಹಿತ ಶಬ್ದದಲ್ಲಿ ಉಪಸರ್ಜನವಾಗಿರುವ ತಿರೋಧಾನವನ್ನು 'ದೇಹಯೋಗಾದ್ವಾ ಸೋಽಪಿ' ಎಂಬ ಮುಂದಿನ ಸೂತ್ರದಲ್ಲಿ 'ಸೋಽಪಿ ತಿರೋಧಾನಭಾವೋಽಪಿ' (ಆ ತಿರೋಧಾನಭಾವವೂ ಕೂಡ) ಎಂದು ಪುಲ್ಲಿಂಗದಲ್ಲಿರುವ ತಚ್ಛಬ್ದದಿಂದ ಪರಾಮರ್ಶಿಸಲಾಗಿದೆ. 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬಲ್ಲೂ 'ಪ್ರವಿಷ್ಟೌ' ಎಂದು ಉಪಸರ್ಜನವಾಗಿ ನಿರ್ದೇಶಿಸಲಾಗಿರುವ ಪ್ರವೇಶವನ್ನು 'ತದ್ದರ್ಶನಾತ್' ಎಂದು ತಚ್ಛಬ್ದದಿಂದ ಪರಾಮರ್ಶಿಸುವುದರಿಂದಲೂ 'ಸರ್ವನಾಮ್ನಾನುಸಂಧಿರ್ವೃತ್ತಿಚ್ಛನ್ನಸ್ಯ' ಎಂಬ ವಾಮನಸೂತ್ರದಲ್ಲಿ ಕೃತ್–ತದ್ಧಿತಾದಿಗಳಿಂದ ಭಿನ್ನವಾಗಿರುವುದನ್ನೂ ಸರ್ವನಾಮದಿಂದ ಪರಾಮರ್ಶಿಸಬಹುದೆಂದು ಅಂಗೀಕರಿಸುವುದರಿಂದಲೂ 'ಯೇಽಯಂ ಪ್ರೇತೇ' ಎಂದು ನಿಷ್ಠಾಂತವಾದ ಪ್ರೇತಶಬ್ದದಲ್ಲಿ ಉಪಸರ್ಜನವಾಗಿ ನಿರ್ದೇಶಿಸಲಾಗಿರುವ ಪ್ರಾಯಣಶಬ್ದದಿಂದ ಹೇಳಲ್ಪಡುವ ಮೋಕ್ಷವನ್ನೇ ('ದೇಹಯೋಗಾದ್ವಾ ಸೋಽಪಿ, ಎಂಬಂತೆ) 'ನ್ಯಾಯಮಸ್ತೀತಿ ಚೈಕೇ' ಎಂಬಲ್ಲಿ 'ಅಯಮ್ ಎಂಬ ಶಬ್ದವು ಪರಾಮರ್ಶಿಸಲಿ. ಆದರೆ 'ಊಟಮಾಡಿದವನಲ್ಲಿ ಊಟವಿದೆಯೋ ಇಲ್ಲವೇ' ಎಂಬ ವಾಕ್ಯದಂತೆ 'ಮುಕ್ತನಾದವನಲ್ಲಿ ಮೋಕ್ಷವಿದೆಯೆ ಇಲ್ಲವೇ' ಎಂಬ ಸಂದೇಹವನ್ನು ಹೇಳುವುದು ವ್ಯಾಹತವಾದ ಅರ್ಥವುಳ್ಳದ್ದು ಎಂದು ಹೇಳಬಾರದು. ಮೋಕ್ಷಸಾಮಾನ್ಯವನ್ನಂಗೀಕರಿಸಿ ಮೋಕ್ಷವಿಶೇಷದ ವಿಷಯದಲ್ಲಿ ಸಂದೇಹವನ್ನು ಉಪಪಾದಿಸಲು ಶಕ್ಯವಿದೆ. 'ಅಯಮ್' ಎಂಬುದರಿಂದ (ಆ) ವಿಶೇಷವನ್ನು ಪರಾಮರ್ಶಿಸಲು ಸಾಧ್ಯ.

ಪ್ರಾಯಣ-ಶಬ್ದಕ್ಕೆ ಮೋಕ್ಷ ಎಂಬರ್ಥದ ಪ್ರಯೋಗ ಎಲ್ಲೂ ಕಾಣುವುದಿಲ್ಲ. ಕಾರಣ ಇದು ಶರೀರವಿಯೋಗವನ್ನು ಹೇಳುತ್ತದೆ. ಶ್ರುತಪ್ರಕಾಶಿಕೆಯಲ್ಲೂ ಶರೀರವಿಯೋಗವನ್ನೇ

ಇದು ಪ್ರತಿಪಾದಿಸುತ್ತದೆ ಎಂದು ಅಂಗೀಕರಿಸಿ ಚರಮಶರೀರವಿಯೋಗಪರವಾಗಿಯೇ ವ್ಯಾಖ್ಯಾನಿಸಲಾಗಿದೆ ಎಂದು ಹೇಳುವುದಾದರೆ ಹಾಗೆಯೇ ಆಗಲಿ. ಆದರೂ ಕೂಡ 'ಅಯಮ್' ಎಂಬುದು ಚರಮಶರೀರವಿಯೋಗವನ್ನು ಪರಾಮರ್ಶಿಸಬಹುದಾದ್ದರಿಂದ ಅದರ ವಿಷಯದಲ್ಲೇ ಸಂದೇಹವಿರಲಿ, ಆದರೆ ಅದು ನಿಶ್ಚಯವಾಗಿರುವುದರಿಂದ ಅದರ ವಿಷಯದಲ್ಲಿ ಸಂದೇಹ ಸಲ್ಲದು ಎಂದು ಹೇಳುವುದಾದರೆ—ಇದು ಸತ್ಯ. ಈ ಚರಮಶರೀರವಿಯೋಗವು ಬ್ರಾಹ್ಮಶರೀರದಲ್ಲಿ ಆವಿರ್ಭಾವ—ಪೂರ್ವಭಾವಿರೂಪವಾಗಿದೆಯೋ ಇಲ್ಲವೇ ಎಂಬ ಸಂಶಯವನ್ನು ಚೆನ್ನಾಗಿ ಉಪಪಾದಿಸಬಹುದು ಎಂದು ಹೇಳುತ್ತಾರೆ.

## ಭಾಷ್ಯಸಾರ

ನಚಿಕೇತನು ಎರಡನೇ ವರದಿಂದ ಮೋಕ್ಷಕ್ಕೆ ಕಾರಣವಾದ ಅಗ್ನಿವಿದ್ಯೆಯನ್ನು ಕೇಳಿ ತಿಳಿದನು. ಮೂರನೇ ವರದಿಂದ ತನಗೆ ತಿಳಿದಿದ್ದರೂ ದೃಢಪಡಿಸಲು ಮೋಕ್ಷಸ್ವರೂಪವನ್ನು ಉಪದೇಶಿಸು ಎಂದು ಕೇಳುತ್ತಾನೆ. ತನಗೆ ತಿಳಿದಿದ್ದರೂ ಏಕೆ ಕೇಳಬೇಕು ? ಎಂಬಲ್ಲಿ ಮೋಕ್ಷಸ್ವರೂಪದ ಬಗ್ಗೆ ಅನೇಕ ಅಭಿಪ್ರಾಯಗಳಿವೆ. ಇದರಿಂದ ಸಂಶಯ ಸಹಜವಾಗಿ ಬರುತ್ತದೆ. ಈ ಸಂಶಯದ ರೀತಿಯನ್ನು 'ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ' ಎಂಬುದರಿಂದ ತಿಳಿಸುತ್ತಾನೆ. ಪ್ರಕೃತಿಯಿಂದ ಬಿಡಲ್ಪಟ್ಟ ನಂತರ ಈ ಆತ್ಮವು ಇದೆ ಎಂದು ಕೆಲವರು ಹೇಳುತ್ತಾರೆ, ಮತ್ತೆ ಕೆಲವರು ಇಲ್ಲ ಎಂದು ಹೇಳುತ್ತಾರೆ. 'ಅಸ್ತಿ—ನಾಸ್ತಿ' ಎಂಬ ಸಂಶಯವು ಇತರ ಸಂಶಯಗಳಿಗೂ ಸೂಚಕವಾಗಿದೆ. ಮೋಕ್ಷಸ್ವರೂಪ ವಿಚಾರದಲ್ಲಿ ಕೆಲವರು ಕ್ಷಣಿಕವಿಜ್ಞಾನರೂಪವಾದ ಆತ್ಮದ ಸ್ವರೂಪನಾಶವೇ ಮುಕ್ತಿಯೆಂದೂ, ಮತ್ತೆ ಕೆಲವರು ನಿತ್ಯವಿಜ್ಞಾನರೂಪವಾದುದು ಆತ್ಮ, ಅದರಲ್ಲಿರುವ ಅವಿದ್ಯಾ (ಅಜ್ಞಾನ) ನಾಶವೇ ಮೋಕ್ಷವೆಂದು ಹೇಳುವರು. ತಾರ್ಕಿಕರು ಆತ್ಮನಿಗೆ ಸಮಸ್ತವಾದ ಜ್ಞಾನಾದಿ ವಿಶೇಷಗುಣಗಳೆಲ್ಲವೂ ನಾಶವಾಗಿ ಪಾಷಾಣಸದೃಶವಾಗಿರುವಿಕೆಯೇ ಮೋಕ್ಷವೆನ್ನುವರು. ಕೆಲವರು ಅಪಹತಪಾಪ್ಮತ್ವ ಮುಂತಾದ ಗುಣವಿಶಿಷ್ಟನೂ, ನಿತ್ಯನೂ, ಶುದ್ಧನೂ ಆದ ಪರಮಾತ್ಮನೇ ಉಪಾಧಿ ಸಂಬಂಧದಿಂದ ಜೀವಭಾವ ತಾಳುತ್ತಾನೆ. ಉಪಾಧಿನಾಶದಿಂದ ಬ್ರಹ್ಮಭಾವ ಬರುವುದೇ ಮೋಕ್ಷವೆನ್ನುತ್ತಾರೆ. ವೈದಿಕಶ್ರೇಷ್ಠರು ವಾಸನಾವಿಶಿಷ್ಟನಾದ ಜೀವನಿಗೆ ಅನಾದಿಕರ್ಮರೂಪವಾದ ಅವಿದ್ಯೆಯಿದೆ. ಇದರ ನಾಶದಿಂದ ಅಪಹತಪಾಪ್ಮತ್ವಾದಿ ಎಂಟು ಗುಣಗಳು ವಿಕಾಸಗೊಳ್ಳುತ್ತವೆ. ಆಗ ಜೀವನು ಪ್ರಕೃತಿ ಸಂಬಂಧವಿಲ್ಲದ ಶ್ರೇಷ್ಠವಾದ ಲೋಕ (ಪರಮಪದ) ದಲ್ಲಿದ್ದು ಪರಮಾತ್ಮಾನುಭವ ಪಡೆಯುತ್ತಾನೆ. ಈ ಅನುಭವವೇ ಮೋಕ್ಷವೆಂದು ಹೇಳುತ್ತಾರೆ. ಆತ್ಮನು ನೀರಿನಲ್ಲಿರುವ ತಾವರೆಯಂತಿರುವನು. ಪ್ರಕೃತಿ, ಪುರುಷ ಎಂಬ ವಿವೇಕವಿಲ್ಲದಿರುವುದರಿಂದ ಉಂಟಾದ ಭೋಕ್ತೃತ್ವಜ್ಞಾನದ ನಾಶವೇ ಮೋಕ್ಷವೆಂದು ಸಾಂಖ್ಯರು ಕಲ್ಪಿಸುತ್ತಾರೆ. ಹೀಗೆ ಅನೇಕವಾದ ವಿವಾದಗಳಿಂದ ಉಂಟಾದ ಸಂಶಯವನ್ನು ಉಂಟು—ಇಲ್ಲ ಎಂಬ ಎರಡು ವಿವಾದಗಳಿಂದ ಸಂಗ್ರಹಿಸಿ ಕೇಳುತ್ತಾನೆ. ಈ ಸಂಶಯಗಳನ್ನು ಪರಿಹರಿಸಿಕೊಂಡು ನಿಶ್ಚಯಜ್ಞಾನ ಪಡೆಯಲು, ಮೋಕ್ಷದೆಶೆಯಲ್ಲಿ ಮುಕ್ತನ ಸ್ವರೂಪವಾವುದು ? ಎಂದು ಮೂರನೆಯ ವರವಾಗಿ ಕೇಳುತ್ತಾನೆ. ಸರ್ವಜ್ಞನೂ, ಗುರುವೂ, ಮುಕ್ತಾತ್ಮಸ್ವರೂಪವನ್ನು ಅರಿತವನೂ ಆದ ನೀನು ನಾನರಿಯುವಂತೆ ಉಪದೇಶಿಸು ಎಂದು ಕೇಳಿದನೆಂದು ತಾತ್ಪರ್ಯ.

## ಮಂತ್ರ ೨೨

**देवैरत्रा[1]पि विचिकित्सितं पुरा न हि सुज्ञेयमणुरेष धर्मः ।
अन्यं वरं नचिकेतो वृणीष्व मा मोपरोत्सीरति मा सृजैनम् ॥**

ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ ನ ಹಿ ಸುಜ್ಞೇಯ
ಮಣುರೇಷ ಧರ್ಮಃ ।
ಅನ್ಯಂ ವರಂ ನಚಿಕೇತೋ ವೃಣೀಷ್ವ ಮಾ ಮೋಪರೋತ್ಸೀರತಿ
ಮಾ ಸೃಜೈನಮ್ ॥

### ಪ್ರತಿಪದಾರ್ಥ

ಅತ್ರ—ಮುಕ್ತಾತ್ಮಸ್ವರೂಪ ವಿಷಯದಲ್ಲಿ, ಪುರಾ—ಹಿಂದೆ, ದೇವೈಃ ಅಪಿ—ದೇವತೆಗಳಿಂದಲೂ, ವಿಚಿಕಿತ್ಸಿತಮ್—ಸಂಶಯವು ವ್ಯಕ್ತವಾಯಿತು. ಏಷಃ—ಈ, ಧರ್ಮಃ—ಮೋಕ್ಷರೂಪ ಧರ್ಮವು, ಅಣುಃ—ಅತಿ ಸೂಕ್ಷ್ಮವಾದುದು, ನ ಹಿ ಸುಜ್ಞೇಯಮ್—(ಆದುದರಿಂದಲೇ) ಸುಲಭವಾಗಿ ತಿಳಿಯಲಶಕ್ಯವು, ನಚಿಕೇತಃ—ಎಲೈ ನಚಿಕೇತನೇ ! ಅನ್ಯಂ ವರಮ್—ಬೇರೊಂದು ವರವನ್ನು, ವೃಣೀಷ್ವ—ಕೇಳು, ಮಾ ಮಾ ಉಪರೋತ್ಸೀಃ—ನಿರ್ಬಂಧಿಸಬೇಡ, ಏನಮ್ ಮಾ—ಈ ನನ್ನನ್ನು, ಅತಿಸೃಜ—ಬಿಟ್ಟುಬಿಡು.

### ತಾತ್ಪರ್ಯ

ನಚಿಕೇತನೇ ! 'ಈ ಮುಕ್ತಾತ್ಮಸ್ವರೂಪದ ಬಗ್ಗೆ ಹಿಂದೆ ದೇವತೆಗಳೂ ವಿಚಾರ ಮಾಡಿರುವರು. ಈ ಮುಕ್ತಾತ್ಮಸ್ವರೂಪವಿಷಯವು ಅತಿಸೂಕ್ಷ್ಮ. ಆದುದರಿಂದಲೇ ಸುಲಭವಾಗಿ ತಿಳಿಯುವುದಿಲ್ಲ. ಆದ್ದರಿಂದ ಇದನ್ನು ಬಿಟ್ಟು ಬೇರೊಂದು ವರವನ್ನು ಕೇಳು. ಈ ವಿಷಯದಲ್ಲಿ ನಿರ್ಬಂಧಿಸಬೇಡ, ನನ್ನನ್ನು ಬಿಟ್ಟುಬಿಡು ಎಂದು ಯಮನು ಹೇಳಿದನು.

### ರಂಗರಾಮಾನುಜಭಾಷ್ಯಮ್

ಏವಂ ಮುಕ್ತಸ್ವರೂಪಂ ಪೃಷ್ಟೋ ಮೃತ್ಯುಃ ಉಪದಿಶ್ಯಮಾನಾರ್ಥಸ್ಯಾತಿಗಹನತಯಾ ಪಾರಂ ಪ್ರಾಪ್ತುಮಪ್ರಭವತೋ ಮಧ್ಯೇ ಪತಯಾಲವೇ ನೋಪದೇಷ್ಟವ್ಯಮಿತಿ ಮತ್ವಾಽಽಹ—ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ । ಬಹುದರ್ಶಿಭಿರಪಿ ದೇವೈಃ ಅಸ್ಮಿನ್ ಮುಕ್ತಾತ್ಮಸ್ವರೂಪೇ ವಿಚಿಕಿತ್ಸಿತಮ್–ಸಂಶಯಿತಮ್ । ನ ಹಿ ಸುಜ್ಞೇಯಮಣುರೇಷ ಧರ್ಮಃ। ಆತ್ಮತತ್ತ್ವಂ ನ ಸುಜ್ಞಾನಮಿತಿ ಸೂಕ್ಷ್ಮ ಏಷ ಧರ್ಮಃ। ಸಾಮಾನ್ಯತೋ ಧರ್ಮ ಏವ ದುರ್ಜ್ಞಾನಃ । ತತ್ರಾಪ್ಯಯಂ ದುರ್ಜ್ಞಾನ ಇತಿ ಭಾವಃ । ಅನ್ಯಂ ವರಂ ನಚಿಕೇತೋ ವೃಣೀಷ್ವ । ಸ್ಪಷ್ಟೋಽರ್ಥಃ । ಮಾ ಮೋಪರೋತ್ಸೀರತಿ ಮಾ ಸೃಜೈನಮ್ । ಮಾ ಮಾ ಇತಿ ನಿಷೇಧೇ ವೀಪ್ಸಾಯಾಂ ದ್ವಿರ್ವಚನಮ್ । ಉಪರೋಧಂ ಮಾ ಕಾರ್ಷೀಃ । ಏನಮ್ ಮಾ–ಮಾಮ್ ಅತಿಸೃಜ–ಮುಂಚ ॥

---

1 ಅತ್ರ:—ಎಂಬುದರಿಂದ "ಅಸ್ತಿ–ನಾಸ್ತಿ" ಎಂದು ಹಿಂದಿನ ಮಂತ್ರದಲ್ಲಿ ವಿವರಿಸಲಾಗಿರುವ ಅಂಶವನ್ನೇ ಗ್ರಹಿಸಬೇಕು.

### ಅನುವಾದ

ನಚಿಕೇತನು ಮುಕ್ತಸ್ವರೂಪವನ್ನು ಕೇಳಲು ಯಮನು, ಉಪದೇಶಿಸಬೇಕಾದ ವಿಷಯವು ಗಹನವಾದುದರಿಂದ, ಪೂರ್ತಿ ತಿಳಿಯಲು ಅಶಕ್ತನಿಗೂ ಮಧ್ಯೆ ಎಡವುವವನಿಗೂ ಉಪದೇಶಿಸಬಾರದೆಂದು ತಿಳಿದು 'ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ' ಎಂದು ಹೇಳುತ್ತಾನೆ. ಅನೇಕ ವಿಷಯಗಳನ್ನು ಅರಿತಿರುವ ದೇವತೆಗಳೂ ಈ ಮುಕ್ತಾತ್ಮಸ್ವರೂಪದಲ್ಲಿ ಸಂಶಯ ತಳೆದಿರುತ್ತಾರೆ. ನ ಹಿ ಸುಜ್ಞೇಯಮಣುರೇಷ ಧರ್ಮಃ–ಈ ಆತ್ಮತತ್ತ್ವವನ್ನು ತಿಳಿಯುವುದು ಸುಲಭವಲ್ಲ. ಇದು ಸೂಕ್ಷ್ಮವಾದ ಧರ್ಮ. ಸಾಮಾನ್ಯವಾಗಿ ಧರ್ಮವನ್ನು ಅರಿಯುವುದೇ ಕಷ್ಟ. ಆದರಲ್ಲೂ ಆತ್ಮಧರ್ಮವನ್ನು ತಿಳಿಯುವುದು ಮತ್ತೂ ಕಷ್ಟ ಎಂದು ತಾತ್ಪರ್ಯ. **ಅನ್ಯಂ ವರಂ ನಚಿಕೇತೋ ವೃಣೀಷ್ವ**–(ನಚಿಕೇತನೇ ಮತ್ತೊಂದು ವರವನ್ನು ಕೇಳು.) ಅರ್ಥ ಸ್ಪಷ್ಟವಾಗಿದೆ. **ಮಾ ಮೋಪರೋತ್ಸೀರತಿ ಮಾ ಸೃಜೈನಮ್.** 'ಮಾ ಮಾ' ಎಂಬುದು ನಿಷೇಧಾರ್ಥದಲ್ಲಿದೆ[1]. ವೀಪ್ಸಾರ್ಥದಲ್ಲಿ ಎರಡು ಸಲ ಹೇಳಿದೆ. ನಿರ್ಬಂಧಿಸಬೇಡ ಏನಮ್– ಈ ವಿಷಯದಲ್ಲಿ ಮಾ–ನನ್ನನ್ನು ಅತಿಸೃಜ–ಬಿಟ್ಟುಬಿಡು.

### ಭಾಷ್ಯಸಾರ

ನಚಿಕೇತನು ಮೋಕ್ಷಸ್ವರೂಪವನ್ನು ಕುರಿತು ಯಮನನ್ನು ಕೇಳಿದನು. ನಚಿಕೇತನು ಕೇಳಿದ ವಿಷಯ ಬಹಳ ಗಂಭೀರವಾದುದು. ಆದುದರಿಂದ ಯಮನು ಶಿಷ್ಯನ ಯೋಗ್ಯತೆ ಯನ್ನು ಪರೀಕ್ಷಿಸದೆ, ಅಂದರೆ ನಚಿಕೇತನ ಬಯಕೆ ಮಾತ್ರದಿಂದಲೇ ಉಪದೇಶಿಸಲು ಬಯಸದೇ, ಶಿಷ್ಯನ ಯೋಗ್ಯತೆಯನ್ನು ಪರೀಕ್ಷಿಸಲು, 'ದೇವೈರತ್ರಾಪಿ' ಎಂದು ಹೇಳಿದನು. (ರಾಮಾನಂದ).

ನಚಿಕೇತನು ಯಮನಲ್ಲಿ ಮೂರನೇ ವರವನ್ನು ಕೇಳಿದನು. ನಚಿಕೇತನು ಮುಮುಕ್ಷು ಎಂಬುದು ಯಮನಿಗೆ ತಿಳಿದಿತ್ತು. ಆದರೂ ಕೇಳಿದ ವಿಷಯ ಗಂಭೀರವಾದುದು. ಈ ಗಂಭೀರ ವಾದ ವಿಷಯದಲ್ಲಿ ನಚಿಕೇತನಿಗಿರುವ ಆಸಕ್ತಿಯನ್ನು ತಿಳಿದು 'ಕಂಬವನ್ನು ಅಲ್ಲಾಡಿಸಿ ದೃಢಪಡಿಸುವಂತೆ ದೃಢಪಡಿಸಲು' 'ದೇವೈರತ್ರಾಪಿ' ಎಂದು ಯಮನು ಹೇಳುತ್ತಾನೆ.

ಅಥವಾ ನಚಿಕೇತನು ಎರಡನೇ ವರದಿಂದ ಪ್ರಸಿದ್ಧವಾದ ಸ್ವರ್ಗಸಾಧನವಾದ ವಿಷಯ ವನ್ನೇ ಕೇಳಿದನು. ಈ ಸ್ವರ್ಗವನ್ನು ವರ್ಣಿಸುವ 'ಸ್ವರ್ಗೇ ಲೋಕೇ' ಎಂಬ ಮಂತ್ರದಲ್ಲಿ 'ನ ಭಯಂ ಕಿಂಚನಾಸ್ತಿ' ಎಂಬುದರಿಂದ ಮಾನವಲೋಕದಲ್ಲಿ ಉಂಟಾಗಬಹುದಾದ ಭಯವಿಲ್ಲ ಎಂಬುದನ್ನೇ ಹೇಳುತ್ತದೆ. 'ನ ತತ್ರ ತ್ವಮ್' ಎಂಬುದು ಯಮನ ಆಜ್ಞೆಗೆ ಒಳಪಡುವುದಿಲ್ಲ ಎಂಬುದನ್ನು ಸೂಚಿಸುತ್ತದೆ. 'ಉಭೇ ತೀರ್ತ್ವಾ' ಎಂಬುದು ಅಮೃತಪಾನದಿಂದ ಉಂಟಾದ ತೃಪ್ತಿಯನ್ನು ಹೇಳುತ್ತದೆ. ಅಮೃತಪ್ರಾಪ್ತಿ ಅಂದರೆ ಬಹಳ ಕಾಲ ಇರುವುದು ಎಂದು ಅಭಿಪ್ರಾಯ. ಸ್ವರ್ಗಸಾಧನವಾದ ಅಗ್ನಿವಿದ್ಯೆಯನ್ನು ನಚಿಕೇತನು ಕೇಳಿದಾಗ ಯಮನು ಅವನ ಬುದ್ಧಿಕೌಶಲವನ್ನು ತಿಳಿದು ಸಂತೋಷದಿಂದ, ನಚಿಕೇತನು ಕೇಳದಿದ್ದರೂ

1 ಆಪ್ಸುಮಿಚ್ಛಾ-ವೀಪ್ಸಾ, ಅಧಿಕವಾಗಿ ಪಡೆಯಲು ಆಸೆ. ನಡೆಯುತ್ತಿರುವಕಾರ್ಯವು ಇನ್ನು ಮುಂದಕ್ಕೂ ನಡೆಯುವುದೆಂಬುದನ್ನು ತಿಳಿಸುವಿಕೆ. ಈ ವೀಪ್ಸೆಯಿಂದ ಅದನ್ನು ಸೂಚಿಸುವ ಪದಕ್ಕೆ 'ನಿತ್ಯ ವೀಪ್ಸಯೋಃ' ಎಂಬ ಸೂತ್ರದಿಂದ ದ್ವಿರ್ಭಾವ ಬರುವುದು.

ಅಗ್ನಿವಿದ್ಯೆಯ ಮಹತ್ವವನ್ನೂ ವಿವರಿಸುವನು. ಈ ಪ್ರಸಂಗದಲ್ಲಿ 'ತ್ರಿಣಾಚಿಕೇತಃ' ಮುಂತಾದ ವುಗಳಿಂದ ಮೂರು ಸಲ ನಾಚಿಕೇತಾಗ್ನಿ ಚಯನ ಮಾಡುವುದು ಜ್ಞಾನಕ್ಕೆ ಅಂಗವಾಗುವುದರ ಮೂಲಕ ಪರಮಪುರುಷಾರ್ಥವೆನಿಸಿದ ಮೋಕ್ಷಕ್ಕೆ ಉಪಾಯವೆಂದು ಹೇಳುತ್ತಾನೆ. ಈ ಅಗ್ನಿವಿದ್ಯೆಯು ಮೋಕ್ಷಕ್ಕೆ ಸಾಧನವೆಂಬ ಮಹತ್ವವನ್ನು ಕೇಳಿ ಮೋಕ್ಷವಿಷಯದಲ್ಲಿ ಆಸಕ್ತಿ ಮೂಡಿ ಮೋಕ್ಷಸ್ವರೂಪವನ್ನು 'ಯೇಯಂ ಪ್ರೇತೇ' ಎಂಬುದರಿಂದ ನಚಿಕೇತನು ಕೇಳಿದನು ಹೀಗೆ ಕೇಳಿದಾಗ ಯಮನು ನಚಿಕೇತನ ಮುಮುಕ್ಷು ಭಾವನೆಯನ್ನು ಪರೀಕ್ಷಿಸಲು 'ದೇವೈ ರತ್ರಾಪಿ' ಎಂದು ಹೇಳುತ್ತಾನೆ.

ಅಥವಾ 'ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವಾಜಾಯತೇ ಪುನಃ' ಎಂದು ಮೊದಲು ನಚಿಕೇತನು ಹೇಳಿರುತ್ತಾನೆ. ಇದರಿಂದ ಅವನಿಗೆ 'ಸ್ವರ್ಗ'ದಲ್ಲಿ ಆಸೆಯಿರಲಿಲ್ಲ ಎಂಬುದು ತಿಳಿಯುವುದಿಲ್ಲ. ಜನನ ಮರಣಗಳು ಅನಿವಾರ್ಯವಾದುದರಿಂದ ಜೀವನಕ್ಕಾಗಿ ಸುಳ್ಳಾಡಬಾರದು ಎಂಬುದು ಮಾತ್ರ ತಿಳಿಯುತ್ತದೆ. ಈ ವಿವರಣೆಯಲ್ಲೂ ಅಷ್ಟೇನೂ ಬಾಧಕವಿಲ್ಲ. ಆದುದರಿಂದ ಪರಮ ಪ್ರಯೋಜನವೆನಿಸಿದ ಮೋಕ್ಷಸ್ವರೂಪವನ್ನು ಪರೀಕ್ಷಿಸದೇ ಉಪದೇಶಿಸಬಾರದು ಎಂಬ ಅಭಿಪ್ರಾಯದಿಂದ ಪರೀಕ್ಷಿಸಲು 'ದೇವೈಃ' ಎಂದು ಹೇಳುತ್ತಾನೆ.

ಮನುಷ್ಯರಿಗಿಂತಲೂ ದೇವತೆಗಳು ಉತ್ಕೃಷ್ಟವಾದ ಜ್ಞಾನವುಳ್ಳವರು. ಇದು 'ದೇವೈ-ರತ್ರಾಪಿ' ಎಂಬಲ್ಲಿರುವ 'ಅಪಿ'ಶಬ್ದದಿಂದ ಸೂಚಿತವಾಗಿದೆ. ಈ ದೇವತೆಗಳು ಮುಕ್ತಾತ್ಮ-ಸ್ವರೂಪವನ್ನು ಕುರಿತು ವಿಚಾರ ಮಾಡಿರುವರು. ಅವರಿಗೂ ಈ ವಿಷಯ ತಿಳಿಯದೇ ಸಂಶಯವಿದೆ. ಅವರಿಗೇ ಕಷ್ಟವಾಗಿರುವಾಗ ನಿನ್ನಂತಹ ಮನುಷ್ಯರಿಗೆ ತಿಳಿಯುವುದು ಮತ್ತೂ ಕಷ್ಟ. ದೇವತೆಗಳಿಗೂ ತಿಳಿಯಲಾರದ ಈ ವಿಷಯ ನಿಮ್ಮಂತಹವರಿಗೆ ತಿಳಿಯಲಾರದು ಎಂಬುದು 'ಕೈಮುತಿಕನ್ಯಾಯ'[1]ದಿಂದ ಸಿದ್ಧವಾಗುವುದೆಂದು 'ನ ಹಿ ಸುಜ್ಞೇಯಮ್' ಎಂಬಲ್ಲಿನ 'ಹಿ'ಶಬ್ದದಿಂದ ತಿಳಿಯುತ್ತದೆ.

ಮೋಕ್ಷಸ್ವರೂಪವನ್ನು ತಿಳಿಯುವುದು ಕಷ್ಟ ಎಂಬ ವಿಷಯದಲ್ಲಿ ಕಾರಣವನ್ನು 'ಏಷ ಧರ್ಮಃ' ಎಂಬುದರಿಂದ ಹೇಳುತ್ತಾನೆ. ಮುಕ್ತಸ್ವರೂಪವೆಂಬುದು ಧರ್ಮ. ಮುಕ್ತನಿಗೆ ಮುಕ್ತಸ್ವರೂಪವೇ ಧರ್ಮ. ಇದು ಪರಮಾತ್ಮನಿಂದ ಧರಿಸಲ್ಪಟ್ಟಿರುವುದು ಪರಮಾತ್ಮನಿಗೆ ಅಧೀನವಾದ ಸ್ವರೂಪ-ಸ್ಥಿತಿ-ಪ್ರವೃತ್ತಿಯುಳ್ಳದೇ 'ಆತ್ಮ' ಎಂದು ತಾತ್ಪರ್ಯ. ಇದರಿಂದ ಮುಕ್ತನಲ್ಲೂ ಧರ್ಮ ಧರ್ಮಿಭಾವವುಂಟೆಂದು ತಿಳಿಯುತ್ತದೆ. ಮುಕ್ತಾತ್ಮ-ಸ್ವರೂಪವಾಗಲಿ, ಸಾಧನಸಹಿತ ಮುಕ್ತಿಸ್ವರೂಪವಾಗಲಿ, ಧರ್ಮಶಬ್ದದಿಂದ ಹೇಳಲ್ಪಡುತ್ತದೆ

ಅತಿ ಸೂಕ್ಷ್ಮವಾದ ಆತ್ಮತತ್ತ್ವವನ್ನು ನಿನಗೆ ಉಪದೇಶಿಸಿದರೂ ನೀನು ತಿಳಿಯಲು ಅಶಕ್ತನಾದಲ್ಲಿ ಉಪದೇಶ ನಿಷ್ಫಲವಾಗುವುದು ಆದುದರಿಂದ ಇದನ್ನು ಕೇಳುವುದು ಉಚಿತ-ವಲ್ಲ ಮುಕ್ತಾತ್ಮಸ್ವರೂಪಕ್ಕಿಂತ ಭಿನ್ನವಾದ, ನೀನು ತಿಳಿಯಲು ಅರ್ಹವಾದ, ನಿಶ್ಚಿತವಾದ

---

1 **ಕೈಮುತಿಕ ನ್ಯಾಯ** :–ಅಲ್ಪಪ್ರಯತ್ನದಿಂದ ಸಾಧ್ಯವಾಗುವ ಕೆಲಸ ಅಧಿಕ ಪ್ರಯತ್ನದಿಂದ ಸಾಧ್ಯ-ವಾಗುವುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ ಎಂಬ ನ್ಯಾಯ. ಕಿಮುತ–ಇತ್ಯರ್ಥಾದಾಗತಃ.

ಫಲವುಳ್ಳ, ನಿನಗಿಷ್ಟವಾದ ಬೇರೊಂದು ವರವನ್ನು ಕೇಳು ಈ ಮುಕ್ತಾತ್ಮಸ್ವರೂಪದ ಬಗ್ಗೆ ನನ್ನನ್ನು ನಿರ್ಬಂಧಿಸಬೇಡ.

ಮೂರು ವರಗಳನ್ನು ಕೊಡುವೆನು ಎಂದು ಹೇಳಿದ ನಾನು ವರಗಳನ್ನು ಕೊಡುವವರೆಗೂ ಸಾಲಗಾರನೇ ಸರಿ. ಆದರೂ ಮುಕ್ತಾತ್ಮಸ್ವರೂಪವನ್ನು ಉಪದೇಶಿಸಲು ಸಾಲಕೊಟ್ಟವನಂತೆ ನಿರ್ಬಂಧಿಸಬೇಡ. ಬಿಟ್ಟು ಬಿಡು ಎಂದು ತಾತ್ಪರ್ಯ.



## ಮಂತ್ರ ೨೩

देवैरत्रापि विचिकित्सितं किल त्वं च मृत्यो यन्न सुज्ञेयमात्थ ।
वक्ता चास्य त्वादृगन्यो न लभ्यो नान्यो वरस्तुल्य एतस्य कश्चित् ॥

ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ತ್ವಂ ಚ ಮೃತ್ಯೋ ಯನ್ನ ಸುಜ್ಞೇಯಮಾತ್ಥ ।
ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥

### ಪ್ರತಿಪದಾರ್ಥ

ಮೃತ್ಯೋ—ಅಂತಕನೇ ! ಅತ್ರ—ಮುಕ್ತಾತ್ಮಸ್ವರೂಪವಿಷಯದಲ್ಲಿ, ದೇವೈರಪಿ—ದೇವತೆಗಳಿಂದಲೂ ವಿಚಿಕಿತ್ಸಿತಂ ಕಿಲ—ಸಂಶಯಿಸಲ್ಪಟ್ಟಿತಲ್ಲವೇ ! ತ್ವಂ ಚ—ನೀನೂ, ನ ಸುಜ್ಞೇಯಮ್—ಸುಲಭವಾಗಿ ತಿಳಿಯು ತಕ್ಕದ್ದಲ್ಲವೆಂದು, ಆತ್ಥ—ಹೇಳಿರುವೆ. ಅಸ್ಯ—ಈ (ಧರ್ಮದ ಬಗ್ಗೆ), ವಕ್ತಾ—ಹೇಳುವವನು, ತ್ವಾದೃ-ಗನ್ಯಃ—ನಿನಗಿಂತ ಭಿನ್ನನಾದವನು, ನ ಲಭ್ಯಃ—ಸಿಗಲಾರನು (ಆದುದರಿಂದ), ಏತಸ್ಯ—ಈ ವರಕ್ಕೆ, ತುಲ್ಯಃ—ಸಮಾನವಾದ, ಅನ್ಯಃ ಕಶ್ಚಿತ್—ಬೇರೊಂದು, ವರಃ—ವರವು, ನ—ಇರುವುದಿಲ್ಲ.

### ತಾತ್ಪರ್ಯ

ಮೃತ್ಯುವೇ ! 'ನೀನು ಹಿಂದೆಯೇ ದೇವತೆಗಳು ಈ ಬಗ್ಗೆ ವಿಚಾರ ಮಾಡಿರುವರು. ಇದು ಸುಲಭವಾಗಿ ತಿಳಿಯತಕ್ಕದ್ದಲ್ಲ' ಎಂದು ಹೇಳಿದೆಯಲ್ಲವೆ ? ಈ ಮುಕ್ತಾತ್ಮಸ್ವರೂಪವನ್ನು ತಿಳಿಸುವಲ್ಲಿ ಸಮರ್ಥವಾದ ವ್ಯಕ್ತಿ ನಿನಗಿಂತ ಬೇರೆ ಮತ್ತೊಬ್ಬನಿಲ್ಲ. ಆದುದರಿಂದ ನಾನು ಕೇಳಿದ ಈ ವರಕ್ಕೆ ಸಮಾನವಾದ ಮತ್ತೊಂದು ವರವೂ ಇಲ್ಲ' ಎಂದು ನಚಿಕೇತನು ಹೇಳಿದನು.

### ರಂಗರಾಮಾನುಜಭಾಷ್ಯಮ್

ಏವಮುಕ್ತೋ ನಚಿಕೇತಾ ಆಹ—ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ' । ಸ್ಪಷ್ಟೋಽರ್ಥಃ । ತ್ವಂ ಚ ಮೃತ್ಯೋ ಯನ್ನ ಸುಜ್ಞೇಯಮಾತ್ಥ । ತ್ವಂ ಚ ಮೃತ್ಯೋ **'ನ ಸುಜ್ಞೇಯಮ್'** ಇತಿ ಯದಾತ್ಮಸ್ವರೂಪಮುಕ್ತವಾನ್ । ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯಃ ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥ ತ್ವಾದೃಕ್–ತ್ವಾದೃಶ ಇತ್ಯರ್ಥಃ । ಅನ್ಯತ್ ಸ್ಪಷ್ಟಮ್ ॥

## ಅನುವಾದ

ಯಮನು ಹೇಳಿದ ಮಾತನ್ನು ಕೇಳಿ ನಚಿಕೇತನು 'ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ' ಎಂದು ಹೇಳಿದನು. ಅರ್ಥ ಸ್ಪಷ್ಟವಾಗಿದೆ. 'ತ್ವಂ ಚ ಮೃತ್ಯೋ ಯನ್ನ ಸುವಿಜ್ಞೇಯ ಮಾತ್ಥ'. ಯಮನೇ ನೀನೂ 'ನ ಸುಜ್ಞೇಯಮ್' ಆತ್ಮಸ್ವರೂಪವು ತಿಳಿಯಲಶಕ್ಯ ಎಂದು ಹೇಳಿರುವೆ. ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯಃ ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ತ್ವಾದೃಕ್–ನಿನ್ನಂತಹ ಎಂದರ್ಥ. ಇತರ ವಿಷಯಗಳು ಸ್ಪಷ್ಟವಾಗಿದೆ.

## ಭಾಷ್ಯಸಾರ

ಯಮನು 'ಮುಕ್ತಸ್ವರೂಪವನ್ನು ತಿಳಿಯುವುದು ಕಷ್ಟ' ಎಂದು ಹೇಳಿ ನಚಿಕೇತನನ್ನು ವಿಚಲಿತನನ್ನಾಗಿ ಮಾಡಲು ಯತ್ನಿಸಿದನು. ಆದರೂ ನಚಿಕೇತನು ವಿಚಲಿತನಾಗಲಿಲ್ಲ ಮತ್ತು ತಾನು ಕೇಳಿದ ಮುಕ್ತಾತ್ಮಸ್ವರೂಪವನ್ನೇ ಉಪದೇಶಿಸಲು 'ದೇವೈರತ್ರಾಪಿ' ಎಂಬ ಮಂತ್ರದಲ್ಲಿ ಪ್ರಾರ್ಥಿಸುತ್ತಾನೆ.

ನಾನು ಕೇಳಿದ ವರಕ್ಕೆ ಸಮನಾದ ಮತ್ತೊಂದು ವರವಿದ್ದರೆ ಅದನ್ನು ಕೇಳಬಹುದು. ಇದಕ್ಕೆ ಸಮನಾದ ಮತ್ತೊಂದು ವರವಿಲ್ಲ. ಇದಕ್ಕಿಂತ ತಿಳಿಯಲು ಕಷ್ಟವಾದ ಮತ್ತೊಂದು ವಿಷಯವೂ ಇಲ್ಲ. ತಿಳಿಯಲು ಕಷ್ಟವಾದುದನ್ನೇ ಕೇಳಬೇಕಲ್ಲವೇ ? ಮುಕ್ತಾತ್ಮ ಸ್ವರೂಪವನ್ನು ತಿಳಿಯಲು ಕಷ್ಟ ಎಂಬುದನ್ನೇ ವಿವರಿಸುತ್ತಾನೆ. ಈ ವಿಷಯದಲ್ಲಿ ದೇವತೆಗಳಿಗೂ ಸಂಶಯವುಂಟಾಯಿತೆಂಬ ವಿಷಯ ನಿನ್ನಿಂದಲೇ ನನಗೆ ತಿಳಿಯಿತು. ಅಲ್ಲದೆ ಸಮಸ್ತ ಧರ್ಮಗಳ ತತ್ತ್ವರೂಪವಾದ ಈ ವಿಷಯವನ್ನು ಅರಿತವರೂ ಬಹಳ ವಿರಳ. ಈ ವಿಷಯವನ್ನು ಅರಿತ, ಉಪದೇಶಿಸಬಲ್ಲ ಹಿತೈಷಿಯಾದ ನಿನ್ನಂತಹ ಮತ್ತೊಬ್ಬ ಉಪದೇಶಕನು ಸಿಗಲಾರನು. ಆದುದರಿಂದ ದುರ್ಲಭವಾದ ಈ ವಿಷಯವನ್ನೇ ನಾನು ನಿನ್ನ ಅನುಗ್ರಹದಿಂದ ಪಡೆಯಬೇಕು. ನಿನ್ನಂತಹ ಉಪದೇಶಕನೂ, ಈ ವಿಷಯಕ್ಕೆ ಸಮಾನವಾದ ವಿಷಯವೂ ಸಿಕ್ಕಿದಲ್ಲಿ ನಿನ್ನನ್ನು ನಿರ್ಬಂಧಿಸುವುದಿಲ್ಲ. ಹಾಗೆ ಸಿಗದಿರುವುದರಿಂದ ನಿನ್ನನ್ನೂ ಈ ವಿಷಯವನ್ನೂ ಬಿಡಲಾರೆನು ಎಂದು ತಾತ್ಪರ್ಯ.



## ಮಂತ್ರ ೨೪

**शतायुषः पुत्रपौत्रान् वृणीष्व बहून् पशून् हस्तिहिरण्य[1]मश्वान् ।
भूमेर्महदायतनं वृणीष्व स्वयं च जीव शरदो यावदिच्छसि ॥**

ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ಬಹೂನ್ ಪಶೂನ್
ಹಸ್ತಿಹಿರಣ್ಯಮಶ್ವಾನ್ ।
ಭೂಮೇರ್ಮಹದಾಯತನಂ ವೃಣೀಷ್ವ ಸ್ವಯಂ ಚ ಜೀವ
ಶರದೋ ಯಾವದಿಚ್ಛಸಿ ॥

### ಪ್ರತಿಪದಾರ್ಥ

ಶತಾಯುಷಃ—ನೂರುವರ್ಷ ಆಯಸ್ಸುಳ್ಳ, ಪುತ್ರಪೌತ್ರಾನ್—ಮಕ್ಕಳು, ಮೊಮ್ಮಕ್ಕಳನ್ನೂ, ಬಹೂನ್—ಅನೇಕ, ಪಶೂನ್—ಹಸು ಮುಂತಾದುವುಗಳನ್ನು, ಹಸ್ತಿಹಿರಣ್ಯಮಶ್ವಾನ್—ಆನೆ-ಕುದುರೆ-ಚಿನ್ನ ಮುಂತಾದವುಗಳನ್ನೂ, ವೃಣೀಷ್ವ—ಕೇಳು, ಭೂಮೇಃ—ಭೂಮಿಯ, ಮಹದಾಯತನಮ್—ವಿಸ್ತಾರವಾದ ಪ್ರದೇಶವನ್ನೂ, ವೃಣೀಷ್ವ—ಕೇಳು, ಸ್ವಯಂ ಚ—ನೀನೂ, ಯಾವತ್ ಶರದಃ—ಎಷ್ಟು ವರ್ಷಗಳು, ಇಚ್ಛಸಿ—ಜೀವಿಸಲಿಚ್ಛಿಸುವೆಯೋ (ಅಷ್ಟು ವರ್ಷ), ಜೀವ—(ಆರೋಗ್ಯದಿಂದ) ಜೀವಿಸು.

### ತಾತ್ಪರ್ಯ

ನಚಿಕೇತನೇ ! 'ಶತಾಯುಗಳಾದ ಮಕ್ಕಳು, ಮೊಮ್ಮಕ್ಕಳು, ಹಸು, ಆನೆ, ಕುದುರೆ, ಚಿನ್ನ ಮುಂತಾದ ಯಾವುದೇ ಐಶ್ವರ್ಯವನ್ನಾದರೂ ಕೇಳು ಕೊಡುವೆ, ಸಾಮ್ರಾಜ್ಯವನ್ನೇ ಕೇಳು ಕೊಡುವೆ. ನೀನು ಎಷ್ಟು ವರ್ಷ ಬದುಕಿರಬೇಕೆಂದು ಬಯಸುವೆಯೋ ಅಷ್ಟು ವರ್ಷ ಆರೋಗ್ಯದಿಂದ ಜೀವಿಸು ಎಂದು ಯಮನು ಆಸೆಗಳನ್ನು ತೋರಿಸುತ್ತಾನೆ.

### ರಂಗರಾಮಾನುಜಭಾಷ್ಯಮ್

ಏವಂ ನಚಿಕೇತಸಾ ಉಕ್ತೋ ಮೃತ್ಯುಃ ವಿಷಯಸ್ಯ ದುರಧಿಗಮತಯಾ ಮಧ್ಯೇನ ತ್ಯಕ್ಷ್ಯತೀತಿ ನಿಶ್ಚಿತ್ಯ, ಸತ್ಯಪಿ ಗ್ರಹಣಸಾಮರ್ಥ್ಯೇ ವಿಷಯಾಂತರಾಸಕ್ತಚೇತಸೇ ಏತಾದೃಶಂ ಮುಕ್ತಾತ್ಮತತ್ತ್ವಂ ನೋಪದೇಶಾರ್ಹಮಿತಿ ಮತ್ವಾ ಮುಮುಕ್ಷಾಸ್ಥೈರ್ಯಾನು(ನಿ) ವೃತ್ತ್ಯರ್ಥಂ ಪ್ರಲೋಭಯನ್ ಉವಾಚ – **ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ಬಹೂನ್ ಪಶೂನ್ ಹಸ್ತಿ ಹಿರಣ್ಯಮಶ್ವಾನ್ ।** ಸ್ಪಷ್ಟೋಽರ್ಥಃ । **ಭೂಮೇರ್ಮಹದಾಯತನಂ ವೃಣೀಷ್ವ ।** ಪೃಥಿವ್ಯಾಃ ವಿಸ್ತೀರ್ಣಮ್ ಆಯತನಂ ಮಂಡಲಂ ರಾಜ್ಯಂ ವೃಣೀಷ್ವ । ಅಥವಾ ಭೂಮೇಃ ಸಂಬಂಧಿ ಮಹದಾಯತನಂ ವಿಚಿತ್ರಶಾಲಾಪ್ರಾಸಾದಾಯುಕ್ತಂ ಗೃಹಂ ವೃಣೀಷ್ವ । **ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ।** (ಯಾವತ್–?) ಯಾವದ್ವರ್ಷಾಣಿ ಜೀವಿತುಮಿಚ್ಛಸಿ, ತಾವಜ್ಜೀವೇತ್ಯರ್ಥಃ ।

---

1 ಹಸ್ತಿಹಿರಣ್ಯಮ್—ಜಾತ್ಯೇಕವಚನ.

## ಅನುವಾದ

ನಚಿಕೇತನು ಈ ವರಕ್ಕೆ ಸಮನಾದ ಬೇರೊಂದು ವರವಿಲ್ಲ ಎಂಬುದನ್ನು ಹೇಳಿದನು. ಅದನ್ನು ಕೇಳಿ ಯಮನು, ವಿಷಯವನ್ನು ತಿಳಿಯಲು ಕಷ್ಟವಾದರೂ ಈತನು ಮಧ್ಯೆ ಬಿಡುವುದಿಲ್ಲ ಎಂದು ನಿಶ್ಚಯಿಸಿದನು. ಈ ಆತ್ಮತತ್ತ್ವವನ್ನು ಅರಿಯುವ ಸಾಮರ್ಥ್ಯವಿದ್ದರೂ, ಬೇರೆ ವಿಷಯದಲ್ಲಿ ಆಸಕ್ತರಾದ ಮನಸ್ಸುಳ್ಳವರಿಗೆ ಈ ಮುಕ್ತಾತ್ಮಸ್ವರೂಪವನ್ನು ಉಪದೇಶಿಸ ಬಾರದು ಎಂದು ತಿಳಿದು ಸ್ಥಿರವಾದ ಮೋಕ್ಷೇಚ್ಛೆಯನ್ನು ಇಟ್ಟುಕೊಳ್ಳುವಂತೆ ನಚಿಕೇತನನ್ನು ಪ್ರಲೋಭಿಸುತ್ತಾ 'ಶತಾಯುಷಃ........ಹಿರಣ್ಯಮಶ್ವಾನ್' ಎಂದು ಹೇಳುತ್ತಾನೆ. ಮಂತ್ರಾರ್ಥ ಸ್ಪಷ್ಟವಾಗಿದೆ, (ನೂರುವರ್ಷ ಆಯುಸ್ಸುಳ್ಳ ಮಕ್ಕಳು, ಮೊಮ್ಮಕ್ಕಳೂ ಮತ್ತು ಅನೇಕ ಹಸು, ಆನೆ, ಚಿನ್ನ ಮುಂತಾದ ಭೋಗ್ಯವಸ್ತುಗಳನ್ನು ಕೇಳು ಎಂದರ್ಥ) **ಭೂಮೇರ್ಮಹದಾಯತನಂ ವೃಣೀಷ್ವ**–ಭೂಲೋಕಕ್ಕೆ ಸಂಬಂಧಿಸಿದ ವಿಶಾಲವಾದ, ಆಯತನಂ–ಭೂಪ್ರದೇಶವನ್ನು ರಾಜ್ಯವನ್ನು ಬಯಸು. ಅಥವಾ ಭೂಮಿಗೆ ಸಂಬಂಧಿಸಿದ ಮಹದಾಯತನವು ಆಶ್ಚರ್ಯಕರವಾದ ಅಂಗಣ–ಉಪ್ಪರಿಗೆಗಳಿಂದ ಕೂಡಿದ ಮನೆಯನ್ನು ಕೇಳು. **ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ**–ನೀನು ಎಷ್ಟು ವರ್ಷ ಬಾಳಬೇಕೆಂದು ಬಯಸುವೆಯೋ, ಅವರೆಗೂ ಜೀವಿಸು ಎಂದರ್ಥ.

## ಭಾಷ್ಯಸಾರ

ನಚಿಕೇತನು ಮುಕ್ತಾತ್ಮಸ್ವರೂಪದ ಬಗ್ಗೆ ದೃಢವಾಗಿ ಕೇಳಿದರೂ ಯಮನು 'ತಸ್ಮೈ ಸ ವಿದ್ವಾನ್ ಉಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ' (ಮುಂ. ಉ. 1–2–13) ಆಚಾರ್ಯನಾದವನು ತನ್ನ ಬಳಿ ಬಂದ ಅಹಂಕಾರ ಮುಂತಾದ ದೋಷರಹಿತನಾದ ಶಿಷ್ಯನಿಗೆ ಉಪದೇಶಿಸಬೇಕು ಎಂದು ಶ್ರುತಿಯಲ್ಲಿ ಹೇಳಿರುವಂತೆ—ನಚಿಕೇತನು ಪ್ರಶಾಂತಚಿತ್ತನೇ ಎಂಬುದನ್ನು ಪರೀಕ್ಷಿಸಲು 'ಶತಾಯುಷಃ'ಎಂದು ಪ್ರಲೋಭನೆಯನ್ನು ಉಂಟುಮಾಡುತ್ತಾನೆ.

ನೂರುವರುಷ ಜೀವಿಸುವ ಮಕ್ಕಳು–ಮೊಮ್ಮಕ್ಕಳನ್ನು ಕೇಳು. ಮಕ್ಕಳು–ಮೊಮ್ಮಕ್ಕಳು ಮಾತ್ರವಲ್ಲ, ನಿನಗೆ ಬೇಕಾದಷ್ಟು ಸುಖಸಾಧನಗಳಾದ ಹಸು–ಕುದುರೆ–ಆನೆ–ಚಿನ್ನವನ್ನೂ ಕೇಳು. ಅಷ್ಟೇಕೆ ಈ ಭೂಮಿಯಲ್ಲಿ ವಿಸ್ತಾರವಾದ ರಾಜ್ಯವನ್ನೇ ಕೇಳು. ಇವುಗಳಿಂದ ಅಲ್ಪಾಯುವಾದ ನನಗೇನು ಲಾಭ ಎಂದು ಭಾವಿಸುವುದಾದರೆ, ಆಯುಸ್ಸಿನ ನಿಯಮವನ್ನು ಮೀರಿ ನೀನು ಬಯಸಿದಷ್ಟು ಕಾಲ ಜೀವಿಸುವುದನ್ನೂ ಕೇಳು.

ರಾಮಾನಂದರು (ವಿಸ್ತಾರವಾದ ರಾಜ್ಯ) 'ಭೂಮೇರ್ಮಹದಾಯತನಂ ವಿಸ್ತಾರವಾದ ರಾಜ್ಯ ಎಂಬುದಕ್ಕೆ 40 ಯೋಜನೆಯ ವಿಸ್ತೀರ್ಣವಾದ ರಾಜ್ಯವನ್ನು ಎಂದು ಅರ್ಥ ಮಾಡುತ್ತಾರೆ. ಅಥವಾ ಈ ಭೂಮಿಯಲ್ಲಿ ವಿಸ್ತಾರವಾದ ಉಪ್ಪರಿಗೆಗಳಿಂದ ಕೂಡಿದ ಮನೆಯನ್ನೂ ಕೇಳು. ನೂರುವರ್ಷ ಆಯುಸ್ಸೆಂಬುದು ನಿನ್ನ ಮಕ್ಕಳು–ಮೊಮ್ಮಕ್ಕಳಿಗೆ ಮಾತ್ರ, ನಿನಗಲ್ಲ. ನೀನು ಬಯಸಿದಷ್ಟು ಕಾಲ ಬದುಕಿರಬಹುದು ಎಂದು ತಾತ್ಪರ್ಯ' ಎಂದು ಹೇಳಿರುವರು.



## ಮಂತ್ರ ೨೪

**एतत्तुल्यं यदि मन्यसे वरं वृणीष्व वित्तं चिरजीविकां च ।**
**महाभूमौ नचिकेतस्त्वमेधि कामानां त्वा कामभाजं करोमि ॥**

ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ
ಚಿರಜೀವಿಕಾಂ ಚ ।
ಮಹಾಭೂಮೌ ನಚಿಕೇತಸ್ತ್ವಮೇಧಿ ಕಾಮಾನಾಂ ತ್ವಾ
ಕಾಮಭಾಜಂ ಕರೋಮಿ ॥

### ಪ್ರತಿಪದಾರ್ಥ

ನಚಿಕೇತಃ—ನಚಿಕೇತನೇ, ವರಮ್—(ಬೇರೊಂದು) ವರವನ್ನು, ಏತತ್ ತುಲ್ಯಂ—ಈ ವರಕ್ಕೆ ಸಮಾನವಾದುದೆಂದು, ಯದಿ ಮನ್ಯಸೇ—ಒಂದು ವೇಳೆ ಭಾವಿಸಿದರೆ, ವಿತ್ತಮ್—ಅಧಿಕವಾದ ಸಂಪತ್ತನ್ನೂ, ಚಿರಜೀವಿಕಾಂ ಚ—ಬಹಳಕಾಲದ ಬದುಕನ್ನೂ, ವೃಣೀಷ್ವ—ಕೇಳು. ಮಹಾಭೂಮೌ—ಈ ವಿಸ್ತಾರವಾದ ಭೂಮಂಡಲದಲ್ಲಿ, ತ್ವಮ್—ನೀನು, ಏಧಿ—ವೃದ್ಧಿಹೊಂದು (ರಾಜನಾಗು), ತ್ವಾ—ನಿನ್ನನ್ನು, ಕಾಮಾನಾಮ್—ಸಕಲಭೋಗವಸ್ತುಗಳಿಗೆ (ಅಪ್ಸರಾದಿಸ್ತ್ರೀಯರುಗಳಿಗೆ) ಕಾಮಭಾಜಮ್—ಪಾತ್ರನನ್ನಾಗಿ (ಭೋಗಿಯನ್ನಾಗಿ) ಕರೋಮಿ—ಮಾಡುತ್ತೇನೆ.

### ತಾತ್ಪರ್ಯ

ನಚಿಕೇತನೇ ! 'ಅಪಾರವಾದ ಐಶ್ವರ್ಯ-ಚಿರಕಾಲ ಬಾಳುವೆಗಳನ್ನು ಈ ಆತ್ಮಸ್ವರೂಪ ಪ್ರಶ್ನೆಗೆ ಸಮವೆಂದು ಭಾವಿಸುವುದಾದರೆ ಬಯಸು ಕೊಡುತ್ತೇನೆ. ಈ ಭೂಮಂಡಲದಲ್ಲಿ ರಾಜನಾಗಬಯಸಿದರೆ ರಾಜನಾಗು. ಅಪ್ಸರಾದಿಸ್ತ್ರೀಯರನ್ನು ಬಯಸಿದರೆ ಅವರನ್ನು ಹೊಂದುವಂತೆ ಮಾಡುತ್ತೇನೆ' ಎಂದು ಯಮನು ಪ್ರಲೋಭಿಸುತ್ತಾನೆ.

### ರಂಗರಾಮಾನುಜಭಾಷ್ಯಮ್

ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ ಚಿರಜೀವಿಕಾಂ ಚ । ಉಕ್ತೇನ ವರೇಣ ಸದೃಶಮನ್ಯದಪಿ ವರಂ ಮನ್ಯಸೇ ಚೇತ್, ತದಪಿ ವೃಣೀಷ್ವ ಪ್ರಭೂತಂ ಹಿರಣ್ಯರತ್ನಾದಿಕಂ ಚಿರಜೀವನಂ ಚೇತ್ಯರ್ಥಃ । ಮಹಾಭೂಮೌ ನಚಿಕೇತಸ್ತ್ವಮೇಧಿ । ಏಧಿ-ಭವ । ರಾಜ ಇತಿ ಶೇಷಃ । ಅಸ್ತೇಃ ಲೋಣ್ಮಧ್ಯಮಪುರುಷೈಕವಚನಮ್ । ಕಾಮಾನಾಂ ತ್ವಾ ಕಾಮಭಾಜಂ ಕರೋಮಿ । ಕಾಮಾನಾಮ್-ಕಾಮ್ಯಮಾನಾನಾಮ್ ಅಪ್ಸರಃಪ್ರಭೃತಿವಿಷಯಾಣಾಮ್ । ಕಾಮಭಾಜಮ್-ಕಾಮಃ-ಕಾಮನಾ । ತಾಂ ವಿಷಯತಯಾ ಭಜತೀತಿ ಕಾಮಭಾಕ್, ತಮ್ । ಕಾಮ್ಯಮಾನಾಪ್ಸರಃಪ್ರಭೃತೀನಾಮಪಿ ಕಾಮನಾವಿಷಯಂ ಕರೋಮಿ ಇತ್ಯರ್ಥಃ ॥

### ಅನುವಾದ

'ಏತತ್ತುಲ್ಯಂ ಯದಿ ಮನ್ಯಸೇ ವರಂ ವೃಣೀಷ್ವ ವಿತ್ತಂ ಚಿರಜೀವಿಕಾಂ ಚ' ಮೇಲೆ ಹೇಳಿದ ವರಕ್ಕೆ ಸಮಾನವಾದ ಬೇರೊಂದು ವರವಿದೆ ಎಂದು ಭಾವಿಸುವೆಯಾದಲ್ಲಿ ಅತ್ಯಧಿಕವಾದ ಚಿನ್ನ, ರತ್ನ–ಮುಂತಾದ ಧನವನ್ನೂ, ಬಹಳ ಕಾಲದ ಜೀವನವನ್ನೂ ಕೇಳು. ಮಹಾ ಭೂಮೌ ನಚಿಕೇತಸ್ತ್ವಮೇಧಿ. ಏಧಿ–ಹೊಂದು–ರಾಜನಾಗು ಎಂದರ್ಥ. 'ಅಸ' ಧಾತುವಿನ 'ಲೋಟ್' ಲಕಾರದ ಮಧ್ಯಮಪುರುಷದ ಏಕವಚನರೂಪ. ಕಾಮಾನಾಂ ತ್ವಾ ಕಾಮ ಭಾಜಂ ಕರೋಮಿ। ಕಾಮಾನಾಮ್–ಬಯಸಬಹುದಾದ ಅಪ್ಸರಸ್ತ್ರೀ ಮುಂತಾದ ವಿಷಯಗಳ ಕಾಮಭಾಜಮ್— ಕಾಮಃ–ಆಸೆ ಅವುಗಳನ್ನು ಭೋಗಗಳನ್ನಾಗಿ ಯಾವನು ಹೊಂದುವನೋ ಅವನು ಕಾಮಭಾಕ್ ಎನಿಸುತ್ತಾನೆ. ಅಂದರೆ ಬಯಸಿದ ಅಪ್ಸರಸ್ತ್ರೀಯರನ್ನೂ ಅನುಭವಿಸು ವಂತೆ ಮಾಡುತ್ತೇನೆ ಎಂದರ್ಥ.

### ಭಾಷ್ಯಸಾರ

ಯಮನು ನಚಿಕೇತನನ್ನು ಪ್ರಲೋಭನೆಗಳಿಂದ ಪುನಃ ಪ್ರಚೋದಿಸುತ್ತಾನೆ. ಮುಕ್ತಾತ್ಮ ಸ್ವರೂಪವನ್ನು ಬಿಟ್ಟು ಅದಕ್ಕೆ ಸಮನಾದ ಯಾವುದೇ ವರವನ್ನಾದರೂ ಕೇಳು. ಮುತ್ತು, ಮಾಣಿಕ್ಯ ಮುಂತಾದ ನವರತ್ನರೂಪವಾದ ಬೆಲೆಬಾಳುವ ಐಶ್ವರ್ಯವನ್ನು ಕೇಳು. ಬಹಳ ಕಾಲದ ಬಾಳನ್ನು ಬೇಡು. ಸತಿ, ಸುತ, ಮಿತ್ರ ಮುಂತಾದ ಸಂಪತ್ತಿನಿಂದ ಕೂಡಿದ ಈ ವಿಸ್ತಾರವಾದ ಭೂಮಿಯಲ್ಲಿ ಈ ಹೆಸರಿನಿಂದಲೇ ಚಕ್ರವರ್ತಿಸಾರ್ವಭೌಮನಾಗಿ ಬಾಳು. ಹೆಚ್ಚೇನು !! ಈ ಭೂಮಿಯಲ್ಲಿ ದಿವ್ಯವಾದ ಹೂವು, ಗಂಧ, ಅಪ್ಸರಸ್ತ್ರೀ ಮೊದಲಾದವುಗಳ ಸುಖಾನುಭವಕ್ಕೆ ನಿನ್ನನ್ನು ಪಾತ್ರನನ್ನಾಗಿ ಮಾಡುತ್ತೇನೆಂದು ಪ್ರಚೋದಿಸಿದನು.



## ಮಂತ್ರ ೨೬

**ये ये कामा दुर्लभा मर्त्यलोके सर्वान् कामांश्छन्दतः प्रार्थयस्व ।**
**इमा रामाः सरथाः सतूर्या न हीदृशा लम्भनीया मनुष्यैः ।**
**आभिर्मत्प्रत्ताभिः परिचारयस्व नचिकेतो मरणं माऽनु प्राक्षीः ॥**

ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್
ಕಾಮಾಂಶ್ಛಂದತಃ ಪ್ರಾರ್ಥಯಸ್ವ ।
ಇಮಾ ರಾಮಾಸ್ಸರಥಾಸ್ಸತೂರ್ಯಾ ನ ಹೀದೃಶಾ ಲಂಭನೀಯಾ
ಮನುಷ್ಯೈಃ ।
ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ ನಚಿಕೇತೋ ಮರಣಂ
ಮಾಽನು ಪ್ರಾಕ್ಷೀಃ ॥

### ಪ್ರತಿಪದಾರ್ಥ

ಮರ್ತ್ಯಲೋಕೇ — ಈ ಭೂಲೋಕದಲ್ಲಿ, ಯೇ ಯೇ ಕಾಮಾಃ — ಯಾವಯಾವ ಬಯಕೆಗಳು, ದುರ್ಲಭಾಃ — ಸಿಗುವುದು ಕಷ್ಟವೋ, ಸರ್ವಾನ್ ಕಾಮಾನ್ — ಆ ಎಲ್ಲ ಬಯಕೆಗಳನ್ನೂ, ಛಂದತಃ — ನಿರ್ಬಂಧವಿಲ್ಲದೆ, ಪ್ರಾರ್ಥಯಸ್ವ — ಕೇಳು, (ಮತ್ತು) ಸರಥಾಃ — ರಥದೊಡಗೂಡಿದ, ಸತೂರ್ಯಾಃ — ವಾದ್ಯಸಹಿತರಾದ, ಇಮಾಃ — ಈ (ನಾನು ಕೊಡುವ), ಈದೃಶಾಃ — ದಿವ್ಯವಾದ, ರಾಮಾಃ — ಅಪ್ಸರಾದಿಸ್ತ್ರೀಯರು, ಮನುಷ್ಯೈಃ — ಮಾನವ ರಿಂದ, ನ ಲಂಭನೀಯಾಃ — ಹೊಂದಲ್ಪಡತಕ್ಕವರಲ್ಲ, ಮತ್ಪ್ರತ್ತಾಭಿಃ — ನನ್ನಿಂದ ಕೊಡಲ್ಪಟ್ಟ, ಆಭಿಃ — ಈ ಸ್ತ್ರೀಯರಿಂದ, ಪರಿಚಾರಯಸ್ವ — ಶುಶ್ರೂಷೆ ಮಾಡಿಸಿಕೋ, ನಚಿಕೇತಃ — ನಚಿಕೇತನೇ ! ಮರಣಾವ್ ಅನು — ಶರೀರವಿಯೋಗಾನಂತರದ ಮುಕ್ತಾತ್ಮಸ್ವರೂಪವನ್ನು, ಮಾ ಪ್ರಾಕ್ಷೀಃ — ಕೇಳಬೇಡ.

### ತಾತ್ಪರ್ಯ

ಮಾನವರಿಗೆ ದುರ್ಲಭವಾದ ಯಾವ ಯಾವ ಇಷ್ಟಾರ್ಥಗಳುಂಟೋ ಅವೆಲ್ಲವನ್ನೂ ಕೇಳು, ಸಂಕೋಚಪಡಬೇಡ. ವಾದ್ಯಗೋಷ್ಠಿ, ರಥ ಮುಂತಾದ ವೈಭವದಿಂದ ಕೂಡಿದ, ನಿನಗೆ ನಾನು ಕೊಡಲು ಸಿದ್ಧವಾಗಿರುವ ಈ ಅಪ್ಸರಸ್ತ್ರೀಯರು ನಿನಗೆ ಸೇವೆ ಮಾಡಲು ಸಿದ್ಧರಾಗಿರುವರು, ಸೇವೆ ಮಾಡಿಸಿಕೋ. ಈ ಸ್ತ್ರೀಯರು ಮಾನವರಿಗೆ ಸಿಗತಕ್ಕವರಲ್ಲ. ಎಲೈ ನಚಿಕೇತನೇ ! ಮರಣಾನಂತರದ ಮುಕ್ತಾತ್ಮಸ್ವರೂಪವನ್ನು ಮಾತ್ರ ಕೇಳಬೇಡ ಎಂದು ಯಮನು ಹೇಳಿದನು.

### ರಂಗರಾಮಾನುಜಭಾಷ್ಯ

ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾಶ್ಛಂದತಃ ಪ್ರಾರ್ಥಯಸ್ವ । ಛಂದತಃ — ಯಥೇಚ್ಛಮ್ ಇತ್ಯರ್ಥಃ । ಇಮಾ ರಾಮಾಸ್ಸರಥಾಸ್ಸತೂರ್ಯಾ ನ ಹೀದೃಶಾ ಲಂಭನೀಯಾ ಮನುಷ್ಯೈಃ। ರಥವಾದಿತ್ರಸಹಿತಾ ಮಯಾ ದೀಯಮಾನಾಃ ಸ್ತ್ರಿಯೋ ಮನುಷ್ಯಾಣಾಂ ದುರ್ಲಭಾ ಇತ್ಯರ್ಥಃ । ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ । ಆಭಿಃ

ಮಯಾ ದತ್ತಾಭಿಃ ಪರಿಚಾರಿಕಾಭಿಃ ಪಾದಸಂವಾಹನಾದಿಶುಶ್ರೂಷಾಂ ಕಾರಯ ಇತ್ಯರ್ಥಃ । ನಚಿಕೇತೋ ಮರಣಂ ಮಾನುಪ್ರಾಕ್ಷೀಃ । ಮರಣಮನು ಮರಣಾತ್ ಮುಕ್ತೇಃ ಪಶ್ಚಾತ್; ಮುಕ್ತಾತ್ಮಸ್ವರೂಪಮಿತಿ ಯಾವತ್। ಮರಣಶಬ್ದಸ್ಯ ದೇಹವಿಯೋಗಸಾಮಾನ್ಯವಾಚಿನೋಽಪಿ ಪ್ರಕರಣವಶೇನ ವಿಶೇಷವಾಚಿತ್ವಂ ನ ದೋಷಾಯ ಇತಿ ದ್ರಷ್ಟವ್ಯಮ್ ॥

## ಅನುವಾದ

ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ ಸರ್ವಾನ್ ಕಾಮಾನ್ ಛಂದತಃ ಪ್ರಾರ್ಥಯಸ್ವ ಛಂದತಃ–ಬಯಸಿದಷ್ಟು ಎಂದರ್ಥ. ಇಮಾ ರಾಮಾಸ್ಸರಥಾಸ್ಸತೂರ್ಯಾ ನ ಹೀದೃಶಾ ಲಂಭನೀಯಾ ಮನುಷ್ಯೈಃ—ರಥವಾದ್ಯಗಳೊಡನೆ ಕೂಡಿದ ನಾನು ಕೊಡಲಿರುವ ಅಪ್ಸರಸ್ತ್ರೀಯರು ಮಾನವರಿಗೆ ದುರ್ಲಭರು ಎಂದರ್ಥ. ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ । ನಾನು ಕೊಟ್ಟ ಈ ಸ್ತ್ರೀಯರಿಂದ ಕಾಲೊತ್ತುವಿಕೆ ಮುಂತಾದ ಸೇವೆಯನ್ನು ಮಾಡಿಸಿಕೋ. ನಚಿಕೇತೋ ಮರಣಂ ಮಾನುಪ್ರಾಕ್ಷೀಃ। ಮರಣಮನು—ಮರಣದನಂತರ ಮುಕ್ತಿಗೆ ಮೊದಲಿನ ಆತ್ಮಸ್ವರೂಪವನ್ನು ಎಂದರ್ಥ. ಮರಣ ಶಬ್ದವು ದೇಹವಿಯೋಗ ಎಂಬ ಸಾಮಾನ್ಯಾರ್ಥವನ್ನು ಹೇಳಿದರೂ, ಈ ಪ್ರಕರಣಬಲದಿಂದ ವಿಶೇಷಾರ್ಥವನ್ನು ಹೇಳುತ್ತದೆ ಎಂದಲ್ಲಿ ಯಾವ ದೋಷವೂ ಇಲ್ಲ ಎಂದು ತಿಳಿಯಬೇಕು.

## ಭಾಷ್ಯಸಾರ

ಈ ಮಾನವ ಲೋಕದಲ್ಲಿ ಅನೇಕ ಸುಖ–ಸಾಧನಗಳಲ್ಲಿ ನಿನಗೆ ಇಚ್ಛೆಯಾದುದನ್ನು ನಿನಗಿಷ್ಟ ಬಂದಷ್ಟು ಕೇಳು. ಸುಲಭವಾದುದನ್ನು ಕೇಳುವುದಿಲ್ಲ. ದುರ್ಲಭವಾದುದನ್ನು ಕೇಳಬೇಕು ಎಂದು ಬೇರೆ ಲೋಕಗಳಲ್ಲಿ ದುರ್ಲಭವಾದವುಗಳನ್ನು ಕೇಳಬೇಡ. ಮಾನವನಾದ ನೀನು ಮಾನವರಿಗೆ ದುರ್ಲಭವಾದುದನ್ನೇ ಕೇಳು. ಮಾನವರಿಗೆ ದುರ್ಲಭವಾದ ವಸ್ತುಗಳೇ ಅನೇಕವಿವೆ ಎಂದು ತಾತ್ಪರ್ಯ.

ನಿನಗೆ ಕಾಣಿಸುತ್ತಿರುವ ನೃತ್ಯಗೀತೆಗಳಿಗೆ ಸಾಧನವಾದ ವಾದ್ಯವಿಶೇಷಗಳಿಂದ ಕೂಡಿರುವ ಈ ದೇವಜಾತಿಯ ಅಪ್ಸರಸ್ತ್ರೀಯರು, ಈ ದಿವ್ಯವಾದ ರಥ ಇವುಗಳು ಮಾನವರಿಗೆ ಸುಲಭ ಸಾಧ್ಯವಿಲ್ಲ. ಇವು ಮಾನವರಿಗೆ ದುರ್ಲಭವೆಂದೇ ಪ್ರಸಿದ್ಧವಾಗಿವೆ. ಈ ಸ್ತ್ರೀಯರನ್ನು ನಿನಗೆ ಕೊಡುತ್ತೇನೆ. ಇವರಿಂದ ನೀನು ಸೇವೆ ಮಾಡಿಸಿಕೋ. ಇವರ ನೃತ್ಯಗೀತಗಳಿಂದ ಸಂತೋಷ ಪಡು. ಇವರಲ್ಲಿ ಸುಖವನ್ನು ಅನುಭವಿಸು. ಈ ಸುಖವನ್ನು ಬೇರೆ ಲೋಕದಲ್ಲಿ ಪಡೆಯಲು ಅನೇಕರು ಬಹಳ ಶ್ರಮಪಟ್ಟು ಯಜ್ಞಯಾಗಾದಿಗಳನ್ನು ಮಾಡುತ್ತಾರೆ. ಆದರೆ ಈ ಸ್ತ್ರೀಯರು ನಾನು–ತಾನೆಂದು ನಿನ್ನ ಪಾದಗಳನ್ನು ಒತ್ತಿ ಶುಶ್ರೂಷೆ ಮಾಡುತ್ತಾರೆ. ಗೀತ–ನರ್ತನಾದಿಗಳಿಂದ ಸಂತೋಷಗೊಳಿಸುತ್ತಾರೆ. ಇದೆಲ್ಲವನ್ನೂ ಈ ಶರೀರದಿಂದಲೇ ಅನುಭವಿಸು. ಇದರಿಂದಲೇ ಸಂತುಷ್ಟನಾಗು. ಎಲೈ ನಚಿಕೇತನೇ ! ಮರಣಾನಂತರದ ಮುಕ್ತಾತ್ಮಸ್ವರೂಪವನ್ನು ಕೇಳಬೇಡ ಎಂದು ಯಮನು ಪುನಃ ಪ್ರಲೋಭಿಸುತ್ತಾನೆ.



# ಮಂತ್ರ ೨೬

**ಶ್ವೋऽಭಾವಾ ಮರ್ತ್ಯಸ್ಯ ಯದನ್ತಕೈತತ್ ಸರ್ವೇನ್ದ್ರಿಯಾಣಾಂ ಜರಯನ್ತಿ ತೇಜಃ ।**
**ಅಪಿ ಸರ್ವಂ ಜೀವಿತಮಲ್ಪಮೇವ ತವೈವ ವಾಹಾಸ್ತವ ನೃತ್ಯಗೀತೇ ॥**

**श्वोऽभावा मर्त्यस्य यदन्तकैतत् सर्वेन्द्रियाणां जरयन्ति तेजः ।**
**अपि सर्वं जीवितमल्पमेव तवैव वाहास्तव नृत्यगीते ॥**

ಶ್ವೋऽಭಾವಾ ಮರ್ತ್ಯಸ್ಯ ಯದಂತಕೈತತ್ ಸರ್ವೇಂದ್ರಿ
ಯಾಣಾಂ ಜರಯಂತಿ ತೇಜಃ ।
ಅಪಿ ಸರ್ವಂ ಜೀವಿತಮಲ್ಪಮೇವ ತವೈವ ವಾಹಾಸ್ತವ
ನೃತ್ಯಗೀತೇ ॥

## ಪ್ರತಿಪದಾರ್ಥ

ಅಂತಕ—ಮೃತ್ಯುವೇ ! ಮರ್ತ್ಯಸ್ಯ—ಸಾವೇ ಸ್ವಾಭಾವಿಕವಾದ ಮಾನವನಿಗೆ, ಯತ್-ಏತತ್—ಹಿಂದೆ ಹೇಳಿದ ವಸ್ತುಗಳೆಲ್ಲವೂ, ಶ್ವೋऽಭಾವಾಃ—ಎರಡು ದಿನಗಳೂ ಇರುವುದಿಲ್ಲ. ಸರ್ವೇಂದ್ರಿಯಾಣಾಮ್—(ವಿಷಯಗಳ) ಎಲ್ಲ ಇಂದ್ರಿಯಗಳ, ತೇಜಃ—ಸಾಮರ್ಥ್ಯವನ್ನು, ಜರಯಂತಿ—ನಾಶಪಡಿಸುತ್ತವೆ, ಸರ್ವಂ ಜೀವಿತಮಪಿ—ಎಲ್ಲರ ಜೀವನವೂ. ಅಲ್ಪಮೇವ—ಸ್ವಲ್ಪಕಾಲ ಮಾತ್ರ ಇರುವುದು, ವಾಹಾಃ—ನೀನು ಹೇಳಿದ ಆನೆ, ಕುದುರೆ ಮುಂತಾದವುಗಳು, ತವೈವ—ನಿನಗೇ (ಇರಲಿ), ನೃತ್ಯಗೀತೇ—ನರ್ತನ-ಸಂಗೀತಾದಿಗಳು, ತವ—ನಿನಗೇ (ಇರಲಿ).

## ತಾತ್ಪರ್ಯ

ಎಲೈ ಅಂತಕನೇ ! ಮಾನವರು ಸಾವನ್ನೇ ಸ್ವಭಾವವಾಗಿ ಉಳ್ಳವರು. ಅಂದರೆ 'ಮಾನವನ ಜೀವಿತಕಾಲ ಅತ್ಯಲ್ಪ. ನೀನು ಹೇಳಿದ ಸುಖಸಾಧಕವಾದ ವಸ್ತುಗಳೂ ಕ್ಷಣಿಕ, ನಶ್ವರ. ಅಲ್ಲದೆ ಇವುಗಳು ಇಂದ್ರಿಯಗಳ ಶಕ್ತಿಯನ್ನು ಕುಗ್ಗಿಸುತ್ತವೆ. ಆದುದರಿಂದ ನೀನು ಕೊಡಬೇಕೆಂದಿರುವ ಆನೆ, ಕುದುರೆ, ರಥ, ಹೆಣ್ಣು, ಹೊನ್ನುಗಳು ನಿನಗೇ ಇರಲಿ. ಸುಖಸಾಧನಗಳಾದ ನೃತ್ಯಗೀತಗಳೂ ನಿನಗೇ ಇರಲಿ. ನನಗೆ ಬೇಡ' ಎಂದು ನಚಿಕೇತನು ಹೇಳಿದನು.

## ರಂಗರಾಮಾನುಜಭಾಷ್ಯಮ್

ಏವಂ ಪ್ರಲೋಭ್ಯಮಾನೋऽಪಿ ನಚಿಕೇತಾಃ ಅಕ್ಷುಭಿತಹೃದಯ ಆಹ—ಶ್ವೋऽಭಾವಾ ಮರ್ತ್ಯಸ್ಯ ಯದಂತಕೈತತ್ ಸರ್ವೇಂದ್ರಿಯಾಣಾಂ ಜರಯಂತಿ ತೇಜಃ । ಹೇ ಅಂತಕ ! ತ್ವದುಪನ್ಯಸ್ತಾ ಯೇ ಮರ್ತ್ಯಸ್ಯ ಕಾಮಾಃ ತೇ ಶ್ವೋऽಭಾವಾಃ—ಶ್ವಃ ಅಭಾವಃ ಯೇಷಾಂ ತೇ ತಥೋಕ್ತಾಃ । ದಿನದ್ವಯಸ್ಥಾಯಿನೋ ನ ಭವಂತಿ ಇತ್ಯರ್ಥಃ । ಸರ್ವೇಂದ್ರಿಯಾಣಾಂ ಯದೇತತ್ ತೇಜಃ, ತತ್ ಕ್ಷಪಯಂತಿ । ಅಪ್ಸರಃಪ್ರಭೃತಿಭೋಗಾ ಹಿ ಸರ್ವೇಂದ್ರಿಯದೌರ್ಬಲ್ಯಾವಹಾ ಇತಿ ಭಾವಃ । ಅಪಿ ಸರ್ವಂ ಜೀವಿತಮಲ್ಪಮೇವ । ಬ್ರಹ್ಮಣೋऽಪಿ ಜೀವಿತಂ ಸ್ವಲ್ಪಮ್, ಕಿಮುತಾಸ್ಮದಾದಿಜೀವಿತಮ್ । ಅತಶ್ಚಿರಜೀವಿಕಾಽಪಿ— ನ ವರಣಾರ್ಹೇತಿ ಭಾವಃ । ತವೈವ ವಾಹಾಸ್ತವ ನೃತ್ಯಗೀತೇ । ವಾಹಾಃ ರಥಾದಯಃ । ತಿಷ್ಠಂತ್ವಿತಿ ಶೇಷಃ ॥

## ಅನುವಾದ

ಯಮನು ನಚಿಕೇತನನ್ನು ಪ್ರಲೋಭನಗೊಳಿಸಿದರೂ-ಚಂಚಲ ಚಿತ್ತನಾಗದೆ ನಚಿಕೇತನು ಹೇಳುತ್ತಾನೆ—'ಶ್ವೋಽಭಾವಾ ಮರ್ತ್ಯಸ್ಯ........ಜರಯಂತಿ ತೇಜಃ— ಯಮನೇ! ನೀನು ಹೇಳಿದ ಮಾನವರ ಅಭೀಷ್ಟಗಳು ಶ್ವೋಽಭಾವಾಃ—ನಾಳೆ ಇರಲಾರವು. ಅಂದರೆ ಎರಡು ದಿನಗಳು ಇರುವುದಿಲ್ಲ ಎಂದರ್ಥ. ಇವು ಎಲ್ಲ ಇಂದ್ರಿಯಗಳ ತೇಜಸ್ಸನ್ನೂ ನಾಶಗೊಳಿಸುತ್ತವೆ. ಅಪ್ಸರಸ್ತ್ರೀ ಮುಂತಾದ ಎಲ್ಲ ಭೋಗಗಳೂ ಇಂದ್ರಿಯಗಳೆಲ್ಲದರ ಬಲವನ್ನು ಕುಗ್ಗಿಸುತ್ತವೆ ಎಂದೇ ತಾತ್ಪರ್ಯ. ಅಪಿ ಸರ್ವಂ ಜೀವಿತಮಲ್ಪಮೇವ—ಚತುರ್ಮುಖನ ಜೀವನವೂ ಅಲ್ಪ. ಹೀಗಿರುವಾಗ ನಮ್ಮ ಜೀವನದ ಬಗ್ಗೆ ಹೇಳಬೇಕೆ? ಆದುದರಿಂದ ದೀರ್ಘಕಾಲದ ಜೀವನವೂ ಪ್ರಾರ್ಥನೀಯವಲ್ಲ ಎಂದು ತಾತ್ಪರ್ಯ. ತವೈವ ವಾಹಾಸ್ತವ ನೃತ್ಯಗೀತೇ—ವಾಹಾಃ-ರಥ ಮುಂತಾದವುಗಳು ನಿನಗೇ ಇರಲಿ.

## ಭಾಷ್ಯಸಾರ

ಯಮನು ಅನೇಕ ಭೋಗಗಳ ಪ್ರಲೋಭನೆಯಿಂದ ನಚಿಕೇತನನ್ನು ಪ್ರಚೋದಿಸಿದರೂ ವಿವೇಕಿಯಾದ ನಚಿಕೇತನು ವಿಚಲಿತನಾಗಲಿಲ್ಲ. ಆದುದರಿಂದ 'ಶ್ವೋಽಭಾವಾಃ' ಎಂಬುದರಿಂದ ಇದು ಯಾವುದೂ ನನಗೆ ಬೇಡ ಎಂದು ಹೇಳುತ್ತಾನೆ—ಮಾನವರು ಅಪೇಕ್ಷಿಸುವ, ನೀನು ಪ್ರಾರ್ಥಿಸೆಂದು ಹೇಳಿದ ಸತಿ, ಸುತ, ಪೌತ್ರ, ಧನ, ಕನಕ, ಪಶು, ಆನೆ, ಕುದುರೆ ಮುಂತಾದವುಗಳು ಎರಡು ದಿನಗಳೂ ಇರಲಾರವು. ನಾಳೆ ಇರುವುದು ಎಂಬುದರಲ್ಲೂ ನಂಬಿಕೆಯಿಲ್ಲ. ಸಾಗರವನ್ನೇ ಎಲ್ಲೆಯಾಗಿ ಉಳ್ಳ ರಾಜ್ಯಸುಖವನ್ನು ಒಂದು ದಿನ ಅನುಭವಿಸಿದಂತೆ ಮತ್ತೊಂದು ದಿನ ಅನುಭವಿಸಲಾಗುವುದಿಲ್ಲ. ಎಲೈ ಅಂತಕನೇ! ನೀನು ಮಾನವರ ಜೀವವನ್ನು ಅಪಹರಿಸತಕ್ಕವನು. ಇದರಿಂದ ಮಾನವರ ಸುಖಭೋಗವು ಎಷ್ಟು ಅಸ್ಥಿರವೆಂಬುದು ನಿನಗೆ ತಿಳಿದೇ ಇದೆ. ನೀನು ಕೊಡಬೇಕೆಂದಿರುವ ಅಪ್ಸರಸ್ತ್ರೀಯರು ಮುಂತಾದ ಭೋಗಗಳು ಇಂದ್ರಿಯಗಳ ತೇಜಸ್ಸನ್ನು ನಾಶಗೊಳಿಸುತ್ತವೆ. ಇವು ವೀರ್ಯ, ಪ್ರಜ್ಞೆ, ತೇಜಸ್ಸು, ಯಶಸ್ಸು ಮುಂತಾದವುಗಳಿಗೆ ಹಾನಿಯನ್ನು ಉಂಟುಮಾಡುತ್ತವೆ ಎಂದು ತಾತ್ಪರ್ಯ. ನೀನು ಹೇಳಿದ ಚಿರಜೀವಿಕೆಯೂ ಬುದ್ಧಿವಂತರಲ್ಲದವರಿಗೆ ರುಚಿ ಹುಟ್ಟಿಸಬಹುದು. ಬುದ್ಧಿವಂತರು ಇದನ್ನು ಬಯಸುವುದಿಲ್ಲ. ಏಕೆಂದರೆ ಚತುರ್ಮುಖನ ಜೀವಿತವೂ ಅವಧಿ ವಿಶಿಷ್ಟವಾಗಿಯೇ ಇದೆ; ಹೀಗಿರುವಾಗ ಇತರ ಜೀವಿಗಳ ಬಗ್ಗೆ ಹೇಳಬೇಕಾದುದೇ ಇಲ್ಲ. ಆದುದರಿಂದ ನೀನು ಹೇಳಿದ ಮಾನವ ಸಹಜ ಸುಖದಲ್ಲಾಗಲೀ, ದೇವತೆಗಳಿಗೆ ಲಭಿಸಬಹುದಾದ ಸುಖದಲ್ಲಾಗಲೀ, ದೀರ್ಘಾಯುಷ್ಯದಲ್ಲಾಗಲೀ, ವಿರಕ್ತನಾದ ನನಗೆ ಆಸಕ್ತಿಯಿಲ್ಲ. ಇವುಗಳಿಂದ ನನಗೆ ಏನೂ ಲಾಭವಿಲ್ಲ. ರಥ, ನೃತ್ಯ, ಗೀತ ಮುಂತಾದ ಈ ಎಲ್ಲವೂ ನಿನಗೇ ಇರಲಿ. ನನಗೆ ಬೇಡ ಎಂದು ಹೇಳಿದನು ಎಂದು ತಾತ್ಪರ್ಯ.



# ಮಂತ್ರ ೨೮

**न वित्तेन तर्पणीयो मनुष्यो लप्स्यामहे वित्तमद्राक्ष्म चेत् त्वा ।**
**जीविष्यामो यावदीशिष्यसि त्वं वरस्तु मे वरणीयः स एव ॥**

ನ ವಿತ್ತೇನ ತರ್ಪಣೀಯೋ ಮನುಷ್ಯೋ ಲಪ್ಸ್ಯಾಮಹೇ
ವಿತ್ತಮದ್ರಾಕ್ಷ್ಮ ಚೇತ್ ತ್ವಾ ।
ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ ವರಸ್ತು ಮೇ
ವರಣೀಯಃ ಸ ಏವ ॥

## ಪ್ರತಿಪದಾರ್ಥ

ವಿತ್ತೇನ—ಹಣದಿಂದ, ಮನುಷ್ಯಃ—ಮನುಷ್ಯನು, ನ ತರ್ಪಣೀಯಃ—ತೃಪ್ತಿಪಡಿಸಲ್ಪಡಲಾರನು. ತ್ವಾ—ನಿನ್ನನ್ನು, ಅದ್ರಾಕ್ಷ್ಮ ಚೇತ್—ನೋಡಿದ್ದೇ ಆದರೆ, ವಿತ್ತಮ್—ಐಶ್ವರ್ಯವನ್ನು, ಲಪ್ಸ್ಯಾಮಹೇ—ಹೊಂದುತ್ತೇವೆ, ತ್ವಮ್—ನೀನು, ಯಾವತ್—ಎಲ್ಲಿಯವರೆಗೆ, ಈಶಿಷ್ಯಸಿ—ಆಳುತ್ತಿರುವೆಯೋ, ಜೀವಿಷ್ಯಾಮಃ—(ಅಲ್ಲಿಯವರೆಗೆ ನಾವು) ಜೀವಿಸಿರುವೆವು, ಮೇ—ನನ್ನಿಂದ, ವರಣೀಯಃ—ಕೇಳಲ್ಪಡುವ, ವರಃ ತು— ವರ ಅಂದರೆ, ಸ ಏವ —ಹಿಂದೆ ಕೇಳಿದ ಮುಕ್ತಾತ್ಮಸ್ವರೂಪವೇ.

## ತಾತ್ಪರ್ಯ

ನಚಿಕೇತನು ಯಮನು ತೋರಿದ ಪ್ರಲೋಭನೆಗಳಿಗೆ ವಶನಾಗದೇ ತಾನು ಕೇಳಿದ ವರದ ಬಗ್ಗೆ ಒತ್ತಾಯಿಸುತ್ತಾನೆ. ಮಾನವನು ಹಣದಿಂದ ತೃಪ್ತಿಹೊಂದಲಾರ. ಅಲ್ಲದೆ ನಿನ್ನನ್ನು ಕಂಡರೆ ಹಣಕ್ಕೆ ಕೊರತೆಯೂ ಇಲ್ಲ. ಅಲ್ಲದೆ ನೀನು ಈ ಯಮಲೋಕಾಧಿಪತಿಯಾಗಿ ಇರುವವರೆಗೂ ನೀನು ಕೊಡುವ ದೀರ್ಘಾಯುಷ್ಯವಿರುವುದು. ನಿನ್ನ ಜೀವಿತವೂ ಸೀಮಿತ. ಆದ್ದರಿಂದ ನಾನು ಹಿಂದೆ ಕೇಳಿದ ಮುಕ್ತಾತ್ಮಸ್ವರೂಪದ ವರವನ್ನೇ ಕೇಳುತ್ತೇನೆ. ಅದರ ಸ್ವರೂಪವನ್ನು ವಿವರಿಸು ಎಂದು ಹೇಳಿದನು.

## ರಂಗರಾಮಾನುಜಭಾಷ್ಯಮ್

ನ ವಿತ್ತೇನ ತರ್ಪಣೀಯೋ ಮನುಷ್ಯಃ। ನ ಹಿ ವಿತ್ತೇನ ಲಬ್ಧೇನ ಕಸ್ಯಚಿತ್ ತೃಪ್ತಿಃ ದೃಷ್ಟಚರೀ। 'ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ'(ಮ.ಸ್ಮೃ. 2–94) ಇತಿ ನ್ಯಾಯಾತ್ ಇತಿ ಭಾವಃ। ಕಿಂಚ, ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ ಚೇತ್ ತ್ವಾ। ತ್ವಾಂ ವಯಂ ದೃಷ್ಟವಂತಶ್ಚೇತ್. ವಿತ್ತಂ ಪ್ರಾಪ್ಸ್ಯಾಮಹೇ(?) (ಪ್ರಾಪ್ಸ್ಯಾಮಃ?) (ಲಪ್ಸ್ಯಾಮಹೇ ?)। ತ್ವದ್ದರ್ಶನಮಸ್ತಿ ಚೇತ್, ವಿತ್ತಲಾಭೇ ಕೋ ಭಾರ ಇತಿ ಭಾವಃ । ತರ್ಹಿ ಚಿರಜೀವಿಕಾ ಪ್ರಾರ್ಥನೀಯಾ ಇತ್ಯತ್ರಾಹ—ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಮ್ । ಯಾವತ್ಕಾಲಂ ಯಾಮ್ಯೇ ಪದೇ ತ್ವಮ್ ಈಶ್ವರತಯಾ ವರ್ತಸೇ—ವ್ಯತ್ಯಯೇನ ಪರಸ್ಮೈಪದಮ್—ತಾವತ್ಪರ್ಯಂತಮಸ್ಮಾಕಮಪಿ ಜೀವನಂ ಸಿದ್ಧಮೇವ । ನ ಹಿ ತ್ವದಾಜ್ಞಾತಿಲಂಘನೇನ ಅಸ್ಮ

ಜ್ಜೀವಿತಾಂತಕರಃ ಕಶ್ಚಿದಸ್ತಿ । ವರಲಾಭಾಲಾಭಯೋರಪಿ ತಾವದೇವ ಜೀವನಮಿತಿ ಭಾವಃ । ವರಸ್ತು ಮೇ ವರಣೀಯಃ ಸ ಏವ । ಅತಃ 'ಯೇಯಂ ಪ್ರೇತೇ' ಇತಿ ಪ್ರಾಕ್ಪ್ರಸ್ತುತೋ ವರ ಏವ ವರಣೀಯ ಇತ್ಯರ್ಥಃ ॥

## ಅನುವಾದ

ನ ವಿತ್ತೇನ ತರ್ಪಣೀಯೋ ಮನುಷ್ಯಃ—ಸಿಕ್ಕಿದ ಹಣದಿಂದ ಯಾರಿಗೂ ತೃಪ್ತಿ ಯುಂಟಾಗಲಾರದು. ವಿಷಯಸುಖಗಳನ್ನು ಅನುಭವಿಸಿದಷ್ಟೂ ಅದು ಬೆಂಕಿಗೆ ತುಪ್ಪ ಹಾಕಿದಂತೆ ಹೆಚ್ಚುತ್ತಲೇ ಹೋಗುವುದು, ಕಮ್ಮಿಯಾಗುವುದಿಲ್ಲ[1] ಎಂಬ ನ್ಯಾಯವಿದೆ. ಮತ್ತು ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ ಚೇತ್ ತ್ವಾ—ನಿನ್ನನ್ನು ನಾವು ನೋಡಿದರೆ ಧನವನ್ನು ಹೊಂದುತ್ತೇವೆ. ಅಂದರೆ ನಿನ್ನ ದರ್ಶನವಾದರೆ ಧನಲಾಭದಲ್ಲಿ ಯಾವ ತೊಂದರೆ ಇರುವು ದಿಲ್ಲ ಎಂದು ತಾತ್ಪರ್ಯ. ಹಾಗಾದಲ್ಲಿ ದೀರ್ಘ ಜೀವನವನ್ನು ಪ್ರಾರ್ಥಿಸಬಹುದಲ್ಲವೇ ಎಂಬಲ್ಲಿ ಹೇಳುತ್ತಾನೆ. ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಮ್— ಎಲ್ಲಿಯವರೆಗೆ ನೀನು ಯಮ ಲೋಕದ ಅಧಿಪತಿಯಾಗಿರುವೆಯೋ ಅಲ್ಲಿಯವರೆಗೆ ನಮಗೆ ಜೀವಿಕೆಯೂ ಸಿದ್ಧವಾಗಿಯೇ ಇದೆ. ನಿನ್ನ ಆಜ್ಞೆಯನ್ನು ಮೀರಿ ನಮ್ಮ ಜೀವನವನ್ನು ಕೊನೆಗಾಣಿಸುವವನು ಬೇರೊಬ್ಬ ನಿಲ್ಲ. ಇದಕ್ಕಾಗಿಯೇ ವರವನ್ನು ಕೇಳಲಿ–ಕೇಳದಿರಲಿ, ನಮ್ಮ ಜೀವನ ಅಲ್ಲಿಯವರೆಗೆ ಮಾತ್ರ ಎಂದು ತಾತ್ಪರ್ಯ. 'ಈಶಿಷ್ಯಸಿ' ಎಂಬಲ್ಲಿ ಪರಸ್ಮೈಪದವು ಛಾಂದಸ[2]; ಮತ್ತು ಮೇ ವರಣೀಯಃ ಸ ಏವ—ಆದುದರಿಂದ 'ಯೇಯಂ ಪ್ರೇತೇ' ಎಂದು ಮೊದಲು ಕೇಳಿದ ವರವನ್ನೇ ಕೇಳಬಯಸುತ್ತೇನೆ.

## ಭಾಷ್ಯಸಾರ

ಧನವನ್ನೂ ಚಿರಜೀವಿಕೆಯನ್ನೂ ಕೇಳು ಎಂದು ಯಮನು ಹೇಳಿದ ಮಾತನ್ನು ಕೇಳಿ ನಚಿಕೇತನು ಆ ಬಗ್ಗೆ ಹೇಳುತ್ತಾನೆ. ಎಷ್ಟೇ ಹಣ ಪಡೆದರೂ ಮಾನವನಿಗೆ ತೃಪ್ತಿ–ಸಂತೋಷ ಗಳು ಉಂಟಾಗುವುದಿಲ್ಲ. ಹಣ ಸಿಕ್ಕಿದಷ್ಟೂ ಮತ್ತಷ್ಟು ಬೇಕು ಎಂಬ ಆಸೆ ಹೆಚ್ಚುತ್ತದೆ. ಆಸೆಗೆ ಮಿತಿಯೇ ಇರುವುದಿಲ್ಲ. ಆದುದರಿಂದ ಮನುಷ್ಯನನ್ನು ಹಣದಿಂದ ತೃಪ್ತಿಪಡಿಸಲು ಆಗುವುದಿಲ್ಲ. ಅಲ್ಲದೆ ಅತ್ಯಂತ ಉದಾರಿಯೂ ಸಮರ್ಥನೂ ಆದ ನಿನ್ನನ್ನು ನೋಡಿದಾಗ ಹಣದ ಚಿಂತೆಯೇ ಉಂಟಾಗುವುದಿಲ್ಲ. ಹಾಗಾದಲ್ಲಿ ಚಿರಜೀವಿಕೆಯನ್ನು ಕೇಳಬಹುದಲ್ಲ ಅಂದರೆ, ನಮ್ಮಲ್ಲಿ ವಿಶೇಷವಾದ ಪ್ರೀತಿಯುಳ್ಳ ನೀನು ಈ ಯಾಮ್ಯ[3] ಪದವಿಯಲ್ಲಿ ಇರುವ ವರೆಗೂ ನಾವು ಜೀವಿಸಿರುವೆವು. ನಿನ್ನ ಆಜ್ಞೆಯನ್ನು ಮೀರಿ ಯಾರೂ ನಮ್ಮ ಜೀವನ ವನ್ನು ಅಪಹರಿಸಲಾರರು. ನಾನು ಈ ಬಗ್ಗೆ ವರ ಕೇಳಲಿ–ಕೇಳದಿರಲಿ ಅದು ಇದ್ದೇ ಇರು ವುದು. ನನಗೆ ದೀರ್ಘಾಯುಷ್ಯದ ಬಗ್ಗೆಯೂ ಚಿಂತೆಯಿಲ್ಲ. ಆದ್ದರಿಂದ ನಾನು ಹಿಂದೆ 'ಯೇಯಂ' ಎಂದು ಕೇಳಿದ ವರವನ್ನೇ ಪ್ರಾರ್ಥಿಸುತ್ತೇನೆ. ಬೇರಾವುದೂ ಇಲ್ಲ ಎಂದು ತಾತ್ಪರ್ಯ.

---

1 'ನ ಜಾತು ಕಾಮಃ ಕಾಮಾನಾಮ್ ಉಪಭೋಗೇನ ಶಾಮ್ಯತಿ' ಇತಿ ನ್ಯಾಯಃ ।

2 ಲೌಕಿಕ ಸಂಸ್ಕೃತ ವ್ಯಾಕರಣನಿಯಮಗಳಿಗೆ ವಿರುದ್ಧವಾದ ಅನೇಕ ಪದಗಳು ವೇದದಲ್ಲಿ ಕಂಡುಬರು ತ್ತವೆ. ಅವುಗಳನ್ನು 'ಛಾಂದಸ'ವೆಂದು ಕರೆಯುತ್ತಾರೆ. ಅವು ಅಸಾಧುಶಬ್ದಗಳಲ್ಲ ಎಂದು ಅಭಿಪ್ರಾಯ.

3 ಯಮಸಂಬಂಧಪಟ್ಟವೆಂದರ್ಥ.

## ಮಂತ್ರ ೨೮

**अजीर्यताममृतानामुपेत्य जीर्यन् मर्त्यः क्व तदास्थः (क्वधःस्थः) प्रजानन् ।**
**अभिध्यायन् वर्णरतिप्रमोदान् अनतिदीर्घे जीविते को रमेत ॥**

ಅಜೀರ್ಯತಾಮಮೃತಾನಾಮುಪೇತ್ಯ ಜೀರ್ಯನ್ ಮರ್ತ್ಯಃ ಕ್ವ
ತದಾಸ್ಥಃ (ಕ್ವಧಃಸ್ಥಃ) ಪ್ರಜಾನನ್ ।
ಅಭಿಧ್ಯಾಯನ್ ವರ್ಣರತಿಪ್ರಮೋದಾನ್ ಅನತಿದೀರ್ಘೇ
ಜೀವಿತೇ ಕೋ ರಮೇತ ॥

### ಪ್ರತಿಪದಾರ್ಥ

ಅಜೀರ್ಯತಾಮ್—ಮುಪ್ಪು, ಸಾವುಗಳಿಲ್ಲದ, ಅಮೃತಾನಾಮ್—ಮುಕ್ತರ ಸ್ವರೂಪವನ್ನು, ಉಪೇತ್ಯ—(ಗುರುಮುಖದಿಂದ) ತಿಳಿದು, ಪ್ರಜಾನನ್—ವಿವೇಕಿಯಾದ, ಜೀರ್ಯನ್ ಮರ್ತ್ಯಃ—ಜರಾ-ಮರಣದಿಂದ ಕೂಡಿದವನು, ತದಾಸ್ಥಃ—ನಶ್ವರವಾದ ಅಪ್ಸರಸ್ತ್ರೀಯರಲ್ಲಿ ಬಯಕೆಯನ್ನು, ಕ್ವ—ಎಲ್ಲಿ ? (ಹೊಂದುತ್ತಾನೆ). ವರ್ಣರತಿಪ್ರಮೋದಾನ್—(ಸೂರ್ಯನಂತೆ ಪ್ರಕಾಶಮಾನವಾದ) ರೂಪ ಮತ್ತು (ಬ್ರಹ್ಮಾನುಭವ ರೂಪವಾದ) ಆನಂದವನ್ನು, ಅಭಿಧ್ಯಾಯನ್—ಚೆನ್ನಾಗಿ ಅರಿತ, ಕಃ—ಯಾವನು, ಅನತಿದೀರ್ಘೇ—ನಶ್ವರವಾದ, ಜೀವಿತೇ—ಜೀವನದಲ್ಲಿ, ರಮೇತ—ರಮಿಸುವನು.

### ತಾತ್ಪರ್ಯ

ಮುಕ್ತರಿಗೆ ಮುಪ್ಪು-ಸಾವುಗಳಿಲ್ಲ ಎಂಬ ವಿಷಯವನ್ನು ಗುರುಗಳಿಂದ ಚೆನ್ನಾಗಿ ತಿಳಿದು, ಆಲೋಚಿಸಿದ ವಿವೇಕಿಯು ಜರಾಮರಣ ವಿಶಿಷ್ಟನಾದರೂ ನಶ್ವರವಾದ ಅಪ್ಸರ ಸ್ತ್ರೀ ಮೊದಲಾದ ಭೋಗಗಳನ್ನು ಬಯಸುವುದಿಲ್ಲ. ಸ್ತ್ರೀಯರ ರೂಪ ಮತ್ತು ಬ್ರಹ್ಮಾನುಭವದ ಆನಂದವನ್ನು ಅರಿತವನು ಅವುಗಳಲ್ಲಿರುವ ನಿತ್ಯಾನಿತ್ಯಸ್ವರೂಪವನ್ನು ತಿಳಿಯುತ್ತಾನೆ. ಅಂತಹವನು ಈ ನಶ್ವರವಾದ ಜೀವನವನ್ನು ಬಯಸುವುದಿಲ್ಲ.

### ರಂಗರಾಮಾನುಜಭಾಷ್ಯಮ್

ಅಜೀರ್ಯತಾಮಮೃತಾನಾಮುಪೇತ್ಯ । ಜರಾಮರಣಶೂನ್ಯಾನಾಂ ಸ್ವರೂಪಂ ಜ್ಞಾತ್ವಾ । ಜೀರ್ಯನ್ ಮರ್ತ್ಯಃ ಕ್ವ ತದಾಸ್ಥಃ ಪ್ರಜಾನನ್। ಪ್ರಜಾನನ್—ವಿವೇಕೀ ಜರಾಮರಣೋಪಪ್ಲುತೋಽಯಂ ಜನಃ ತದಾಸ್ಥಃ—ಜರಾಮರಣಾದ್ಯುಪಪ್ಲುತಾಪ್ಸರಃಪ್ರಭೃತಿವಿಷಯವಿಷಯಕಾಸ್ಥಾವಾನ್, ಕ್ವ—ಕಥಂ ಭವೇತ್ ಇತ್ಯರ್ಥಃ । ಕ್ವಧಸ್ಥ ಇತಿ (ಇತಿ ಪಾಠೇ) ಅಧೋದೇಶಭೂತಭೂಮಿಷ್ಠ ಇತ್ಯರ್ಥಃ । ಅಭಿಧ್ಯಾಯನ್ ವರ್ಣರತಿಪ್ರಮೋದಾನ್ । ತತ್ರತ್ಯಾನ್ ವರ್ಣರತಿಪ್ರಮೋದಾನ್ । ವರ್ಣಾಃ—ಆದಿತ್ಯವರ್ಣತ್ವಾದಿರೂಪವಿಶೇಷಾಃ ; ರತಿಪ್ರಮೋದಾಃ—ಬ್ರಹ್ಮಭೋಗಾದಿಜನಿತಾನಂದವಿಶೇಷಾಃ ; ತಾನ್ ಸರ್ವಾನ್ ಅಭಿಧ್ಯಾಯನ್ ನಿಪುಣ

ತಯಾ ನಿರೂಪಯನ್ । ಅನತಿದೀರ್ಘೇ ಜೀವಿತೇ ಕೋ ರಮೇತ । ಅತ್ಯಲ್ಪೇ ಐಹಿಕೇ ಚಿರ ಜೀವಿತೇ ಕಃ ಪ್ರೀತಿಮಾನ್ ಸ್ಯಾತ್ ಇತ್ಯರ್ಥಃ ॥

## ಅನುವಾದ

ಅಜೀರ್ಯತಾಮಮೃತಾನಾಮುಪೇತ್ಯ–ಮುಪ್ಪು–ಸಾವುಗಳಿಲ್ಲದ ಮುಕ್ತರ ಸ್ವರೂಪವನ್ನು ತಿಳಿದು ಜೀರ್ಯನ್ ಮರ್ತ್ಯಃ ಕ್ವ ತದಾಸ್ಥಃ ಪ್ರಜಾನನ್. ಪ್ರಜಾನನ್–ಜರಾ, ಮರಣ ಮುಂತಾದ ತೊಂದರೆಗಳಿಂದ ಕೂಡಿದ ಈ ಮನುಷ್ಯನು ತದಾಸ್ಥಃ ಅಪ್ಸರಸ್ತ್ರೀ ಮುಂತಾದ ವಿಷಯಸುಖ ಗಳಲ್ಲಿ ಆಸಕ್ತಿಯುಳ್ಳವನಾಗಿ ಕ್ವ–ಹೇಗಾಗುತ್ತಾನೆ ಎಂದರ್ಥ. 'ಕ್ವಧಸ್ಥಃ' ಎಂಬ ಪಾಠದಲ್ಲಿ ಕೆಳ ಭಾಗದಲ್ಲಿರುವವನು ಎಂದರ್ಥ. ಅಭಿಧ್ಯಾಯನ್ ವರ್ಣರತಿಪ್ರಮೋದಾನ್—ಅಲ್ಲಿರುವ ವರ್ಣ ರತಿಪ್ರಮೋದಾನ್. ವರ್ಣಾಃ–ಸೂರ್ಯನ ಕಾಂತಿಯಂತೆ ಪ್ರಕಾಶಿಸುವ ವಿಶೇಷ ರೂಪಗಳು ರತಿ ಪ್ರಮೋದಾಃ—ಬ್ರಹ್ಮಾನುಭವದಿಂದ ಉಂಟಾದ ವಿಶೇಷವಾದ ಆನಂದ ಈ ಎಲ್ಲವನ್ನೂ ಅಭಿ ಧ್ಯಾಯನ್—ಕೌಶಲದಿಂದ ಅರಿತವನು ಅನತಿದೀರ್ಘೇ ಜೀವಿತೇ ಕೋ ರಮೇತ—ಅತ್ಯಲ್ಪ ವಾದ ಇಹಲೋಕದ ಜೀವನದಲ್ಲಿ ಯಾವನು ಆಸಕ್ತನಾಗುವನು ಎಂದರ್ಥ.

## ಭಾಷ್ಯಸಾರ

ನಚಿಕೇತನು ಯಮನು ಹೇಳಿದ 'ಅಪ್ಸರಸ್ತ್ರೀಯರನ್ನು ಬಯಸು' ಎಂಬ ಮಾತಿನ ಬಗ್ಗೆ ಹೇಳುತ್ತಾನೆ. ಮಾನವ ಈ ಭೂಲೋಕದಲ್ಲಿ ವಾಸಿಸುತ್ತಾನೆ. ಇದು ಅಂತರಿಕ್ಷಾದಿ ಲೋಕಗಳಿಗಿಂತ ಕೀಳಾದುದು. ಇಲ್ಲಿ ದುಃಖವೇ ಹೆಚ್ಚು. ಇಲ್ಲಿರುವವರು ಜರಾಮರಣಾದಿ ದುಃಖಕ್ಕೆ ಒಳಗಾದವರು. ಇವರಿಗೆ ಸಾಂಸಾರಿಕ ಕಷ್ಟಗಳ ಅರಿವಿದ್ದು ಮುಕ್ತಾತ್ಮಸ್ವರೂಪವನ್ನು ತಿಳಿದ ಯಾವನೂ ಈ ಅಪ್ಸರಸ್ತ್ರೀಯರನ್ನು ಬಯಸಲಾರ. ಅವನು ಅಪ್ಸರಸ್ತ್ರೀಯರಲ್ಲಿರುವ ಲಾವಣ್ಯಾದಿಗಳನ್ನೂ, ಅಪ್ಸರಸ್ತ್ರೀಯರಲ್ಲಿ ಪ್ರೀತಿಯನ್ನೂ, ಅವರ ಸಹವಾಸದಿಂದ ಉಂಟಾ ಗುವ ಆನಂದವನ್ನೂ ಅತ್ಯಂತ ಕುತೂಹಲದಿಂದ ಚಿಂತಿಸುತ್ತಾನೆ. ಆಗ ಅವನಿಗೆ ಇವು ಶಾಶ್ವತವಲ್ಲ, ನಶ್ವರ ಎಂದು ಅರಿವಾಗುತ್ತದೆ. ಆದುದರಿಂದ ನೀನು ಕೊಡುವ ಈ ಚಿರ ಜೀವಿಕೆಯನ್ನೂ ಬಯಸಲಾರ, ಅಪಹತಪಾಪ್ಮತ್ವಾದಿ ಎಂಟು ಗುಣಗಳು ಮುಕ್ತಾತ್ಮ ಸ್ವರೂಪದಲ್ಲಿ ವಿಕಾಸಗೊಳ್ಳುತ್ತವೆ ಎಂಬುದನ್ನು ಅರಿತವನೂ, ಜೀವನ ಧರ್ಮವನ್ನೂ ಅರಿತ ವನು ದೀರ್ಘವಾದ ಜೀವನದಲ್ಲಿ ಅಪ್ಸರಸ್ತ್ರೀ ಮತ್ತು ಭೋಗಾದಿಗಳಲ್ಲಿ ಆಸಕ್ತನಾಗುವುದಿಲ್ಲ ಎಂದು ತಾತ್ಪರ್ಯ.

'ಅತಿದೀರ್ಘೇ[1]' ಎಂಬಲ್ಲಿ 'ಅನತಿದೀರ್ಘೇ' ಎಂಬ ಪಾಠಾಂತರವೂ ಉಂಟು. ಆಗ ಅತ್ಯಲ್ಪವಾದ ಈ ಜೀವನದಲ್ಲಿ ಎಂದು ಅರ್ಥ.

ರಾಮಾನಂದರು 'ಕ್ವಧಸ್ಥಃ' ಎಂಬಲ್ಲಿ 'ಕ್ವಚಿತ್ತದಾಸ್ಥಃ' ಎಂಬ ಪಾಠಾಂತರವನ್ನು ಅಂಗೀಕರಿಸಿದ್ದಾರೆ. ಈ ಪಾಠದಂತೆ 'ವಿವೇಕಿಯಾದವನು ಅಪ್ಸರಸ್ತ್ರೀ ಮೊದಲಾದ ಭೋಗ

1 ರಾಮಾನಂದ ಮತ್ತು ಗೋಪಾಲಾನಂದರು 'ಅತಿದೀರ್ಘೇ' ಎಂಬ ಪಾಠವನ್ನು ಅಂಗೀಕರಿಸಿದ್ದಾರೆ.

ಗಳಲ್ಲಿ ಹೇಗೆ ಆಸಕ್ತಿಯುಳ್ಳವನಾಗುತ್ತಾನೆ' ಎಂದರ್ಥ. 'ವರ್ಣರತಿಪ್ರಮೋದಾನ್ ಅಭಿಧ್ಯಾಯನ್' ಎಂಬುದಕ್ಕೆ 'ಆದಿತ್ಯವರ್ಣಂ ತಮಸಃ ಪರಸ್ತಾತ್' (ಉತ್ತರ ನಾರಾಯಣೋಪನಿಷತ್) ಎಂಬ ಶ್ರುತಿಯಲ್ಲಿ ಹೇಳಿರುವಂತೆ—ಪರಮಪದದಲ್ಲಿರುವ ಪರಮಾತ್ಮನ ಅನುಭವದಿಂದ ಉಂಟಾದ ಆನಂದವನ್ನು ಅನುಭವಿಸುವ ಯಾವ ವಿವೇಕಿಯೂ ಅತ್ಯಲ್ಪವಾದ ಈ ಜೀವನದಲ್ಲಿ ಆಸಕ್ತನಾಗುವುದಿಲ್ಲ ಎಂದು ಅರ್ಥೈಸಬೇಕೆಂದು' ಹೇಳಿದ್ದಾರೆ. ಇದು ರಂಗರಾಮಾನುಜರ ಭಾಷ್ಯವನ್ನು ಅನುಸರಿಸಿದೆ.

ಗೋಪಾಲಾನಂದರು 'ಈ ಭೂಮಿಯಲ್ಲಿ ವಾಸಮಾಡುತ್ತಿರುವ ಮನುಷ್ಯನು ಜನನ–ಮರಣಶೀಲನು. ಅದೃಷ್ಟವಿಶೇಷದಿಂದ 'ಅಜೀರ್ಯತಾಮಮೃತಾನಾಮುಪೇತ್ಯ'—ನಿನ್ನಂತಹ ದೇವತೆಗಳ ಸಮೀಪಕ್ಕೆ ಬಂದು, ನಿನ್ನಂತಹವರ ಸಹವಾಸದಿಂದ ಹಿತವಾವುದು ? ಅಹಿತವಾವುದು? ಎಂಬುದನ್ನು ಅರಿತ ಯಾವ ವಿವೇಕಿ ತಾನೇ ಪುನಃ ಸುಖದಂತೆ ಕಾಣುವ ಅಪ್ಸರಸ್ತ್ರೀ ಮುಂತಾದ ಸುಖವಸ್ತುಗಳನ್ನು ಧ್ಯಾನಿಸುತ್ತಾ ಈ ಅತ್ಯಲ್ಪವಾದ ಜೀವನದಲ್ಲಿ ಆಸಕ್ತನಾಗುತ್ತಾನೆ ? ಅಂದರೆ ಮಾನವರೆಲ್ಲಿ ? ದೇವತೆಗಳೆಲ್ಲಿ ? ಈ ಮಾನವ–ದೇವತೆಗಳ ಸಮಾಗಮವೆಲ್ಲಿ ? ಅದೃಷ್ಟವಿಶೇಷದಿಂದ ನಿನ್ನಂತಹವರ ಸಹವಾಸ ಸಿಕ್ಕಿರುವಾಗ ಮಾನವರು ಜನನ–ಮರಣಗಳಿಂದ ಪಾರಾಗಲು ಯತ್ನಿಸಬೇಕು. ಇದಕ್ಕಿಂತಲೂ ಹೀನವಾದ ಸ್ಥಿತಿಯನ್ನು ಹೊಂದಲು ಯತ್ನಿಸಬಾರದೆಂದು ತಾತ್ಪರ್ಯ' ಎಂದು ಹೇಳಿರುವರು.



## ಮಂತ್ರ ೩೦

**यस्मिन्निदं विचिकित्सन्ति मृत्यो [यत्] साम्पराये महति ब्रूहि न स्तत् ।**
**योऽयं वरो गूढमनुप्रविष्टो नान्यं तस्मान्नचिकेता वृणीते ॥**

ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ (ಯತ್) ಸಾಂಪರಾಯೇ
ಮಹತಿ ಬ್ರೂಹಿ ನಸ್ತತ್ ।
ಯೋಽಯಂ ವರೋ ಗೂಢಮನುಪ್ರವಿಷ್ಟೋ ನಾನ್ಯಂ
ತಸ್ಮಾನ್ನಚಿಕೇತಾ ವೃಣೀತೇ ॥

### ಪ್ರತಿಪದಾರ್ಥ

ಮೃತ್ಯೋ—ಯಮನೇ! ಮಹತಿ—ಉತ್ಕೃಷ್ಟವಾದ, ಸಾಂಪರಾಯೇ—ಪರಲೋಕಸಂಬಂಧಿಯಾದ, ಯಸ್ಮಿನ್—ಯಾವ ಮುಕ್ತಾತ್ಮಸ್ವರೂಪದ ವಿಷಯದಲ್ಲಿ, ಯತ್ ಇದಮ್—ಉಂಟು–ಇಲ್ಲ ಎಂಬ ಸಂಶಯವನ್ನು, ವಿಚಿಕಿತ್ಸಂತಿ—ತಿಳಿಯಲು ಅಪೇಕ್ಷಿಸುತ್ತಾರೋ. ತತ್—ಅದನ್ನು, ನಃ—ನನಗೆ, ಬ್ರೂಹಿ—ಹೇಳು, ಯಃ—ಯಾವ, ಅಯಮ್—ಈ, ವರಃ—ವರವು, ಗೂಢಮ್—ರಹಸ್ಯವಾದ ಆತ್ಮತತ್ವದಲ್ಲಿ, ಅನುಪ್ರವಿಷ್ಟಃ—ಸೇರಿರುವುದೋ, ತಸ್ಮಾತ್—ಆದಕಾರಣ, ನಚಿಕೇತಾ—ಈ ನಚಿಕೇತನು, ಅನ್ಯಮ್—ಬೇರೇ ವರವನ್ನು, ನ ವೃಣೀತೇ—ಬಯಸುವುದಿಲ್ಲ.

### ತಾತ್ಪರ್ಯ

ಎಲೈ ಮೃತ್ಯುವೇ ! ಮುಕ್ತಾತ್ಮಸ್ವರೂಪವು ಪರಲೋಕ ಸಂಬಂಧಿಯಾದುದು. ಈ ವಿಷಯದಲ್ಲಿ ಉಂಟು–ಇಲ್ಲ ಎಂಬ ಸಂಶಯವುಂಟಾಗಿದೆ. ವಿವೇಕಿಗಳು ಈ ವಿಷಯವನ್ನು ಅರಿಯಲು ಬಯಸುತ್ತಾರೆ. ಆ ವಿಷಯವನ್ನು ನನಗೆ ಹೇಳು. ನಾನು ಕೇಳಿದ ವರವು ರಹಸ್ಯವಾದ ಆತ್ಮತತ್ವ ವಿಷಯಕವಾದುದು. ಆದುದರಿಂದ ಇದನ್ನು ಬಿಟ್ಟು ನಾನು ಬೇರೊಂದನ್ನು ಬಯಸುವುದಿಲ್ಲ.

### ರಂಗರಾಮಾನುಜಭಾಷ್ಯಮ್

**ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ (ಯತ್) ಸಾಂಪರಾಯೇ ಮಹತಿ ಬ್ರೂಹಿ ನಸ್ತತ್ ।** ಮಹತಿ ಪಾರಲೌಕಿಕೇ ಯಸ್ಮಿನ್ ಮುಕ್ತಾತ್ಮಸ್ವರೂಪೇ ಸಂಶೇರತೇ, ತದೇವ ಮೇ ಬ್ರೂಹಿ । **ಯೋಽಯಂ ವರೋ............ನಚಿಕೇತಾ ವೃಣೀತೇ ।** ಗೂಢಮಾತ್ಮತತ್ತ್ವಮನುಪ್ರವಿಷ್ಟಃ ಯೋಽಯಂ ವರಃ, ತಸ್ಮಾದನ್ಯಂ ನಚಿಕೇತಾ ನ ವೃಣೀತೇ ಸ್ಮ ಇತಿ ಶ್ರುತೇರ್ವಚನಮ್ ॥

### ಅನುವಾದ

**ಯಸ್ಮಿನ್ನಿದಂ........ಬ್ರೂಹಿ ನಸ್ತತ್।** ಉತ್ಕೃಷ್ಟವಾದ ಪರಲೋಕಸಂಬಂಧಿಯಾದಯಾವ ಮುಕ್ತಾತ್ಮಸ್ವರೂಪದಲ್ಲಿ ಸಂಶಯಪಡುವರೋ ಅದನ್ನೇ ನನಗೆ ಹೇಳು. '**ಯೋಽಯಂ ವರೋ**

.......**ನಚಿಕೇತಾ ವೃಣೀತೇ** – ರಹಸ್ಯವಾದ ಆತ್ಮತತ್ವ ವಿಷಯದಲ್ಲಿ ಯಾವುದೊಂದು ವರವನ್ನು ಕೇಳಿದನೋ ಅದನ್ನು ಬಿಟ್ಟು ನಚಿಕೇತನು ಬೇರೊಂದು ವರವನ್ನು ಕೇಳುವುದಿಲ್ಲ ಎಂಬುದು ಶ್ರುತಿಯ ಮಾತು.

### ಭಾಷ್ಯಸಾರ

ನಚಿಕೇತನು ಯಮನನ್ನು ಕುರಿತು ತಾನು ಕೇಳಿದ ವರವನ್ನು ಬಿಟ್ಟು ಬೇರೊಂದನ್ನು ಕೇಳುವುದಿಲ್ಲ ಎಂದು ಕೊನೆಯದಾಗಿ ತಿಳಿಸುತ್ತಾನೆ.

ಮೃತ್ಯುದೇವತೆಯೇ! ಈ ಮುಕ್ತಾತ್ಮಸ್ವರೂಪದ ಬಗ್ಗೆ ಇದೇ ಇಲ್ಲ ಎಂದು ಮಾನವರು ದೇವತೆಗಳೂ ಸಂಶಯಪಟ್ಟಿದ್ದಾರೆ. ಉತ್ಕೃಷ್ಟವಾದ ಈ ಪಾರಲೌಕಿಕ ವಿಷಯವನ್ನು ತಿಳಿಯಬೇಕಾಗಿದೆ. ಈ ಮುಕ್ತಾತ್ಮಸ್ವರೂಪವು ಅತ್ಯಂತ ಶ್ರೇಷ್ಠವಾದ ಪುರುಷಾರ್ಥವೆನಿಸಿದೆ ಎಂದು ತಾತ್ಪರ್ಯ. ಆದುದರಿಂದ ಇದನ್ನು ನನಗೆ ಉಪದೇಶಿಸು, ಇಂತಹ ರಹಸ್ಯವೂ, ತಿಳಿಯಲು ಕಷ್ಟವೂ ಆದ ಈ ಮುಕ್ತಾತ್ಮಸ್ವರೂಪವನ್ನು ಬಿಟ್ಟು ಮತ್ತೊಂದು ವರವನ್ನು ನಚಿಕೇತನಾದ ನಾನು ಕೇಳುವುದಿಲ್ಲ. ಇಲ್ಲಿ 'ನಚಿಕೇತ' ಎಂಬ ತನ್ನ ಹೆಸರಿನಿಂದ ಆಮಿಷಗಳಿಗೆ ನಾನು ಒಳಗಾಗುವವನಲ್ಲ ಎಂಬುದನ್ನು ಸೂಚಿಸುತ್ತಾನೆ.

ಅಥವಾ ಯಮನು ಎಷ್ಟೇ ಪ್ರಲೋಭನಗೊಳಿಸಿದರೂ ನಚಿಕೇತನು ಬೇರೆ ವರವನ್ನು ಕೇಳುವುದಿಲ್ಲ ಎಂಬುದನ್ನು ಶ್ರುತಿಯೇ ನಮಗೆ ಹೇಳುತ್ತಿದೆ.

ಪ್ರಥಮವಲ್ಲಿ ಮುಗಿದುದು.



# ಕಠೋಪನಿಷತ್—ದ್ವಿತೀಯವಲ್ಲೀ

## ಮಂತ್ರ ೧

### हरिःओम्

**अन्यच्छ्रेयोऽन्यदुतैव प्रेयस्ते उभे नानार्थे पुरुषँ सिनीतः ।**
**तयोः श्रेय आददानस्य साधु भवति हीयतेऽर्थात् य उ प्रेयो वृणीते ॥**

ಹರಿಃ ಓಮ್

ಅನ್ಯಚ್ಛ್ರೇಯೋಽನ್ಯದುತ್ತೈವ ಪ್ರೇಯಸ್ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ।
ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ ಹೀಯತೇಽರ್ಥಾತ್ ಯ ಉ ಪ್ರೇಯೋ ವೃಣೀತೇ ॥

### ಪ್ರತಿಪದಾರ್ಥ

**ಶ್ರೇಯಃ**—ಮೋಕ್ಷಮಾರ್ಗವು, **ಅನ್ಯತ್**—ಬೇರೆ, **ಪ್ರೇಯಃ**—ಭೋಗಮಾರ್ಗವು, **ಅನ್ಯದುತ್ತೈವ**—ಬೇರೆಯಾದದ್ದೇ, **ನಾನಾರ್ಥೇ**—ಪರಸ್ಪರವಿಲಕ್ಷಣ ಪ್ರಯೋಜನವುಳ್ಳ, **ತೇ ಉಭೇ**—ಆ ಎರಡೂ, **ಪುರುಷಮ್**—(ತನ್ನ ಮಾರ್ಗದಲ್ಲಿ ಬಂದ) ಪುರುಷನನ್ನು, **ಸಿನೀತಃ**—ಬಂಧಿಸುತ್ತವೆ, **ತಯೋಃ**—ಅವುಗಳಲ್ಲಿ, **ಶ್ರೇಯಃ**—ಮೋಕ್ಷಮಾರ್ಗವನ್ನು, **ಆದದಾನಸ್ಯ**—ಹಿಡಿದವನಿಗೆ, **ಸಾಧು ಭವತಿ**—ಮಂಗಳವಾಗುತ್ತದೆ, **ಯ ಉ**—ಯಾವನು **ಪ್ರೇಯಃ**—ಭೋಗಮಾರ್ಗವನ್ನು, **ವೃಣೀತೇ**—ಅಪೇಕ್ಷಿಸುವನೋ, **ಸಃ**—ಅವನು, **ಅರ್ಥಾತ್**—ಧರ್ಮ-ಅರ್ಥ-ಕಾಮಗಳಿಂದಲೂ, **ಹೀಯತೇ**—ಭ್ರಷ್ಟನಾಗುತ್ತಾನೆ.

### ತಾತ್ಪರ್ಯ

ಯಮನು, ಬ್ರಹ್ಮವಿದ್ಯೆ ಉಪದೇಶಿಸುವುದಕ್ಕೆ ನಚಿಕೇತನು ಅರ್ಹನೆಂದು ಅರಿತು ಮುಮುಕ್ಷುವಾದ ಅವನನ್ನು ಪ್ರಶಂಸಿಸುತ್ತಾನೆ. ಪ್ರಿಯವಾದ ಭೋಗಮಾರ್ಗಕ್ಕಿಂತ ಹಿತವಾದ ಮೋಕ್ಷಮಾರ್ಗ ಬೇರೆ. ಪರಸ್ಪರ ವಿಲಕ್ಷಣವಾದ ಇವೆರಡೂ ಪುರುಷನನ್ನು ತಮ್ಮ ವಶದಲ್ಲಿರುವಂತೆ ಬಂಧಿಸುತ್ತವೆ. ಇವೆರಡೂ ಬೇರೆ ಬೇರೆ ಪ್ರಯೋಜನಗಳುಳ್ಳವು. ಇವೆರಡರಲ್ಲಿ ಮೋಕ್ಷಮಾರ್ಗವನ್ನು ಬಯಸುವವನಿಗೆ ಒಳ್ಳೆಯ ಫಲ ಉಂಟಾಗುತ್ತದೆ. ಯಾವನು ಭೋಗರೂಪವಾದ ಸ್ವರ್ಗಾದಿಸೌಖ್ಯವನ್ನು ಅಪೇಕ್ಷಿಸುತ್ತಾನೋ ಅವನು ಉತ್ತಮಪುರುಷಾರ್ಥದಿಂದ ವಂಚಿತನಾಗುತ್ತಾನೆ. ಇದು ನಿಶ್ಚಯ.

### ರಂಗರಾಮಾನುಜಭಾಷ್ಯಮ್

ಏವಂ ಶಿಷ್ಯಂ ಪರೀಕ್ಷ್ಯ, ತಸ್ಯ ಮುಮುಕ್ಷಾಸ್ಥೈರ್ಯಂ ನಿಶ್ಚಿತ್ಯ, ತಸ್ಯೋಪದೇಶಯೋಗ್ಯತಾಂ ಮನ್ವಾನಃ ಮುಮುಕ್ಷಾಂ ಸ್ತೌತಿ—ಅನ್ಯಚ್ಛ್ರೇಯೋಽನ್ಯದುತ್ತೈವ ಪ್ರೇಯಃ ।

ಅತಿಪ್ರಶಸ್ತಂ ಮೋಕ್ಷವತ್ಮಾರ್ಗಪಿ ಅನ್ಯತ್ : ಪ್ರಿಯತ್ವಾಸ್ಪದಂ ಭೋಗವತ್ಮಾರ್ಗಪಿ ಅನ್ಯತ್ । ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ । ತೇ— ಶ್ರೇಯಃ—ಪ್ರೇಯಸೀ, ಪರಸ್ಪರ ವಿಲಕ್ಷಣ ಪ್ರಯೋಜನೇ ಸತೀ, ಪುರುಷಂ ಸಿನೀತಃ – ಬಧ್ನೀತಃ । ಪುರುಷಂ ಸ್ವವಶತಾಮಾಪಾದಯತಃ ಇತ್ಯರ್ಥಃ । ತಯೋಃ ಶ್ರೇಯ ಆದದಾನಸ್ಯ ಸಾಧುರ್ಭವತಿ । ತಯೋರ್ಮಧ್ಯೇ ಶ್ರೇಯ ಆದದಾನಸ್ಯ— ಮೋಕ್ಷಾಯ ಪ್ರಯತಮಾನಸ್ಯ ಸಾಧು— ಭದ್ರಂ ಭವತಿ । ಹೀಯತೇಽರ್ಥಾತ್ ಯ ಉ ಪ್ರೇಯೋ ವೃಣೀತೇ । ಯಸ್ತು ಪ್ರೇಯೋ ವೃಣೀತೇ ಸ ಪುರುಷಾರ್ಥಾದ್ಭ್ರಷ್ಟೋ ಭವತಿ । ಉ ಇತ್ಯವಧಾರಣೇ ॥

## ಅನುವಾದ

ಯಮನು ಶಿಷ್ಯನನ್ನು ಪ್ರಲೋಭನೆಗಳಿಂದ ಪರೀಕ್ಷಿಸಿ, ನಚಿಕೇತನಲ್ಲಿ ಸ್ಥಿರವಾದ ಮೋಕ್ಷೇಚ್ಛೆಯಿದೆ ಎಂದು ನಿಶ್ಚಯಿಸಿದನು ಮತ್ತು ಈತನು ಉಪದೇಶಕ್ಕೆ ಅರ್ಹನು ಎಂದು ತಿಳಿದು ಮೋಕ್ಷೇಚ್ಛೆಯನ್ನು ಸ್ತುತಿಸುತ್ತಾನೆ. ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಃ— ಅತಿ ಶ್ರೇಷ್ಠವಾದ ಮೋಕ್ಷಮಾರ್ಗ ಬೇರೆ. ಪ್ರೀತಿಗೆ ನೆಲೆಯಾದ ಭೋಗಮಾರ್ಗ ಬೇರೆ. ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ । ತೇ— ಶ್ರೇಯಸ್ಸು—ಪ್ರೇಯಸ್ಸು ಎರಡೂ ಒಂದಕ್ಕೊಂದು ವಿಲಕ್ಷಣವಾದ ಫಲವುಳ್ಳವುಗಳಾಗಿ ಜೀವನನ್ನು ಸಿನೀತಃ— ಬಂಧಿಸುತ್ತವೆ. ಅಂದರೆ ಈ ಎರಡೂ ಪುರುಷನನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತವೆ ಎಂದರ್ಥ. ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ— ಆ ಎರಡರಲ್ಲಿ ಶ್ರೇಯಃ ಆದದಾನಸ್ಯ—ಮೋಕ್ಷಕ್ಕಾಗಿ ಯತ್ನಿಸುವವನಿಗೆ ಸಾಧು ಭವತಿ- ಒಳ್ಳೆಯದಾಗುತ್ತದೆ. ಹೀಯತೇಽರ್ಥಾ ಯ ಉ ಪ್ರೇಯೋ ವೃಣೀತೇ— ಯಾವನು ಪ್ರೇಯಸ್ಸನ್ನು ಅಪೇಕ್ಷಿಸುತ್ತಾನೋ ಅವನು ಪರಮಪುರುಷಾರ್ಥದಿಂದ (ಮೋಕ್ಷದಿಂದ) ಚ್ಯುತನಾಗುತ್ತಾನೆ. ಉ ಎಂಬುದು ಅವಧಾರಣಾರ್ಥ[1] ದಲ್ಲಿದೆ.

## ಭಾಷ್ಯಸಾರ

ಯಮನು ಮೋಕ್ಷಸ್ವರೂಪವನ್ನು ಉಪದೇಶಿಸಲು ನಚಿಕೇತನು ಅರ್ಹನೇ ಎಂಬುದನ್ನು ಪ್ರಲೋಭನೆಗಳ ಮೂಲಕ ಪರೀಕ್ಷಿಸಿದನು. ಇದರಿಂದ ನಚಿಕೇತನ ಮೋಕ್ಷೇಚ್ಛೆಯು ದೃಢವೆಂದು ತಿಳಿದನು. ಅವನ ಮೋಕ್ಷೇಚ್ಛೆಯನ್ನು ಪ್ರಶಂಸಿಸಲು 'ಅನ್ಯತ್ ಶ್ರೇಯಃ' ಎಂದು ಆರಂಭಿಸುತ್ತಾನೆ.

ಮೋಕ್ಷಮಾರ್ಗವೇ ಶ್ರೇಯಸ್ಸು. ಇದು ಉತ್ತಮವಾದುದು. ಪ್ರೇಯಸ್ಸು ಪ್ರಕೃತಿ ಸಂಬಂಧವುಳ್ಳ ಪ್ರಾಣಿಸಾಮಾನ್ಯವು ಇಂದ್ರಿಯಗಳಿಗೆ ಆನಂದವುಂಟುಮಾಡುವ ವಸ್ತುಗಳಲ್ಲಿ ಇಂದ್ರಿಯಗಳನ್ನು ನೆಲೆಗೊಳಿಸುತ್ತವೆ. ಇದರಿಂದ ಅವುಗಳಿಗೆ ಸಂತೋಷವುಂಟಾಗುತ್ತದೆ. ಇದು ಭೋಗಮಾರ್ಗ. ಇದಕ್ಕಿಂತ ಮೋಕ್ಷಮಾರ್ಗ ಭಿನ್ನವಾದುದು. ಪ್ರಕೃತಿಗಿಂತ ಭಿನ್ನವೂ ಪರಿಶುದ್ಧವೂ ಮನಸ್ಸಿಗೆ ಮಾತ್ರ ತಿಳಿಯುವುದೂ ಜೀವನಿಗೆ ಅತ್ಯಂತ ಹಿತವೂ ಆದುದು ಪರಮಾತ್ಮಸ್ವರೂಪ. ಪ್ರಕೃತಿಸಂಬಂಧದಿಂದ ಉಂಟಾದ ವಾಸನೆಯಿಂದ ಈ ಪರಮಾತ್ಮ

---

1 ಉಕಾರವು 'ಏವ' ಎಂಬ ಅವಧಾರಣಾರ್ಥದಲ್ಲಿದೆ. ಕನ್ನಡದಲ್ಲಿ 'ಅವನೇ' ಎಂಬಲ್ಲಿರುವ 'ಏ' ಕಾರದ ಅರ್ಥ ಅವಧಾರಣೆ.

ಸ್ವರೂಪವು ಪ್ರೀತಿಗೆ ವಿಷಯವಾಗುವುದಿಲ್ಲ. ಇದನ್ನು ಅರಿಯುವ ಮಾರ್ಗವು ಎಲ್ಲ ರೀತಿಯಲ್ಲಿಯೂ ಉತ್ತಮವಾದುದು. ಇದೇ ಮೋಕ್ಷಸಾಧನವಾದಮಾರ್ಗ. ಹೀಗೆ ಒಂದು ಮಾರ್ಗ ಮೋಕ್ಷಸಾಧನವಾದರೆ ಮತ್ತೊಂದು ಸಂಸಾರಬಂಧನಕ್ಕೆ ಸಾಧನ. ಈ ಎರಡೂ ತಮ್ಮ ತಮ್ಮ ವಿಷಯಗಳಲ್ಲಿ ಜೀವನನ್ನು ಆಸಕ್ತನನ್ನಾಗಿಸಿ ಬಂಧಿಸುತ್ತವೆ. ತಮ್ಮ ವಶದಲ್ಲಿಟ್ಟುಕೊಳ್ಳುತ್ತವೆ. ಇವುಗಳಲ್ಲಿ ಲೌಕಿಕ ಸುಖಾಪೇಕ್ಷಿಯಾದವನು ಪ್ರೇಯಸ್ಸನ್ನೂ, ಮೋಕ್ಷಾಭಿಲಾಷಿಯು ಶ್ರೇಯಸ್ಸನ್ನೂ ಆಶ್ರಯಿಸುತ್ತಾನೆ.

ಈ ಎರಡರಲ್ಲಿ ಶ್ರೇಯಸ್ಸನ್ನು ಹೆಚ್ಚೆಂದು ಭಾವಿಸಿ ಪರಮಾತ್ಮಸ್ವರೂಪವನ್ನು ಅರಿಯಲು ಯತ್ನಿಸುವವನಿಗೆ ಮಂಗಳವುಂಟಾಗುತ್ತದೆ. ಬಾಹ್ಯಸುಖವನ್ನು ಬಯಸಿ ಪ್ರೇಯಸ್ಸನ್ನು ಆಶ್ರಯಿಸುವವನು ಮೋಕ್ಷದಿಂದ ದೂರವಾಗುತ್ತಾನೆ. ಅಂದರೆ ಪ್ರೇಯಸ್ಸಿನಿಂದ ನಿಜವಾದ ಪ್ರಯೋಜನ ಪಡೆಯದೆ ಪ್ರಯೋಜನದಂತೆ ಕಾಣುವುದನ್ನು ಮಾತ್ರ ಹೊಂದುತ್ತಾನೆ.



## ಮಂತ್ರ ೨

**श्रेयश्च प्रेयश्च मनुष्यमेतस्तौ संपरीत्य विविनक्ति धीरः ।
श्रेयो हि धीरोऽभि प्रेयसो वृणीते प्रेयो मन्दो योगक्षेमाद्वृणीते ॥**

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ
ವಿವಿನಕ್ತಿ ಧೀರಃ ।
ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೇ ಪ್ರೇಯೋ
ಮಂದೋ ಯೋಗಕ್ಷೇಮಾದ್ವೃಣೀತೇ ॥

### ಪ್ರತಿಪದಾರ್ಥ

ಶ್ರೇಯಶ್ಚ—ಶ್ರೇಯಸ್ಸೂ1, ಪ್ರೇಯಶ್ಚ—ಪ್ರೇಯಸ್ಸೂ2, ಮನುಷ್ಯಮ್—ಮನುಷ್ಯನನ್ನು ಏತಃ—ಸೇರುತ್ತವೆ, ಧೀರಃ—ತತ್ತ್ವಜಿಜ್ಞಾಸುವು, ತೌ—ಆ ಎರಡನ್ನೂ (ಕುರಿತು), ಸಂಪರೀತ್ಯ—ಚೆನ್ನಾಗಿ ಆಲೋಚಿಸಿ, ವಿವಿನಕ್ತಿ—ವಿವೇಚಿಸಿ ಅರಿಯುತ್ತಾನೆ, ಧೀರಃ—ಹಾಗೆ ತಿಳಿದ ಜ್ಞಾನಿಯು, ಪ್ರೇಯಸಃ—ಪ್ರೇಯಸ್ಸಿಗಿಂತಲೂ, ಅಭಿ—ಉತ್ತಮವಾದ, ಶ್ರೇಯಃ—ಶ್ರೇಯಸ್ಸನ್ನೇ, ವೃಣೀತೇ—ವರಿಸುತ್ತಾನೆ, ಮಂದಃ—ಅಜ್ಞಾನಿಯು, ಯೋಗಕ್ಷೇಮಾತ್—ಯೋಗ ಮತ್ತು ಕ್ಷೇಮಕ್ಕಿಂತಲೂ, ಪ್ರೇಯೋ—ಪ್ರೇಯಸ್ಸನ್ನು, ವೃಣೀತೇ ಹಿ—ಬಯಸುತ್ತಾನಲ್ಲವೇ !

### ತಾತ್ಪರ್ಯ

ಶ್ರೇಯಸ್ಸು ಮತ್ತು ಪ್ರೇಯಸ್ಸುಗಳಲ್ಲಿ ಚೇತನನು ಯಾವುದನ್ನಾದರೂ ಆರಿಸಿಕೊಳ್ಳಬಹುದು. ತತ್ತ್ವಜ್ಞಾನಿಯು ಎರಡರ ಫಲವನ್ನೂ ವಿವೇಚಿಸುತ್ತಾನೆ. ಶ್ರೇಯಸ್ಸು ಮತ್ತು ಪ್ರೇಯಸ್ಸು ಇವೆರಡರಲ್ಲಿ ಶ್ರೇಯಸ್ಸೇ ಶ್ರೇಷ್ಠವಾದುದು ಎಂದು ತಿಳಿದುಕೊಂಡು ಶ್ರೇಯೋ ಮಾರ್ಗವನ್ನೇ ಅವಲಂಬಿಸುತ್ತಾನೆ. ಅಜ್ಞನಾದ ಮೂಢನು ಅಸಾರವಾದ ಪ್ರೇಯಸ್ಸನ್ನೇ ಬಯಸುತ್ತಾನೆ ಎಂಬುದು ಪ್ರಸಿದ್ಧ.

### ರಂಗರಾಮಾನುಜಭಾಷ್ಯಮ್

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ । ಶ್ರೇಯಶ್ಚ ಪ್ರೇಯಶ್ಚ ಮನುಷ್ಯಂ ಪ್ರಾಪ್ನುತಃ । **ತೌ ಸಂಪರೀತ್ಯ ವಿವಿನಕ್ತಿ ಧೀರಃ** । ತೌ—ಶ್ರೇಯಃ ಪ್ರೇಯಃ ಪದಾರ್ಥೌ ಸಮ್ಯಗಾಲೋಚ್ಯ, ನೀರಕ್ಷೀರೇ ಹಂಸ ಇವ ಪೃಥಕ್ಕರೋತಿ । ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೇ । ಧಿಯಾ ರಮತ ಇತಿ ಧೀರಃ—ಪ್ರಜ್ಞಾಶಾಲೀ, ಪ್ರೇಯೋಽಪೇಕ್ಷಯಾ **ಅಭಿ**—ಅಭ್ಯರ್ಹಿತಂ ಶ್ರೇಯ ಏವ ವೃಣೀತೇ ! **ಪ್ರೇಯೋ ಮಂದೋ ಯೋಗಕ್ಷೇಮಾದ್ವೃಣೀತೇ** । ಮಂದಮತಿಃ ಯೋಗಕ್ಷೇಮಾದ್ಧೇತೋಃ ಪ್ರೇಯೋ ವೃಣೀತೇ । ಶರೀರಸ್ಯ ಉಪಚಯಃ—**ಯೋಗಃ ; ಕ್ಷೇಮಃ**—ಪರಿಪಾಲನಮ್ ॥

---

1 ಶ್ರೇಯಃ—ಮೋಕ್ಷಮಾರ್ಗ, 2 ಪ್ರೇಯಃ—ಭೋಗಮಾರ್ಗ.

## ಅನುವಾದ

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ। ಶ್ರೇಯಸ್ಸು, ಪ್ರೇಯಸ್ಸುಗಳು ಮನುಷ್ಯನನ್ನು ಸೇರುತ್ತವೆ. ತೌ ಸಂಪರೀತ್ಯ ವಿವಿನಕ್ತಿ ಧೀರಃ । ತೌ—ಆ ಶ್ರೇಯಸ್ಸು ಪ್ರೇಯಸ್ಸುಗಳನ್ನು ಕುರಿತು ಚೆನ್ನಾಗಿ ಆಲೋಚಿಸಿ, ಹಂಸವು ಹಾಲು ಮತ್ತು ನೀರನ್ನು ಬೇರ್ಪಡಿಸುವಂತೆ ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೇ। (ಬುದ್ಧಿಯಿಂದ) ಜ್ಞಾನದಿಂದ ಸಂತೋಷಿಸುವವನು ಧೀರ. ಈತನು ಪ್ರೇಯಸ್ಸಿಗಿಂತಲೂ ಶ್ರೇಷ್ಠವಾದ ಶ್ರೇಯಸ್ಸನ್ನು ವರಿಸುತ್ತಾನೆ. ಪ್ರೇಯೋ ಮಂದೋ ಯೋಗಕ್ಷೇಮಾನ್ ವೃಣೀತೇ—ಅಜ್ಞಾನಿಯಾದವನು ಯೋಗಕ್ಷೇಮಕ್ಕಾಗಿ ಪ್ರೇಯಸ್ಸನ್ನು ವರಿಸುತ್ತಾನೆ. ಶರೀರದ ಬೆಳವಣಿಗೆಯೇ ಯೋಗ, ಶರೀರರಕ್ಷಣೆಯೇ ಕ್ಷೇಮ.

## ಭಾಷ್ಯಸಾರ

ಈ ಶ್ರೇಯಸ್ಸು, ಪ್ರೇಯಸ್ಸುಗಳೆರಡು ಪುರುಷಾರ್ಥಸಾಧ್ಯವಾದುವು. ಆದುದರಿಂದ ಎಲ್ಲರೂ ಪ್ರೇಯಸ್ಸನ್ನು ಬಯಸದೇ ಶ್ರೇಯಸ್ಸನ್ನೇ ಬಯಸಬಹುದಲ್ಲವೇ ? ಆದರೂ ಬಹಳ ಜನರು ಪ್ರೇಯಸ್ಸಿನಲ್ಲಿಯೇ ಆಸಕ್ತರಾಗುವರಲ್ಲ ಏಕೆ ? ಎಂದಲ್ಲಿ ' ಶ್ರೇಯಶ್ಚ ' ಎಂಬುದರಿಂದ ವಿವರಿಸುತ್ತಾನೆ. ಶ್ರೇಯಸ್ಸು ಮತ್ತು ಪ್ರೇಯಸ್ಸುಗಳು ಮಾನವರನ್ನು ಸೇರುತ್ತವೆ. ಅಂದರೆ ಮೋಕ್ಷ ಮತ್ತು ಇತರ ಪುರುಷಾರ್ಥಗಳನ್ನು ಸಾಧಿಸಲು ಬೇಕಾದ ಇಂದ್ರಿಯಾದಿಗಳಿಂದ ಕೂಡಿದ ಮಾನವರ ಮುಂದೆ ಈ ಎರಡು ಮಾರ್ಗಗಳೂ ಇವೆ. ಈ ಎರಡರಲ್ಲಿ ಒಳ್ಳೆಯದಾವುದು ? ಯಾವುದು ಕೆಟ್ಟದ್ದು ? ಎಂಬುದನ್ನು ವಿವೇಕಿಯಾದವನು ' ಹಂಸವು ಹಾಲು ನೀರಿನ ಬೆರಿಕೆಯಲ್ಲಿ ಹಾಲನ್ನು ಬೇರ್ಪಡಿಸುವಂತೆ ' ಗುಣದೋಷಗಳನ್ನು ಪರಿಶೀಲಿಸಿ ಗುಣವನ್ನು ತಿಳಿಯುತ್ತಾನೆ. ಅನಂತರ ಪ್ರೇಯಸ್ಸಿಗಿಂತ ಶ್ರೇಷ್ಠವಾದ ಶ್ರೇಯಸ್ಸನ್ನೇ ಅಪೇಕ್ಷಿಸುತ್ತಾನೆ. ತಿಳುವಳಿಕೆಯಿಲ್ಲದವನು ಶರೀರಪೋಷಣೆ–ರಕ್ಷಣೆಗೆ ಬೇಕಾದ ಪುತ್ರ–ಪಶು–ಅನ್ನ ಮುಂತಾದ ಭೋಗ್ಯವಸ್ತುಗಳನ್ನು ಅಪೇಕ್ಷಿಸುತ್ತಾನೆ.

ಸುಬೋಧಿನೀಕಾರರು ' ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೇ ' ಎಂಬಲ್ಲಿ 'ಪ್ರೇಯಸಃ ಅಭಿ ' ಎಂಬಲ್ಲಿ 'ಲ್ಯಬ್ ಲೋಪೇ ಪಂಚಮೀ' ಎಂದು ಅಥವಾ ಪ್ರಿಯವಾದುದನ್ನು ಬಿಟ್ಟು ಶ್ರೇಯಸ್ಸನ್ನೇ ಅಪೇಕ್ಷಿಸುತ್ತಾನೆ ಎಂದು ಅರ್ಥಮಾಡಿರುತ್ತಾರೆ.



## ಮಂತ್ರ ೩

**स त्वं प्रियान् प्रियरूपांश्च कामन् अभिध्यायन् नचिकेतोऽत्यस्राक्षीः ।**
**नैतां सृङ्कां वित्तमयीमवाप्तो यस्यां मज्जन्ति बहवो मनुष्याः ॥**

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮನ್ ಅಭಿಧ್ಯಾ
ಯನ್ ನಚಿಕೇತೋಽತ್ಯಸ್ರಾಕ್ಷೀಃ ।
ನೈತಾಂ ಸೃಂಕಾಂ ವಿತ್ತಮಯೀಮವಾಪ್ತೋ ಯಸ್ಯಾಂ ಮಜ್ಜಂತಿ
ಬಹವೋ ಮನುಷ್ಯಾಃ ॥

### ಪ್ರತಿಪದಾರ್ಥ

ಹೇ ನಚಿಕೇತಃ—ಎಲೈ ನಚಿಕೇತನೇ ; ಸ ತ್ವಮ್—ಮುಮುಕ್ಷುವಾದ ನೀನು, ಪ್ರಿಯಾನ್—ಪ್ರಿಯವಾದ ಧನವನ್ನೂ, ಪ್ರಿಯರೂಪಾಂಶ್ಚ—ರೂಪಾದಿಗಳಿಂದ ಪ್ರಿಯವಾದ ಸ್ತ್ರೀಯರನ್ನೂ, ಕಾಮಾನ್—ಭೋಗಗಳನ್ನೂ, ಅಭಿಧ್ಯಾಯನ್—ವಿಮರ್ಶಿಸಿ, ಅತ್ಯಸ್ರಾಕ್ಷೀಃ—ತ್ಯಾಗಮಾಡಿರುವೆ. ಯಸ್ಯಾಮ್—ಯಾವ ಒಂದು ಮಾರ್ಗದಲ್ಲಿ, ಬಹವಃ ಮನುಷ್ಯಾಃ—ಬಹಳ ಜನಗಳು, ಮಜ್ಜಂತಿ—ಮುಳುಗಿಹೋಗುವರೋ, ಏತಾಮ್—ಈ, ವಿತ್ತಮಯೀಮ್—ಧನರೂಪವಾದ, ಸೃಂಕಾಮ್[1]—ರತ್ನಹಾರವನ್ನು, ನ ಅವಾಪ್ತಃ—ಬಯಸಲಿಲ್ಲ.

### ತಾತ್ಪರ್ಯ

ನಚಿಕೇತನ ಹಿರಿಮೆಯನ್ನು ಯಮನು ಹೊಗಳುತ್ತಾನೆ. ಎಲೈ ನಚಿಕೇತನೇ ! ಸ್ವಾಭಾವಿಕವಾಗಿ ಮೋಹವನ್ನುಂಟುಮಾಡುವ ಹಣ, ರೂಪಾದಿಗಳಿಂದ ಮೋಹಕವಾದ ಸ್ತ್ರೀ ಮೊದಲಾದ ಭೋಗಸಾಧನಗಳಿಂದ ಭವಿಷ್ಯದಲ್ಲಿ ಉಂಟಾಗುವ ದುಃಖಗಳನ್ನು ಚಿಂತಿಸಿ ಅದರಿಂದ ಉಂಟಾಗುವ ದೋಷಗಳನ್ನು ಚೆನ್ನಾಗಿ ಪರ್ಯಾಲೋಚಿಸಿ, ಅವುಗಳನ್ನು ತ್ಯಜಿಸಿರುವೆ. ನಿಕೃಷ್ಟಜನರು ಆಸೆಪಡುವ ಬೆಲೆಬಾಳುವ ಈ ರತ್ನಹಾರ, ಹಣ ಮೊದಲಾದವುಗಳನ್ನು ತ್ಯಾಗ ಮಾಡಿರುವೆ ಎಂದು ಹೊಗಳಿದನು.

### ರಂಗರಾಮಾನುಜಭಾಷ್ಯಮ್

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್ । ತಾದೃಶಸ್ತ್ವಂ ಸ್ವತೋ ರೂಪತಶ್ಚ ಪ್ರಿಯಾನ್—ಕಾಮ್ಯಮಾನಾನ್ ಸ್ತ್ರ್ಯಾದೀನ್ ಇತ್ಯರ್ಥಃ । ಅಭಿಧ್ಯಾಯನ್ ನಚಿಕೇತೋಽತ್ಯಸ್ರಾಕ್ಷೀಃ । ದುಃಖೋದರ್ಕತ್ವದುಃಖಮಿಶ್ರತ್ವಾದಿದೋಷಯುಕ್ತತಯಾ ನಿರೂಪಯನ್ ತ್ಯಕ್ತವಾನಸೀತ್ಯರ್ಥಃ । ನೈತಾಂ ಸೃಂಕಾಂ ವಿತ್ತಮಯೀಮವಾಪ್ತಃ । ವಿತ್ತಮಯೀಮ್ ಧನಪ್ರಾಯಾಂ, ಸೃಂಕಾಮ್—ಕುತ್ಸಿತಗತೀಂ ಮೂಢಜನಸೇವಿತಾಮ್ ಏತಾಂ ನ ಅವಾಪ್ತವಾನಸಿ । ಯಸ್ಯಾಂ ಮಜ್ಜಂತಿ ಬಹವೋ ಮನುಷ್ಯಾಃ । ಸ್ಪಷ್ಟೋಽರ್ಥಃ ॥

---

1 ಸೃಂಕಾಮ್—'ರತ್ನಹಾರ' ಎಂದು ಪ್ರತಿಪದಾರ್ಥಕಾರರು ಮತ್ತು ರಾಮಾನಂದರು ವಿವರಿಸಿರುವರು.

## ಅನುವಾದ

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್—ಧೀರನೆನಿಸಿದ ನೀನು ಸ್ವಾಭಾವಿಕವಾಗಿಯೂ ಮತ್ತು ರೂಪದಿಂದ ಪ್ರಿಯರಾದ ಸ್ತ್ರೀ ಮುಂತಾದವುಗಳನ್ನು, ಅಭಿಧ್ಯಾಯನ್ ನಚಿಕೇತೋಽತ್ಯಸ್ರಾಕ್ಷೀಃ—ಭವಿಷ್ಯದಲ್ಲಿ ದುಃಖಸಾಧನ ಮತ್ತು ದುಃಖದಿಂದ ಕೂಡಿರುವ ಅಂದರೆ ದುಃಖೋದರ್ಕತ್ವ, ದುಃಖಮಿಶ್ರತ್ವ ಮುಂತಾದ ದೋಷಗಳನ್ನು ಚೆನ್ನಾಗಿ ಅರಿತು ತ್ಯಾಗಮಾಡಿರುವೆ ಎಂದರ್ಥ. ನೈತಾಂ ಸೃಂಕಾಂ ವಿತ್ತಮಯೀಮವಾಪ್ತಃ, ವಿತ್ತಮಯೀಮ್—ಧನರೂಪವಾದ, ಸೃಂಕಾಮ್—ಕೆಟ್ಟ ಮಾರ್ಗದಲ್ಲಿ ಎಳೆದೊಯ್ಯುವ, ಮೂಢರಿಂದ ಸೇವಿಸಲ್ಪಡುವ, ಏತಾಮ್— ಈ ಗತಿಯನ್ನು ನೀನು ಹೊಂದಲಿಲ್ಲ. ಯಸ್ಯಾಮ್ ಮಜ್ಜಂತಿ ಬಹವೋ ಮನುಷ್ಯಾಃ—ಯಾವುದರಲ್ಲಿ ಅನೇಕ ಜನರು ಮುಳುಗುತ್ತಾರೋ (ಅಂಥಹ ವಿಭವದಲ್ಲಿ ನಚಿಕೇತನು ಮುಳುಗಿಲ್ಲವೆಂಬುದೇ ತಾತ್ಪರ್ಯ.)

## ಭಾಷ್ಯಸಾರ

ನಚಿಕೇತನೇ ! ನೀನು ಮಾನವ. ಮಾನವನಿಗೆ ಶ್ರೇಯಸ್ಸು ಮತ್ತು ಪ್ರೇಯಸ್ಸುಗಳು ಸ್ವಾಭಾವಿಕವಾದವುಗಳು. ನಾನು ವರದರೂಪದಲ್ಲಿ ಅನೇಕ ಭೋಗ್ಯವಸ್ತುಗಳನ್ನು ಕೊಡುತ್ತೇನೆಂದು ಆಸೆ ಹುಟ್ಟಿಸಿದರೂ ನೀನು ವಿಚಲಿತನಾಗಲಿಲ್ಲ, ಸ್ವಾಭಾವಿಕವಾಗಿ ಜನರು ಬಯಸಬಹುದಾದ ಧನ–ಪುತ್ರಾದಿಗಳನ್ನೂ, ರೂಪ–ಸೌಂದರ್ಯಗಳಿಂದ ಆಕರ್ಷಿಸುವ ಅಪ್ಸರಸ್ತ್ರೀಯರನ್ನೂ ನೀನು ಬಯಸಲಿಲ್ಲ. ಇವುಗಳು ನಿಸ್ಸಾರವೂ, ಅನಿತ್ಯವೂ, ಕೊನೆಯಲ್ಲಿ ದುಃಖಕ್ಕೆ ಕಾರಣವೂ, ದುಃಖದಿಂದ ಕೂಡಿರುವುದೂ ಆಗಿದೆ ಎಂಬುದನ್ನು ಪರ್ಯಾಲೋಚಿಸಿ ತ್ಯಾಗಮಾಡಿರುವೆ. ನಾನು ಕೊಡಲು ಬಂದ ಬಹಳ ಬೆಲೆ ಬಾಳುವ ಈ ರತ್ನಹಾರವನ್ನೂ ಬಯಸಲಿಲ್ಲ. ಅಥವಾ ಅನೇಕರು ಧನಪ್ರಧಾನವಾದ ಜೀವನವನ್ನು ಬಯಸುತ್ತಾರೆ. ಆದರೆ ನೀನು 'ಮಂದಬುದ್ಧಿಯವರು ಅಪೇಕ್ಷಿಸುವ ಸಂಸಾರಬಂಧನಕ್ಕೆ ಕಾರಣವಾದ ಮಾರ್ಗವನ್ನು ತ್ಯಾಗಮಾಡುವಲ್ಲಿ ಚಾತುರ್ಯ ತೋರಿಸಿರುವೆ. ಈ ಕಾರಣದಿಂದ ನೀನು ಪ್ರಶಂಸನೀಯನಾಗಿರುವೆ' ಎಂದು ಹೇಳಿದನು.



# ಮಂತ್ರ ೪

**दूरमेते विपरीते विषूची अविद्या या च विद्येति ज्ञाता ।**
**विद्याभीप्सितं(नं) नचिकेतसं मन्ये न त्वा कामा बहवोऽलोलुपन्त ॥**

ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ
ವಿದ್ಯೇತಿ ಜ್ಞಾತಾ ।
ವಿದ್ಯಾಭೀಪ್ಸಿತಂ (ನಂ) ನಚಿಕೇತಸಂ ಮನ್ಯೇ ನ ತ್ವಾ ಕಾಮಾ
ಬಹವೋಽಲೋಲುಪಂತ ॥

### ಪ್ರತಿಪದಾರ್ಥ

ಯಾ—ಯಾವುದು, ವಿದ್ಯಾ ಇತಿ—ವಿದ್ಯೆ ಎಂದು, ಜ್ಞಾತಾ—ತಿಳಿದುಕೊಳ್ಳಲ್ಪಟ್ಟಿತೋ, ಯಾ ಚ—ಯಾವುದೊಂದು, ಅವಿದ್ಯಾ—ಅವಿದ್ಯೆ (ಎಂದು), ಜ್ಞಾತಾ—ತಿಳಿದುಕೊಳ್ಳಲ್ಪಟ್ಟಿತೋ, ಏತೇ—ಇವುಗಳು, ದೂರಂ ವಿಷೂಚೀ—ಬಹಳ ವಿರುದ್ಧಮಾರ್ಗವನ್ನು ಹೊಂದಿರತಕ್ಕವು. ವಿಪರೀತೇ—ಪರಸ್ಪರ ವಿರುದ್ಧವೂ ಅಹುದು. ನಚಿಕೇತಸಮ್—ನಚಿಕೇತನೆಂಬ, ತ್ವಾ—ನಿನ್ನನ್ನು, ವಿದ್ಯಾಭೀಪ್ಸಿತಮ್—ಬ್ರಹ್ಮವಿದ್ಯೆಯಲ್ಲಿ, ಆಸೆ ಇರುವವನೆಂದೂ, ಮನ್ಯೇ—ತಿಳಿದುಕೊಳ್ಳುತ್ತೇನೆ. (ಏಕೆಂದರೆ) ಬಹವಃ ಕಾಮಾಃ—ನಾನು ತೋರಿದ ನಾನಾ ವಿಧವಾದ ಭೋಗಗಳು (ನಿನ್ನನ್ನು), ನ ಅಲೋಲುಪಂತ—ವಿಷಯವಶನನ್ನಾಗಿ ಮಾಡಲಿಲ್ಲ.

### ತಾತ್ಪರ್ಯ

ವಿದ್ಯೆಯು ಮೋಕ್ಷಸಾಧಕ. ಅವಿದ್ಯೆಯು ಸಂಸಾರದಾಯಕ. ಆದ್ದರಿಂದ ವಿದ್ಯೆ-ಅವಿದ್ಯೆಗಳು ಭಿನ್ನಗತಿಯುಳ್ಳವು. ಪರಸ್ಪರ ವಿರುದ್ಧವಾದವುಗಳೂ ಅಹುದು. ನಾನು ತೋರಿದ ಯಾವ ಭೋಗಗಳಿಗೂ ನೀನು ವಶನಾಗಲಿಲ್ಲ. ಆದುದರಿಂದ ಬ್ರಹ್ಮವಿದ್ಯೆಯಲ್ಲಿಯೇ ಆಸೆಯುಳ್ಳವನೆಂದು ನಿನ್ನನ್ನು ಅರಿಯುತ್ತೇನೆ ಎಂದು ಯಮನು ನುಡಿದನು.

### ರಂಗರಾಮಾನುಜಭಾಷ್ಯ

**ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ।** ಯಾ ಅವಿದ್ಯಾ ಇತಿ ಜ್ಞಾತಾ ಕಾಮಕರ್ಮಾತ್ಮಿಕಾ, ಯಾ ಚ ವಿದ್ಯೇತಿ ಜ್ಞಾತಾ ವೈರಾಗ್ಯತತ್ತ್ವಜ್ಞಾನಮಯೀ, ಏತೇ ದೂರಮ್—ಅತ್ಯಂತಂ, ವಿಷೂಚೀ ವಿಷೂಚ್ಯೌ—ಭಿನ್ನಗತೀ ; ಪರಸ್ಪರವಿರುದ್ಧೇ ಚ । ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ । ವಿದ್ಯಾಭೀಪ್ಸಿನಂ ವಿದ್ಯಾರ್ಥಿನಮ್ । ವಿದ್ಯಾಭೀಪ್ಸಿತಮ್ ಇತಿ ಪಾಠೇ ಆಹಿತಾಗ್ನ್ಯಾದಿತ್ವಾತ್ ನಿಷ್ಠಾಂತಸ್ಯ ಪರನಿಪಾತಃ ; ಛಾಂದಸತ್ವಾದ್ವಾ । **ನ ತ್ವಾ ಕಾಮಾ ಬಹವೋಽಲೋಲುಪಂತ ।** ಕಾಮಾ ಬಹವೋಽಪಿ ತ್ವಾಂ ನಾಲೋಲುಪಂತ–ಶ್ರೇಯೋಮಾರ್ಗಾದ್ವಿಚ್ಛೇದಂ ನ ಕೃತವಂತಃ । ವಿಷಯವಶಗೋ ನ ಭವಸೀತ್ಯರ್ಥಃ । 'ಲುಪಸದ–' (ಪಾ. ಸೂ. 3–1–24) ಇತಿ ಯಜಂತಾಲ್ಲಜ್ । ಛಾಂದಸೋ ಯಲೋಪಃ । ಯಙ್ಲುಗಂತಾದ್ವಾ ಛಾಂದಸಮಾತ್ಮನೇಪದಮ್, ಅದಭಾವಶ್ಚ ॥

## ಅನುವಾದ

ದೂರಮೇತೇ.......ವಿದ್ಯೇತಿ ಜ್ಞಾತಾ—ಅವಿದ್ಯೆಯೆಂದು ತಿಳಿದ ಕಾಮ್ಯಕರ್ಮಗಳೂ, ವಿದ್ಯೆಯೆಂದು ತಿಳಿದ ವೈರಾಗ್ಯತತ್ತ್ವರೂಪವಾದ ಜ್ಞಾನವೂ, ಈ ಎರಡೂ ದೂರಮ್— ಅತ್ಯಂತ, ವಿಷೂಚೀ—ಭಿನ್ನಗತಿಯುಳ್ಳದ್ದು ಮತ್ತು ಪರಸ್ಪರ ವಿರುದ್ಧವಾದವುಗಳು. ವಿದ್ಯಾಭೀಪ್ಸಿನಂ ನಚಿಕೇತಸಮ್ ಮನ್ಯೇ–ವಿದ್ಯಾಭೀಪ್ಸಿನಮ್—ವಿದ್ಯಾರ್ಥಿ-ಯೆಂದು (ತಿಳಿಯುತ್ತೇನೆ). ವಿದ್ಯಾಭೀಪ್ಸಿತಮ್ ಎಂಬ ಪಾಠದಲ್ಲಿ ಆಹಿತಾಗ್ನ್ಯಾದಿಗಣಪಠಿತವಾದುದರಿಂದ ನಿಷ್ಠಾಂತವಾದ ಪದವು ಸಮಾಸದ ಕೊನೆಯಲ್ಲಿ ಬಂದಿದೆ. ಅಥವಾ ವೇದೋಕ್ತವಾದುದರಿಂದ ಸಾಧು. ನ ತ್ವಾ ಕಾಮಾ ಬಹವೋಽಲೋಲುಪಂತ—ಅನೇಕ ಆಸೆಗಳೂ ನಿನ್ನನ್ನು ನಾಽಲೋಲುಪಂತ—ಶ್ರೇಯಸ್ಸಿನ ಮಾರ್ಗದಿಂದ ಬೇರ್ಪಡಿಸಲಿಲ್ಲ. ನೀನು ವಿಷಯವಶನಾಗಲಿಲ್ಲ ಎಂದರ್ಥ. ('ಅಲೋಲುಪಂತ' ಎಂಬುದು) 'ಲುಪಸದಃ' ಎಂಬುದರಿಂದ ಯಙಂತವಾದ ಲಙ್ ರೂಪ. ಯಕಾರಕ್ಕೆ ಲೋಪಛಾಂದಸ. ಅಥವಾ ಯಙ್‌ಲುಗಂತವಾದುದರಿಂದ ಆತ್ಮನೇಪದಿಯೂ. ಅದಾದೇಶವಿಲ್ಲದಿರುವುದೂ (ದ ಅಭಾವವೂ)[1] ಛಾಂದಸ.

## ಭಾಷ್ಯಸಾರ

ಪ್ರೇಯಸ್ಸು ಹಾನಿಗೂ, ಶ್ರೇಯಸ್ಸು ಒಳ್ಳೆಯದಕ್ಕೂ ಸಾಧನವೆಂದು ಹೇಳಲು ಕಾರಣವೇನು ಎಂಬುದನ್ನು 'ದೂರಮೇತೇ' ಎಂಬ ಮಂತ್ರದಿಂದ ವಿವರಿಸುತ್ತಾನೆ.

ಕರ್ಮಕಾಂಡದಲ್ಲಿ ಪ್ರಸಿದ್ಧವಾದ ಕಾಮ್ಯಕರ್ಮವನ್ನು ಪಂಡಿತರು ಅವಿದ್ಯೆಯೆಂದು ತಿಳಿದಿರುವರು. ವೇದಾಂತದಲ್ಲಿ ಆತ್ಮಸ್ವರೂಪಸಾಧನವಾದುದನ್ನು ವಿದ್ಯೆಯೆಂದು ತಿಳಿದಿರುವರು. ಅಂದರೆ ಪುತ್ರಾದಿ ಭೋಗರೂಪವಾದ ಪ್ರೇಯಸ್ಸನ್ನು ಅವಿದ್ಯೆಯೆಂದೂ, ಆತ್ಮಜ್ಞಾನಸಾಧನವಾದ ಶ್ರೇಯಸ್ಸನ್ನು ವಿದ್ಯೆಯೆಂದೂ ತಿಳಿದಿರುವರು. ಈ ವಿದ್ಯೆ ಮತ್ತು ಅವಿದ್ಯೆಗಳು ಕತ್ತಲು–ಬೆಳಕಿನಂತೆ ಪರಸ್ಪರ ವಿರುದ್ಧವಾದವುಗಳು. ಅವುಗಳ ಮಾರ್ಗಗಳೂ ಭಿನ್ನ. ಅವುಗಳ ಫಲಗಳೂ ಭಿನ್ನವಾಗಿವೆ. ವಿದ್ಯೆಗೆ ಮೋಕ್ಷವೂ, ಅವಿದ್ಯೆಗೆ ಸಂಸಾರವೂ ಫಲವೆಂದು ತಾತ್ಪರ್ಯ. ಇದನ್ನೇ ಹಿಂದೆ 'ಶ್ರೇಯ ಆದದಾನಸ್ಯ ಸಾಧು ಭವತಿ ಹೀಯತೇಽರ್ಥಾತ್ ಯ ಉ ಪ್ರೇಯೋ ವೃಣೀತೇ' (ಕ.ಉ. 1–2–1) ಎಂಬಲ್ಲಿ ಹೇಳಿದೆ. ಈ ವಿದ್ಯಾ ಅವಿದ್ಯೆಗಳ ಮಧ್ಯೆ ನಚಿಕೇತನನ್ನು ವಿದ್ಯಾಭಿಲಾಷಿಯೆಂದು ತಿಳಿಯುತ್ತೇನೆ. ಆದುದರಿಂದಲೇ ನಾನು ಕೊಡಲು ಬಂದ ಅಪ್ಸರಸ್ತ್ರೀ ಮೊದಲಾದ ಭೋಗ್ಯವಸ್ತುಗಳು ನಿನ್ನನ್ನು ಶ್ರೇಯೋಮಾರ್ಗದಿಂದ ತಿರುಗಿಸಲು ಅಸಮರ್ಥವಾದವು. ಹೀಗೆ ಯಮನು 'ನಚಿಕೇತನು ಮೋಕ್ಷಸ್ವರೂಪದ ಉಪದೇಶಕ್ಕೆ ಅರ್ಹನು' ಎಂದು ತಿಳಿದನು.



1. ಅದಭಾವಶ್ಚ—ಅಂತಾದೇಶಕ್ಕೆ ಅಪವಾದವಾಗಿ ಅದಾದೇಶ ಬಂದು 'ಅಲೋಲುಪತ' ಎಂದು ಬಹುವಚನದಲ್ಲಿ ರೂಪಬರಬೇಕು, ಛಾಂದಸವಾಗಿ ಅಂತಾದೇಶ ಬಂದು ಅಲೋಲುಪಂತ ರೂಪ ಬಂದಿದೆ.

## ಮಂತ್ರ ೫

**अविद्यायामन्तरे वर्तमानाः स्वयं धीराः पण्डितंमन्यमानाः ।**
**दन्द्रम्यमाणाः परियन्ति मूढा अन्धेनैव नीयमाना यथाऽन्धाः ॥**

ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ
ಪಂಡಿತಂಮನ್ಯಮಾನಾಃ ।
ದಂದ್ರಮ್ಯಮಾಣಾಃ ಪರಿಯಂತಿ ಮೂಢಾ ಅಂಧೇನೈವ
ನೀಯಮಾನಾ ಯಥಾಽಂಧಾಃ ॥

### ಪ್ರತಿಪದಾರ್ಥ

**ಅವಿದ್ಯಾಯಾಮಂತರೇ**—ಅವಿದ್ಯೆ ಎಂದರೆ ಕಾಮ್ಯಕರ್ಮದ ಮಧ್ಯದಲ್ಲಿ, **ವರ್ತಮಾನಾಃ**—ಇರುವ, **ಸ್ವಯಮ್**—ತಮ್ಮನ್ನು, **ಧೀರಾಃ**—ಬುದ್ಧಿವಂತರೆಂದೂ, **ಪಂಡಿತಂಮನ್ಯಮಾನಾಃ**—ಶಾಸ್ತ್ರಕುಶಲರು ಎಂದು ತಿಳಿದವರೂ, **ದಂದ್ರಮ್ಯಮಾಣಾಃ**—ಜರಾ, ಮರಣಾದಿ ದುಃಖದಿಂದ ಪೀಡಿತರೂ(ಆದ), **ಮೂಢಾಃ**—ಅವಿವೇಕಿಗಳು, **ಅಂಧೇನ**—ಕುರುಡನಿಂದ, **ನೀಯಮಾನಾಃ**—ಕರೆದುಕೊಂಡು ಹೋಗಲ್ಪಡುವ, **ಅಂಧಾ ಯಥಾ**—ಕುರುಡರುಗಳಂತೆ, **ಪರಿಯನ್ತ್ಯೇವ**—ಬಿದ್ದೇಬೀಳುತ್ತಾರೆ.

### ತಾತ್ಪರ್ಯ

ಕಾಮ್ಯಕರ್ಮಗಳಲ್ಲಿ ಮುಳುಗಿದವರು ತಾವು ಬುದ್ಧಿವಂತರೆಂದೂ, ಶಾಸ್ತ್ರಜ್ಞರೆಂದೂ ಭಾವಿಸಿದ ಅವಿವೇಕಿಗಳು. ಜರಾ–ಮರಣ ಮುಂತಾದ ದುಃಖದಿಂದ ಪೀಡಿತರಾದ ಇವರು ಕುರುಡರುಗಳಂತೆ ಹಳ್ಳ–ದಿಣ್ಣೆಗಳನ್ನು ಕಾಣದೆ ಬೀಳುತ್ತಾರೆ.

### ರಂಗರಾಮಾನುಜಭಾಷ್ಯಮ್

'ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ' ಇತ್ಯುಪಾತ್ತಮಾರ್ಗದ್ವಯೇ ಅವಿದ್ಯಾಮಾರ್ಗಂ ನಿಂದತಿ—**ಅವಿದ್ಯಾಯಾಮಂತರೇ ವರ್ತಮಾನಾಃ** । ಕಾಮ್ಯ(ಮ)ಕರ್ಮಾದಿಲಕ್ಷಣಾಯಾಂ ಮಧ್ಯೇ, ಘನೀಭೂತ ಇವ ತಮಸಿ ವರ್ತಮಾನಾಃ । **ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ** । ಸ್ವಯಮೇವ ಪ್ರಜ್ಞಾಶಾಲಿನಃ ಶಾಸ್ತ್ರಕುಶಲಾಶ್ಚೇತಿ ಮನ್ಯಮಾನಾಃ । **ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ ಅಂಧೇನೈವ ನೀಯಮಾನಾ ಯಥಾಽಂಧಾಃ** । ದಂದ್ರಮ್ಯಮಾಣಾಃ–ಜರಾ ರೋಗಾದಿದುಃಖಪೀಡಿತಾಃ ಅವಿವೇಕಿನಃ ಪರಿಭ್ರಮಂತಿ ಅನ್ಯತ್ ಸ್ಪಷ್ಟಾರ್ಥಮ್ । ಕೇಚಿತ್ತು ದಂದ್ರವ್ಯಮಾಣಾಃ ಇತಿ ಪಾಠಮಾಶ್ರಿತ್ಯ ವಿಷಯಕಾಮಾಗ್ನಿನಾ ದ್ರುತಚಿತ್ತಾಃ ಇತ್ಯರ್ಥಂ ವರ್ಣಯಂತಿ ॥

### ಅನುವಾದ

ಅವಿದ್ಯೆ ಮತ್ತು ವಿದ್ಯೆಯೆಂದು ಹೇಳಿದ ಎರಡುಮಾರ್ಗಗಳಲ್ಲಿ ಅವಿದ್ಯಾಮಾರ್ಗವನ್ನು ನಿಂದಿಸುತ್ತಾನೆ. **ಅವಿದಾಯಾಮಂತರೇ ವರ್ತಮಾನಾಃ**–ಕಾಮ್ಯಕರ್ಮರೂಪವಾದ ದಟ್ಟವಾದ

ಕತ್ತಲಿನಂತಿರುವ ಅವಿದ್ಯೆಯ ಮಧ್ಯದಲ್ಲಿರುವ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ– ತಾವೇ ಬುದ್ಧಿವಂತರೆಂದೂ, ಶಾಸ್ತ್ರಗಳಲ್ಲಿ ಕುಶಲರೆಂದೂ ತಿಳಿದಿರುವರು. ದಂದ್ರಮ್ಯಮಾಣಾಃ **ಪರಿಯಂತಿ ಮೂಢಾಃ ಅಂಧೇನೈವ ನೀಯಮಾನಾಃ ಯಥಾಂಧಾಃ ।** ದಂದ್ರಮ್ಯಮಾಣಾಃ– ಮುಪ್ಪುರೋಗ ಮುಂತಾದ ದುಃಖಗಳಿಂದ ಪೀಡಿತರಾದ ಅವಿವೇಕಿಗಳು (ಸಂಸಾರದಲ್ಲಿ) ಅಲೆದಾಡುತ್ತಾರೆ. (ಇವರು ಕುರುಡ ಕರೆದೊಯ್ಯುವ ಕುರುಡರಂತೆ ಕೆಳಗೆಬೀಳುತ್ತಾರೆ.) ಕೆಲವರು ದಂದ್ರಮ್ಯಮಾಣಾಃ ಎಂಬ ಪಾಠವನ್ನು ಸ್ವೀಕರಿಸಿ ವಿಷಯಸಂಬಂಧದಿಂದ ಉಂಟಾದ ಕಾಮಾಗ್ನಿಯಿಂದ ಕಾತುರಗೊಂಡಮನಸ್ಸುಳ್ಳವರು ಎಂದು ಅರ್ಥಮಾಡುತ್ತಾರೆ.

## ಭಾಷ್ಯಸಾರ

ಶ್ರೇಯಸ್ಸನ್ನು ವಿದ್ಯೆಯೆಂದೂ, ಪ್ರೇಯಸ್ಸನ್ನು ಅವಿದ್ಯೆಯೆಂದೂ ತಿಳಿಸಲಾಯಿತು. ಕಾಮ್ಯಕರ್ಮರೂಪವಾದ ಅವಿದ್ಯೆಯು ನಿಂದನೀಯ. ಈ ನಿಂದನೀಯ ಅವಿದ್ಯೆಯಲ್ಲಿ ನಿರತ ರಾದವರಿಗೆ ಅಧೋಗತಿ ಉಂಟಾಗುತ್ತದೆ ಎಂಬುದನ್ನು 'ಅವಿದ್ಯಾಯಾಮಂತರೇ' ಎಂಬುದ ರಿಂದ ವಿವರಿಸುತ್ತಾನೆ.

ಪುತ್ರ, ಪಶು, ಪತ್ನಿ, ಅನ್ನ ಮುಂತಾದ ವಿಷಯಸುಖರೂಪವಾದ ಅವಿದ್ಯೆಯಲ್ಲಿ ಮಗ್ನರಾಗಿರುವವರು ತಾವೇ ಬುದ್ಧಿವಂತರೆಂದೂ, ಶಾಸ್ತ್ರಜ್ಞಾನದಲ್ಲಿ ಕುಶಲರೆಂದೂ ಅಭಿಮಾನ ವುಳ್ಳವರಾಗುತ್ತಾರೆ. ವಸ್ತುತಃ ಇವರು ಬುದ್ಧಿವಂತರೂ ಅಲ್ಲ. ಶಾಸ್ತ್ರಜ್ಞಾನಕುಶಲರೂ ಅಲ್ಲ, ನೀಚವಾದ ಮಾರ್ಗದಲ್ಲಿ ಹೋಗುವ ಅವಿವೇಕಿಗಳು. ಕುರುಡನ ಸಹಾಯದಿಂದ ಹೋಗುವ ಮತ್ತೊಬ್ಬ ಕುರುಡನು ಕಲ್ಲು–ಮುಳ್ಳುಗಳಿಂದ ಘಾಸಿಗೊಂಡು ದುಃಖಕ್ಕೆ ಒಳ ಗಾಗುವಂತೆ ಇವರು ವಕ್ರಮಾರ್ಗದಲ್ಲಿ ಹೋಗಿ ಸ್ವರ್ಗ, ನರಕ, ಪಶು, ಸ್ಥಾವರಯೋನಿಗಳಲ್ಲಿ ಸಂಚರಿಸುತ್ತಾ ನಾನಾ ವಿಧವಾದ ದುಃಖಕ್ಕೆ ಒಳಗಾಗುವರು.

'ದಂದ್ರಮ್ಯಮಾಣಾಃ' ಎಂಬಲ್ಲಿ 'ದಂದ್ರಮ್ಯಮಾಣಾಃ' ಎಂಬ ಪಾಠವಿದ್ದಲ್ಲಿ ಕಾಮಾಗ್ನಿ ಯಿಂದ ದಹಿಸಲ್ಪಟ್ಟ ಮನಸ್ಸುಳ್ಳವರಾಗುತ್ತಾರೆ ಎಂದು ರಾಮಾನಂದರು ಹೇಳುತ್ತಾರೆ.

'ದಂದ್ರಮ್ಯಮಾಣಾಃ' ಎಂಬುದಕ್ಕೆ ಬದಲಾಗಿ 'ಜಂಘನ್ಯಮಾನಾಃ ಎಂಬ ಪಾಠವಿದೆ. ಆಗ ಜರಾಮರಣರೂಪವಾದ ಕಷ್ಟಗಳಿಂದ ಪೀಡಿಸಲ್ಪಡುತ್ತಾರೆ ಎಂದು ಅರ್ಥ ಎಂಬುದಾಗಿ ಸುಬೋಧಿನೀಕಾರರು ಹೇಳುತ್ತಾರೆ.

# ಮಂತ್ರ ೬

न साम्परायः प्रतिभाति बालं प्रमाद्यन्तं वित्तमोहेन मूढम् ।
अयं लोको नास्ति पर इति मानी पुनः पुनर्वशमापद्यते मे ॥

ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತ
ಮೋಹೇನ ಮೂಢಮ್ ।
ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶ
ಮಾಪದ್ಯತೇ ಮೇ ॥

### ಪ್ರತಿಪದಾರ್ಥ

ಬಾಲಮ್—ಅಜ್ಞಾನಿ ಆಗಿಯೂ, ಪ್ರಮಾದ್ಯಂತಮ್—ಅವಧಾನವಿಲ್ಲದವನಾಗಿಯೂ, ವಿತ್ತಮೋಹೇನ—ಹಣದ ಆಸೆಯಿಂದ, ಮೂಢಮ್—ಅವಿವೇಕಿಯಾದವನಿಗೆ, ಸಾಂಪರಾಯಃ—ಪರಲೋಕಕ್ಕೆ ಹೋಗಬೇಕೆಂಬ ವಿಷಯವು, ನ ಪ್ರತಿಭಾತಿ—ತಿಳಿಯುವುದಿಲ್ಲ. ಅಯಂ ಲೋಕಃ—ಈ ಲೋಕವು (ಇದೆ). ಪರಃ—ಇದಕ್ಕಿಂತ ಬೇರೆಯಾದ ಸ್ವರ್ಗಾದಿ ಲೋಕವು, ನಾಸ್ತಿ—ಇಲ್ಲ, ಇತಿ—ಎಂದು, ಮಾನೀ—ತಿಳಿದುಕೊಂಡ ಪುರುಷನು. ಪುನಃ ಪುನಃ—ಮತ್ತೆ ಮತ್ತೆ, ಮೇ—ನನ್ನ, ವಶಮ್ ಆಪದ್ಯತೇ—ವಶಕ್ಕೆ ಬರುತ್ತಾನೆ.

### ತಾತ್ಪರ್ಯ

ಅಜ್ಞಾನಿಯೂ, ಲಕ್ಷ್ಯವಿಲ್ಲದವನೂ, ಹಣದಾಸೆಯಿಂದ ಕೂಡಿರುವವನೂ, ಅವಿವೇಕಿಯೂ ಆದವನಿಗೆ ಪರಲೋಕದ ವಿಷಯವು ತಿಳಿಯುವುದಿಲ್ಲ. ಆದುದರಿಂದ ಭೋಗಕ್ಕೆ ಸಾಧ್ಯವಾದ ಈ ಲೋಕ ಇದೆ. ಇದಕ್ಕಿಂತ ಬೇರೆಯಾದ ಲೋಕ ಇಲ್ಲ ಎಂದು ತಿಳಿದುಕೊಂಡವನು ಪುನಃ ಪುನಃ ನನ್ನ ವಶನಾಗುತ್ತಾನೆ ಎಂದು ಯಮನು ನಚಿಕೇತನನ್ನು ಕುರಿತು ಹೇಳುತ್ತಾನೆ.

### ರಂಗರಾಮಾನುಜಭಾಷ್ಯ

ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ । ಪರಲೋಕಸಾಧನವ್ಯಾಪಾರಃ, ಅವಿವೇಕಿನಂ ಪ್ರತಿ ನ ಪ್ರಕಾಶತೇ । ಪ್ರಮಾದ್ಯಂತಮ್—ಅನವಹಿತಮನಸ್ಕಮ್ । ವಿತ್ತಮೋಹೇನ ಮೂಢಮ್—ವಿಷಯಾಶಾವಶೀಕೃತ ಮನೋರಥಮ್ । ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃಪುನರ್ವಶಮಾಪದ್ಯತೇ ಮೇ। ಅಯಮೇವ ಲೋಕೋಽಸ್ತಿ ; ಪರಲೋಕೋ ನಾಸ್ತೀತಿ ಮನ್ಯಮಾನಃ ಮತ್ಕ್ರಿಯ (ತ್ಕಾರ್ಯ) ಮಾಣಯಾತನಾವಿಷಯೋ ಭವತೀತ್ಯರ್ಥಃ । ವ್ಯಾಸಾರ್ಯೈಃ, 'ಸಂಯಮನೇ ತ್ವನುಭೂಯ' (ಬ್ರ. ಸೂ. 3–1–13) ಇತಿ ಸೂತ್ರೇ 'ಅಯಂ ಲೋಕೋ ನಾಸ್ತಿ ಪರ ಉತ (?) ಮಾನೀ' ಇತಿ ಪಾಠಾನುಸಾರೇಣ, ಅಯಂ ಚ ಲೋಕಃ ಪರಶ್ಚ ಲೋಕೋ ನಾಸ್ತೀ

ತ್ಯರ್ಥೋ ವರ್ಣಿತಃ । ತತ್ರ ಪಕ್ಷೇ, 'ತಸ್ಯೇ'ತಿಶೇಷಃ ಪೂರಣೀಯಃ । ಇತಿಶ (ಉತಶ ?) ಬ್ದಃ ಚಾರ್ಥಃ (?) (ಚಶಬ್ದಶ್ಚ ಅಧ್ಯಾಹಾರ್ಯಃ) ಶಿಷ್ಟಪರಿಗ್ರಹಾಭಾವಾತ್, 'ಅಯಂ ಲೋಕೋ ನಾಸ್ತಿ' ಇತ್ಯಸ್ಯ ಉಪಪತ್ತಿಃದ್ರಷ್ಟವ್ಯಾ । ಮಾನೀತ್ಯಸ್ಯ ದುರ್ಮಾನೀತ್ಯರ್ಥಃ । ದುರ್ಮಾನೀ ಪುನಃಪುನರ್ವಶಮಾಪದ್ಯತ ಇತಿ ಉತ್ತರತ್ರ ಸಂಬಧ್ಯತೇ ॥

## ಅನುವಾದ

**ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್**— ಪರಲೋಕಸಾಧನೆಯಲ್ಲಿ ಪ್ರಯತ್ನಿಸಬೇಕೆಂದು ಅವಿವೇಕಿಯಾದವನಿಗೆ ಭಾಸವಾಗುವುದಿಲ್ಲ. **ಪ್ರಮಾದ್ಯಂತಮ್**—ಚಂಚಲವಾದ ಮನಸ್ಸುಳ್ಳವನೂ **ವಿತ್ತಮೋಹೇನ ಮೂಢಮ್**— ವಿಷಯಸುಖದ ಲಾಲಸೆಯಿಂದ ವಶಪಡಿಸಲ್ಪಟ್ಟ ಮನಸುಳ್ಳವನನ್ನು **ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃ ಪುನರ್ವಶಮಾಪದ್ಯತೇ ಮೇ**— ಈ ಲೋಕಮಾತ್ರ ಇದೆ, ಪರಲೋಕವಿಲ್ಲ ಎಂದು ತಿಳಿಯುವವನು ನಾನು ಕೊಡುವ ಯಾತನೆಗಳನ್ನು ಅನುಭವಿಸಬೇಕಾಗುತ್ತದೆ ಎಂದರ್ಥ. ಶ್ರುತಪ್ರಕಾಶಿಕಾಚಾರ್ಯರು 'ಸಂಯಮನೇ ತ್ವನುಭೂಯ' (ಬ್ರ.ಸೂ. 3–1–13) ಎಂಬ ಸೂತ್ರದಲ್ಲಿ ಅಯಂ ಲೋಕೋ ನಾಸ್ತಿ, ಉತ ಮಾನೀ ಎಂಬುದಾಗಿ ಈ ಲೋಕವೂ ಇಲ್ಲ ಪರಲೋಕವೂ ಇಲ್ಲ ಎಂದು ಅರ್ಥವನ್ನು ತಿಳಿಸಿರುವರು. ಹೀಗೆ ಅರ್ಥಮಾಡುವಲ್ಲಿ 'ತಸ್ಯ' ಎಂಬುದನ್ನು ಸೇರಿಸಿಕೊಳ್ಳಬೇಕು. 'ಇತಿ' ಎಂಬ ಶಬ್ದಕ್ಕೆ 'ಚ' ಎಂದು ಅರ್ಥ. (ಚ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.) ಶಿಷ್ಯರು ಅಂಗೀಕರಿಸದೇ ಇರುವುದರಿಂದ 'ಅಯಂ ಲೋಕೋ ನಾಸ್ತಿ' ಎಂಬುದರ ಉಪಪತ್ತಿಯನ್ನು ನೋಡಬೇಕು. **ಮಾನೀ** ಎಂಬುದಕ್ಕೆ ದುರಭಿಮಾನವುಳ್ಳವನೆಂದು ಅರ್ಥ, ದುರ್ಮಾನಿಯು ಪುನಃ ಪುನಃ ಮೃತ್ಯುವಿನ ವಶವಾಗುತ್ತಾನೆ ಎಂದು ಮುಂದೆ ಹೇಳಿರುವುದರೊಡನೆ ಸಂಬಂಧಿಸುತ್ತದೆ.

## ಭಾಷ್ಯಸಾರ

ಪುತ್ರ, ಪಶು, ಅನ್ನ ಮುಂತಾದುವುಗಳಲ್ಲಿ ಅತ್ಯಾಸಕ್ತಿಯುಳ್ಳವನೂ, ಶಾಸ್ತ್ರಮಾರ್ಗದಲ್ಲಿ ಉದಾಸೀನನೂ, ಹಣದಮೋಹದಿಂದ ತಾಮಸಸ್ವಭಾವದವನೂ ಆದವನು ಅವಿವೇಕಿ. ಈ ಅವಿವೇಕಿಗೆ ಪರಲೋಕಸಾಧನವಾದ ಶಾಸ್ತ್ರಗಳಲ್ಲಿ ಹೇಳಿರುವ ಮಾರ್ಗವು ತಿಳಿಯುವುದಿಲ್ಲ. ಅಂದರೆ ರಜೋಗುಣ–ತಮೋಗುಣದಿಂದ ಕೂಡಿದವರಿಗೆ ಪರಲೋಕದಲ್ಲಿ ದೃಷ್ಟಿಯಿರುವುದಿಲ್ಲ ಎಂದು ಅಭಿಪ್ರಾಯ. ಪರಲೋಕವೊಂದುಂಟು. ಅದಕ್ಕೆ ಸಾಧನವಾದ ಮಾರ್ಗವು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ ಎಂಬುದನ್ನು ಈ ಮೂಢರು ಅರಿಯಲಾರರು ಎಂದು ತಾತ್ಪರ್ಯ.

ಇಂತಹ ಮೂಢರು ಈ ಲೋಕ ಮಾತ್ರವಿದೆ, ಪರಲೋಕವಿಲ್ಲ ಎಂದು ತಿಳಿಯುತ್ತಾರೆ. ಇವರಿಗೆ ಕಣ್ಣಿಗೆ ಕಾಣುವುದು ಮಾತ್ರ ಪ್ರಮಾಣ. ಈ ಲೋಕವು ಕಣ್ಣಿಗೆ ಕಾಣುವುದರಿಂದ ಈ ಲೋಕವುಂಟು. ಪರಲೋಕವು ಕಣ್ಣಿಗೆ ಕಾಣಿಸುವುದಿಲ್ಲ. ಅದನ್ನು ನೋಡಿರುವವರೂ ಇಲ್ಲ, ಆದುದರಿಂದ ಅದು ಇಲ್ಲ ಎಂದು ಹೇಳುತ್ತಾರೆ. ಇಂತಹ ದುರಭಿಮಾನವುಳ್ಳವರು ಪುನಃ ಪುನಃ ಜನನ ಮರಣಗಳ ಪರಂಪರೆಗೆ ತುತ್ತಾಗಿ ನನ್ನ ವಶವಾಗುತ್ತಾರೆ, ಅಂದರೆ ಯಮಯಾತನೆಗೆ ಗುರಿಯಾಗುತ್ತಾರೆ.

ಕೆಲವೆಡೆಗಳಲ್ಲಿ 'ಇತಿ ಮಾನೀ' ಎಂಬುದಕ್ಕೆ ಬದಲಾಗಿ 'ಉತ ಮಾನೀ' ಎಂಬ ಪಾಠ

ವಿದೆ. 'ಉತ'ಶಬ್ದಕ್ಕೆ 'ಕೂಡ' ಎಂಬ ಅರ್ಥವಿರುವುದರಿಂದ ಈ ಲೋಕವೂ ಇಲ್ಲ, ಪರ ಲೋಕವೂ ಇಲ್ಲ ಎಂದು ಅರ್ಥಮಾಡಬೇಕು. ಆಗ ವಿವೇಕವಿಲ್ಲದವನು ಜ್ಞಾನಿಗಳು ಒಪ್ಪದಿರುವುದರಿಂದ ಈ ಲೋಕವನ್ನೂ ಒಪ್ಪುವುದಿಲ್ಲ ಮತ್ತು ಶಬ್ದಾದಿವಿಷಯ ವಾಸನಾ ವಿಶಿಷ್ಟನಾದುದರಿಂದ ಪರಲೋಕವನ್ನೂ ಒಪ್ಪುವುದಿಲ್ಲ. ಆದುದರಿಂದ ಈ ದೋಷದಿಂದ ಕೂಡಿದ ಮಾನವನು ಪುನಃ ಪುನಃ ನನ್ನ ಯಾತನೆಗೆ ಒಳಗಾಗುತ್ತಾನೆ ಎಂದು ತಾತ್ಪರ್ಯ ಎಂದು ರಾಮಾನಂದರು ಹೇಳಿರುತ್ತಾರೆ.



## ಮಂತ್ರ ೭

**श्रवणायापि बहुभिर्यो न लभ्यः शृण्वन्तोऽपि बहवो यं न विद्युः ।**
**आश्चर्यो वक्ता कुशलोऽस्य लब्धा आश्चर्यो ज्ञाता कुशलानुशिष्टः ॥**

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥

### ಪ್ರತಿಪದಾರ್ಥ

**ಯಃ**—ಪ್ರಸಿದ್ಧನಾದ ಪರಮಾತ್ಮನು, ಬಹುಭಿಃ—ಅನೇಕಜನರಿಂದ, ಶ್ರವಣಾಯಾಪಿ—ಕೇಳುವುದಕ್ಕೂ, ನ ಲಭ್ಯಃ—ಸಿಗುವವನಲ್ಲವೋ, ಬಹವಃ—ಅನೇಕರು, ಯಮ್—ಯಾವನನ್ನು, ಶೃಣ್ವಂತೋಽಪಿ—ಕೇಳುತ್ತಿದ್ದರೂಕೂಡ, ವಿದ್ಯುಃ—ತಿಳಿದುಕೊಳ್ಳಲಾರರೋ, ಅಸ್ಯ—ಈ ಪರಮಾತ್ಮನ ಅಂತಹ ವಿಷಯದಲ್ಲಿ ಕುಶಲಃ—ನಿಪುಣನಾದ, ವಕ್ತಾ—ಉಪದೇಶಿಸುವವನು, ಕುಶಲಾನುಶಿಷ್ಟಃ—ನಿಪುಣನಾದ ಆಚಾರ್ಯನಿಂದ ಉಪದೇಶಿಸಲ್ಪಟ್ಟ, ಜ್ಞಾತಾ—ತಿಳಿದುಕೊಳ್ಳುವವನೂ, ಲಬ್ಧಾ—ಹೊಂದಿದವನೂ, ಆಶ್ಚರ್ಯಃ—ದುರ್ಲಭನು.

### ತಾತ್ಪರ್ಯ

ಅಂತರ್ಯಾಮಿ ಬ್ರಾಹ್ಮಣದಲ್ಲಿ ಪ್ರಸಿದ್ಧನಾದ ಪರಮಾತ್ಮನು ಅನೇಕರಿಂದ ಕೇಳುವುದಕ್ಕೂ ಹಾಗೆ ಕೇಳಿದವರಲ್ಲಿ ಅನೇಕರಿಗೆ ತಿಳಿದುಕೊಳ್ಳುವುದಕ್ಕೂ ಸಿಗುವವನಲ್ಲ ಮತ್ತು ಪರಮಾತ್ಮನ ವಿಷಯದಲ್ಲಿ ಉಪದೇಶಿಸುವವನೂ ದುರ್ಲಭ. ಹಾಗೆ ಸಮರ್ಥನಾದ ಆಚಾರ್ಯನು ಉಪದೇಶಿಸಿದರೂ, ಪರಮಾತ್ಮನನ್ನು ತಿಳಿದುಕೊಂಡು ಹೊಂದುವವನು ಮತ್ತೂ ದುರ್ಲಭನು.

### ರಂಗರಾಮಾನುಜಭಾಷ್ಯಮ್

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ । ಯಃ ಪ್ರಸಿದ್ಧಃ ಪರಮಾತ್ಮಾ ಸಃ (?) ಅನೇಕೈಃ ಪುರುಷೈಃ, ಶ್ರೋತುಮಪಿ ನ ಲಭ್ಯಃ ಇತ್ಯರ್ಥಃ । ಶ್ರವಣಲಾಭೋಽಪಿ ಮಹಾಸುಕೃತಫಲಮಿತಿ ಭಾವಃ । ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ । ನ ಹಿ ಶ್ರೋತೄಣಾಂ ಸರ್ವೇಷಾಂ ಪರಮಾತ್ಮಪ್ರತಿಪತ್ತಿಃ ಸುಲಭೇತಿ ಭಾವಃ ।

**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ** । ಅಸ್ಯ ಕುಶಲೋ ವಕ್ತಾ ಕುಶಲಃ ಪ್ರಾಪ್ತಾ ಚ, ದುರ್ಲಭಃ ಇತ್ಯರ್ಥಃ । **ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ** । ಕುಶಲೇನ ಆಚಾರ್ಯೇಣಾನುಶಿಷ್ಟೋ ಜ್ಞಾತಾಪ್ಯಾಶ್ಚರ್ಯಃ ।

'ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ (ಭ. ಗೀ. 7-3)

ಇತ್ಯುಕ್ತೇರಿತಿ ಭಾವಃ ॥

## ಅನುವಾದ

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ—ಪ್ರಸಿದ್ಧನಾದ ಯಾವ ಪರಮಾತ್ಮನಿದ್ದಾನೋ ಅವನು ಅನೇಕ ಜನರಿಗೆ ಕೇಳಲೂ ಸಿಗಲಾರನು ಅಂದರೆ ಅವನ ಬಗ್ಗೆ ಕೇಳುವುದೂ ಮಹಾ ಪುಣ್ಯದ ಫಲವೆಂದು ತಾತ್ಪರ್ಯ. ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ—ಕೇಳಿದವ ರೆಲ್ಲರಿಗೂ ಪರಮಾತ್ಮಜ್ಞಾನವು ಸುಲಭವಲ್ಲ ಎಂದು ಅಭಿಪ್ರಾಯ.

ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ—ಈ ಪರಮಾತ್ಮನ ಬಗ್ಗೆ ಕೌಶಲದಿಂದ ಹೇಳು ವವನೂ, ಕೌಶಲದಿಂದ ತಿಳಿಯುವವನೂ ದುರ್ಲಭ ಎಂದರ್ಥ. ಆಶ್ಚರ್ಯೋ ಜ್ಞಾತಾ ಕುಶ ಲಾನುಶಿಷ್ಟಃ । ಕುಶಲನಾದ ಆಚಾರ್ಯನಿಂದ ಉಪದೇಶ ಪಡೆದು ತಿಳಿಯುವವನೂ ಆಶ್ಚರ್ಯ ವಾದ ವ್ಯಕ್ತಿ. ಇದನ್ನೇ ಸಾವಿರಾರು ಜನರಲ್ಲಿ ಸಿದ್ಧಿಗಾಗಿ ಯಾವನೋ ಒಬ್ಬನು ಯತ್ನಿಸು ತ್ತಾನೆ. ಯತ್ನಿಸಿ ಸಿದ್ಧಿಪಡೆದವರಲ್ಲೂ ಯಾವನೋ ಒಬ್ಬನು (ತಾತ್ವಿಕವಾಗಿ) ಯಥಾರ್ಥ ವಾಗಿ ತಿಳಿಯುತ್ತಾನೆ ಎಂದು ಶ್ರೀಕೃಷ್ಣನು ಗೀತೆಯಲ್ಲಿ 'ಮನುಷ್ಯಾಣಾಂ ಸಹಸ್ರೇಷು' ಎಂಬಲ್ಲಿ ಹೇಳಿರುತ್ತಾನೆ ಎಂದು ತಾತ್ಪರ್ಯ.

## ಭಾಷ್ಯಸಾರ

ಅನೇಕ ಜನ್ಮಗಳಲ್ಲಿ ಗಳಿಸಿದ ಪುಣ್ಯರಾಶಿಯುಳ್ಳವರು ಮಾತ್ರ ಶ್ರೇಯಸ್ಸನ್ನು ಬಯ ಸಲು ಸಾಧ್ಯ. ನಿನ್ನಂತೆ ಶ್ರೇಯಸ್ಸನ್ನು ಬಯಸುವವರು ಬಹಳ ವಿರಳ ಎಂದು ನಚಿಕೇತನನ್ನು 'ಶ್ರವಣಾಯಾಪಿ' ಎಂಬ ಮಂತ್ರದಿಂದ ಯಮನು ಹೊಗಳುತ್ತಾನೆ.

ಪರಮಾತ್ಮಸ್ವರೂಪವನ್ನು ಶಾಸ್ತ್ರತಾತ್ಪರ್ಯವಾದ ಜ್ಞಾನದಿಂದ ನಿಶ್ಚಯಿಸಬೇಕು. ಗುರುಗಳ ಉಪದೇಶವನ್ನು ಕೇಳಿದರೂ ಅನೇಕರು ಆತ್ಮವಿಷಯವನ್ನು ತಿಳಿಯಲಾರರು. ಅಂದರೆ ಅನೇಕರು ಶ್ರುತಿಯಲ್ಲಿ ಹೇಳಿರುವ ಪರಮಾತ್ಮ ತತ್ವವನ್ನು ನಿಶ್ಚಯಿಸಲು ಯತ್ನಿಸುವು ದಿಲ್ಲ. ಪೂರ್ವಜನ್ಮದ ಪುಣ್ಯವಿಶೇಷದಿಂದ ಕೆಲವರು ಮಾತ್ರ ಯತ್ನಿಸುವರು ಎಂದು ತಾತ್ಪರ್ಯ. ಕೇಳುವಲ್ಲಿ ಆಸಕ್ತರಾದವರೆಲ್ಲರೂ ಪರಮಾತ್ಮತತ್ವವನ್ನು ಅರಿಯಲಾರರು. ಅವರಲ್ಲಿ ಕೆಲವರು ಮಾತ್ರ ತಿಳಿಯಲು ಯತ್ನಿಸುತ್ತಾರೆ, ಅಂದರೆ ಪರಮಾತ್ಮವಿಷಯವನ್ನು ಕೇಳುವವರೂ ವಿರಳ, ಕೇಳಿದವರಲ್ಲಿಯೂ ಪರಮಾತ್ಮಸ್ವರೂಪವನ್ನು ಯಥಾವತ್ತಾಗಿ ತಿಳಿಯುವವರೂ ವಿರಳ ಎಂದು ತಾತ್ಪರ್ಯ.

ಪರಮಾತ್ಮನ ಸ್ವರೂಪವನ್ನು ಕುರಿತು ಸ್ಪಷ್ಟವಾಗಿ ತಿಳಿಯುವಂತೆ ಉಪದೇಶಿಸುವಲ್ಲಿ ಕುಶಲನಾದ ಆಚಾರ್ಯನು ಮರುಭೂಮಿಯಲ್ಲಿನ ಸರೋವರದಂತೆ ಸರಿ. ಆಚಾರ್ಯನು ಪರ- ಮಾತ್ಮವಿಷಯವನ್ನು ಉಪದೇಶಿಸಿದಂತೆ ಅರಿಯುವವನೂ ಅದ್ಭುತವ್ಯಕ್ತಿಯೇ ಸರಿ. ಅಂದರೆ

ಶಿಷ್ಯರಿಗೆ ತಿಳಿಯುವಂತೆ, ನಂಬಿಕೆ ಮೂಡುವಂತೆ ಉಪದೇಶಿಸುವ ಆಚಾರ್ಯನೂ ವಿರಳ, ಆಚಾರ್ಯನು ಉಪದೇಶಿಸಿದಂತೆ ತಿಳಿಯುವ ಶಿಷ್ಯರೂ ವಿರಳ ಎಂದು ತಾತ್ಪರ್ಯ. ಹೀಗೆ ಗುರುವು ಉಪದೇಶಿಸಿದ ಆತ್ಮತತ್ತ್ವವನ್ನು ಯಥಾವತ್ತಾಗಿ ತಿಳಿದವರಲ್ಲಿಯೂ ಉಪಾಸನಾದಿಗಳಿಂದ ಸಾಕ್ಷಾತ್ಕರಿಸಿಕೊಂಡವರೂ ವಿರಳ.

ಸರಿಯಾಗಿ ಉಪದೇಶಿಸುವ ಆಚಾರ್ಯರೂ ವಿರಳ. ಅವರಿಗಿಂತ ಸರಿಯಾಗಿ ತಿಳಿಯುವ ಶಿಷ್ಯರು ಮತ್ತೂ ವಿರಳ. ಅವರಲ್ಲಿ ಉಪಾಸನಾದಿಗಳಿಂದ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡವರು ಇನ್ನೂ ವಿರಳ ಎಂಬ ಅಭಿಪ್ರಾಯವನ್ನು ಸುಬೋಧಿನೀಕಾರರು ತಿಳಿಸುತ್ತಾರೆ.



# ಮಂತ್ರ ೮

न नरेणाऽवरेण प्रोक्त एष सुविज्ञेयो बहुधा चिन्त्यमानः ।
अनन्यप्रोक्ते गतिरत्र नास्ति अणीयान् ह्यतर्क्यमणुप्रमाणात् ॥

ನ ನರೇಣಾಽವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ ।
ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥

## ಪ್ರತಿಪದಾರ್ಥ

ಅವರೇಣ—ಉತ್ತಮನಲ್ಲದ, ನರೇಣ—ಮನುಷ್ಯನಿಂದ, ಪ್ರೋಕ್ತಃ—ಉಪದೇಶಿಸಲ್ಪಟ್ಟ, ಏಷಃ — ಈ ಪರಮಾತ್ಮನು, ಬಹುಧಾ—ಅನೇಕ ಪ್ರಕಾರವಾಗಿ, ಚಿಂತ್ಯಮಾನಃ—ವಿಚಾರ ಮಾಡಲ್ಪಟ್ಟರೂ, ನ ಸುವಿಜ್ಞೇಯಃ, —ಚೆನ್ನಾಗಿ ತಿಳಿದುಕೊಳ್ಳಲ್ಪಡಲಾರನು. ಅನನ್ಯಪ್ರೋಕ್ತೇ—ಪರಮೈಕಾಂತಿಯಾದವನಿಂದ ಉಪದೇಶಿಸಲ್ಪಟ್ಟ, ಗತಿಃ—ಮೋಕ್ಷರೂಪಗತಿಯು, ಅತ್ರ—ಸಾಮಾನ್ಯಮನುಷ್ಯನ ಉಪದೇಶದಲ್ಲಿ, ನಾಸ್ತಿ—ಇಲ್ಲ. (ಈ ಪರಮಾತ್ಮನು), ಅಣುಪ್ರಮಾಣಾತ್—ಅಣು ಪರಿಮಾಣಕ್ಕಿಂತ, ಅಣೀಯಾನ್—ಸೂಕ್ಷ್ಮನು, ಅತರ್ಕ್ಯಮ್ ಹಿ—(ಆದುದರಿಂದ) ತರ್ಕಕ್ಕೂ ಸಿಗುವವನಲ್ಲ.

## ತಾತ್ಪರ್ಯ

ಉತ್ತಮನಲ್ಲದ ಆಚಾರ್ಯನಿಂದ ಉಪದೇಶಿಸಲ್ಪಟ್ಟ ಈ ಪರಮಾತ್ಮತತ್ತ್ವವು ದೇಹಾತ್ಮಾಭಿಮಾನಿಯಾದ ಮನುಷ್ಯನಿಂದ ಅನೇಕ ವಿಧವಾಗಿ ಚಿಂತಿಸಲ್ಪಟ್ಟರೂ ಅದು ತಿಳಿದುಕೊಳ್ಳಲು ಅಸಾಧ್ಯವಾದುದು. ಹಾಗಿಲ್ಲದೇ ತನಗೆ ತಾನೇ ತಿಳಿದುಕೊಂಡ ಪಕ್ಷದಲ್ಲಿ ಪರಮೈಕಾಂತಿಯಾದವನಿಂದ ಉಪದೇಶಿಸಲ್ಪಟ್ಟ ಪರಮಾತ್ಮನ ಮಾರ್ಗವು ಸಾಮಾನ್ಯಮನುಷ್ಯನ ಉಪದೇಶದಲ್ಲಿಲ್ಲ. ಪರಮಾತ್ಮನು ಅಣುಗಳಲ್ಲಿ ಅಣುವು ಆದುದರಿಂದಲೇ ಪರಮೈಕಾಂತಿಯಾದವನಿಂದ ಉಪದೇಶಿಸಲ್ಪಡುವ ಪರಮಾತ್ಮವಿಷಯಕವಾದ ಮೋಕ್ಷಮಾರ್ಗವು ಸಾಮಾನ್ಯ ಮನುಷ್ಯನ ಉಪದೇಶದಲ್ಲಿ ಸಿಗಲಾರದು. ಈ ಪರಮಾತ್ಮನು ಅಣುಪ್ರಮಾಣಕ್ಕಿಂತ ಸೂಕ್ಷ್ಮನಾದವನು. ಆದುದರಿಂದಲೇ ಪರಮಾತ್ಮಸ್ವರೂಪವು ಅತರ್ಕ್ಯವೂ ಕೂಡ.

## ರಂಗರಾಮಾನುಜಭಾಷ್ಯಮ್

ನ ನರೇಣಾವರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ । ಅವರೇಣ—ಅಶ್ರೇಷ್ಠೇನ ಪ್ರಾಕೃತೇನ ಪಾಂಡಿತ್ಯಮಾತ್ರಪ್ರಯೋಜನವೇದಾಂತಶ್ರವಣೇನ ನರೇಣ—ದೇಹಾತ್ಮಾಭಿಮಾನಿನಾ, ಏಷ ಆತ್ಮಾ, ಸುವಿಜ್ಞೇಯೋ ನ ಭವತಿ । ಕುತೋ ಹೇತೋಃ ? ಬಹುಧಾ ಚಿಂತ್ಯಮಾನಃ । ವಾದಿಭಿಃ ಇತಿ ಶೇಷಃ । ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ । ಅನನ್ಯೇನ— ಉಚ್ಯಮಾನಾದಾತ್ಮನೋಽನನ್ಯೇನ ತದೇಕಾಂತಿನಾ ಬ್ರಹ್ಮಾತ್ಮಸಾಕ್ಷಾತ್ಕಾ

ರೇಣ, ಪ್ರೋಕ್ತೇ ಅತ್ರ ಆತ್ಮನಿ, ಯಾದೃಶೀ ಅವಗತಿಃ, ಸಾ ಆತ್ಮಾವಗತಿರವರೇಣ ಪ್ರೋಕ್ತೇ ನಾಸ್ತಿ ಇತ್ಯರ್ಥಃ । ಯದ್ವಾ ಅತ್ರ—ಸಂಸಾರೇ, ಗತಿಃ—ಚಂಕ್ರಮಣಂ ನಾಸ್ತಿ ಇತ್ಯರ್ಥಃ । ಯದ್ವಾ ಅನನ್ಯಪ್ರೋಕ್ತೇ [ಅನ್ಯಾಪ್ರೋಕ್ತೇ] ಸ್ವಯಮವಗತೇ, ಗತಿಃ—ಆತ್ಮಾವಗತಿಃ ನಾಸ್ತಿ ಇತ್ಯರ್ಥಃ । ಅನ್ಯಪ್ರೋಕ್ತೇ ಇತಿ ಪಾಠೇ, ಅವರನರಪ್ರೋಕ್ತೇ ಸತಿ ಆತ್ಮನಿ, ಅವಗತಿ; ನಾಸ್ತಿ ಇತ್ಯರ್ಥಃ । ನನು-ಯೇನ ಕೇನಚಿತ್ ಉಪದಿಷ್ಟೇಽಪಿ ಊಹಾಪೋಹಶಾಲಿನಃ ಸ್ಯಾದೇವ ಇತ್ಯತ ಆಹ—ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ । ಯತೋ ಅಣೋರಪ್ಯಣೀಯಾನ್ ಆತ್ಮಾ ಅತಃ ತತ್ಸ್ವರೂಪಂ ತರ್ಕಾಗೋಚರಮ್ ॥

## ಅನುವಾದ

ನ ನರೇಣಾವರೇಣ ಪ್ರೋಕ್ತಾ........ಚಿಂತ್ಯಮಾನಃ । ಅವರೇಣ— ಉತ್ತಮನಲ್ಲದ, ಅಂದರೆ ಪ್ರಾಕೃತವಾದ ಪಾಂಡಿತ್ಯವೇ ಪ್ರಯೋಜನವೆನಿಸಿದ ವೇದಾಂತವನ್ನು ಕೇಳಿದ ನರೇಣ—ದೇಹವನ್ನೇ ಆತ್ಮವೆಂದು ತಿಳಿದವನಿಂದ, ಈ ಆತ್ಮನು ಸುಲಭವಾಗಿ ತಿಳಿಯಲ್ಪಡತಕ್ಕವನಲ್ಲ, ಕಾರಣವೇನು? ವಾದಿಗಳಿಂದ ಬಹುಧಾ ಚಿಂತ್ಯಮಾನಃ—ಅನೇಕ ರೀತಿಯಲ್ಲಿ ಚಿಂತಿಸಲ್ಪಟ್ಟರು ಎಂದು ಪೂರ್ತಿ ಮಾಡಿಕೊಳ್ಳಬೇಕು.

ಅನನ್ಯಪ್ರೋಕ್ತೇ—ಬೇರೆ ಯಾರಿಂದಲೂ ಹೇಳಲ್ಪಡದೇ, ತನ್ನಿಂದಲೇ ತಿಳಿಯಲ್ಪಟ್ಟಿರುವ ಏಕಾಂತಿಯಾದ ಬ್ರಹ್ಮಸಾಕ್ಷಾತ್ಕಾರವುಳ್ಳವನಿಂದ, ಪ್ರೋಕ್ತೇ—ಹೇಳಲ್ಪಟ್ಟ ಅತ್ರ—ಈ ಆತ್ಮದ ವಿಷಯದಲ್ಲಿ, ಯಾದೃಶೀ ಅವಗತಿಃ—ಯಾವ ಜ್ಞಾನ ಉಂಟಾಗುವುದೋ ಸಾ ಆತ್ಮಾವಗತಿಃ—ಆ ಆತ್ಮಜ್ಞಾನವು, ಅವರೇಣ ಪ್ರೋಕ್ತೇ—ಉತ್ತಮನಲ್ಲದವರಿಂದ ಹೇಳಲ್ಪಟ್ಟ ಉಪದೇಶದಲ್ಲಿಲ್ಲ ಎಂದರ್ಥ ಅಥವಾ ಅನನ್ಯಪ್ರೋಕ್ತೇ [ಅನ್ಯಾ] ಅಂದರೆ ತಾನಾಗಿಯೇ ತಿಳಿಯಲ್ಪಟ್ಟಿದ್ದರಲ್ಲಿ ಆತ್ಮಾವಗತಿಃ ನಾಸ್ತಿ ಇತ್ಯರ್ಥಃ—ಆತ್ಮಜ್ಞಾನವಿಲ್ಲ ಎಂದರ್ಥ. ಯಾವನೋ ಒಬ್ಬನಿಂದ ಉಪದೇಶಿಸಲ್ಪಟ್ಟರೂ, ತರ್ಕ ವಿತರ್ಕಮಾಡುವವನಿಗೆ ಆತ್ಮಾವಗತಿ ಉಂಟಲ್ಲವೇ ಎಂದು ಹೇಳಿದರೆ ಹೇಳುತ್ತಾನೆ. ಅಣೀಯಾನ್ ಹಿ ಅತರ್ಕ್ಯಮಣುಪ್ರಮಾಣಾತ್—ಏಕೆಂದರೆ ಈ ಆತ್ಮನು ಅಣುವಿಗಿಂತಲೂ ಅಣುತರವಾದವನು. ಆದುದರಿಂದ ಆತ್ಮಸ್ವರೂಪವು ತರ್ಕಕ್ಕೆ ಗೋಚರವಾದುದಲ್ಲ.

ಯಾರೇ ಉಪದೇಶಿಸಿದರೂ ಊಹಾಶಕ್ತಿಯುಳ್ಳವರಿಗೆ ಆತ್ಮಜ್ಞಾನವು ಉಂಟಾಗಿಯೇ ಉಂಟಾಗುವುದು ಎಂದಲ್ಲಿ 'ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್' ಎಂದು ಹೇಳುತ್ತಾನೆ. ಆತ್ಮವು ಅಣುವಿಗಿಂತ ಸೂಕ್ಷ್ಮವಾದುದರಿಂದ ಆತ್ಮಸ್ವರೂಪವು ಊಹೆಗೆ ಸಿಗುವುದಿಲ್ಲ.

## ಭಾಷ್ಯಸಾರ

ಹಿಂದಿನ ಮಂತ್ರದಲ್ಲಿ ಆತ್ಮತತ್ತ್ವವನ್ನು ಉಪದೇಶಮಾಡುವವನೂ, ಅದನ್ನು ತಿಳಿಯುವವನೂ, ತಿಳಿದು ಉಪಾಸಿಸಿ ಸಾಕ್ಷಾತ್ಕಾರಮಾಡಿಕೊಳ್ಳುವವನೂ ವಿರಳ ಎಂದು ಹೇಳಿದೆ. ಇದಕ್ಕೆ ಕಾರಣವನ್ನು ಈ ಮಂತ್ರದಲ್ಲಿ ತಿಳಿಸುತ್ತಾನೆ.

ತಾರ್ಕಿಕರು 'ಪರಮಾತ್ಮನು ಇದ್ದಾನೆ ಇಲ್ಲ' ಎಂದೂ, 'ಕರ್ತಾ, ಅಕರ್ತಾ' ಎಂದೂ, 'ನಿತ್ಯನು–ಅನಿತ್ಯನೂ' ಎಂದೂ ನಾನಾ ವಿಧವಾಗಿ ವಿಚಾರ ಮಾಡಿರುವರು. ವೇದಾಂತ ವಿಷಯವನ್ನು ಕೇಳಿ ಪಾಂಡಿತ್ಯವನ್ನು ಮಾತ್ರ ಗಳಿಸಿದ ದೇಹೇಂದ್ರಿಯಗಳಲ್ಲಿ ಆತ್ಮಾಭಿಮಾನ ವುಳ್ಳವನು ಎಷ್ಟೇ ಚೆನ್ನಾಗಿ ಉಪದೇಶ ಮಾಡಿದರೂ ಈ ಪರಮಾತ್ಮ ತತ್ತ್ವವನ್ನು ಸುಲಭ ವಾಗಿ ತಿಳಿಯಲಾಗುವುದಿಲ್ಲ. ಆತ್ಮಸಾಕ್ಷಾತ್ಕಾರವಿಲ್ಲದವನಿಂದ ಉಪದೇಶ ಪಡೆದರೂ ಸಂದೇಹಗಳುಂಟಾಗುತ್ತವೆ. ಆದುದರಿಂದ ಯಾವ ಸಂದೇಹವೂ ಉಂಟಾಗದಂತೆ ಆತ್ಮ ವಿಷಯವನ್ನು ಉಪದೇಶಿಸುವವನು ಆಶ್ಚರ್ಯವಕ್ತಿಯೇ ಸರಿ. ಹೀಗೆ ಉಪದೇಶಿಸುವವನು ಸಾವಿರಕ್ಕೊಬ್ಬನು ಮಾತ್ರ.

ಆತ್ಮಸಾಕ್ಷಾತ್ಕಾರ ಪಡೆದವನು ಕೌಶಲದಿಂದ ಉಪದೇಶ ಮಾಡಿದರೂ ಶಬ್ದಾದಿ ವಿಷಯವಾಸನೆಯಿಂದ ಕಲುಷಿತವಾದ ಮನಸ್ಸುಳ್ಳವನು ಉಪದೇಶಮಾಡಿದಂತೆ ಸರಿಯಾಗಿ ತಿಳಿಯಲಾರನು. ಆದುದರಿಂದ ವಿಷಯವಾಸನಾರಹಿತನಾಗಿ ಸರಿಯಾಗಿ ತಿಳಿಯುವವನು ಸಾವಿರಕ್ಕೊಬ್ಬನು ಮಾತ್ರ.

ಆತ್ಮಸಾಕ್ಷಾತ್ಕಾರ ಪಡೆದ ಗುರುವು ಉಪದೇಶಿಸಿದರೂ ತಿಳಿಯುವವರು ವಿರಳ ಎಂದು ಹೇಳಿರುವುದರಿಂದ ಗುರೂಪದೇಶವಿಲ್ಲದೆ ಊಹಾಪೋಹಗಳಲ್ಲಿ ನಿಪುಣನಾದವನಿಗೂ ಆತ್ಮ ಜ್ಞಾನವುಂಟಾಗುವುದಿಲ್ಲ ಎಂಬುದನ್ನು 'ಅನನ್ಯಪ್ರೋಕ್ತೇ' ಎಂಬುದರಿಂದ ವಿವರಿಸುತ್ತಾನೆ.

ತನಗಿಂತ ಭಿನ್ನವಾದ ಬ್ರಹ್ಮಸಾಕ್ಷಾತ್ಕಾರ ಪಡೆದ ಗುರುವು ಉಪದೇಶಿಸಿದ್ದು ಅನ್ಯ ಪ್ರೋಕ್ತ. ಅದಕ್ಕಿಂತ ಭಿನ್ನವಾದುದು ಅಂದರೆ ಗುರೂಪದೇಶವಿಲ್ಲದೆ ತನ್ನ ಬುದ್ಧಿಯಿಂದಲೇ ಚಿಂತಿಸಿ ತಿಳಿಯಲು ಯತ್ನಿಸಿದರೆ ಅದು ಅನನ್ಯಪ್ರೋಕ್ತ (ಅಂದರೆ) ಯಾರಿಗೂ ಆತ್ಮವಿಷಯ ದಲ್ಲಿ ಸರಿಯಾದ ಜ್ಞಾನವುಂಟಾಗುವುದಿಲ್ಲ.

ಅಥವಾ ಪರಮಾತ್ಮನು ತನಗೆ ಆತ್ಮನಾಗಿರುವವನು ಎಂದು ಅನುಸಂಧಾನಮಾಡುತ್ತಾ ಈ ಪರಮಾತ್ಮನಲ್ಲಿಯೇ ಆಸಕ್ತನಾಗಿ ಪರಮಾತ್ಮ ಸಾಕ್ಷಾತ್ಕಾರಮಾಡಿಕೊಂಡಿರುವವನ ಉಪ ದೇಶದಿಂದ ಪರಮಾತ್ಮಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ ಎಂಬುದು ಇಲ್ಲ. ಅಂದರೆ ಪರ ಮಾತ್ಮಸ್ವರೂಪವು ತಿಳಿದೇ ತಿಳಿಯುತ್ತದೆ. ಅಥವಾ, ಬ್ರಹ್ಮಸಾಕ್ಷಾತ್ಕಾರ ಪಡೆದ ಗುರುವು ಬ್ರಹ್ಮಸ್ವರೂಪವನ್ನು ಉಪದೇಶ ಮಾಡಿದರೆ ಈ ಸಂಸಾರದಲ್ಲಿ ಅಲೆದಾಟವಿರುವುದಿಲ್ಲ. ಶಿಷ್ಯನು ಮಾಡುವ ಗುರುಶುಶ್ರೂಷಾದಿಗಳಿಂದ ಸಂತುಷ್ಟನಾದ ಗುರುವು ಕೊಡುವ ಉಪ ದೇಶವು ಸಮರ್ಥವಾಗಿರುತ್ತದೆ. ಇದರಿಂದ ಉಪದೇಶಪಡೆದಾತನು ಪರಮಾತ್ಮತತ್ತ್ವ ವನ್ನು ಅರಿತೇ ಅರಿಯುತ್ತಾನೆ ಎಂದು ತಾತ್ಪರ್ಯ ಎಂದು ರಾಮಾನಂದರು 'ಅಥವಾ' ಎಂಬುದರಿಂದ ತಿಳಿಸುತ್ತಾರೆ.

ತರ್ಕದಲ್ಲಿ ಕುಶಲನಾದವನು ತನ್ನ ಊಹೆಯಿಂದ ಎಲ್ಲವನ್ನೂ ಅರಿಯಬಲ್ಲನು, ಅಥವಾ ಆತ್ಮಸಾಕ್ಷಾತ್ಕಾರವಿಲ್ಲದವನು ಉಪದೇಶಿಸಿದರೂ ತರ್ಕಕುಶಲನು ತನ್ನ ಊಹೆ ಯಿಂದ ಆತ್ಮತತ್ತ್ವವನ್ನು ತಿಳಿಯಬಲ್ಲನು ಎಂಬ ಆಶಂಕೆಯನ್ನು 'ಅಣೀಯಾನ್ ಅಣುಪ್ರಮಾ

ಣಾತ್' ಎಂಬುದರಿಂದ ಪರಿಹರಿಸುತ್ತಾನೆ. ಪರಮಾತ್ಮತತ್ತ್ವವು ಅಣುವಿಗಿಂತಲೂ ಸೂಕ್ಷ್ಮವಾದುದು. ತರ್ಕಕುಶಲನು ಅಣುವಿನವರೆಗೂ ಊಹೆಮಾಡಬಹುದು. ಅಣುವಿಗಿಂತ ಸೂಕ್ಷ್ಮವಾದ ಆತ್ಮತತ್ತ್ವದಲ್ಲಿ ತರ್ಕವು ಪ್ರವರ್ತಿಸಲಾರದು. ಆದುದರಿಂದ ತರ್ಕಕ್ಕೆ ನಿಲುವಿಕೆ. ಈ ಆತ್ಮತತ್ತ್ವವನ್ನು ತನ್ನ ತರ್ಕದಿಂದಾಗಲೀ, ಆತ್ಮಸಾಕ್ಷಾತ್ಕಾರವಿಲ್ಲದವನ ಉಪದೇಶದ ಸಹಕಾರದಿಂದ ಕೂಡಿದ ತರ್ಕದಿಂದಾಗಲೀ ತಿಳಿಯಲು ಸಾಧ್ಯವಿಲ್ಲ ಎಂದು ತಾತ್ಪರ್ಯ.



# ಮಂತ್ರ ೯

**नैषा तर्केण मतिरापनेया प्रोक्ताऽन्येनैव सुज्ञानाय प्रेष्ठ ।**
**यां त्वमापः सत्यधृतिर्बतासि त्वादृङ्नो भूयान्नचिकेतः प्रष्टा ॥**

ನೈಷಾ ತರ್ಕೇಣ ಮತಿರಾಪನೇಯಾ ಪ್ರೋಕ್ತಾಽನ್ಯೇನೈವ
ಸುಜ್ಞಾನಾಯ ಪ್ರೇಷ್ಠ ।
ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ತ್ವಾದೃಙ್ನೋ
ಭೂಯಾನ್ನಚಿಕೇತಃ ಪ್ರಷ್ಟಾ ॥

## ಪ್ರತಿಪದಾರ್ಥ

ಏಷಾ — ಈ, ಮತಿಃ — ಆತ್ಮಜ್ಞಾನವು, ತರ್ಕೇಣ — ಊಹಾಪೋಹ ಮಾತ್ರದಿಂದ, ನ ಆಪನೇಯಾ — ಹೊಂದತಕ್ಕದ್ದಲ್ಲ. ಹೇ ಪ್ರೇಷ್ಠ — ಎಲೈ ಪ್ರಿಯತಮನೇ!, ಅನ್ಯೇನೈವ — ಬೇರೆ ಗುರುವಿನಿಂದಲೇ, ಪ್ರೋಕ್ತಾ — ಹೇಳಲ್ಪಟ್ಟ, (ಮತಿಃ — ಆತ್ಮಜ್ಞಾನವು), ಸುಜ್ಞಾನಾಯ (ಭವತಿ) — ಒಳ್ಳೆಯ ಜ್ಞಾನವನ್ನು ಉಂಟುಮಾಡುವುದು, ಯಾಮ್ — ಯಾವ ಬುದ್ಧಿಯನ್ನು, ತ್ವಮ್ — ನೀನು, ಆಪಃ — ಹೊಂದಿರುತ್ತೀಯೋ (ಅದರಿಂದ), ಸತ್ಯಧೃತಿಃ ಅಸಿ — ಸಫಲವಾದ ಬುದ್ಧಿಯುಳ್ಳವನಾಗಿರುವೆ. ನಚಿಕೇತಃ — ಎಲೈ ನಚಿಕೇತನೇ ! ತ್ವಾದೃಕ್ — ನಿನ್ನಂಥಹ, ಪ್ರಷ್ಟಾ — ಕೇಳುವವನು (ಶಿಷ್ಯನು), ನಃ — ನಮಗೆ, ಭೂಯಾತ್ — ಉಂಟಾಗಲಿ.

## ತಾತ್ಪರ್ಯ

ಎಲೈ ಶ್ರೇಷ್ಠನೇ ! ಈ ಪರಮಾತ್ಮಜ್ಞಾನವು ಸ್ವಬುದ್ಧಿಯಿಂದ ಸಂಪಾದಿಸಲ್ಪಟ್ಟ ತರ್ಕವಿತರ್ಕಗಳಿಂದ ತಿಳಿಯತಕ್ಕದ್ದಲ್ಲ. ಗುರುವಿನ ಉಪದೇಶದಿಂದ ಅರಿತ ಆತ್ಮಜ್ಞಾನವು ಒಳ್ಳೆಯದನ್ನು ಉಂಟುಮಾಡುವುದು. ಅಂದರೆ ಮೋಕ್ಷಕ್ಕೆ ಸಾಧಕವಾಗುವುದು. ಈ ಜ್ಞಾನವನ್ನು ನೀನು ನಿಶ್ಚಯಿಸಿರುವುದರಿಂದ ನೀನು ಸಫಲವಾದ ಬುದ್ಧಿಯುಳ್ಳವನು, ಎಲೈ ನಚಿಕೇತನೇ ! ನಿನ್ನಂತೆ ಕೇಳುವ ಶಿಷ್ಯನು ನಮಗೆ ದೊರಕಲಿ.

## ರಂಗರಾಮಾನುಜಭಾಷ್ಯಮ್

ತದೇವಾಹ — **ನೈಷಾ ತರ್ಕೇಣ ಮತಿರಾಪನೇಯಾ** ! ಏಷಾ — ಆತ್ಮವಿಷಯಿಣೀ ಮತಿಃ, ತರ್ಕೇಣ ಪ್ರಾಪಣೀಯಾ ನ ಇತ್ಯರ್ಥಃ। ಅತಃ ತರ್ಕಕುಶಲೇನಾಪಿ ಸ್ವಯಂ ಜ್ಞಾತುಂ ನ ಶಕ್ಯ ಇತ್ಯರ್ಥಃ । **ಪ್ರೋಕ್ತಾಽನ್ಯೇನೈವ ಸುಜ್ಞಾನಾಯ ಪ್ರೇಷ್ಠ** । ಹೇ ಪ್ರೇಷ್ಠ ! — ಪ್ರಿಯತಮ, ಸ್ವಸ್ಮಾದನ್ಯೇನೈವ [ಗುಣೋತ್ಕೃಷ್ಟೇನ] ಗುರುಣಾ, ಉಪದಿಷ್ಟೈವ ಮತಿಃ — ಮೋಕ್ಷಸಾಧನಜ್ಞಾನಾಯ ಭವತಿ । ಕಾ ಪುನಃ ಸಾ ಮತಿರಿತ್ಯತ್ರಾಹ — **ಯಾಂ ತ್ವಮಾಪಃ ಸತ್ಯಧೃತಿರ್ಬತಾಽಸಿ** ಇತಿ । ಯಾ ಮತಿಂ ತ್ವಮಾಪಃ — ಆಪ್ತವಾನ್, ಸಿಷಾಧಯಿಷಿತತಯಾ ನಿಶ್ಚಿತವಾನ್ ಇತ್ಯರ್ಥಃ । ಸತ್ಯಧೃತಿರಸಿ । ಸತ್ಯಾ—ಅಪ್ರಕಂಪ್ಯಾ ಧೃತಿಃ ಯಸ್ಯ ಸ ತಥೋಕ್ತಃ । 'ಬತ' ಇತ್ಯನುಕಂಪಾಯಾಮ್ । **ತ್ವಾದೃಙ್ನೋ ಭೂಯಾನ್ನಚಿಕೇತಃ ಪ್ರಷ್ಟಾ** । ತ್ವಾದೃಶಃ ಶಿಷ್ಯಃ ಅಸ್ಮಾಕಂ ಭೂಯಾದಿತ್ಯರ್ಥಃ ॥

## ಅನುವಾದ

ತರ್ಕಕ್ಕೆ ಸಿಗಲಾರನು ಎಂಬುದನ್ನೇ ಹೇಳುತ್ತಾನೆ. ನೈಷಾ ತರ್ಕೇಣ ಮತಿರಾಪನೇಯಾ । ಏಷಾ—ಈ ಆತ್ಮವಿಷಯವಾದ ಬುದ್ಧಿಯು ತರ್ಕದಿಂದ ಸಿಗುವಂತಹುದಲ್ಲ ಎಂದರ್ಥ. ಆದುದರಿಂದ ತರ್ಕಕುಶಲನಿಗೂ ಆತ್ಮಸ್ವರೂಪವನ್ನು ತಾನೇ ಅರಿಯಲು ಸಾಧ್ಯವಿಲ್ಲ ಎಂದರ್ಥ. ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ. ಹೇ ಪ್ರೇಷ್ಠ !—ಎಲೈ ಪ್ರಿಯತಮನೇ ! ತಮಗಿಂತ ಭಿನ್ನನೂ ಉತ್ತಮ ಗುಣಶಾಲಿಯೂ ಆದ ಗುರುವಿನಿಂದ ಉಪದೇಶಿಸಲ್ಪಟ್ಟ ಮತಿಃ—ಬುದ್ಧಿಯು ಮೋಕ್ಷಕ್ಕೆ ಸಾಧನವಾಗುವುದು. ಆ ಬುದ್ಧಿ ಯಾವುದೆಂದರೆ ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ ಇತಿ—ಎಂದು ಹೇಳುತ್ತಾನೆ. ಯಾಮ್—ಯಾವ ಆತ್ಮಜ್ಞಾನವನ್ನು ತ್ವಮಾಪಃ—ಪಡೆಯಬೇಕೆಂದು (ನೀನು) ನಿಶ್ಚಯಿಸಿರುವೆಯೋ (ಸಾಧಿಸಬೇಕೆಂದು ನಿಶ್ಚಯಿಸಿರುವೆಯೋ ಎಂದರ್ಥ) ಆದ್ದರಿಂದ ಸತ್ಯಧೃತಿರಸಿ ಸತ್ಯ–ಸ್ಥಿರವಾದ ಬುದ್ಧಿಯು ಯಾವನಿಗಿದೆಯೋ ಅಂತಹವನು 'ಬತ' ಎಂಬುದು ಅನುಕಂಪ ಎಂಬರ್ಥದಲ್ಲಿದೆ. ತ್ವಾದೃಙ್ನೋ ಭೂಯಾನ್ನಚಿಕೇತಃ ಪ್ರಷ್ಟಾ–ಅಂತಹ ಶಿಷ್ಯರು ನಮಗೆ ದೊರಕಲಿ ಎಂದರ್ಥ.

## ಭಾಷ್ಯಸಾರ

ತನ್ನ ಬುದ್ಧಿಯಿಂದುಂಟಾದ ಆತ್ಮಸ್ವರೂಪವು ಅಣುವಿಗಿಂತಲೂ ಸೂಕ್ಷ್ಮವಾದುದು. ಆದುದರಿಂದ ಈ ಆತ್ಮವಿಷಯಕವಾದ ಜ್ಞಾನವು ತರ್ಕವಿತರ್ಕಕ್ಕೆ ಸಿಗಲಾರದು. ಗುರುವಿನ ಉಪದೇಶವಿಲ್ಲದೇ ಆತ್ಮಜ್ಞಾನವನ್ನು ಪಡೆಯಲು ನಮ್ಮ ಬುದ್ಧಿಶಕ್ತಿಯನ್ನುಪಯೋಗಿಸಿ ಆ ಜ್ಞಾನವನ್ನು ತಿಳಿಯಲು ಊಹಾಪೋಹಗಳಿಂದ ಪ್ರಯತ್ನಿಸಬಾರದು. ಆದುದರಿಂದ ಹೀಗೆ ಪ್ರಯತ್ನಿಸಿದಲ್ಲಿ ಆ ಆತ್ಮಜ್ಞಾನದಿಂದ ದೂರವೇ ಉಳಿಯುವರೆಂದು ತಾತ್ಪರ್ಯ. ಗುರುವಿನ ಉಪದೇಶವನ್ನು ತಿರಸ್ಕರಿಸಿ ತರ್ಕದಿಂದ ಆತ್ಮಸ್ವರೂಪವನ್ನು ತಿಳಿಯಲು ಯತ್ನಿಸಿದರೆ ಕೇವಲ ಊಹೆಯು ಆತ್ಮಜ್ಞಾನವನ್ನು ದೂರಮಾಡುತ್ತದೆ ಎಂದು ಅಭಿಪ್ರಾಯ. ಆತ್ಮದ ವಿಷಯದಲ್ಲಿರುವ ಅಲ್ಪ–ಸ್ವಲ್ಪ ಜ್ಞಾನವೂ ಊಹಾ–ಪೋಹಗಳಿಂದ ನಾಶವಾಗುತ್ತದೆ ಎಂದು ಸುಬೋಧಿನೀಕಾರರ ಅಭಿಪ್ರಾಯ.

ನಚಿಕೇತನೇ ! ತತ್ತ್ವಸಾಕ್ಷಾತ್ಕಾರಮಾಡಿರುವ ಗುರೂಪದೇಶದಿಂದ ತಿಳಿದ ಅತ್ಮಜ್ಞಾನವೇ ಮೋಕ್ಷಕ್ಕೆ ಸಾಧನವಾಗುತ್ತವೆ. ಬೇರೆ ರೀತಿಯಲ್ಲಿ ಉಂಟಾದ ಜ್ಞಾನವು ಅಜ್ಞಾನಕ್ಕೆ ಸಾಧನ ಎಂದು ತಾತ್ಪರ್ಯ. ಈ ಅತ್ಮಜ್ಞಾನ ಯಾವುದು ಎಂಬುದನ್ನು 'ಯಾಂ ತ್ವಮಾಪಃ' ಎಂಬುದರಿಂದ ವಿವರಿಸುತ್ತಾನೆ— ಯಾವ ಆತ್ಮಜ್ಞಾನವನ್ನು ನನ್ನಿಂದ ನೀನು ತಿಳಿಯಬೇಕೆಂದು ಅಪೇಕ್ಷಿಸಿರುವೆಯೋ ಅಂತಹ ಆತ್ಮಜ್ಞಾನವೇ ಮೋಕ್ಷಸಾಧನ. ಇಂತಹ ಜ್ಞಾನವನ್ನು ಪಡೆಯಬೇಕೆಂದು ನಿರ್ಧರಿಸಿರುವುದರಿಂದ ನಿನ್ನ ಬುದ್ಧಿಯು ಸಫಲವಾಗಿದೆ. ನಾನು ತೋರಿಸಿದ ಆಸೆ–ಆಮಿಷಗಳಿಂದ ನೀನು ವಿಚಲಿತನಾಗಲಿಲ್ಲ.

ಎಲೈ ನಚಿಕೇತನೇ ! ನಿನ್ನಂತಹ ಸ್ಥಿರವಾದ ಮನಸ್ಸುಳ್ಳ ಶಿಷ್ಯನು ನನಗೆ ದೊರಕಲಿ. ಮಂತ್ರದಲ್ಲಿ ಬಂದಿರುವ 'ಬತ' ಎಂಬ (ಶಬ್ದವು) ಅವ್ಯಯವು ಅನುಕಂಪ ಎಂಬರ್ಥದಲ್ಲಿದೆ. ಈ ಅನುಕಂಪವು ನಿನ್ನಂತಹ ಶಿಷ್ಯನು ದೊರಕಲಿ ಎಂಬ ಸ್ತುತಿಯಿಂದ ಸೂಚಿತವಾಗುತ್ತದೆ.

## ಮಂತ್ರ ೧೦

**जानाम्यहँ शेवधिरित्यनित्यं न ह्यध्रुवैः प्राप्यते हि ध्रुवं तत् ।**
**ततो मया नाचिकेतश्चितोऽग्निरनित्यैर्द्रव्यैः प्राप्तवानस्मि नित्यम् ॥**

ಜಾನಾಮ್ಯಹಂ ಶೇವಧಿರಿತ್ಯನಿತ್ಯಂ ನ ಹ್ಯಧ್ರುವೈಃ ಪ್ರಾಪ್ಯತೇ ಹಿ
ಧ್ರುವಂ ತತ್ ।
ತತೋ ಮಯಾ ನಾಚಿಕೇತಶ್ಚಿತೋಽಗ್ನಿರನಿತ್ಯೈರ್ದ್ರವ್ಯೈಃ
ಪ್ರಾಪ್ತವಾನಸ್ಮಿ ನಿತ್ಯಮ್ ॥

### ಪ್ರತಿಪದಾರ್ಥ

ಶೇವಧಿಃ—ನಿಧಿಯು, ಅನಿತ್ಯಮ್ ಇತಿ—ಸ್ಥಿರವಲ್ಲವೆಂದು, ಅಹಮ್—ನಾನು, ಜಾನಾಮಿ—ತಿಳಿದಿದ್ದೇನೆ. ಧ್ರುವಮ್—ನಿತ್ಯವಾದ, ತತ್—ಆತ್ಮತತ್ತ್ವವು, ಅಧ್ರುವೈಃ—ಅನಿತ್ಯವಾದ ಫಲಕೊಡುವ ಕರ್ಮದಿಂದ, ನ ಪ್ರಾಪ್ಯತೇ ಹಿ—ಪಡೆಯತಕ್ಕದ್ದೇ ಅಲ್ಲ, ಮಯಾ—ನನ್ನಿಂದ, ಅನಿತ್ಯೈಃ ದ್ರವ್ಯೈಃ—ಅನಿತ್ಯವಾದ ಇಷ್ಟಕಾದಿ ದ್ರವ್ಯಗಳಿಂದ, ನಾಚಿಕೇತಾಗ್ನಿಃ—ನಾಚಿಕೇತಾಗ್ನಿಯು, ಚಿತಃ—ಚಯನಮಾಡಲ್ಪಟ್ಟಿತು. ತತಃ—ಆದುದರಿಂದ, ನಿತ್ಯಮ್—ನಿತ್ಯವನ್ನು (ಮೋಕ್ಷಸಾಧನವಾದ ಜ್ಞಾನವನ್ನು), ಪ್ರಾಪ್ತವಾನಸ್ಮಿ—ಹೊಂದಿರುತ್ತೇನೆ.

### ತಾತ್ಪರ್ಯ

ಐಶ್ವರ್ಯದಂತೆ ಕರ್ಮಫಲವು ಅನಿತ್ಯವೆಂದು ನಾನು ತಿಳಿದಿರುತ್ತೇನೆ. ಅನಿತ್ಯವಾದ ಕರ್ಮದಿಂದ ಈ ನಿತ್ಯವಾದ ಆತ್ಮತತ್ತ್ವವನ್ನು ಪಡೆಯುವುದಕ್ಕಾಗುವುದಿಲ್ಲ. ಆದಕಾರಣ ಅನಿತ್ಯವಾದ ಇಷ್ಟಕಾದಿಗಳಿಂದ ಫಲಾಭಿಸಂಧಿರಹಿತವಾಗಿ ಬ್ರಹ್ಮಪ್ರಾಪ್ತಿಯನ್ನೇ ಉದ್ದೇಶವಾಗಿಟ್ಟುಕೊಂಡು ನಾಚಿಕೇತಾಗ್ನಿಯು ನನ್ನಿಂದ ಚಯನ ಮಾಡಲ್ಪಟ್ಟಿತು. ಈ ಅನಿತ್ಯದ್ರವ್ಯಗಳಿಂದ ಮೋಕ್ಷಸಾಧನವಾದ ಜ್ಞಾನವನ್ನು ಹೀಗೆ ಪಡೆದುಕೊಂಡಿರುತ್ತೇನೆ.

### ರಂಗರಾಮಾನುಜಭಾಷ್ಯಮ್

ಪುನರಪಿ ತುಷ್ಟ ಆಹ—ಜಾನಾಮ್ಯಹಂ ಶೇವಧಿರಿತ್ಯನಿತ್ಯಮ್ । ಶೇವಧಿಃ—ನಿಧಿಃ, ಕುಬೇರಾದ್ಯೈಶ್ವರ್ಯಮ್ । ಏವಂಜಾತೀಯಕಂ ಕರ್ಮಫಲಲಕ್ಷಣಮನಿತ್ಯಮಿತಿ ಜಾನಾಮಿ । ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ । ಧ್ರುವಂ ತತ್—ಆತ್ಮತತ್ತ್ವಮ್ । ಅಧ್ರುವೈಃ—ಅನಿತ್ಯಫಲಸಾಧನಭೂತೈಃ ಅನಿತ್ಯದ್ರವ್ಯಸಾಧ್ಯೈರ್ವಾ ಕರ್ಮಭಿಃ ಇತ್ಯರ್ಥಃ । ತತೋ ಮಯಾ ನಾಚಿಕೇತಶ್ಚಿತೋಽಗ್ನಿಃ ಅನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ, ನಿತ್ಯಮ್[1] । ಏವಂ ಜ್ಞಾತವತಾ ಮಯಾ ಬ್ರಹ್ಮಪ್ರಾಪ್ತಿಸಾಧನಜ್ಞಾನೋದ್ದೇಶೇನ ಅನಿತ್ಯೈರಿಷ್ಟಕಾದಿದ್ರವ್ಯೈರ್ನಾಚಿಕೇತೋಽಗ್ನಿಶ್ಚಿತಃ । ತಸ್ಮಾದ್ಧೇತೋಃ ನಿತ್ಯಫಲಸಾಧನಂ ಜ್ಞಾನಂ ಪ್ರಾಪ್ತವಾನಸ್ಮಿ ಇತ್ಯರ್ಥಃ । ಅತಃ ಬ್ರಹ್ಮಪ್ರಾಪ್ತೇಃ ಜ್ಞಾನೈಕಸಾಧ್ಯತ್ವಸ್ಯ ನ ವಿರೋಧಃ ॥

---

1. ನಿತ್ಯಮ್—ಜ್ಞಾನವು ನಿತ್ಯವಲ್ಲದಿದ್ದರೂ, ಯಾವಾಗಲೂ ಅನುವರ್ತಿಯಾಗಿರುವುದರಿಂದ ನಿತ್ಯವೆಂದು ಹೇಳಿದೆ.

### ಅನುವಾದ

ಯಮನು ಸಂತುಷ್ಟನಾಗಿ ಪುನಃ ಹೇಳುತ್ತಾನೆ. ಜಾನಾಮ್ಯಹಂ ಶೇವಧಿರಿತ್ಯನಿತ್ಯಮ್ । ಶೇವಧಿಃ— ನಿಧಿ, ಕುಬೇರಾದಿಗಳ ಐಶ್ವರ್ಯ. ಅಂದರೆ ಈ ಪಂಕ್ತಿಗೆ ಸೇರಿದ ಕರ್ಮಫಲವು. ಇದು ನಶ್ವರವೆಂದು ತಿಳಿದಿದ್ದೇನೆ. ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ । ಧ್ರುವಂ ತತ್— ನಿತ್ಯವಾದ ಆತ್ಮತತ್ತ್ವವು, ಅಧ್ರುವೈಃ—ನಶ್ವರವಾದ ಫಲಗಳಿಗೆ ಸಾಧನವಾದ ಅಥವಾ ನಶ್ವರವಾದ ದ್ರವ್ಯಗಳಿಂದ ಸಾಧಿಸಲ್ಪಟ್ಟ ಕರ್ಮಗಳಿಂದ (ಹೊಂದಲ್ಪಡುವುದಿಲ್ಲ).

ತತೋ ಮಯಾ ನಾಚಿಕೇತಶ್ಚಿತೋಽಗ್ನಿಃ ಅನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್ —ಇದನ್ನು ಈ ರೀತಿಯಾಗಿ ಅರಿತ ನನ್ನಿಂದ ಬ್ರಹ್ಮವನ್ನು ಪಡೆಯಲು ಸಾಧನವಾದ ಜ್ಞಾನಕ್ಕಾಗಿ ಅನಿತ್ಯವಾದ ಇಟ್ಟಿಗೆ ಮುಂತಾದ ವಸ್ತುಗಳಿಂದ ನಾಚಿಕೇತಾಗ್ನಿಯು ಚಯನ ಮಾಡಲ್ಪಟ್ಟಿತು. ಆದ್ದರಿಂದ ಬ್ರಹ್ಮಪ್ರಾಪ್ತಿಸಾಧನವಾದ ಆತ್ಮಜ್ಞಾನವನ್ನು ಪಡೆದೆನು ಎಂದರ್ಥ. ಜ್ಞಾನಮಾತ್ರಸಾಧ್ಯ ಬ್ರಹ್ಮ ಎಂಬ ಮಾತಿಗೆ ಯಾವುದೇ ವಿರೋಧವೂ ಇಲ್ಲ.

### ಭಾಷ್ಯಸಾರ

ಯಮನು ನಚಿಕೇತನಲ್ಲಿ ಪ್ರಸನ್ನನಾದನು. ತಾನು ಮೋಕ್ಷಕ್ಕೆ ಕಾರಣವಾದ ಆತ್ಮಜ್ಞಾನವನ್ನು ಪಡೆದ ರೀತಿಯನ್ನು ಸಂತೋಷದಿಂದ ನಚಿಕೇತನಿಗೆ ಉಪದೇಶಿಸುತ್ತಾನೆ.

'ನಿಧಿ' ಎಂಬುದು ಅನಿತ್ಯ. 'ಶೇವಧಿ' ಶಬ್ದವು ಎಲ್ಲ ವಿಧವಾದ ಕರ್ಮಫಲಗಳನ್ನು ತಿಳಿಸುತ್ತದೆ. ನಿಧಿಯಂತೆ ಕರ್ಮಫಲಗಳೆಲ್ಲವೂ ಜನ್ಯವಾದುದರಿಂದ ಶಾಶ್ವತವಲ್ಲ ಎಂಬುದನ್ನು ನಾನು ಚೆನ್ನಾಗಿ ತಿಳಿದಿರುತ್ತೇನೆ. ಪರಮಾತ್ಮಸ್ವರೂಪವು ನಿತ್ಯವಾದುದು. ಆದುದರಿಂದ ಅನಿತ್ಯಫಲಸಾಧನವಾದ ಕರ್ಮಗಳಿಂದ ನಿತ್ಯವಾದ ಪರಮಾತ್ಮ ಪ್ರಾಪ್ತಿಯಾಗುವುದಿಲ್ಲ ಎಂಬುದು ನಿಶ್ಚಿತವಾದ ವಿಷಯ. ಇಂದ್ರಾದಿ ಪದವಿಗಳೂ ನಶ್ವರ. ಆದುದರಿಂದ, ಇವುಗಳಿಂದಲೂ ಆತ್ಮಸ್ವರೂಪವನ್ನು ತಿಳಿಯಲಾಗುವುದಿಲ್ಲ. ನಾನು ಯಮಪಟ್ಟದಲ್ಲಿದ್ದರೂ ಇದರಿಂದ ಏನೂ ಉಪಯೋಗವಿಲ್ಲ ಎಂದರಿತು ಫಲಾಭಿಲಾಷಾರಹಿತನಾಗಿ ನಾಚಿಕೇತಾಗ್ನಿಯನ್ನು ಚಯನ ಮಾಡಿದೆನು. ಈ ಅನಿತ್ಯವಾದ ಇಟ್ಟಿಗೆ ಮುಂತಾದ ದ್ರವ್ಯಗಳನ್ನು ಉಪಯೋಗಿಸಿ, ಫಲಕಾಮನಾರಹಿತನಾಗಿ ನಾಚಿಕೇತಾಗ್ನಿಯನ್ನು ಉಪಾಸಿಸಿ, ಪರಮಾತ್ಮ ಪ್ರಾಪ್ತಿಗೆ ಸಾಧನವಾದ ಜ್ಞಾನವನ್ನು ಪಡೆದೆನು. ವಸ್ತುತಃ ಆತ್ಮತತ್ತ್ವಜ್ಞಾನವೂ ಅನಿತ್ಯ ಆದರೂ ನಿತ್ಯಫಲಕ್ಕೆ ಸಾಧನವಾದುದರಿಂದ, ಇದನ್ನು ನಿತ್ಯ ಎಂದು ಹೇಳಿದೆ. ಹೀಗೆ ಫಲಾಭಿಲಾಷೆಯನ್ನು ಬಿಟ್ಟು, ನಾಚಿಕೇತಾಗ್ನಿಯನ್ನು ಚಯನ ಮಾಡಿ ಈ ಆತ್ಮಜ್ಞಾನ ಪಡೆದೆನು ಎಂದು ಯಮನು ನಚಿಕೇತನಿಗೆ ಉಪದೇಶಿಸಿದನು.

# ಮಂತ್ರ ೧೧

**कामस्याप्तिं जगतः प्रतिष्ठां क्रतोरानन्त्यमभयस्य पारम् ।**
**स्तोमं महदुरुगायं प्रतिष्ठां दृष्ट्वा धृत्या धीरो नचिकेतोऽत्यस्राक्षीः ॥**

ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯ
ಮಭಯಸ್ಯ ಪಾರಮ್ ।
ಸ್ತೋಮಂ ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ
ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥

### ಪ್ರತಿಪದಾರ್ಥ

ಕಾಮಸ್ಯ—ಕಾಮದ, ಆಪ್ತಿಮ್—ಪ್ರಾಪ್ತಿಯನ್ನು, ಜಗತಃ—ಹಿರಣ್ಯಗರ್ಭಾದಿ ಜಗತ್ತಿನ, ಪ್ರತಿಷ್ಠಾಮ್—ಸ್ಥಿತಿಯನ್ನೂ (ಇವುಗಳು ನಶ್ವರವೆಂದೂ), ಕ್ರತೋಃ—ಕರ್ಮಫಲಗಳ, ಆನಂತ್ಯಮ್—ಅನಂತವನ್ನೂ, ಅಭಯಸ್ಯ—ಭಯವಿಲ್ಲದುದರ, ಪಾರಮ್—ಎಲ್ಲೆಯನ್ನೂ, ಸ್ತೋಮಮ್—(ಅಪಹತಪಾಪ್ಮತ್ವಮುಂತಾದ) ಗುಣಸಮೂಹವನ್ನೂ, ಮಹದುರುಗಾಯಮ್—ಉಚ್ಚಸ್ವರದಿಂದ ಗಾಯನ ಮಾಡಲು ಯೋಗ್ಯವಾದ ಕೀರ್ತಿಯನ್ನೂ, ಪ್ರತಿಷ್ಠಾಮ್—ಅಪುನರಾವೃತ್ತಿರೂಪವಾದ ಸ್ಥಿತಿಯನ್ನೂ, ದೃಷ್ಟ್ವಾ—ವಿವೇಚಿಸಿ, ಹೇ ನಚಿಕೇತಃ—ಎಲೈ ನಚಿಕೇತನೇ (ನೀನು), ಧೀರಃ—ಧೀರನಾಗಿ, ಧೃತ್ಯಾ—ಧೈರ್ಯದಿಂದ (ಎಲ್ಲ ಲೌಕಿಕ ಆಸೆಗಳನ್ನು), ಅತ್ಯಸ್ರಾಕ್ಷೀಃ—ಬಿಟ್ಟಿರುತ್ತೀಯೇ.

### ತಾತ್ಪರ್ಯ

ಎಲೈ ನಚಿಕೇತನೇ ! ನೀನು ವಿಷಯಸುಖದಪರಿಣಾಮವನ್ನೂ, ಹಿರಣ್ಯಗರ್ಭಾದಿಲೋಕಗಳ ಅಸ್ಥಿರವಾದ ಸ್ಥಿತಿಯನ್ನೂ ತಿಳಿದಿರುವೆ. ಅಂತೆಯೇ ಕರ್ಮಗಳಿಂದುಂಟಾಗುವ ಅನಂತ ಫಲವನ್ನೂ, ಮೋಕ್ಷದಲ್ಲಿರುವ ಅಭಯತ್ವದಎಲ್ಲೆಯನ್ನೂ, ಅಪಹತಪಾಪ್ಮತ್ವಾದಿಗುಣಸಮೂಹವನ್ನೂ, ಉಚ್ಚಸ್ವರದಿಂದ ಹಾಡಲು ಯೋಗ್ಯವಾದ ಕೀರ್ತಿಯನ್ನೂ, ಅಪುನರಾವೃತ್ತಿಯನ್ನೂ ತಿಳಿದಿರುವೆ. ಹೀಗೆ ಅವುಗಳನ್ನು ಚೆನ್ನಾಗಿ ವಿವೇಚಿಸಿ ಧೈರ್ಯದಿಂದ ಲೌಕಿಕವಾದ ಆಸೆಯೆಲ್ಲವನ್ನೂ ತ್ಯಾಗಮಾಡಿರುವೆ.

### ರಂಗರಾಮಾನುಜಭಾಷ್ಯಮ್

‘ತ್ವಾದೃಙ್ನೋ ಭೂಯಾನ್ನಚಿಕೇತಃ ಪ್ರಷ್ಟಾ’ ಇತಿ ಪೂರ್ವಮಂತ್ರೋಕ್ತಂ ನಚಿಕೇತಸಃ ಶ್ರವಣಾಧಿಕಾರಂ ವಿವೃಣೋತಿ—ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯಮಭಯಸ್ಯ ಪಾರಮ್ । ಸ್ತೋಮಂ ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ। ಕ್ರತೋಃ—ಕರ್ಮಣಃ, ಪ್ರತಿಷ್ಠಾಮ್—ಫಲಭೂತಾಮ್,

ಜಗತಃ ಕಾಮಸ್ಯಾಪ್ತಿಮ್—ಚತುರ್ಮುಖಸ್ಥಾನಪರ್ಯಂತಸರ್ವಲೋಕಸಂಬಂಧಿಸ್ತ್ರ್ಯಾದಿವಿಷಯಾತ್ಮಕಕಾಮಪ್ರಾಪ್ತಿಂ ಚ ದೃಷ್ಟ್ವಾ ಮೋಕ್ಷಸ್ವರೂಪಮಾಹ—ಆನಂತ್ಯಮಭಯಸ್ಯ ಪಾರಮ್' ಇತ್ಯಾದಿನಾ । ಅವಿನಾಶಿತ್ವಮ್ ಅತ್ಯಂತ ನಿರ್ಭಯತ್ವಮ್ ಅಪಹತಪಾಪ್ಮತ್ವ ಸತ್ಯಸಂಕಲ್ಪತ್ವಾದಿಮಹಾಗುಣಗಣರೂಪಸ್ತೋಮಂ ಉರುಕೀರ್ತಿಂ ಸ್ಥೈರ್ಯಂ ಚ ಮೋಕ್ಷಗತಂ ದೃಷ್ಟ್ವಾ ಲೌಕಿಕಾನ್ ಕಾಮಾನ್ ಪ್ರಜ್ಞಾಶಾಲಿತ್ವಾತ್ (ಪ್ರಜ್ಞಾಶಾಲೀ ತ್ವಂ) ತ್ಯಕ್ತವಾನಸೀತ್ಯರ್ಥಃ । ಯದ್ವಾ ಮೋಕ್ಷರೂಪ ಪರಮಾತ್ಮಸ್ವರೂಪ ಏವ ಸರ್ವಕಾಮಾವಾಪ್ತಿಂ, ತತ್ರೈವ ಸಕಲಜಗದಾಧಾರತ್ವಂ ಕ್ರತೋರನಂತಫಲರೂಪತಾಂ ಚ ಇತ್ಯೇವಂ ಸರ್ವಂ ಪರಮಾತ್ಮವಿಷಯತಯಾ ಯೋಜನೀಯಮ್ ॥

## ಅನುವಾದ

'ನಿನ್ನಂತಹ ಶಿಷ್ಯ ನನಗೆ ದೊರಕಲಿ' ಎಂದು ಒಂಭತ್ತನೆಯ ಮಂತ್ರದಲ್ಲಿ ಹೇಳಿದ ಮೋಕ್ಷಸ್ವರೂಪದ ಬಗ್ಗೆ ಕೇಳಲು ಅರ್ಹತೆ ನಚಿಕೇತನಲ್ಲಿದೆ ಎಂಬುದನ್ನು ಈ ಮಂತ್ರದಲ್ಲಿ ವಿವರಿಸುತ್ತಾನೆ.

ಕಾಮಸ್ಯಾಪ್ತಿಂ ಜಗತಃ....... ನಚಿಕೇತೋಽತ್ಯಸ್ರಾಕ್ಷೀಃ. ಕ್ರತೋಃ—ಕರ್ಮದ, ಪ್ರತಿಷ್ಠಾಮ್—ಫಲರೂಪವಾದ, ಜಗತಃ ಕಾಮಸ್ಯಾಪ್ತಿಮ್—ಚತುರ್ಮುಖಲೋಕದವರೆಗೂ ಇರುವ ಎಲ್ಲ ಲೋಕಗಳ ಸಂಬಂಧವುಳ್ಳ ಸ್ತ್ರೀ ಮುಂತಾದ ಭೋಗಪ್ರಾಪ್ತಿಯನ್ನೂ ನೋಡಿ, ಮೋಕ್ಷಸ್ವರೂಪವನ್ನು 'ಆನಂತ್ಯಮಭಯಸ್ಯ ಪಾರಮ್' ಮುಂತಾದವುಗಳಿಂದ ವಿವರಿಸುತ್ತಾನೆ. ಮೋಕ್ಷದಲ್ಲಿರುವ ನಾಶವಿಲ್ಲದಿರುವಿಕೆ; ಅತ್ಯಂತ ಭಯವಿಲ್ಲದಿರುವಿಕೆ ಅಪಹತಪಾಪ್ಮತ್ವ ಸತ್ಯಸಂಕಲ್ಪತ್ವ ಮುಂತಾದ ಹಿರಿದಾದ ಗುಣಗಳ ಸಮೂಹವನ್ನೂ ಅಧಿಕ ಕೀರ್ತಿಯನ್ನೂ, ಸ್ಥಿರತೆಯನ್ನೂ ನೋಡಿ, ಲೌಕಿಕವಾದ ಭೋಗಗಳನ್ನೂ (ಬುದ್ಧಿವಂತ) ಪ್ರಾಜ್ಞನಾದುದರಿಂದ ಬಿಟ್ಟಿರುವೆ ಎಂದರ್ಥ. ಅಥವಾ ಮೋಕ್ಷರೂಪವಾದ ಪರಮಾತ್ಮಸ್ವರೂಪದಲ್ಲಿಯೇ ಎಲ್ಲ ಭೋಗಗಳೂ ಉಂಟಾಗುತ್ತವೆ. ಅವನೇ ಎಲ್ಲದಕ್ಕೂ ಆಧಾರ ; ಉಪಾಸನೆಗೆ ಅನಂತವಾದ ಫಲವುಂಟು ಎಂಬುದೆಲ್ಲವನ್ನೂ ಪರಮಾತ್ಮಪರವಾಗಿ ಯೋಚಿಸಬೇಕು.

## ಭಾಷ್ಯಸಾರ

ನಚಿಕೇತನಲ್ಲಿ ಪ್ರಸನ್ನನಾದ ಯಮನು ನಚಿಕೇತನಲ್ಲಿರುವ ವೈರಾಗ್ಯವನ್ನು ಕಂಡು, ವಿರಕ್ತನಿಗೆ ಮಾತ್ರ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ ಎಂದು ತಿಳಿಸುತ್ತಾ ನಚಿಕೇತನನ್ನು ಪ್ರಶಂಸಿಸುತ್ತಾನೆ.

ನಚಿಕೇತನೇ ! ನೀನು ಧೀರ. ಅಂದರೆ ಇದು ಸಾರ ಇದು ಅಸಾರ. ಎಂದು ವಿವೇಚಿಸಬಲ್ಲ ಪ್ರಜ್ಞೆಯುಳ್ಳವನು. ಚತುರ್ಮುಖನ ಸ್ಥಾನದವರೆಗೂ ಇರುವುದೆಲ್ಲವೂ ಬ್ರಹ್ಮಾಂಡದಲ್ಲಿ ಅಡಗಿವೆ. ಇವು ಯಾಗಾದಿ ಕರ್ಮಗಳ ಫಲರೂಪವಾದುದು. ಇವು ದುಃಖದಿಂದ ಕೂಡಿವೆ. ದುಃಖವನ್ನೊಳಗೊಂಡಿವೆ. ಇವು ಶಾಶ್ವತವಲ್ಲ, ನಾಶವಾಗತಕ್ಕವು, ಈ ಎಲ್ಲ ದೋಷಗಳಿಂದ ಇವು ಅನಿತ್ಯವೆಂದು ತಿಳಿದಿರುವೆ. ಅಲೌಕಿಕವಾದ ಪರಮಪುರುಷಾರ್ಥವು ನಾಶರಹಿತ.

ಭಯರಹಿತ, ಇದರಿಂದ ಅಪಹತಪಾಪ್ಮತ್ವಾದಿ ಎಂಟು ಗುಣಗಳು ಆವಿರ್ಭವಿಸುತ್ತವೆ, ಇದರಿಂದ ಅಧಿಕ ಕೀರ್ತಿ ಉಂಟಾಗುತ್ತದೆ. ಇದು ಜನನ–ಮರಣರಹಿತವಾಗಿದೆ ಎಂಬ ಎಲ್ಲ ವಿಷಯಗಳನ್ನೂ ತಿಳಿದಿರುವೆ. ಈ ಸಾರಾಸಾರವಿವೇಕವುಳ್ಳವನಾದುದರಿಂದಲೇ ನಾನು ಕೊಡಲಿಚ್ಛಿಸಿದ ಭೋಗವಸ್ತುಗಳೆಲ್ಲವನ್ನೂ ತ್ಯಾಗಮಾಡಿರುವೆ. ಆದುದರಿಂದ ನೀನು ಧೀರ.

ಉಪಾಸನೆಯಿಂದ ಶಾಶ್ವತವಾದ ಮೋಕ್ಷ ಸಿಗುತ್ತದೆ. ಈ ಮೋಕ್ಷ ಸಿಕ್ಕಿದಲ್ಲಿ ಜಗತ್ತಿನಲ್ಲಿರುವುದೆಲ್ಲವೂ ಸಿಗುತ್ತವೆ. ಈ ವಿಷಯವನ್ನು ಸತ್ಯಕಾಮತ್ವ ಮುಂತಾದ ಗುಣಗಳ ಆವಿರ್ಭಾವದಿಂದ ಉಂಟಾದ ಚಿಂತನೆಯಿಂದ ತಿಳಿದು, ನಾನು ಕೊಡಲಿಚ್ಛಿಸಿದ ಭೋಗಗಳನ್ನು ತ್ಯಾಗಮಾಡಿರುವೆ. ಆದುದರಿಂದ ಧೀರನೆನಿಸಿರುವೆ ಎಂದೂ ಅನ್ವಯಮಾಡಬಹುದು ಎಂದು ರಾಮಾನಂದರು ತಿಳಿಸುತ್ತಾರೆ.

ಸುಬೋಧಿನೀಕಾರರು ' ಲೌಕಿಕವಾದ ಬಯಕೆಗಳ ಹೊಂದುವಿಕೆಯನ್ನೂ, ಜಗತ್ತಿನ ನಶ್ವರತೆಯನ್ನೂ ತಿಳಿದು, ಎಂಬುದರಿಂದ ಲೌಕಿಕ ಪ್ರಯೋಜನಗಳಲ್ಲಿರುವ ದೋಷವನ್ನು ಸೂಚಿಸುತ್ತದೆ. ಮಾನವರ ಸುಖ ಮುಂತಾದ ಲೌಕಿಕ ಪ್ರಯೋಜನಗಳೆಲ್ಲವೂ ಕೆಲವು ಕಾಲ ಮಾತ್ರ ಇರುವುದರಿಂದ ನಾಶವಾಗತಕ್ಕವು. ಜಗತ್ತಿನಲ್ಲಿ ಎಲ್ಲದಕ್ಕಿಂತ ಚತುರ್ಮುಖನ ಸ್ಥಾನವು ಶ್ರೇಷ್ಠವೆನಿಸಿದೆ. ಪ್ರಳಯದಲ್ಲಿ ಈ ಸ್ಥಾನವೂ ಅವನೊಡನೆ ನಾಶವಾಗುವುದು. ಆದುದರಿಂದ ಯಾವುದೇ ಭೋಗವೂ,ಬ್ರಹ್ಮಾದಿಸ್ತಂಬಪರ್ಯಂತವಾದ ಜಗತ್ತಿಗಿಂತಲೂ ವಿಶೇಷ ವಿಷಯವನ್ನೂ ಹೊಂದಿಲ್ಲ. ಎಲ್ಲವೂ ನಾಶವಾಗುತ್ತದೆ ಎಂಬುದೇ ' ಪ್ರತಿಷ್ಠಾ ' ಶಬ್ದದಿಂದ ತಿಳಿಯುತ್ತದೆ. ಬ್ರಹ್ಮಸ್ಥಾನವೇ ನಾಶವುಳ್ಳದ್ದು ಎಂದ ಮೇಲೆ ಇತರ ಲೌಕಿಕ ಪ್ರಯೋಜನಗಳಿಗೆ ನಾಶವಿಲ್ಲವೆಂದು ಹೇಗೆ ಹೇಳಲಾಗುವುದು ? ಎಂದು ತಾತ್ಪರ್ಯ.

ಅಥವಾ ಅಭಯದ ಎಲ್ಲೆಯೂ, ಪ್ರಶಂಸಾರ್ಹವಾದ ಸ್ವರೂಪವುಳ್ಳದ್ದೂ, ಮಹತ್ತೂ ಅತ್ಯಂತ ಕೀರ್ತಿಯುಳ್ಳದೂ, ನಾಶರಹಿತವೂ ಆದ ಅಲೌಕಿಕ ಪ್ರಯೋಜನವೆನಿಸಿದ ಮೋಕ್ಷ ಸ್ವರೂಪವನ್ನು ತಿಳಿದು ಲೌಕಿಕವಾದ ಭೋಗಗಳೆಲ್ಲವನ್ನೂ ತ್ಯಾಗಮಾಡಿರುವೆ ಎಂದರ್ಥ ' ಎಂದು ವಿವರಿಸಿರುವರು.



1. ಅನಿತ್ಯಮ್—' ಅನಿತ್ಯಃ ' ಎಂಬ ಪುಲ್ಲಿಂಗಕ್ಕೆ ಬದಲಾಗಿ ನಪುಂಸಕಲಿಂಗ ಛಾಂದಸ.

## ಮಂತ್ರ ೧೨

तं दुर्दर्शं गूढमनुप्रविष्टं गुहाहितं गह्वरेष्ठं पुराणम् ।
अध्यात्मयोगाधिगमेन देवं मत्वा धीरो हर्षशोकौ जहाति ।

ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಂ
ಗಹ್ವರೇಷ್ಠಂ ಪುರಾಣಮ್ ।
ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ
ಹರ್ಷಶೋಕೌ ಜಹಾತಿ ॥

### ಪ್ರತಿಪದಾರ್ಥ

**ಗೂಢಮ್**—ಯೋಗಮಾಯೆಯಿಂದ ಆವೃತನಾಗಿರುವ **ದುರ್ದರ್ಶಮ್**—(ಆದುದರಿಂದಲೇ)ನೋಡಲು ಅಸಾಧ್ಯನಾದ, **ಅನುಪ್ರವಿಷ್ಟಮ್**—ಎಲ್ಲವಸ್ತುಗಳಲ್ಲೂ ಪ್ರವೇಶಿಸಿರುವ, **ಗುಹಾಹಿತಮ್**—ಹೃದಯಗುಹೆಯಲ್ಲಿರುವ, **ಗಹ್ವರೇಷ್ಠಮ್**—ಅಂತರ್ಯಾಮಿಯಾದ, **ಪುರಾಣಮ್**—ಅನಾದಿಯಾದ, **ತಮ್**—ಆ, **ದೇವಮ್**—ಪರಮಾತ್ಮನನ್ನು, **ಅಧ್ಯಾತ್ಮಯೋಗಾಧಿಗಮೇನ**—ಚಿತ್-ಅಚಿತ್-ವಿವೇಕ ಜ್ಞಾನದಿಂದ, **ಮತ್ವಾ**—ತಿಳಿದು, **ಧೀರಃ**—ಧೀಮಂತನು, **ಹರ್ಷಶೋಕೌ**— ಸಂತೋಷ ಮತ್ತು ದುಃಖವನ್ನು, **ಜಹಾತಿ** - ಬಿಡುತ್ತಾನೆ.

### ತಾತ್ಪರ್ಯ

ಯೋಗಮಾಯೆಯಿಂದ ಗೂಢನಾಗಿಯೂ, ನೋಡಲು ಅಸಾಧ್ಯನಾಗಿಯೂ, ಎಲ್ಲ ಪ್ರಾಣಿಗಳಲ್ಲಿಯೂ ಪ್ರವೇಶಿಸಿರುವವನೂ, ಉಪಾಸಕನನ್ನು ಅನುಗ್ರಹಿಸಲು ಹೃದಯಗುಹೆಯಲ್ಲಿ ನೆಲೆಸಿರುವವನೂ, ಅಂತರ್ಯಾಮಿಯೂ, ಅನಾದಿಯೂ ಆದ ಪರಮಾತ್ಮನನ್ನು ಅಚಿದ್ವಿಲಕ್ಷಣ ಜೀವೇಶ್ವರ ವಿವೇಕದಿಂದ ಚೆನ್ನಾಗಿ ಅರಿತು, ಜ್ಞಾನಿಯಾದವನು ಸುಖದುಃಖಗಳಿಂದ ಪಾರಾಗುತ್ತಾನೆ. ಅಂದರೆ ಆತ್ಯಂತಿಕದುಃಖನಿವೃತ್ತಿಪೂರ್ವಕವಾದ ಪರಮಾತ್ಮಾನುಭವದಿಂದ ಉಂಟಾದ ಪರಮಾನಂದರೂಪವಾದ ಮೋಕ್ಷವನ್ನು ಪಡೆಯುತ್ತಾನೆ।

### ರಂಗರಾಮಾನುಜಭಾಷ್ಯಮ್

ತೃತೀಯಂ ಪ್ರಶ್ನಂ ಪ್ರತಿವಕ್ತಿ—ತಂ ದುರ್ದರ್ಶಮ್ ಇತ್ಯಾದಿನಾ ಮಂತ್ರದ್ವಯೇನ, **ದುರ್ದರ್ಶಮ್**— 'ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ' (ಕ.ಉ. 2-7) ಇತ್ಯುಕ್ತ ರೀತ್ಯಾ ದ್ರಷ್ಟುಮಶಕ್ಯಮ್, **ಗೂಢಮ್**—ತಿರೋಧಾಯಕಕರ್ಮರೂಪಾವಿದ್ಯಾತಿರೋಹಿತಮ್, ಸರ್ವಭೂತಾನುಪ್ರವಿಷ್ಟಮ್, **ಗುಹಾಹಿತಮ್** — ಹೃದಯಗುಹಾವರ್ತಿನಮ್, **ಗಹ್ವರೇಷ್ಠಮ್**—ಆತ್ಮಾಂತರ್ಯಾಮಿಣಮ್, **ಪುರಾಣಮ್**—ಅನಾದಿಮ್, **ಅಧ್ಯಾತ್ಮಯೋಗಾಧಿಗಮೇನ**— ವಿಷಯೇಭ್ಯಃ ಪ್ರತಿಸಂಹೃತ್ಯ ಚೇತಸ ಆತ್ಮನಿ ಸಮಾಧಾನಮಧ್ಯಾತ್ಮಯೋಗಃ, 'ಯಚ್ಛೇದ್ವಾಙ್ಮನಸೀ ಪ್ರಾಜ್ಞಃ' (ಕ.ಉ. 3-13), 'ಯದಾ, ಪಂಚಾವತಿಷ್ಠಂತೇ

ಜ್ಞಾನಾನಿ ಮನಸಾ ಸಹ ' (ಕ.ಉ. 6–10) ಇತ್ಯಾದಿನಾ ವಕ್ಷ್ಯಮಾಣಃ । ತೇನ ಯೋಽಯಮಧಿಗಮಃ ಜೀವಾತ್ಮಜ್ಞಾನಮ್, ತೇನ ಹೇತುನಾ ದೇವಂ ಪರಮಾತ್ಮಾನಂ ಮತ್ವಾ—ಧ್ಯಾತ್ವಾ ಇತ್ಯರ್ಥಃ । ಜೀವಾತ್ಮಜ್ಞಾನಸ್ಯ ಪರಮಾತ್ಮಜ್ಞಾನಹೇತುತ್ವಾದಿತಿ ಭಾವಃ । ಹರ್ಷಶೋಕೌ—ವಿಷಯಲಾಭಾಲಾಭಪ್ರಯುಕ್ತಹರ್ಷಶೋಕೌ ಜಹಾತೀತ್ಯರ್ಥಃ ॥

## ಅನುವಾದ

'ತಂ ದುರ್ದರ್ಶಮ್....' ಮೊದಲಾದ ಎರಡು ಮಂತ್ರಗಳಿಂದ ಮೂರನೆಯ ಪ್ರಶ್ನೆಗೆ ಉತ್ತರಿಸುತ್ತಾನೆ.

**ದುರ್ದರ್ಶಮ್**—ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಎಂಬ ವಚನಾನುಸಾರ ಅನೇಕರಿಂದ ಎಷ್ಟು ಕೇಳಿದರೂ ತಿಳಿಯಲಾರನು ಎಂಬಂತೆ ನೋಡಲಶಕ್ಯನು, **ಗೂಢಮ್**—ಮರೆಸುವ ಕರ್ಮರೂಪ ಅವಿದ್ಯೆಯಿಂದ ಮರೆಸಲ್ಪಟ್ಟ ಎಲ್ಲ ವಸ್ತುಗಳಲ್ಲೂ ಜೀವನೊಡನೆ ಪ್ರವೇಶಿಸಿರುವ, **ಗುಹಾಹಿತಮ್**—ಹೃದಯಗುಹೆಯಲ್ಲಿ ನೆಲೆಸಿರುವ, **ಗಹ್ವರೇಷ್ಠಮ್**—ಅಂತರ್ಯಾಮಿಯಾಗಿರುವ, **ಪುರಾಣಮ್**—ಅನಾದಿಯಾದ, **ಅಧ್ಯಾತ್ಮಯೋಗಾಧಿಗಮೇನ**—ವಿಷಯಸುಖಗಳಿಂದ ಮನಸ್ಸನ್ನು ಹಿಂತಿರುಗಿಸಿ ಆತ್ಮನಲ್ಲಿ ನೆಲೆಗೊಳಿಸುವುದು ಅಧ್ಯಾತ್ಮಯೋಗ. ಪ್ರಾಜ್ಞನಾದವನು ಮಾತನ್ನು ಮನಸ್ಸಿನಲ್ಲಿ ನೆಲೆಗೊಳಿಸಬೇಕು. ಐದು ಜ್ಞಾನೇಂದ್ರಿಯಗಳು ಯಾವಾಗ ಮನಸ್ಸಿನೊಡನೆ ಬ್ರಹ್ಮದ ಅಭಿಮುಖವಾಗುವುದೋ ಆಗ ಬ್ರಹ್ಮಕ್ಕೆ ವಿರುದ್ಧವಾಗಿ ವರ್ತಿಸುವುದಿಲ್ಲ ' ಎಂದು ಮುಂದೆ ತಿಳಿಸುವಂತೆ ಆತ್ಮವಿಷಯದಲ್ಲಿ ನೆಲೆಗೊಳಿಸುವುದು. ಇದರಿಂದ ಉಂಟಾಗುವ ಜೀವಾತ್ಮಜ್ಞಾನ ಅಧ್ಯಾತ್ಮಯೋಗಾಧಿಗಮ. ಇದರಿಂದ **ದೇವಮ್**—ಪರಮಾತ್ಮನನ್ನು **ಮತ್ವಾ**—ಧ್ಯಾನಿಸಿ ಎಂದರ್ಥ. ಪರಮಾತ್ಮ ಜ್ಞಾನಕ್ಕೆ ಜೀವಾತ್ಮ ಜ್ಞಾನ ಕಾರಣವಾಗಿದೆ. **ಹರ್ಷಶೋಕೌ**—ವಿಷಯಗಳ ಲಾಭ-ಅಲಾಭಗಳನ್ನು ಬಿಡುತ್ತಾನೆ. ಅಂದರೆ ಹರ್ಷಶೋಕಗಳಿಂದ ಪಾರಾಗುತ್ತಾನೆ ಎಂದು ತಾತ್ಪರ್ಯ.

## ಭಾಷ್ಯಸಾರ

ಯಮನು ನಚಿಕೇತನ ಮೋಕ್ಷಾಭಿಲಾಷೆಯನ್ನು ತಿಳಿದು, ಅವನ ಮೋಕ್ಷಾಧಿಕಾರವನ್ನು ಹಿಂದಿನ ಮಂತ್ರದಲ್ಲಿ ಹೊಗಳಿದನು. ಅವನು ' ಯೇಯಂ ಪ್ರೇತೇ ' ಎಂಬ ಮಂತ್ರದಲ್ಲಿ ಕೇಳಿದ ಮುಕ್ತಿಸ್ವರೂಪವನ್ನು ' ತಂ ದುರ್ದರ್ಶಮ್ ' ಎಂಬ ಈ ಮಂತ್ರದಲ್ಲಿ ವಿವರಿಸುತ್ತಾನೆ.

ಹಿಂದೆ 'ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ' (ಕ. ಉ. 2–7) ಎಂಬುದರಿಂದ ಆತ್ಮವಿಷಯವನ್ನು ತಿಳಿಯುವುದು (ಪಡೆಯುವುದು) ಕಷ್ಟ ಎಂದು ಹೇಳಿದೆ. ಅದರಂತೆ ಈ ಪರಮಾತ್ಮನು ಸುಲಭವಾಗಿ ನೋಡಲು ಅಶಕ್ಯನು. ಕಷ್ಟಸಾಧ್ಯವಾದ ಯೋಗದಿಂದ ನೋಡಬಹುದು. ಇತರ ಉಪಾಯಗಳಿಂದ ನೋಡಲು ಸಾಧ್ಯವಿಲ್ಲ. ಅಂದರೆ ಕೆಲವರು ಮಾತ್ರ ನೋಡಬಹುದು ಎಂದು ತಾತ್ಪರ್ಯ. ಇದಕ್ಕೇನು ಕಾರಣ ? ಆತನು ಕರ್ಮರೂಪವಾದ ಅವಿದ್ಯೆಯಿಂದ ಮರೆಸಲ್ಪಟ್ಟಿದ್ದಾನೆ ಅಥವಾ ದಿವ್ಯವಾದ, ಗುಣರೂಪವಾದ ಮಾಯೆಯಿಂದ ಮರೆಸಲ್ಪಟ್ಟಿದ್ದಾನೆ ಎಂದು ತಾತ್ಪರ್ಯ. ಈತನು ಅಂತರ್ಯಾಮಿಯಾಗಿ ಎಲ್ಲ ವಸ್ತುಗಳಲ್ಲಿಯೂ ಜೀವನೊಡನೆ ಪ್ರವೇಶಿಸಿರುವನು, ಎಲ್ಲರ ಹೃದಯಾಕಾಶದಲ್ಲಿಯೂ ತನ್ನ ಸ್ವರೂಪದಿಂದಲೂ ನೆಲೆಸಿರುವನು. ' ಅಕ್ಷರೇ ಪರಮೇ ವ್ಯೋಮನ್ ' (ತೈ. ನಾ. 2) ಎಂಬ ಶ್ರುತಿಯಲ್ಲಿ ' ನಾಶ

ರಹಿತವಾದ ಹೃದಯಾಕಾಶದಲ್ಲಿ ನೆಲೆಸಿರುವನು ' ಎಂದು ಹೇಳಿರುವಂತೆ ಪ್ರವೇಶಿಸಲು ಅಸಾಧ್ಯವಾದ ಸ್ಥಾನ ಗಹ್ವರ. ಅಂದರೆ ಪರಮಪದ, ಅಲ್ಲಿ ನೆಲೆಸಿರುವನು.

ಅಥವಾ ಪರಿಶುದ್ಧವಾದ ಅಣುಸ್ವರೂಪನಾದ ಜೀವನಲ್ಲಿ ಅಂತರ್ಯಾಮಿಯಾಗಿರುವನು. ಇವನು ಅನಾದಿ ಅಥವಾ ಕಾರಣ ಸ್ವರೂಪನು. ಕಾರ್ಯವು ನವೀನವಾದುದು. ಕಾರಣ ಪುರಾತನವಾದುದು. ವೇದಗಳಲ್ಲಿ ಪ್ರಸಿದ್ಧನಾದವನು ಇವನು. ' ತಸ್ಯ ಭಾಸಾ ಸರ್ವಮಿದಂ ವಿಭಾತಿ ' ಅಂದರೆ ಅವನ ಪ್ರಕಾಶದಿಂದಲೇ ಇತರ ಎಲ್ಲ ವಸ್ತುಗಳೂ ಪ್ರಕಾಶಿಸುತ್ತವೆ ಎಂದು ಶ್ರುತಿಯಲ್ಲಿ ಹೇಳಿರುವಂತೆ ಅತ್ಯಂತ ಪ್ರಕಾಶವಿಶಿಷ್ಟನು. ಈವರೆಗೂ ಹೀಗೆ ಉಪೇಯಸ್ವರೂಪವನ್ನು ಉಪದೇಶಿಸಿದನು.

ಮುಂದೆ 'ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ' ಎಂಬುದರಿಂದ ಉಪಾಯ ಸ್ವರೂಪವನ್ನು ಉಪದೇಶಿಸುತ್ತಾನೆ—ಮನಸ್ಸನ್ನು ಬಾಹ್ಯವಿಷಯಗಳಿಂದ ತಿರುಗಿಸಿ ಆತ್ಮಸ್ವರೂಪದಲ್ಲಿ ನೆಲೆಗೊಳಿಸುವುದು ಅಂದರೆ ಪರಮಾತ್ಮನೊಬ್ಬನನ್ನೇ ಕುರಿತ ಚಿಂತನೆ ಅಧ್ಯಾತ್ಮಯೋಗ. ಇದನ್ನು ಪಡೆಯುವುದು ಅಥವಾ ಇದರಿಂದ ಪ್ರಕೃತಿವಿಲಕ್ಷಣನೂ, ಪರಿಶುದ್ಧನೂ ಆದವನು ಜೀವಾತ್ಮ ಎಂಬ ಜ್ಞಾನ, ಪರಮಾತ್ಮಶೇಷತ್ವೇನಸ್ವಸ್ವರೂಪ ಸಾಕ್ಷಾತ್ಕಾರವಾದ ನಂತರ ತನಗೆ ಶೇಷಿಯಾದ ಪರಮಾತ್ಮವಿಷಯಕ ಅಷ್ಟಾಂಗಯೋಗವು ಅಧ್ಯಾತ್ಮಯೋಗ ಎಂದು ವಿವರಿಸಲ್ಪಡುತ್ತದೆ. ಇದರಿಂದ ಪರಮಾತ್ಮದರ್ಶನ ಎಂದು ತಾತ್ಪರ್ಯ. ಇದು ಪರಮಾತ್ಮನ ಉಪಾಸನೆಗೆ ಅಂಗ. ಈ ಆತ್ಮಾವಲೋಕನಪೂರ್ವಕವಾಗಿ ಪರಮಾತ್ಮನ ಉಪಾಸನೆ ಮಾಡಬೇಕು. ಈ ವಿಷಯದಲ್ಲಿ ದೇಹತ್ರಯವಿಲಕ್ಷಣ[1]ನೂ ತನಗೆ ಅಂತರ್ಯಾಮಿಯೂ ಆಗಿರುವ ಬ್ರಹ್ಮಸ್ವರೂಪವನ್ನು ಅರಿತು ಕೃಷ್ಣನಲ್ಲಿ ಯಾವಾಗಲೂ ಭಕ್ತಿಯನ್ನು ಮಾಡಬೇಕು[2] ಎಂದು ಪರಮಾತ್ಮನ ಮಾತು ಪೋಷಕವಾಗಿದೆ. ಕೆಲವರು ಜೀವಾತ್ಮವಿಷಯವಾದ ಯೋಗಮೂಲಕವಾಗಿ ಪರಮಾತ್ಮನನ್ನು ಮನನ ಮಾಡಿ ಎಂದು ಅರ್ಥ ಮಾಡಿದ್ದಾರೆ. ಪರಿಶುದ್ಧ ಜೀವಾತ್ಮಜ್ಞಾನಪೂರ್ವಕವಾಗಿ ಪರಮಾತ್ಮನನ್ನು ನಿದಿಧ್ಯಾಸನ, ವೇದನ ಮುಂತಾದ ಶಬ್ದಗಳಿಂದ ಹೇಳಲ್ಪಡುವ ಸಾಕ್ಷಾತ್ಕಾರವು ಮೋಕ್ಷಕ್ಕೆ ಉಪಾಯ ಎಂದು ತಾತ್ಪರ್ಯ. ಹೀಗೆ ಉಪಾಯಸ್ವರೂಪವನ್ನು ಉಪದೇಶಿಸಿದನು.

ಹೀಗೆ ಉಪಾಯಸ್ವರೂಪವನ್ನು ಹೇಳಿ ಫಲಸ್ವರೂಪವನ್ನು ಉಪದೇಶಿಸುತ್ತಾನೆ. ಪರಮಾತ್ಮಸಾಕ್ಷಾತ್ಕಾರ ಪಡೆದ ಧೀರನು ವಿಷಯ ಸುಖದ ಸಂಬಂಧದಿಂದ ಉಂಟಾಗುವ ಹರ್ಷಶೋಕಾದಿಗಳಿಂದ ಪಾರಾಗುತ್ತಾನೆ. ವಿಷಯಲಾಭದಿಂದ ಉಂಟಾಗುವುದು ಸುಖ–ಹರ್ಷ, ವಿಷಯದ ಅಲಾಭದಿಂದ ಉಂಟಾಗುವುದು ದುಃಖಶೋಕ, ವಿವೇಕಿಯಾದವನು ವಿಷಯದ ಲಾಭಾಲಾಭಗಳಿಂದ ಉಂಟಾಗುವ ಸುಖ–ದುಃಖಗಳಿಗೆ ಒಳಗಾಗುವುದಿಲ್ಲ, ಅಂದರೆ ಈ ಸುಖ–ದುಃಖಗಳಿಂದ ಸಂಪೂರ್ಣವಾಗಿ ಪಾರಾಗುತ್ತಾನೆ. ಪರಮಾತ್ಮಾನುಭವದ ಸಹಕಾರದಿಂದ ಅತ್ಯಂತ ಆನಂದಾನುಭವರೂಪವಾದ ಮೋಕ್ಷವನ್ನು ಪಡೆಯುತ್ತಾನೆ ಎಂದು ತಾತ್ಪರ್ಯ. ಇದರಿಂದ ಫಲವು ಉಪದೇಶಿಸಲ್ಪಟ್ಟಿತು.

ಸುಬೋಧಿನೀಕಾರರು ' ತಮ್.......ಗಹ್ವರೇಷ್ಠಂಪುರಾಣಮ್ । ಅಧ್ಯಾತ್ಮಯೋಗಾಧಿಗಮೇನ ದೇವಮ್...... ' । ಎಂಬಲ್ಲಿ ' ತಂ ಪುರಾಣಂ ದೇವಮ್ ' ಎಂದೂ ಅನ್ವಯಿ

1. ನಿಜಾತ್ಮಾನಂ ಬ್ರಹ್ಮರೂಪಂ ದೇಹತ್ರಯವಿಲಕ್ಷಣಮ್ ।

2. ವಿಭಾವ್ಯತ್ವೇನ ಕರ್ತವ್ಯಾ ಭಕ್ತಿಃ ಕೃಷ್ಣಸ್ಯ ಸರ್ವದಾ ।

ಮಾಡಬಹುದು ವಸ್ತುತಃ ಬ್ರಹ್ಮ-ರುದ್ರಾದಿಗಳಲ್ಲೂ ' ದೇವಾಃ ' ಎಂಬ ಪ್ರಯೋಗವಿದೆ. ಹೆಸರಿಗೆ ಮಾತ್ರ ಹೇಳುವ ವಿಷಯವಿದು. ಅವರು ನವೀನರು, 'ನಾರಾಯಣನಿಂದ ಬ್ರಹ್ಮ ಜನಿಸುತ್ತಾನೆ. ನಾರಾಯಣನಿಂದ ಇಂದ್ರ ಜನಿಸುತ್ತಾ[1]ನೆ ' ಎಂದು ಪುರಾಣನಾದ ದೇವನೆಂದರೆ ನಾರಾಯಣನೊಬ್ಬನೇ ಎಂದು ವಿವರಿಸಿರುವರು ಮತ್ತು ' ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ' ಎಂಬುದಕ್ಕೆ ಯೋಗಸಿದ್ಧಿಯಿಂದ ಅಂದರೆ ಯೋಗದೃಷ್ಟಿಯಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಎಂದು ಕೆಲವರು ಅರ್ಥಮಾಡುತ್ತಾರೆ ಎಂದು ವಿವರಿಸಿರುವರು,

ರಾಮಾನಂದರು—' ಗಹ್ವರೇಷ್ಠಮ್ ' ಎಂಬುದಕ್ಕೆ ರಾಗದ್ವೇಷಾದಿಗಳಿಂದ ಕಷ್ಟಮಯವಾದ ಅಂತಃಕರಣದಲ್ಲಿ ನೆಲೆಸಿರುವನು ಎಂದೂ ಅರ್ಥಮಾಡಿರುವರು.



1. 'ನಾರಾಯಣಾದ್ ಬ್ರಹ್ಮಾ ಜಾಯತೇ,..ನಾರಾಯಣಾದಿಂದ್ರೋ ಜಾಯತೇ' (ನಾ.ರಾ.ಉ.1)

## ಮಂತ್ರ ೧೩

**एतच्छ्रुत्वा सम्परिगृह्य मर्त्यः प्रवृह्य धर्म्यमणुमेतमाप्य ।**
**स मोदते मोदनीयँ हि लब्ध्वा विवृतँ सद्म नचिकेतसं मन्ये ॥**

ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯಧರ್ಮ್ಯಮಣು
ಮೇತಮಾಪ್ಯ ।
ಸ ಮೋದತೇ ಮೋದನೀಯಂ ಹಿ ಲಬ್ಧ್ವಾ ವಿವೃತಂ ಸದ್ಮ
ನಚಿಕೇತಸಂ ಮನ್ಯೇ ॥

### ಪ್ರತಿಪದಾರ್ಥ

ಮರ್ತ್ಯಃ—ಮನುಷ್ಯನು, ಏತತ್—ಈ (ಪರಮಾತ್ಮತತ್ತ್ವವನ್ನು), ಶ್ರುತ್ವಾ—(ಗುರುಮುಖೇನ) ಕೇಳಿ, ಸಂಪರಿಗೃಹ್ಯ—(ಅನಂತರ)ಚೆನ್ನಾಗಿ ಮನನಮಾಡಿ, ಧರ್ಮ್ಯಮ್—ಕರ್ಮಸಾಧ್ಯವಾದ ಶರೀರವನ್ನು, ಪ್ರವೃಹ್ಯ—ಬೇರ್ಪಡಿಸಿ, ಅಣುಮ್—ಸೂಕ್ಷ್ಮನಾದ, ಏತಮ್—ಇವನನ್ನು (ಪರಮಾತ್ಮನನ್ನು), ಆಪ್ಯ—ಹೊಂದಿ, ಸಃ—ಆ (ಮನುಷ್ಯನು), ಮೋದನೀಯಮ್—ಪ್ರೀತಿಗೆ ಪಾತ್ರವಾದ ಅಪಹತಪಾಪ್ಮತ್ವಾದಿ ಸ್ವಸ್ವರೂಪಾವಿರ್ಭಾವವನ್ನು, ಲಬ್ಧ್ವಾ—ಪಡೆದು, ಮೋದತೇ—ಸಂತೋಷಪಡುತ್ತಾನೆ, ನಚಿಕೇತಸಂ(ಪ್ರತಿ)—ಶಿಷ್ಯನನ್ನು ಕುರಿತು, ಸದ್ಮ—ಪರಮಪದವು, ವಿವೃತಮ್—ತೆರೆದಿದೆಎಂದು, ಮನ್ಯೇ—ತಿಳಿಯುತ್ತೇನೆ.

### ತಾತ್ಪರ್ಯ

ಮನುಷ್ಯನು ಪರಮಾತ್ಮ ತತ್ತ್ವವನ್ನು ಆಚಾರ್ಯರ ಉಪದೇಶದಿಂದ ಕೇಳಬೇಕು, ನಂತರ ಅದನ್ನು ಮನನ ಮಾಡಬೇಕು, ಅನಂತರ ಕರ್ಮದಿಂದ ಲಭ್ಯವಾದ ಶರೀರವನ್ನು ತ್ಯಾಗ ಮಾಡಬಲ್ಲನು. ಆಗ ಅಣುವಾಗಿ ಸೂಕ್ಷ್ಮನಾದ ಪರಮಾತ್ಮನನ್ನು ಹೊಂದುತ್ತಾನೆ. ಮನುಷ್ಯನು ಪ್ರೀತಿಗೆ ವಿಷಯವಾದ ಅಪಹತಪಾಪ್ಮತ್ವ ಮುಂತಾದ ಗುಣಗಳನ್ನು ಪಡೆದುಕೊಂಡು ಸಂತೋಷಪಡುತ್ತಾನೆ. ಶಿಷ್ಯನಾದ ನಚಿಕೇತನೇ, ನಿನಗೆ ಮೋಕ್ಷದ ಬಾಗಿಲು ತೆರೆದಿದೆ ಎಂದು ತಿಳಿಯುತ್ತೇನೆ.

### ರಂಗರಾಮಾನುಜಭಾಷ್ಯಮ್

ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ । ಏತತ್—ಆತ್ಮತತ್ತ್ವಂ ಶ್ರುತ್ವಾ, ಸಂಪರಿಗೃಹ್ಯ—ಮನನಾದಿಕಂ ಕೃತ್ವಾ ಇತ್ಯರ್ಥಃ । ಪ್ರವೃಹ್ಯ ಧರ್ಮ್ಯಮ್—ಕರ್ಮಸಾಧ್ಯಂ ಶರೀರಾದಿ ಪ್ರವೃಹ್ಯ—ಪೃಥಕ್ಕೃತ್ಯ ಪರಿತ್ಯಜ್ಯೇತ್ಯರ್ಥಃ । ಅಣುಮೇತಮಾಪ್ಯ । ಏತಮ್—ಸ್ವಾತ್ಮಭೂತಮ್ । ಅಣುಮ್—ಸೂಕ್ಷ್ಮತಯಾ ಚಕ್ಷುರಾದ್ಯಗೋಚರಮ್, 'ಅಣೀಯಾನ್ ಹ್ಯತರ್ಕ್ಯಮ್' ಇತಿ ನಿರ್ದಿಷ್ಟಂ ಪರಮಾತ್ಮಾನಂ, ದೇಶವಿಶೇಷೇ ಪ್ರಾಪ್ಯ । ಸ ಮೋದತೇ ಮೋದನೀಯಂ ಹಿ ಲಬ್ಧ್ವಾ, ಸಃ—ವಿದ್ವಾನ್, ಮೋದನೀಯಮ್—ಪ್ರೀತಿವಿಷಯಮಪಹತಪಾಪ್ಮತ್ವಾದಿಗುಣಾಷ್ಟಕವಿಶಿಷ್ಟಂ ಸ್ವಸ್ವರೂಪಂ ಲಬ್ಧ್ವಾ, ಮೋದತೇ—ಆನಂದೀ ಭವತೀತ್ಯರ್ಥಃ ।

'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ. ಸ ತತ್ರ ಪರ್ಯೇತಿ ಜಕ್ಷತ್ ಕ್ರೀಡನ್ ರಮಮಾಣಃ' (ಛಾಂ. ಉ. 8–3–4) ಇತಿ ಶ್ರುತ್ಯರ್ಥೋಽತ್ರಾನುಸಂಧೇಯಃ । ಏವಂ ಪ್ರಶ್ನಸ್ಯೋತ್ತರಮುಕ್ತ್ವಾ, ನಚಿಕೇತಸಂ ಮೋಕ್ಷಾರ್ಹತ್ವೇನ ಸ್ತೌತಿ—ವಿವೃತಂ ಸದ್ಮ ನಚಿಕೇತಸಂ ಮನ್ಯೇ । ನಚಿಕೇತಸಂ ಪ್ರತಿ, ಬ್ರಹ್ಮರೂಪಂ ಸದ್ಮ— ಧಾಮ, ವಿವೃತದ್ವಾರಂ ಪ್ರವೇಶಾರ್ಹಂ, ಮನ್ಯೇ ಇತ್ಯರ್ಥಃ । 'ತಸ್ಯೈಷ ಆತ್ಮಾ ವಿಶತೇ (ತಿ) ಬ್ರಹ್ಮಧಾಮ' (ಮುಂ.ಉ. 3–2–4) ಇತಿ ಶ್ರುತೇಃ ।

ನನು 'ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' ಇತಿ ಶ್ರುತ್ಯೈಕಾರ್ಥ್ಯಾಯ, 'ಅಧ್ಯಾತ್ಮ ಯೋಗಾಧಿಗಮೇನ ದೇವಂ ಮತ್ವಾ' ಇತ್ಯತ್ರಾಪಿ, ಪರಮಾತ್ಮಾತ್ಮಕಜೀವ ಏವ ಪ್ರತಿಪಾದ್ಯತಾಮ್ । ತತಶ್ಚ, 'ತಂ ದುರ್ದರ್ಶಮ್' ಇತಿ ಪೂರ್ವಖಂಡೋಽಪಿ, ಜೀವಪರ ಏವಾಸ್ತು । ತತಶ್ಚ 'ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ' ಇತಿ ಪೂರ್ವಸಂದರ್ಭೋಽಪಿ, ಪರಿಶುದ್ಧ ಜೀವಸ್ವರೂಪ ಪರ ಏವಾಸ್ತು । ತತಶ್ಚ

'ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್'
(ಭ.ಗೀ. 2–29)

ಇತಿ ಪರಿಶುದ್ಧಾತ್ಮವಿಷಯಗೀತಾವಚನೈಕಾರ್ಥ್ಯಮಪ್ಯುಪಪದ್ಯತ ಇತಿ ಚೇತ್ — ನ; 'ಬ್ರಹ್ಮಜಜ್ಞಮ್' ಇತಿ ಮಂತ್ರೇ ಬ್ರಹ್ಮಜತ್ವರೂಪಪ್ರಕ್ರಮಶ್ರುತಜೀವಲಿಂಗಬಲೇನ ಚರಮಶ್ರುತದೇವಶಬ್ದಸ್ಯ ದೇವಾತ್ಮಕತ್ವರೂಪಾರ್ಥಾಶ್ರಯಣೇಽಪಿ, 'ತಂ ದುರ್ದರ್ಶಮ್' ಇತಿ ಮಂತ್ರೇ ತಾದೃಶಜೀವಲಿಂಗಾಭಾವೇನ, 'ದೇವಮಿತ್ಯಸ್ಯ ದೇವಾತ್ಮಕಮಿತ್ಯರ್ಥಾಶ್ರಯಣಾಯೋಗಾತ್ । ಏತದೇವ ಅಭಿಪ್ರೇತ್ಯ ಭಗವತಾ ಭಾಷ್ಯಕೃತಾ—'ಗುಹಾಂ ಪ್ರವಿಷ್ಟೌ....' (ಬ್ರ.ಸೂ. 1–2–11) ಇತಿ ಸೂತ್ರೇ, 'ಪರಮಾತ್ಮನಸ್ತಾವತ್ 'ತಂ ದುರ್ದರ್ಶಂ ಗೂಢಮನುಪ್ರವಿಷ್ಟಮ್' ಇತಿ ಗುಹಾಪ್ರವೇಶೋ ದೃಶ್ಯತೇ' ಇತ್ಯುಕ್ತಮ್ । ತಥೈವಾಯಂ ಮಂತ್ರಃ ಪರಮಾತ್ಮಪರತಯಾ ವ್ಯಾಸಾರ್ಯೈರಪಿ ವಿವೃತಃ । 'ಗಹ್ವರೇಷ್ಠಮ್' ಇತಿ ಪದೇನ ತು, ಪರಮಾತ್ಮನಃ ಗಹ್ವರಶಬ್ದಿತದುರ್ವಿಜ್ಞೇಯಪರಿಶುದ್ಧಾತ್ಮಸ್ವರೂಪಶರೀರಕತ್ವಮಪ್ಯುಕ್ತಮ್। ಇಯಾಂಸ್ತು ವಿಶೇಷಃ—'ಬ್ರಹ್ಮಜಜ್ಞಮ್'ಇತಿ ಮಂತ್ರೇ ಪರಮಾತ್ಮಾತ್ಮಕ ಪರಿಶುದ್ಧ ಜೀವಸ್ವರೂಪಂ ಪ್ರತಿಪಾದ್ಯತೇ ; 'ತಂ ದುರ್ದರ್ಶಮ್' ಇತಿ ಮಂತ್ರೇ ತು–ಜೀವಶರೀರಕ ಪರಮಾತ್ಮಸ್ವರೂಪಂ ಪ್ರತಿಪಾದ್ಯತೇ ಇತಿ, ನ ತಯೋಃ ಐಕಾರ್ಥ್ಯಹಾನಿಃ ॥

## ಅನುವಾದ

ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ । ಏತತ್—ಆತ್ಮತತ್ತ್ವವನ್ನು ಕೇಳಿ, ಸಂಪರಿಗೃಹ್ಯ—ಮನನಾದಿಗಳನ್ನು ಮಾಡಿ, ಪ್ರವೃಹ್ಯ ಧರ್ಮ್ಯಮ್—ಕರ್ಮಸಾಧ್ಯವಾದ ಶರೀರ ಮುಂತಾದವುಗಳನ್ನು ಪ್ರವೃಹ್ಯ—ಬೇರೆಮಾಡಿ ಅಂದರೆ ಬಿಟ್ಟು, ಅಣುಮೇತಮಾಪ್ಯ । ಏತಮ್—ತನಗೆ ಆತ್ಮವಾದ, ಅಣುಮ್—ಸೂಕ್ಷ್ಮವಾದುದರಿಂದ ಕಣ್ಣು ಮುಂತಾದವುಗಳಿಗೆ ಕಾಣಿಸದ, 'ಬಹಳ ಸೂಕ್ಷ್ಮವಾದುದರಿಂದ ತರ್ಕಕ್ಕೆ ಸಿಲುಕದವನು' ಎಂದು ಹೇಳಿದ ಪರಮಾತ್ಮನನ್ನು, ಪರಮಪದದಲ್ಲಿ ಪಡೆದು, ಸ ಮೋದತೇ ಮೋದನೀಯಂ ಹಿ ಲಬ್ಧ್ವಾ । ಸಃ—ಜ್ಞಾನಿಯಾದವನು ಮೋದನೀಯಮ್—ಪ್ರೀತಿ ವಿಷಯವಾದ ಅಪಹತಪಾಪ್ಮತ್ವ ಮುಂತಾದ ಎಂಟುಗುಣಗಳಿಂದ ಕೂಡಿದ ತನ್ನ ಸ್ವರೂಪವನ್ನುಪಡೆದು, ಮೋದತೇ—

ಆನಂದಿಸುತ್ತಾನೆ. 'ಈ ಜೀವಾತ್ಮನು ಶರೀರವನ್ನು ಬಿಟ್ಟು ನಂತರ ಪರಮಾತ್ಮನನ್ನು ಸೇರಿ ಅಪಹತಪಾಪ್ಮತ್ವಾದಿ ಬ್ರಹ್ಮಗುಣಗಳನ್ನು ಹೊಂದುತ್ತಾನೆ. ಅವನು ಪರಮಪದದಲ್ಲಿ ಲೀಲಾ ವಿಭೂತಿಯಲ್ಲಿರುವುದೆಲ್ಲವನ್ನೂ ಬ್ರಹ್ಮಾತ್ಮಕವಾಗಿ ಅನುಭವಿಸುತ್ತಾ ಪರಮಾತ್ಮನನ್ನು ಎಲ್ಲ ವಿಧದಿಂದಲೂ ಅನುಭವಿಸುತ್ತಾನೆ ಎಂಬ ಶ್ರುತಿಯ ಅರ್ಥವನ್ನು ಅನುಸಂಧಾನ ಮಾಡಬೇಕು.

ಹೀಗೆ ನಚಿಕೇತನ ಪ್ರಶ್ನೆಗೆ ಉತ್ತರಿಸಿ ನಚಿಕೇತನು ಮೋಕ್ಷಕ್ಕೆ ಅರ್ಹನು ಎಂದು ಪ್ರಶಂಸಿಸುತ್ತಾನೆ. 'ವಿವೃತಂ ಸದ್ಮ ನಚಿಕೇತಸಂ ಮನ್ಯೇ' ನಚಿಕೇತನಿಗೆ ಬ್ರಹ್ಮರೂಪವಾದ 'ಸದ್ಮ'— ಬ್ರಹ್ಮವೆಂಬ ಮನೆಯು ಬಾಗಿಲು ತೆರೆದಿದೆ ; ಅಂದರೆ ಪ್ರವೇಶಾರ್ಹವಾಗಿದೆ. 'ತಸ್ಯೈಷ ಆತ್ಮಾ ವಿಶತೇ (ತಿ) ಬ್ರಹ್ಮಧಾಮ' (ಮುಂ. ಉ. 3–2–4) ಎಂಬ ಕಾರಣ ಶ್ರುತಿಯು ಅವನ ಈ ಆತ್ಮವು ಬ್ರಹ್ಮದ ಸ್ಥಾನವನ್ನು ಪ್ರವೇಶಿಸುವುದು ಎಂದು ಹೇಳಿದೆ.

'ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' (ಕ. ಉ. 1–1–17) ಎಂಬ ಶ್ರುತ್ಯರ್ಥದೊಡನೆ ಸಮಾನವಾದ ಅರ್ಥವನ್ನು ತಿಳಿಸಲು 'ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ' (ಕ. ಉ. 1–2–12) ಎಂಬಲ್ಲೂ ಪರಮಾತ್ಮನನ್ನೇ ಆತ್ಮವಾಗಿಉಳ್ಳ ಜೀವನನ್ನೇ ಹೇಳಲಿ, ಇದರಿಂದ 'ತಂ ದುರ್ದರ್ಶವಮ್' (ಕ, ಉ. 1–2–12) ಎಂಬ ಪೂರ್ವಭಾಗವೂ ಜೀವಪರವೇ ಆಗಲಿ ಇದರಿಂದ 'ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ' ಎಂದು ಮೊದಲು ಹೇಳಿದ ಮಾತೂ ಪರಿಶುದ್ಧ ಜೀವಸ್ವರೂಪಪರವೇ ಆಗಲಿ, ಇದರಿಂದ—

'ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ ಆಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ ॥
(ಭ.ಗೀ. 2–29)

ಎಂಬ ಪರಿಶುದ್ಧ ಜೀವಪರವಾದ ಮಾತಿನ ಅರ್ಥದೊಡನೆ ಸಮಾನವಾದ ಅರ್ಥವೂ ಹೊಂದುತ್ತದೆ ಎಂಬ ಆಶಂಕೆ ಸಲ್ಲದು.

'ಬ್ರಹ್ಮಜಜ್ಞಮ್' ಎಂಬ ಮಂತ್ರದಲ್ಲಿ ಬ್ರಹ್ಮನಿಂದ ಹುಟ್ಟಿದ ಎಂದು ಆರಂಭದಲ್ಲಿ ಹೇಳಿರುವುದು ಜೀವನನ್ನು ಎಂಬ ಕಾರಣದಿಂದ, ಕೊನೆಯಲ್ಲಿ ಹೇಳಿರುವ 'ದೇವ' ಶಬ್ದಕ್ಕೆ ದೇವನನ್ನು ಆತ್ಮವಾಗಿವುಳ್ಳ ಎಂಬ ಅರ್ಥವನ್ನು ಅಂಗೀಕರಿಸಲಾಗಿದೆ. ಆದರೂ 'ತಂ ದುರ್ದರ್ಶವಮ್' (ಕ. ಉ. 1–2–12) ಎಂಬ ಮಂತ್ರದಲ್ಲಿ ಜೀವಪರವಾಗಿ ಹೇಳಲು ಕಾರಣವಿಲ್ಲದಿರುವುದರಿಂದ 'ದೇವ' ಎಂಬ ಶಬ್ದಕ್ಕೆ ದೇವನನ್ನು ಆತ್ಮವಾಗಿವುಳ್ಳ ಎಂಬ ಅರ್ಥವನ್ನು ಅಂಗೀಕರಿಸಲಾಗುವುದಿಲ್ಲ.

ಈ ಅಭಿಪ್ರಾಯದಿಂದಲೇ ಭಗವದ್ರಾಮಾನುಜರು ಭಾಷ್ಯವನ್ನು ರಚಿಸುವಾಗ 'ಗುಹಾಂ ಪ್ರವಿಷ್ಟೌ ...' (ಬ್ರ. ಸೂ. 1–2–11) ಎಂಬ ಸೂತ್ರದಲ್ಲಿ ಪರಮಾತ್ಮನಿಗೆ 'ತಂ ದುರ್ದರ್ಶಂ ಗೂಢಮನುಪ್ರವಿಷ್ಟಮ್' ಎಂಬ ಶ್ರುತಿಯಿಂದ ಹೃದಯಗುಹೆಯಲ್ಲಿ ನೆಲೆಸಿರುವನು ಎಂಬುದು ತಿಳಿಯುತ್ತದೆ' ಎಂದು ಹೇಳಿರುವರು. ಶ್ರುತಪ್ರಕಾಶಿಕಾಚಾರ್ಯರೂ ಈ ಮಂತ್ರವನ್ನು ಪರಮಾತ್ಮಪರವಾಗಿಯೇ ವಿವರಿಸಿರುವರು. 'ಗಹ್ವರೇಷ್ಠಮ್' ಎಂಬ ಪದದಿಂದ ಪರಮಾತ್ಮನು 'ಗಹ್ವರ' ಎಂಬ ಶಬ್ದದಿಂದ ಹೇಳಿದ ಸೂಕ್ಷ್ಮವಾದ ಪರಿಶುದ್ಧಜೀವವನ್ನೇ ಶರೀರವಾಗಿ

ಉಳ್ಳವನು ಎಂದೂ ಹೇಳಿದ್ದಾರೆ. ಈ ಎರಡರಲ್ಲಿರುವ ವಿಶೇಷವಿಷ್ಟೆ 'ಬ್ರಹ್ಮಜಜ್ಞಮ್' ಎಂಬ ಮಂತ್ರದಲ್ಲಿ ಪರಮಾತ್ಮನನ್ನೇ ಆತ್ಮವಾಗಿಉಳ್ಳ ಪರಿಶುದ್ಧ ಜೀವಸ್ವರೂಪವನ್ನು ತಿಳಿಸಿದೆ. 'ತಂ ದುರ್ದರ್ಶಮ್' ಎಂಬ ಮಂತ್ರದಲ್ಲಿ ಜೀವನನ್ನೇ ಶರೀರವಾಗಿಉಳ್ಳ ಪರಮಾತ್ಮನ ಸ್ವರೂಪವನ್ನು ತಿಳಿಸಿದೆ. ಹೀಗೆ ಈ ಎರಡೂ ಒಂದೇ ಅರ್ಥವನ್ನು ತಿಳಿಸುತ್ತವೆ ಎಂಬಲ್ಲಿ ಯಾವ ಬಾಧಕವೂ ಇಲ್ಲ.

## ಭಾಷ್ಯಸಾರ

ಮಂತ್ರದಲ್ಲಿರುವ 'ಮರ್ತ್ಯಃ' ಎಂಬ ಶಬ್ದವು ದೇವ—ಮನುಷ್ಯ ಮುಂತಾದ ಎಲ್ಲ ಅಧಿಕಾರಿಗಳನ್ನೂ ತಿಳಿಸುತ್ತದೆ. ಅಧಿಕಾರಿಯಾದವನು ಪರಮಾತ್ಮಸ್ವರೂಪವನ್ನು ವೇದಾಂತ ವಾಕ್ಯಗಳ ಮೂಲಕ, ಸದ್ಗುರುವಿನ ಉಪದೇಶದಿಂದ ಕೇಳಬೇಕು. ಕೇಳಿದ ವಿಷಯವನ್ನು ಮನನಮಾಡಬೇಕು. ಈ ಮನನವಾಚಕವಾದ 'ಸಂಪರಿಗೃಹ್ಯ' ಎಂಬ ಪದವು 'ನಿದಿಧ್ಯಾಸನ' ಅಂದರೆ ಉಪಾಸನೆಗೂ ಸೂಚಕವಾಗಿದೆ. ಹೀಗೆ ಶ್ರವಣ–ಮನನ–ನಿದಿಧ್ಯಾಸನಗಳ ಮೂಲಕ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. 'ಧರ್ಮ್ಯಮ್' ಅಂದರೆ ಧರ್ಮಸಾಧನ. ಶರೀರ ಎಲ್ಲ ಧರ್ಮಗಳಿಗೂ ಸಾಧನವಾದುದು. ಪ್ರಾರಬ್ಧಕರ್ಮಗಳ ಅವಸಾನಕಾಲದಲ್ಲಿ ಈ ಶರೀರವನ್ನು ತ್ಯಾಗಮಾಡಬೇಕು. ಅನಂತರ 'ಅಣೀಯಾನ್ ಹಿ ಅಪ್ರತರ್ಕ್ಯಮಣು ಪ್ರಮಾಣಾತ್' (ಕ.ಉ. 2–8) ಎಂಬ ಶ್ರುತಿಯಲ್ಲಿ ಹೇಳಿರುವಂತೆ ಗೂಢವಾದುದರಿಂದ ಎಲ್ಲಕ್ಕಿಂತ ಸೂಕ್ಷ್ಮನೂ, ಎಲ್ಲಾಕಡೆ ವ್ಯಾಪಿಸಿರುವವನೂ ಆದ ಪರಮಾತ್ಮನನ್ನು, ಅರ್ಚಿರಾದಿಮಾರ್ಗದಿಂದ ವೈಕುಂಠಲೋಕಕ್ಕೆ ಹೋಗಿ ಸೇರುತ್ತಾನೆ. ಅಲ್ಲಿ ಅಪಹತಪಾಪ್ಮತ್ವಾದಿ ಬ್ರಹ್ಮಗುಣಗಳನ್ನು ಪಡೆದು ಬ್ರಹ್ಮಾನುಭವದಿಂದ ಅತ್ಯಾನಂದವನ್ನು ಪಡೆಯುತ್ತಾನೆ. ('ಮುಕ್ತನು ಪರಮಪದದಲ್ಲಿ ಪರಮಾತ್ಮನ ಎಲ್ಲ ಕಲ್ಯಾಣಗುಣಗಳನ್ನೂ–ಬ್ರಹ್ಮವನ್ನೂ ಅನುಭವಿಸುತ್ತಾನೆ.[1]' 'ಈ ಜೀವಾತ್ಮನು ಶರೀರವನ್ನು ಬಿಟ್ಟನಂತರ, ಪರಮಾತ್ಮನನ್ನು ಸೇರಿ ಅಪಹತಪಾಪ್ಮತ್ವಾದಿ ಬ್ರಹ್ಮಗುಣಗಳನ್ನು ಹೊಂದುತ್ತಾನೆ[2]' ಎಂದು ಆನಂದವಲ್ಲಿಯಲ್ಲಿಯೂ ಮತ್ತು ಛಾಂದೋಗ್ಯದಲ್ಲಿಯೂ ಹೇಳಿರುವಂತೆ.) ನಚಿಕೇತನು ಕೇಳಿದ 'ಯೇಯಂ ಪ್ರೇತೇ' ಎಂಬ ಪ್ರಶ್ನೆಗೆ ಯಮನು ಉತ್ತರಿಸಿದನು. ನಚಿಕೇತನು ಮೋಕ್ಷಕ್ಕೆ ಅರ್ಹ ಎಂಬುದನ್ನು ಅರಿತು, 'ವಿವೃತಂ ಸದ್ಮ ನಚಿಕೇತಸಂ ಮನ್ಯೇ' ಎಂಬುದರಿಂದ ಈ ವಿಷಯವನ್ನು ತಿಳಿಸುತ್ತಾನೆ.

ಈ ನಚಿಕೇತನು ಆತ್ಮತತ್ತ್ವವನ್ನು ಅರಿಯುವಲ್ಲಿ ಅತ್ಯಂತ ಆಸಕ್ತಿಯುಳ್ಳವನು. ಆದುದರಿಂದ ಈ ಆತ್ಮತತ್ತ್ವವನ್ನು ಅರಿಯಲು ನನ್ನನ್ನು ಪ್ರಶ್ನಿಸಿ ನನ್ನಿಂದ ಉಪದೇಶವನ್ನೂ ಪಡೆದಿದ್ದಾನೆ. ಆದುದರಿಂದ ಪರಬ್ರಹ್ಮದ ಬಾಗಿಲು ಈತನಿಗೆ ತೆರೆದಿದೆ ಎಂದು ಭಾವಿಸುತ್ತೇನೆ. ಅಂದರೆ 'ಈ ಉಪಾಸಕನ ಆತ್ಮಸ್ವರೂಪವು ಪ್ರಾಪ್ಯವಾದ ಬ್ರಹ್ಮವನ್ನು ಹೊಂದುತ್ತದೆ[3]' ಎಂದು ಶ್ರುತಿಯಲ್ಲಿ ಹೇಳಿರುವಂತೆ ಈತನು ಪರಬ್ರಹ್ಮವನ್ನು ಸುಲಭವಾಗಿ ಹೊಂದುತ್ತಾನೆ ಎಂದು ತಾತ್ಪರ್ಯ.

---

1. 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' ( ತೈ. ಆನ. 25 )
2. 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ' (ಛಾಂ. ಉ. 8-12-2)
3. 'ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ' (ಮುಂ. ಉ. 3-2-4)

ಸುಬೋಧಿನೀಕಾರರು 'ಹರ್ಷಶೋಕೌ ಜಹಾತಿ', 'ಸ ಮೋದತೇ' ಎಂಬ ಮಾತುಗಳಿಂದ 'ಆತ್ಮನಾಶವೇ' ಮುಕ್ತಿಯಲ್ಲ, ಆತ್ಮನಿಗೆ ಸಾಂಸಾರಿಕ ಬಂಧನದ ಪೂರ್ಣನಾಶದ ಮೂಲಕ ಬ್ರಹ್ಮಾನಂದ ಲಾಭವೇ ಮುಕ್ತಿ ಎಂದಂತಾಯಿತು. 'ಪ್ರವೃಹ್ಯ ಧರ್ಮ್ಯಮ್' ಎಂಬುದರಿಂದ ಅದೂ ಪ್ರಕೃತಿಧರ್ಮವನ್ನು ಬಿಟ್ಟನಂತರ ಉಂಟಾಗುವುದೆಂದು ಹೇಳಿದಂತಾಗುವುದು. 'ಅಣುಮೇತಮಾಪ್ಯ ಮೋದನೀಯಂ ಹಿ ಲಬ್ಧ್ವಾ' ಎಂಬುದರಿಂದ ಮುಕ್ತಿಯಲ್ಲಿ ಸ್ವರೂಪಲಾಭ—ಪರಮಾತ್ಮ ಲಾಭವೂ ಉಂಟಾಗುತ್ತದೆ. ಇದರಿಂದ ಆತ್ಮಲಾಭಮಾತ್ರವಲ್ಲ ಎಂದು ಹೇಳಿದಂತಾಗುತ್ತದೆ. 'ಆಪ್ಯ', 'ಲಬ್ಧ್ವಾ' ಎಂಬ ಪದ ಹೇಳಿರುವುದರ ಸ್ವಾರಸ್ಯದಿಂದಲೂ ಪರಬ್ರಹ್ಮಭಾವವೇ ಮುಕ್ತಿ ಅಲ್ಲ ಎಂದು ತಿಳಿಯುತ್ತದೆ. ಇಲ್ಲದಿದ್ದಲ್ಲಿ 'ಭೂತ್ವಾ' ಎಂದೇ ಶ್ರುತಿಯಲ್ಲಿರಬೇಕಿತ್ತು.



# ಮಂತ್ರ ೧೪

**अन्यत्र धर्मादन्यत्राधर्मादन्यत्रास्मात् कृताऽकृतात् ।**
**अन्यत्र भूताच्च भव्याच्च यत्तत् पश्यसि तद्वद ॥**

ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಽ
ಕೃತಾತ್ ।
ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ ಪಶ್ಯಸಿ ತದ್ವದ ॥

## ಪ್ರತಿಪದಾರ್ಥ

ಧರ್ಮಾದನ್ಯತ್ರ — ಲೋಕಶಾಸ್ತ್ರಗಳಲ್ಲಿ ಉಪಾಯವೆಂದು ಪ್ರಸಿದ್ಧವಾದ, ಯಾಗಾದಿಧರ್ಮಕ್ಕಿಂತಲೂ ವಿಲಕ್ಷಣವಾದುದೂ, ಅಧರ್ಮಾದನ್ಯತ್ರ — ಲೋಕಶಾಸ್ತ್ರಗಳಲ್ಲಿ ಉಪೇಯವೆಂದು ಪ್ರಸಿದ್ಧವಾದ, ಸ್ವರ್ಗಾದಿ ಫಲಗಳಿಗಿಂತ ವಿಲಕ್ಷಣವೂ ಮತ್ತು, ಆ ಉಪೇಯವು, ಅಸ್ಮಾತ್ ಕೃತಾಕೃತಾಚ್ಚ — ಕಾರ್ಯ-ಕಾರಣ-ಸ್ತೋಮ (ಪ್ರಪಂಚ)ಕ್ಕಿಂತಲೂ, ಅನ್ಯತ್ರ - ವಿಲಕ್ಷಣವೂ, ಅಂತೆಯೇ, ಭೂತಾಚ್ಚ, ಭವ್ಯಾಚ್ಚ — ಕಾಲತ್ರಯ ಪರಿಮಿತಿಗೆ ಒಳಪಟ್ಟಿದ್ದಕ್ಕಿಂತಲೂ, ಅನ್ಯತ್ರ — ವಿಲಕ್ಷಣವೂ ಆಗಿದ್ದು ಸಾಧ್ಯಸಾಧಕ ಉಭಯಾತ್ಮಕವಾಗಿದೆಯೋ, ಯತ್ ತತ್ — ಮರ್ತ್ಯಬುದ್ಧಿಗೆ ಎಟುಕದಂತಹ (ಜೀವಾತ್ಮ ಸಹಿತ) ಪರಮಾತ್ಮತತ್ತ್ವವನ್ನು, ಪಶ್ಯಸಿ — ಇದೆಲ್ಲ ವನ್ನೂ 'ಇದಮಿತ್ಥಮ್' ಎಂದು ನಿರ್ಧರಿಸಿರುವೆಯೋ, ತತ್ — ಅದನ್ನು, ತ್ವಮ್ — ನೀನು, ವದ — ನನಗೆ ಉಪದೇಶಿಸು.

## ತಾತ್ಪರ್ಯ

ಪುಣ್ಯಪಾಪಾತ್ಮಕ ಸಾಧನಗಳಿಗಿಂತ ವಿಲಕ್ಷಣವಾದ ಸಾಧನ (ಉಪಾಯ)ವನ್ನೂ, ಕಾಲತ್ರಯದ ಮಿತಿಗೆ ಒಳಪಡದ ಫಲಸ್ವರೂಪವನ್ನೂ, ಉಪೇಯವನ್ನೂ, ತತ್ತ್ವತಃ 'ಇದಮಿತ್ಥಮ್' ಎಂದು ನಿರ್ಧರಿಸಿರುವ ನೀನು ನನ್ನ ಮನವರಿಕೆಯಾಗುವಂತೆ ಉಪದೇಶಿಸು ಎಂದು ನಚಿಕೇತನು ಯಮನಿಗೆ ಹೇಳಿದನು.

## ರಂಗರಾಮಾನುಜಭಾಷ್ಯಮ್

'ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್'. (ಕ.ಉ. 2–10) 'ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ । ಸ ಮೋದತೇ ಮೋದ ನೀಯಂ ಹಿ ಲಬ್ಧ್ವಾ' (ಕ.ಉ. 2–13) 'ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ' (ಕ.ಉ. 2–12) ಇತಿ ಪ್ರದೇಶೇಷು ಧರ್ಮಫಲವಿಲಕ್ಷಣ ತಯಾ ಜ್ಞಾನಸಾಧ್ಯತಯಾ ಪ್ರಾಪ್ಯತಯಾ ಚ ನಿರ್ದಿಷ್ಟಸ್ಯ ಪ್ರಾಪ್ಯಸ್ಯ ಸ್ವರೂಪಂ ಚ, ಉಕ್ತ ಪ್ರದೇಶೇಷ್ವೇವ ಧರ್ಮವಿಲಕ್ಷಣತಯಾ 'ಮತ್ವಾ' ಇತಿ ಪ್ರತಿಪನ್ನಸ್ಯೋಪಾಯಸ್ಯ ಸ್ವರೂಪಂ ಚ, 'ಧೀರೋ ಹರ್ಷಶೋಕೌ ಜಹಾತಿ' (ಕ.ಉ. 2–12) ಇತ್ಯತ್ರ ಧೀರ ಇತಿ ಪ್ರತಿಪನ್ನಸ್ಯ ಪ್ರಾಪ್ತುಶ್ಚ (?) ಸ್ವರೂಪಂ ಚ ಶೋಧಯಿತುಂ ಪೃಚ್ಛತಿ—**ಅನ್ಯತ್ರ ಧರ್ಮಾದನ್ಯತ್ರಾ ಧರ್ಮಾತ್ ಅನ್ಯತ್ರಾಸ್ಮಾತ್ ಕೃತಾಕೃತಾತ್ । ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ ಪಶ್ಯಸಿ ತದ್ವದ ॥**

ನನು ಭಾಷ್ಯೇ 'ದೇವಂ ಮತ್ವಾ' ಇತ್ಯುಪಾಸ್ಯತಯಾ ನಿರ್ದಿಷ್ಟಸ್ಯ ಪ್ರಾಪ್ಯಭೂತಸ್ಯ ದೇವಸ್ಯ, ಅಧ್ಯಾತ್ಮಯೋಗಾಧಿಗಮೇನ, ಇತಿ ವೇದಿತವ್ಯತಯಾ ನಿರ್ದಿಷ್ಟಸ್ಯ ಪ್ರಾಪ್ತುಃ ಪ್ರತ್ಯಗಾತ್ಮನಶ್ಚ, 'ಮತ್ವಾ ಧೀರೋ ಹರ್ಷಶೋಕೌ ಜಹಾತಿ' ಇತಿ ನಿರ್ದಿಷ್ಟಸ್ಯ ಬ್ರಹ್ಮೋಪಾಸನಸ್ಯ ಚ ಸ್ವರೂಪಶೋಧನಾಯ, ಪುನಃ ಪಪ್ರಚ್ಛ, 'ಅನ್ಯತ್ರ ಧರ್ಮಾದಿತಿ' ಇತಿ ಇತ್ಯುಕ್ತೇಃ, ಕಥಂ ತದ್ವಿರುದ್ಧತಯಾ 'ಧೀರ' ಇತಿ ನಿರ್ದಿಷ್ಟಸ್ಯ ಪ್ರಾಪ್ತುರಿತ್ಯುಚ್ಯತೇ ? ಇತಿ ಚೇತ್—ಮೈವಂ ವೋಚಃ— 'ಅಧ್ಯಾತ್ಮಯೋಗಾಧಿಗಮೇನ' ಇತಿ ವೇದಿತವ್ಯತಯಾ ನಿರ್ದಿಷ್ಟಮಾತ್ಮಶಬ್ದವಾಚ್ಯಂ ಪ್ರಜಾಪತಿವಿದ್ಯಾಪ್ರತಿಪನ್ನಮುಪಾಸ್ಯಂ ಪ್ರಾಪ್ಯಭೂತಂ ಪರಿಶುದ್ಧಸ್ವಸ್ವರೂಪಮೇವ । ಅತಃ ತಸ್ಯಾಪಿ ಪ್ರಾಪ್ಯನಿರ್ದೇಶಕತ್ವಮೇವ । ವಸ್ತುಗತ್ಯಾ ತಸ್ಯ ಪ್ರಾಪ್ತ್ರಭಿನ್ನತ್ವಾತ್, 'ಪ್ರಾಪ್ತುಃ ಪ್ರತ್ಯಗಾತ್ಮನಶ್ಚ' ಇತಿ ಭಾಷ್ಯಂ ನ ವಿರೋತ್ಸ್ಯತೇ । ಅತ ಏವ 'ಪ್ರಥಮಂ ತಾವತ್ ಪ್ರಾಪ್ತುಃ ಪ್ರತ್ಯಗಾತ್ಮನಃ ಸ್ವರೂಪಮಾಹ—'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' (ಕ. ಉ. 2–18) ಇತ್ಯುತ್ತರಭಾಷ್ಯಮ್ 'ನ ವಿರೋತ್ಸ್ಯತೇ। ನ ಹಿ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಇತಿ ಮಂತ್ರಪ್ರತಿಪಾದ್ಯಸ್ಯ ವಿಪಶ್ಚಿತ್‍ಶಬ್ದಿತಪರಿಶುದ್ಧಸ್ವರೂಪಸ್ಯ ಪ್ರಾಪ್ತೃರೂಪತೋಪಪತ್ತಿಃ ।

'ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ' (ಕ.ಉ. 3–4)
'ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' ॥ (ಕ.ಉ. 3–9)

ಇತಿ ಮಂತ್ರಪ್ರತಿಪಾದ್ಯಸ್ಯೈವ ಪ್ರಾಪ್ತೃರೂಪತ್ವಾತ್ । ತಥೈವ 'ವಿಶೇಷಣಾಚ್ಚ' (ಬ್ರ. ಸೂ. 1–2–13) ಇತಿ ಸೂತ್ರಭಾಷ್ಯೇ ಪ್ರತಿಪಾದಿತತ್ವಾತ್, ಅತಏವ ಪ್ರಾಪ್ಯಪ್ರಾಪ್ತ್ರೈಕಾಧಿಕರಣ್ಯನಿರ್ದೇಶಪರೇ ಗುಹಾಮಂತ್ರೇ, ಛಾಯಾತಪೌ ಇತಿ ಅಜ್ಞತ್ವವಾಚಿನಾ ಛಾಯಾಶಬ್ದೇನ ನಿರ್ದೇಶೋ ದೃಷ್ಟಃ, ನ ತು ವಿಪಶ್ಚಿಚ್ಛಬ್ದೇನ । ಅತಃ ಯಥೋಕ್ತ ಏವಾರ್ಥಃ ।

ಅಯಂ ಮಂತ್ರಃ ವ್ಯಾಸಾರ್ಯೈಃ ತ್ರಯಾಣಾಮಿತಿ (ಬ್ರ.ಸೂ. 1–4–6) ಸೂತ್ರೇ ವಿವೃತಃ—'ಧರ್ಮಃ—ಉಪಾಯಃ । ಧರ್ಮಾದನ್ಯತ್ರ—ಪ್ರಸಿದ್ಧೋಪಾಯವಿಲಕ್ಷಣ ಉಪಾಯ ಇತ್ಯರ್ಥಃ । ಅಧರ್ಮಃ—ಧರ್ಮೇತರ ಉಪೇಯಃ। ಅಧರ್ಮಾದನ್ಯತ್ರ—ಪ್ರಸಿದ್ಧ ಸಾಧ್ಯವಿಲಕ್ಷಣಂ ಫಲಮಿತ್ಯರ್ಥಃ । ಅಸ್ಮಾತ್ ಇತಿ ಬುದ್ಧಿಸ್ಥಃ ತತ್ಸಾಧಕೋ ವಿವಕ್ಷಿತಃ । ಸ ಏವ ಉಪೇತಾ । ಸ ಹಿ ಪ್ರಸಿದ್ಧೋಪೇತೃ (ಸಾಧಕ) ವಿಲಕ್ಷಣಃ, ಸಾಧಕಾವಸ್ಥಾಯಾಮ್ ಇತರಫಲವಿರಕ್ತತ್ವಾತ್ ಫಲದಶಾಯಾಮ್ ಆವಿರ್ಭೂತಗುಣಾಷ್ಟಕವಿಶಿಷ್ಟಸ್ವರೂಪತ್ವಾಚ್ಚ । ಕೃತಾಕೃತಾತ್ ಇತಿ ಧರ್ಮಾದೀನಾಂ ವಿಶೇಷಣಮ್ । 'ಕೃತಾಕೃತಾತ್' ಧರ್ಮಾದೇಃ ವಿಲಕ್ಷಣಂ, 'ಭೂತಾಚ್ಚ ಭವ್ಯಾಚ್ಚ' ಧರ್ಮಾದೇಃ ವಿಲಕ್ಷಣಂ, ಯದಿತ್ಯರ್ಥಃ' ಇತ್ಯೇಕಾಂ ವ್ಯಾಖ್ಯಾಂ ಕೃತ್ವಾ, ತಸ್ಮಿನ್ ಪಕ್ಷೇ ತು ಕೃತಾಕೃತಾತ್, ಭೂತಾದ್ಭವ್ಯಾಚ್ಚ ಧರ್ಮಾದನ್ಯತ್ರ, ತಾದೃಶಾಧರ್ಮಾದನ್ಯತ್ರ, ತಾದೃಶಾದಸ್ಮಾಚ್ಚಾನ್ಯತ್ರ ಇತ್ಯನ್ಯತ್ರ ಶಬ್ದತ್ರಯೇಣೈವ ಉಪಪತ್ತೌ, ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಇತ್ಯನ್ಯತ್ರಶಬ್ದವೈಯರ್ಥ್ಯಮ್, ಉಪಾಯಸ್ಯ ಕಾಲತ್ರಯ ಪರಿಚ್ಛಿನ್ನತಯಾ, ತತ್ರ ಕಾಲತ್ರಯಪರಿಚ್ಛಿನ್ನವೈಲಕ್ಷಣ್ಯ ಅನನ್ವಯಂ ಚ ಪರ್ಯಾಲೋಚ್ಯ, ಯದ್ವಾ ಇತ್ಯಾದಿನಾ ಅಪರವ್ಯಾಖ್ಯಾ ಕೃತಾ, ತದುಚ್ಯತೇ—

ಯದ್ವಾ 'ಧರ್ಮಾದಧರ್ಮಾಚ್ಚಾನ್ಯತ್ರ ಯತ್' ಇತಿ ಉಪಾಸನಪ್ರಶ್ನಃ. ಪುಣ್ಯಪಾಪ ರೂಪಸಾಧನವಿಲಕ್ಷಣತ್ವಾದುಪಾಸನಸ್ಯ । ಕೃತಾಕೃತಾತ್ ಭೂತಾಚ್ಚ ಭವ್ಯಾಚ್ಚ ಅನ್ಯತ್ರ ಯತ್ ಇತಿ ಕಾಲಾಪರಿಚ್ಛಿನ್ನಮ್ ಉಪೇಯಂ ಪೃಷ್ಟಮ್ । ಉಪೇತುರಪಿ ಚೇತನಸ್ಯ ನಿತ್ಯತ್ವಾತ್ ಪ್ರಾಪ್ಯಾಂತರ್ಭಾವಾಚ್ಚ, ತತ ಏವ ತಸ್ಯಾಪಿ ತಂತ್ರೇಣ ಪ್ರಶ್ನಃ । 'ತದಂತರ್ಗತಂ ಚ ಪ್ರಾಪ್ತುಃ ಸ್ವರೂಪಮ್' ಇತಿ ಹಿ ವಕ್ಷ್ಯತೇ । ತತ್ರ (ತ್ರಯ ಇತಿ ?) ಯತ್ತಚ್ಛಬ್ದೌ ತ್ರಿತಯಪರಾವಿತಿ ಭಾವಃ' ಇತಿ ॥

ನನು—ಅಸ್ಮಿನ್ನಪಿ ಪಕ್ಷೇ ಪ್ರಷ್ಟವ್ಯದ್ವಯಪರತ್ವಾಶ್ರಯಣಮಪಿ ಕ್ಲಿಷ್ಟಮೇವ, ಅನ್ಯತ್ರ ಧರ್ಮಾದನ್ಯತ್ರಾಧರ್ಮಾದಿತಿ ಪ್ರಕ್ರಮಸ್ಥಾನ್ಯತ್ರಶಬ್ದದ್ವಯಸಾಮಾನಾಧಿಕರಣ್ಯಮ್ ಅನ್ಯತ್ರಾಸ್ಮಾತ್ಕೃತಾಕೃತಾತ್ ಅನ್ಯತ್ರಭೂತಾದಿತ್ಯುಪರಿತನಾನ್ಯತ್ರಶಬ್ದದ್ವಯಸ್ಯಾಪಿ ಸಾಮಾನಾಧಿಕರಣ್ಯಸ್ಯೈವ ಪ್ರತೀತೇಃ । ಯದಿ ತತ್ರ ಧರ್ಮಾಧರ್ಮವಿಲಕ್ಷಣಂ ಯಚ್ಚ, ಕಾಲತ್ರಯ (ಪರಿಚ್ಛಿನ್ನ ?)ವಿಲಕ್ಷಣಂ ಯಚ್ಚೇತಿ 'ಚ' ಶಬ್ದದ್ವಯಮಶ್ರೋಷ್ಯತ, ತದಾ ಅನ್ಯತ್ರಶಬ್ದಯುಗದ್ವಯಸ್ಯ ಸ್ವರಸತಃ ಪ್ರತೀತಂ ಸಾಮಾನಾಧಿಕರಣ್ಯಂ ಪರ್ಯತ್ಯಕ್ಷ್ಯತ । ಅತಃ ಪ್ರಕ್ರಮರೀತ್ಯನುಸಾರಿಪ್ರತೀತಸಾಮಾನಾಧಿಕರಣ್ಯಭಂಗೇ ಕಾರಣಾಭಾವಾತ್ ಅನ್ಯತ್ರ ಧರ್ಮಾದನ್ಯತ್ರಾಧರ್ಮಾದಿತ್ಯಯಮಪ್ಯಂಶಃ—ಪ್ರಾಪ್ಯಬ್ರಹ್ಮಪರ ಏವಾಸ್ತು ।

ನನು—'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ' ಇತ್ಯುಪಾಯವಿಶೇಷಪ್ರತಿವಚನದರ್ಶನೇನ ಉಪಾಯವಿಶೇಷಪ್ರಶ್ನಸ್ಯಾಪಿ ಅತ್ರೈವ ಅಂತರ್ಭಾವ್ಯತಯಾ 'ಚ' ಶಬ್ದಾಭಾವೇಽಪಿ ಅನ್ಯತ್ರಶಬ್ದಯುಗದ್ವಯಸ್ಯ ಸಾಮಾನಾಧಿಕರಣ್ಯಂ ಭಂಜನೀಯಮಿತಿ ಚೇನ್ನ—ಪ್ರತಿವಚನೇಽಪಿ 'ನಾಯಮಾತ್ಮಾ ಪ್ರವಚನೇನ ಲಭ್ಯಃ' (ಕ.ಉ. 2–23) ಇತಿ ಪ್ರೀತಿರೂಪಾಪನ್ನಜ್ಞಾನೈಕಲಭ್ಯತ್ವಲಕ್ಷಣಪ್ರಾಪ್ಯಧರ್ಮವಿಶೇಷೋಪದೇಶಸ್ಯೈವ ದರ್ಶನೇನ ಉಪಾಯಪ್ರಧಾನಪ್ರತಿವಚನಾದರ್ಶನಾತ್ । 'ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್', (ಕ. ಉ. 2–24) 'ಯಸ್ತ್ವವಿಜ್ಞಾನವಾನ್ ಭವತಿ ಅಮನಸ್ಕಃ ಸದಾಽಶುಚಿಃ । ನ ಸ ತತ್ಪದಮಾಪ್ನೋತಿ' (ಕ.ಉ. 3–7) ಇತಿ ಪ್ರತಿವಚನದರ್ಶನಾತ್ ಅಧರ್ಮಾದನ್ಯತ್ರೇತಿ ಪ್ರಸಿದ್ಧೋಪಾಯವಿರೋಧಿವಿಲಕ್ಷಣವಿರೋಧಿಪ್ರಶ್ನ ಇತ್ಯಪಿ ಕಿಂ ನ ಸ್ಯಾತ್ ? ಪ್ರಾಪ್ಯಸ್ಯ ಪ್ರೀತಿರೂಪಾಪನ್ನಜ್ಞಾನೈಕೋಪಾಯಕತ್ವಕಥನೇನ, ಉಪಾಯೇ ಪ್ರೀತಿರೂಪಾಪನ್ನತ್ವರೂಪವಿಶೇಷಃ ಫಲಿಷ್ಯತೀತಿ ಚೇತ್—

ಫಲತು ನಾಮ । ನೈತಾವತೋಪಾಯಸ್ಯ ಪ್ರಶ್ನಪ್ರತಿವಚನಪ್ರಧಾನವಿಷಯತ್ವಂ ವಕ್ತವ್ಯಮಿತ್ಯಸ್ತಿ । ನ ಹಿ, 'ಕಿಂ ದೇವದತ್ತಭವನಮ್' ? ಇತಿ ಪ್ರಶ್ನಸ್ಯ ವಾ, 'ಬಹುಚಂಪಕಾಲಂಕೃತನಿಷ್ಕುಟಂ ದ್ವಾರೋಪಾಂತಲಿಖಿತಶಂಖಚಕ್ರಪದ್ಮ (ಶಂಖ ಪದ್ಮ) ಕಂ ದೇವದತ್ತಭವನಮ್ ? ಇತಿ ತತ್ಪ್ರಶ್ನಪ್ರತಿವಚನಸ್ಯ ವಾ, ನಿಷ್ಕುಟದ್ವಾರೋಪಾಂತಪ್ರಧಾನಕತ್ವಂ ಕಶ್ಚಿದಭ್ಯುಪೈತಿ । ಅತ ಅನ್ಯತ್ರಧರ್ಮಾದನ್ಯತ್ರ ಅಧರ್ಮಾತ್ ಇತ್ಯಪಿ ಅನ್ಯತ್ರಶಬ್ದಚತುಷ್ಟಯಸಾಮಾನಾಧಿಕರಣ್ಯಲಿಪ್ಸಯಾ ಧರ್ಮಾಧರ್ಮಸಾಧ್ಯವಿಲಕ್ಷಣಬ್ರಹ್ಮವಿಷಯ ಏವಾಯಮಿತಿ ಚೇತ್—

ಅತ್ರೋಚ್ಯತೇ—'ಅಸೌ ದೇವದತ್ತಾತ್ಪುತ್ರೋ ನ ಭವತಿ; ಅಪಿ ತು ಯಜ್ಞದತ್ತಾತ್' ಇತಿ ವಾಕ್ಯಂ ಶ್ರುತ್ವಾ 'ದೇವದತ್ತಾದನ್ಯಂ ಯಂ ಪಶ್ಯಸಿ ತಂ ಮೇ ಬ್ರೂಹಿ' ಇತಿ ಪ್ರವೃತ್ತಸ್ಯ (ಪ್ರಶ್ನ ?) ಪ್ರತಿವಚನಸ್ಯ. ದೇವದತ್ತಾನ್ಯಯಜ್ಞದತ್ತಪರತ್ವವತ್, ಲಕ್ಷಣಯಾ ದೇವದತ್ತ ಪುತ್ರಾನ್ಯಪ್ರಶ್ನಪರತ್ವಸ್ಯಾಪ್ರತೀತೇಃ, ತದ್ವತ್ ಕರ್ಮಸಾಧ್ಯಂ ನ ಬ್ರಹ್ಮ ; ಅಪಿ ತು ಜ್ಞಾನಸಾಧ್ಯಮಿತ್ಯುಪದೇಶಾನಂತರಪ್ರವೃತ್ತಸ್ಯ ಧರ್ಮಾತ್ ಅನ್ಯತ್ರೇತಿ ಪ್ರಶ್ನಸ್ಯ, ಧರ್ಮವಿಲಕ್ಷಣಜ್ಞಾನರೂಪೋಪಾಯಪರತ್ವಮೇವ ಯುಕ್ತಮ್ ; ನ ತು ಧರ್ಮಶಬ್ದಲಕ್ಷಣಯಾ ಧರ್ಮಸಾಧ್ಯವಿಲಕ್ಷಣ ಬ್ರಹ್ಮಪರತ್ವಮ್ । ತಥಾ ಅಧರ್ಮಾದನ್ಯತ್ರೇತ್ಯತ್ರಾಪಿ ಸಾಮಾನಾಧಿಕರಣ್ಯೇನ ಉಪಾಯಪರತ್ವಮೇವ ನಿಶ್ಚಿತಮ್ । ಕಾಲತ್ರಯಪರಿಚ್ಛಿನ್ನವಿಲಕ್ಷಣವಾಚಕೇ ಉಪರಿತನಾನ್ಯತ್ರಶಬ್ದದ್ವಯೇ ಕಾಲತ್ರಯಾಪರಿಚ್ಛಿನ್ನೋಪಾಯಪರಾಮರ್ಶಾಸಂಭವಾತ್, ಸಾಮಾನಾಧಿಕರಣ್ಯಭಂಗೇನ ಪ್ರಾಪ್ಯಪರತ್ವಮೇವ ಯುಕ್ತಮ್ । 'ನೀಲೋ ದೀರ್ಘೋ ರಕ್ತೋ ಹ್ರಸ್ವಃ ಕಃ ?' ಇತ್ಯುಕ್ತೇ ನೀಲದೀರ್ಘಪದಯೋಃ ಅವಿರೋಧಾತ್, ಸಾಮಾನಾಧಿಕರಣ್ಯಂ ಸಿಧ್ಯತಿ । ರಕ್ತಹ್ರಸ್ವಯೋಶ್ಚ ಪರಸ್ಪರಾವಿರೋಧಾತ್, ಸಾಮಾನಾಧಿಕರಣ್ಯಂ ಸಿಧ್ಯತಿ । ನ ತು ಚತುರ್ಣಾಂ 'ಚ'ಶಬ್ದಾಭಾವೇಽಪಿ ಸಾಮಾನಾಧಿಕರಣ್ಯಂ ದೃಷ್ಟಮ್ । ಅಪಿ ತು ಪುರುಷದ್ವಯಪ್ರಶ್ನಪರತ್ವಮೇವ । ಏವಮ್ ಇಹಾಪಿ ಯಚ್ಛಬ್ದಾನ್ವಿತ'ಚ'ಶಬ್ದದ್ವಯಾಭಾವೇಽಪಿ ನ ಸಾಮಾನಾಧಿಕರಣ್ಯಮವಗಮ್ಯ(ಗ್ರಾಹ್ಯ)ತೇ ।

ಅಸ್ತು ವಾ ಭವದುಕ್ತರೀತ್ಯಾ ಸಾಮಾನಾಧಿಕರಣ್ಯಮ್ ; ಅಥಾಪಿ ಪ್ರಶ್ನಪ್ರತಿವಚನಯೋಃ, ದ್ವಿತೀಯವ್ಯಾಖ್ಯಾಯಾಂ ಉಪೇಯಪ್ರಶ್ನೇ ಉಪೇತ್ರಂತರ್ಭಾವವತ್ ಉಪಾಯಸ್ಯಾಪಿ ಅಂತರ್ಭೂತತ್ವಾತ್ 'ತ್ರಯಾಣಾಮೇವಚೈವಮುಪನ್ಯಾಸಃ ಪ್ರಶ್ನಶ್ಚ' (ಬ್ರ.ಸೂ. 1–4–6) ಇತಿ ಸೂತ್ರ ನಿರ್ದಿಷ್ಟೋಪಾಯೋಪೇತೃಪ್ರಶ್ನಪ್ರತಿವಚನಸ್ಯ ಸುಘಟಿತತಯಾ ಕ್ಷತೇಃ ಅಭಾವಾತ್; 'ತತ್ ತೇ ಪದಂ ಸಂಗ್ರಹೇಣ ಬ್ರವೀಮಿ' ಇತಿ ಪದಶಬ್ದಿತಪ್ರಾಪ್ಯಸ್ಯೈವ ಪ್ರತಿವಚನಪ್ರತಿಪಾದ್ಯತ್ವಸ್ಯ ಸ್ಪಷ್ಟಪ್ರತೀತೇಃ ಇತ್ಯಲಂ ಪ್ರಸಕ್ತಾನುಪ್ರಸಕ್ತ್ಯಾ । ಪ್ರಕೃತಮನುಸರಾಮಃ ॥

## ಅನುವಾದ

'ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್' ಅಶಾಶ್ವತದಿಂದ ಶಾಶ್ವತವನ್ನು ಪಡೆಯಲಾಗುವುದಿಲ್ಲ. ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ ಪ್ರವೃಹ್ಯ ಧರ್ಮ್ಯಮಣುಮೇತಮಾಪ್ಯ ಸ ಮೋದತೇ ಮೋದನೀಯಂ ಹಿ ಲಬ್ಧ್ವಾ ಉಪಾಸಕನು ಆತ್ಮತತ್ತ್ವವನ್ನು ಶ್ರವಣ-ಮನನ-ನಿದಿಧ್ಯಾಸನಗಳಿಂದ ನಿರ್ಧರಿಸಿ, ಕರ್ಮದಿಂದ ಒದಗಿದ ಈ ಶರೀರವನ್ನು ತನ್ನಿಂದ ಪ್ರತ್ಯೇಕಿಸಿ (ತ್ಯಜಿಸಿ) ಅತ್ಯಂತ ಸೂಕ್ಷ್ಮನೂ ಅಂತರ್ಯಾಮಿಯೂ ಆದ ಪರಮಾತ್ಮನನ್ನು ಅರ್ಚಿರಾದಿಗತಿಯಿಂದ ಸೇರಿ ಪರಮಪದದಲ್ಲಿ ಪ್ರೀತಿವಿಷಯವಾದ ನಿರುಪಾಧಿಕಸ್ವಸ್ವರೂಪವನ್ನು ಹೊಂದಿ ಸ್ವಾಭಾವಿಕವಾದ ಆನಂದವನ್ನು ಪಡೆಯುತ್ತಾನೆ. 'ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ' ಧೀರನಾದ ಸಾಧಕನು ವಿಷಯಗಳಿಂದ ದೂರ ಸರಿದ ಮನಸ್ಸನ್ನು ಆತ್ಮನಲ್ಲಿ ನೆಲೆಗೊಳಿಸುವ ಮೂಲಕ ಪರಮಾತ್ಮನನ್ನು ಧ್ಯಾನಿಸಿ ಸಾಂಸಾರಿಕವಾದ ಹರ್ಷಶೋಕಗಳನ್ನು ಬಿಡುತ್ತಾನೆ. ಈ ಸ್ಥಳಗಳಲ್ಲಿ ಧರ್ಮಫಲ ವಿಲಕ್ಷಣನೂ ಜ್ಞಾನಸಾಧ್ಯನೂ ಮತ್ತು ಪ್ರಾಪ್ಯನೂ ಎಂದು ಹೇಳಲ್ಪಟ್ಟ ಪ್ರಾಪ್ಯವಸ್ತುವಿನ ಸ್ವರೂಪವನ್ನು

ಆ ಸ್ಥಳಗಳಲ್ಲಿಯೇ 'ಮತ್ವಾ' ಎಂಬುದರಿಂದ ಧರ್ಮವಿಲಕ್ಷಣವಾಗಿ ತಿಳಿಸಲ್ಪಟ್ಟ (ಜ್ಞಾನವೆಂಬ ಉಪಾಯದ ಸ್ವರೂಪವನ್ನೂ, 'ಧೀರೋ ಹರ್ಷಶೋಕೌ ಜಹಾತಿ' ಎಂಬಲ್ಲಿ 'ಧೀರಃ' ಎಂಬುದರಿಂದ ಹೇಳಿದ ಪ್ರಾಪ್ತೃವಿನ (ಉಪಾಸಕನ) ಸ್ವರೂಪವನ್ನೂ ಮತ್ತಷ್ಟು ನಿಷ್ಕೃಷ್ಟವಾಗಿ ತಿಳಿಯಲು 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್........ತದ್ವದ' ಎಂಬುದಾಗಿ ನಚಿಕೇತನು ಯಮನನ್ನು ಕೇಳುತ್ತಾನೆ.

ಆಕ್ಷೇಪ:—'ದೇವಂ ಮತ್ವಾ' ಎಂಬುದಾಗಿ ಉಪಾಸ್ಯನೆಂದು ಹೇಳಲ್ಪಟ್ಟ ಪ್ರಾಪ್ಯವಸ್ತುವಿನ (ಪರಮಾತ್ಮನ) 'ಸ್ವರೂಪವೇ ಅಧ್ಯಾತ್ಮಯೋಗಾಧಿಗಮೇನ' (ಕ. ಉ. 2–12) ಎಂದು ತಿಳಿಯತಕ್ಕದ್ದಾಗಿ ಹೇಳಲ್ಪಟ್ಟ ಪ್ರಾಪ್ತೃವಾದ ಜೀವಾತ್ಮನ 'ಮತ್ವಾಧೀರೋ ಹರ್ಷಶೋಕೌ ಜಹಾತಿ' (ಕ. ಉ. 2–12) ಎಂದು ತಿಳಿಸಿದ ಬ್ರಹ್ಮೋಪಾಸನದ ಸ್ವರೂಪವನ್ನು ನಿಷ್ಕರ್ಷಿಸಲು 'ಅನ್ಯತ್ರ ಧರ್ಮಾತ್........'ಎಂಬುದಾಗಿ ಮತ್ತೆ ಪ್ರಶ್ನಿಸಿದನು ಎಂಬುದಾಗಿ ಶ್ರೀಭಾಷ್ಯದಲ್ಲಿ ಹೇಳಿರುವುದರಿಂದ ಅದಕ್ಕೆ ವಿರುದ್ಧವಾಗಿ 'ಧೀರಃ' ಎಂಬುದರಿಂದ ತಿಳಿಸಿದ ಉಪಾಸಕನ ಸ್ವರೂಪ ಎಂದು ಹೇಗೆ ಹೇಳಿದಿರಿ ?

ಸಮಾಧಾನ:—'ಅಧ್ಯಾತ್ಮಯೋಗಾಧಿಗಮೇನ' ಎಂಬುದರಿಂದ, ಅರಿಯತಕ್ಕದೆಂದು ನಿರ್ದಿಷ್ಟವಾದ ಆತ್ಮಶಬ್ದವಾಚ್ಯವಾದ ವಸ್ತುವೂ ಪ್ರಜಾಪತಿವಿದ್ಯೆಯಲ್ಲಿ ಹೇಳಲ್ಪಟ್ಟ, ಉಪಾಸ್ಯವೂ ಪ್ರಾಪ್ಯವೂ ಆದ ಪರಿಶುದ್ಧವಾದ (ನಿರುಪಾಧಿಕ) ಸ್ವ (ಜೀವಾತ್ಮ) ಸ್ವರೂಪವೇ ಆದುದರಿಂದ ಅದು ಪ್ರಾಪ್ಯವನ್ನೇ ನಿರ್ದೇಶಿಸುತ್ತದೆ. ವಸ್ತುತಃ ಪ್ರಾಪ್ಯವೆಂದು ಹೇಳಲ್ಪಟ್ಟ, ಅದು ಪ್ರಾಪ್ತೃವೇ ಆಗಿರುವುದರಿಂದ 'ಪ್ರಾಪ್ತುಃ ಪ್ರತ್ಯಗಾತ್ಮನಶ್ಚ' ಎಂಬ ಶ್ರೀಭಾಷ್ಯಗ್ರಂಥಕ್ಕೆ ವಿರೋಧವಿಲ್ಲ. ಆದುದರಿಂದಲೇ 'ಪ್ರಥಮಂ ತಾವತ್............ವಿಪಶ್ಚಿತ್' ಎಂಬ ಮುಂದಿನ ಭಾಷ್ಯಗ್ರಂಥಕ್ಕೂ ವಿರೋಧವಿಲ್ಲ. 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಎಂಬ ಮಂತ್ರದಲ್ಲಿ ಪ್ರತಿಪಾದ್ಯವಾದ'ವಿಪಶ್ಚಿತ್'ಎಂಬ ಶಬ್ದದಿಂದ ನಿರ್ದೇಶಿಸಲ್ಪಟ್ಟಿರುವ ಪರಿಶುದ್ಧ ಜೀವಾತ್ಮಸ್ವರೂಪವು 'ಪ್ರಾಪ್ತಾ' ಎನಿಸಿಕೊಳ್ಳಲಾರದು. ಏಕೆಂದರೆ—

'ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ।
ವಿಜ್ಞಾನ ಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' ॥ (ಕ.ಉ. 3–9)

ಈ ಮಂತ್ರಗಳಲ್ಲಿ ಜೀವಸ್ವರೂಪವೇ ಪ್ರಾಪ್ತೃವಾಗುವುದಷ್ಟೆ 'ವಿಶೇಷಣಾಚ್ಚ' (ಬ್ರ.ಸೂ. 1–2–12) ಎಂಬ ಸೂತ್ರಭಾಷ್ಯದಲ್ಲಿಯೂ ಹಾಗೆಯೇ ಹೇಳಿದೆ. ಆದುದರಿಂದಲೇ ಪ್ರಾಪ್ಯವೂ, ಪ್ರಾಪ್ತೃವೂ ಗುಹೆಯೆಂಬ ಒಂದೇ ಅಧಿಕರಣದಲ್ಲಿ ಇದೆ ಎಂದು ಹೇಳುವ ಗುಹಾಮಂತ್ರದಲ್ಲೂ 'ಛಾಯಾತಪೌ' ಎಂಬುದಾಗಿ 'ಛಾಯಾ' ಪದದಿಂದ ಅಜ್ಞತ್ವವನ್ನು ತೋರಿಸುವುದೇ ಕಂಡು ಬಂದಿದೆ. ಅಲ್ಲಿ 'ವಿಪಶ್ಚಿತ್' ಎಂಬ ಶಬ್ದವಿಲ್ಲ. ಆದಕಾರಣ ಹಿಂದೆ ಹೇಳಿದ ಅರ್ಥವೇ ಸರಿ. ಈ ಮಂತ್ರವನ್ನು ಶ್ರುತಪ್ರಕಾಶಿಕಾಚಾರ್ಯರು 'ತ್ರಯಾಣಾಮ್....' (ಬ್ರ.ಸೂ. 1–4–6) ಎಂಬ ಸೂತ್ರದಲ್ಲಿ ವಿವರಿಸಿರುವರು. 'ಧರ್ಮಃ–ಉಪಾಯಃ........' ಇತ್ಯರ್ಥಃ, ಎಂಬುದಾಗಿ ವ್ಯಾಖ್ಯಾನಮಾಡಿ, ನಂತರ ಆ ರೀತಿಯ ವ್ಯಾಖ್ಯಾನದಲ್ಲಿ ಮೂರು

'ಅನ್ಯತ್ರ' ಶಬ್ದಗಳಿಂದಲೇ ತಿಳಿಸಬೇಕಾದ ಅಭಿಪ್ರಾಯವು ಸಿದ್ಧಿಸಲಾಗಿ, ಮತ್ತೊಮ್ಮೆ 'ಅನ್ಯತ್ರ' ಶಬ್ದಪ್ರಯೋಗವು ವ್ಯರ್ಥವಾದೀತು. ಮತ್ತು ಈ ಉಪಾಯವೂ ಕೂಡ ಕಾಲಪರಿಚ್ಛಿನ್ನವಾದುದರಿಂದ ಅದರಲ್ಲಿ ಕಾಲಪರಿಚ್ಛಿನ್ನವಸ್ತುಗಳ ವೈಲಕ್ಷಣ್ಯವು ಹೊಂದಲಾರದೆಂದೂ ಆಲೋಚಿಸಿ 'ಯದ್ವಾ' ಎಂಬುದಾಗಿ ಪ್ರಾರಂಭಿಸಿ ಮತ್ತೊಂದು ರೀತಿಯಿಂದ ವ್ಯಾಖ್ಯಾನ ಮಾಡಿರುವರು.

ಅದೇನೆಂದರೆ 'ಯದ್ವಾ......... ತೃತೀಯಃ ಪರಾಮಿತಿ ಭಾವಃ'[1] ಎಂಬುದರಿಂದ ಅದು ಹೇಳಲ್ಪಡುತ್ತದೆ.

**ಆಕ್ಷೇಪ:—** 'ಯದ್ವಾ' ಎಂದು ವಿವರಿಸಿದ ಎರಡನೆಯ ರೀತಿಯಂತೆ, 'ಪ್ರಶ್ನಿಸಿ ತಿಳಿಯಬೇಕಾದುದು ಎರಡು' ಎಂದು ಹೇಳುವುದೂ ಕ್ಲಿಷ್ಟವೇ ಸರಿ. ಏಕೆಂದರೆ 'ಅನ್ಯತ್ರ ಧರ್ಮಾತ್ ಅನ್ಯತ್ರಾಧರ್ಮಾತ್' ಎಂದು ಆರಂಭದಲ್ಲಿ ಹೇಳಿದ ಎರಡು 'ಅನ್ಯತ್ರ' ಶಬ್ದಗಳಲ್ಲಿರುವ ಸಾಮಾನಾಧಿಕರಣ್ಯದಂತೆಯೇ, ಅನ್ಯತ್ರ ಅಸ್ಮಾತ್ ಕೃತಾಕೃತಾತ್ ಅನ್ಯತ್ರ ಭೂತಾಚ್ಚ ಭವ್ಯಾಚ್ಚ' ಎಂದು ಮುಂದೆ ಹೇಳುವ ಎರಡು 'ಅನ್ಯತ್ರ' ಶಬ್ದಗಳಲ್ಲೂ ಸಾಮಾನಾಧಿಕರಣ್ಯವೇ ತೋರುವುದಷ್ಟೆ. ಅಲ್ಲಿ 'ಧರ್ಮಾಧರ್ಮವಿಲಕ್ಷಣಂ ಯಚ್ಚ', 'ಕಾಲತ್ರಯ ಪರಿಚ್ಛಿನ್ನ' ವಿಲಕ್ಷಣಂ ಯಚ್ಚ' ಎಂದು ಎರಡು 'ಚ' ಶಬ್ದವು ಕೇಳಿಸಿದ್ದಲ್ಲಿ, ಆಗ ಎರಡೆರಡು 'ಅನ್ಯತ್ರ' ಶಬ್ದಗಳ ಯುಗಳದಲ್ಲಿ, ಸರಸವಾಗಿ ತೋರುವ ಸಾಮಾನಾಧಿಕರಣ್ಯವನ್ನು ಬಿಡಬಹುದಿತ್ತು. ಇಲ್ಲಿ ಹಾಗೆ ಕೇಳಿಸುತ್ತಿಲ್ಲವಷ್ಟೆ!. ಆದುದರಿಂದ ಪ್ರಾರಂಭದಲ್ಲಿ ಕಂಡುಬಂದ ಸಾಮಾನಾಧಿಕರಣ್ಯವನ್ನು ಬದಲಿಸಲು ಕಾರಣವಿಲ್ಲದಿರುವುದರಿಂದ 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಎಂಬ ಭಾಗವೂ ಪ್ರಾಪ್ಯವಾದ ಬ್ರಹ್ಮಪರವಾಗಿಯೇ ಇರಲಿ.

**ಅವಾಂತರ ಆಕ್ಷೇಪ:—** 'ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ' ಎಂಬುದು ಉಪಾಯ ವಿಶೇಷವನ್ನು ತಿಳಿಸುವ ಉತ್ತರವಾಗಿರುವುದರಿಂದ ಪ್ರಶ್ನೆಯೂ ಸಹ ಉಪಾಯ ವಿಶೇಷವನ್ನು ಒಳಗೊಂಡದ್ದೇ ಆಗಿರಬೇಕಾದ ಕಾರಣ 'ಚ' ಶಬ್ದವಿಲ್ಲದಿದ್ದರೂ. 'ಅನ್ಯತ್ರ' ಎಂಬ ನಾಲ್ಕು ಶಬ್ದಗಳಲ್ಲಿ ಸಾಮಾನಾಧಿಕರಣ್ಯಕ್ಕೆ ಭಂಗಬರಬಹುದು.

**ಅವಾಂತರಾಕ್ಷೇಪಕ್ಕೆ ಸಮಾಧಾನ:—** ಉತ್ತರದಲ್ಲಿಯೂ, 'ನಾಯಮಾತ್ಮಾ ಪ್ರವಚನೇನ ಲಭ್ಯಃ' ಎಂದು ಪ್ರೀತಿರೂಪವನ್ನು ತಾಳಿದ ಜ್ಞಾನದಿಂದ ಮಾತ್ರವೇ ಹೊಂದತಕ್ಕವನೆಂಬ ಪ್ರಾಪ್ಯವಸ್ತುವಿನ ಧರ್ಮವಿಶೇಷದ ಉಪದೇಶವೇ ಇಲ್ಲಿ ಕಾಣುವುದರಿಂದ ಇದು ಉಪಾಯವನ್ನು ಕುರಿತ ಪ್ರಧಾನವಾದ ಉತ್ತರವೆನ್ನಲಾಗದು. ಇಷ್ಟೇ ಅಲ್ಲದೇ 'ನಾಶಾಂತಮಾನಸೋಽವಾಪಿ ಪ್ರಜ್ಞಾನೇನೈನಮಾಪ್ನುಯಾತ್' 'ಯಸ್ತು ವಿಜ್ಞಾನವಾನ್ ಭವತಿ ಅಮನಸ್ಕಸ್ಸದಾಽಶುಚಿಃ ನ ಸ ತತ್ಪದಮಾಪ್ನೋತಿ' ಎಂಬುದಾಗಿ ಉತ್ತರವು ಕಂಡು ಬರುವುದರಿಂದ, 'ಅಧರ್ಮಾದನ್ಯತ್ರ' ಎಂಬುದೂ ಸಹ ಲೋಕಪ್ರಸಿದ್ಧವಾದ ವ್ರತನಿಯಮಾದಿ ಉಪಾಯಗಳಿಗೆ ವಿರೋಧಿಯಾದ ಅಶನ–ಪಾನಾದಿಗಳಿಗಿಂತಲೂ ವಿಲಕ್ಷಣವಾದ ವಿರೋಧಿಯನ್ನು ಕುರಿತ ಪ್ರಶ್ನೆಯೇ, ಏಕಾಗಬಾರದು ? ಎಂಬ ಆಕ್ಷೇಪವೂ ಬಂದೀತು. ಈ ಆಕ್ಷೇಪಕ್ಕೆ

---

1 'ಯದ್ವಾ.....................ಇತಿ ಭಾವಃ' 125ನೇ ಪುಟ ನೋಡಿ.

ಪ್ರಾಪ್ಯವಾದ ಬ್ರಹ್ಮವು ಪ್ರೀತಿರೂಪಾಪನ್ನಜ್ಞಾನವೆಂಬ ಉಪಾಯದಿಂದ ಮಾತ್ರ ಲಭ್ಯವಾಗುವುದೆಂದು ಹೇಳಿರುವುದರಿಂದ ಉಪಾಯದಲ್ಲಿ ಪ್ರೀತಿರೂಪಾಪನ್ನತ್ವ ಎಂಬ ವಿಶೇಷವೂ ಸಿದ್ಧಿಸುವುದಷ್ಟೇ ಎಂದು ಉತ್ತರಿಸುವುದಾದರೆ, ಇಷ್ಟುಮಾತ್ರದಿಂದ ಉಪಾಯವೇ ಪ್ರಶ್ನೋತ್ತರಗಳಿಗೆ ಪ್ರಧಾನವಿಷಯವೆಂದು ಹೇಳಲಾಗದು.

ಏಕೆಂದರೆ: - 'ದೇವದತ್ತನ ಮನೆ ಯಾವುದು ?' ಎಂಬ ಪ್ರಶ್ನೆಯಲ್ಲಾಗಲೀ, ಅದರ ಉತ್ತರರೂಪವಾದ ಅನೇಕ ಸಂಪಿಗೆಮರಗಳಿಂದ ಅಲಂಕೃತವಾದ ಉದ್ಯಾನದ ಬಾಗಿಲಸಮೀಪ ಪ್ರದೇಶದಲ್ಲಿ ರಚಿಸಲ್ಪಟ್ಟಿರುವ ಶಂಖ–ಚಕ್ರ–ಪದ್ಮಾಕೃತಿಗಳುಳ್ಳದ್ದೇ ದೇವದತ್ತನ ಮನೆ ಎಂಬ ವಾಕ್ಯದಲ್ಲಾಗಲೀ, ಉದ್ಯಾನದ್ವಾರಸಮೀಪ ಪ್ರದೇಶಕ್ಕೆ ಪ್ರಾಧಾನ್ಯವನ್ನು ಯಾರೂ ಒಪ್ಪಲಾರರು. ಅಲ್ಲಿ ಭವನವೇ ಪ್ರಧಾನ ಆದುದರಿಂದ 'ಅನ್ಯತ್ರ ಧರ್ಮಾತ್ ಅನ್ಯತ್ರ ಅಧರ್ಮಾತ್' ಎಂಬಲ್ಲಿ ನಾಲ್ಕು 'ಅನ್ಯತ್ರ' ಶಬ್ದಗಳಲ್ಲಿ ತೋರುವ ಸಾಮಾನಾಧಿಕರಣ್ಯವು ಒಂದೇ ಕಡೆ ಲಭಿಸುವುದರಿಂದ ಧರ್ಮಾಧರ್ಮರೂಪವಾದ ಸಾಧನಗಳಿಂದ ಸಾಧ್ಯವಾದ ಪ್ರಾಪ್ಯಕ್ಕಿಂತಲೂ ವಿಲಕ್ಷಣವಾದ ಬ್ರಹ್ಮವೇ ಈ ಪ್ರಶ್ನೆಗೆ ವಿಷಯವಾಗಿರಲು ಸಾಧ್ಯ.

ಸಮಾಧಾನ: - 'ಇವನು ದೇವದತ್ತನಿಂದ ಜನಿಸಿದವನಲ್ಲ, ಯಜ್ಞದತ್ತನಿಂದ ಜನಿಸಿದವನು ಎಂಬ ವಾಕ್ಯವನ್ನು ಕೇಳಿ, ನಂತರ ದೇವದತ್ತನಿಗಿಂತ ಭಿನ್ನವಾದ ಯಾವನನ್ನು ನೀನು ನೋಡುತ್ತಿರುವೆಯೋ ಆತನನ್ನು ಕುರಿತು ನನಗೆ ಹೇಳು' ಎಂದು ಉಂಟಾದ ಪ್ರಶ್ನೆಯು 'ದೇವದತ್ತನಿಗಿಂತ ಭಿನ್ನವಾದ ಯಜ್ಞದತ್ತನನ್ನು ಕುರಿತದ್ದು ಎಂದು ತಿಳಿಯುತ್ತದೆಯೋ ಹೊರತು ಪ್ರಶ್ನೆಯಲ್ಲಿರುವ 'ದೇವದತ್ತ' ಎಂಬುದಕ್ಕೆ ಔಪಚಾರಿಕವಾಗಿ 'ದೇವದತ್ತ ಪುತ್ರ' ಎಂಬ ಅರ್ಥಮಾಡಿ, ಈ ಪ್ರಶ್ನೆಯು ದೇವದತ್ತಪುತ್ರೇತರವಿಷಯಕವೆಂದೆನ್ನಲಾಗುವುದಿಲ್ಲವಷ್ಟೇ! ಅಂತೆಯೇ 'ಬ್ರಹ್ಮವು ಕರ್ಮಸಾಧ್ಯವಲ್ಲ, ಜ್ಞಾನಸಾಧ್ಯ' ಎಂಬ ಉಪದೇಶದ ನಂತರ ಉಂಟಾಗಿರುವ 'ಧರ್ಮಾದನ್ಯತ್ರ' ಎಂಬ ಪ್ರಶ್ನೆಯು 'ಧರ್ಮವಿಲಕ್ಷಣವಾದ ಜ್ಞಾನರೂಪ ಉಪಾಯಪರ' ಎಂದು ಭಾಸವಾಗುವುದೇ ಹೊರತು ಧರ್ಮಶಬ್ದಕ್ಕೆ ಔಪಚಾರಿಕವಾಗಿ 'ಧರ್ಮಸಾಧ್ಯ' ಎಂಬ ಅರ್ಥಮಾಡಿ ಈ ಪ್ರಶ್ನೆಯು ಧರ್ಮಸಾಧ್ಯವಿಲಕ್ಷಣಬ್ರಹ್ಮವಿಷಯವೆನ್ನಲಾಗುವುದಿಲ್ಲ. ಬ್ರಹ್ಮಪ್ರಾಪಕವಾದ ಉಪಾಸನೆಯೆಂಬ ಉಪಾಯವು ಕಾಲತ್ರಯ ಪರಿಚ್ಛಿನ್ನವೆ. ಆದುದರಿಂದ ಅದರಲ್ಲಿ ಪರಿಚ್ಛಿನ್ನವಿಲಕ್ಷಣತ್ವವು ಅನನ್ವಿತವಾಗುವ ಕಾರಣ, ಉಳಿದ ಎರಡು ಅನ್ಯತ್ರ ಶಬ್ದಗಳನ್ನು ಬೇರ್ಪಡಿಸುವುದಕ್ಕಾಗಿ ಸಾಮಾನಾಧಿಕರಣ್ಯವನ್ನು ತ್ಯಜಿಸುವುದೇ ಯುಕ್ತವಾಗುತ್ತದೆ.

'ನೀಲೋ–ದೀರ್ಘೋ ರಕ್ತೋ–ಹ್ರಸ್ವಃ ಕಃ?' ಎಂದು ಪ್ರಶ್ನಿಸಿದಲ್ಲಿ ನೀಲಬಣ್ಣದಿಂದ ಕೂಡಿ ಉದ್ದವಾಗಿರುವವನೂ, ಕೆಂಪುಬಣ್ಣದಿಂದ ಕೂಡಿರುವ ಕುಳ್ಳನೂ ಯಾರು ? ಎಂಬಲ್ಲಿ 'ನೀಲ–ದೀರ್ಘ' ಎಂಬ ಅಂಶಗಳಿಗೆ ವಿರೋಧವಿಲ್ಲದಿರುವುದರಿಂದ ಸಾಮಾನಾಧಿಕರಣ್ಯವು ಸಿದ್ಧಿಸುವುದು. ಅಂತೆಯೇ 'ರಕ್ತ-ಹ್ರಸ್ವ' ಎಂಬ ಅಂಶಗಳಲ್ಲಿ ವಿರೋಧವಿಲ್ಲದಿರುವುದರಿಂದ ಸಾಮಾನಾಧಿಕರಣ್ಯವು ಲಭಿಸುವುದು. ಈ ಮೇಲಿನ ವಾಕ್ಯಗಳಲ್ಲಿ 'ಚ' ಶಬ್ದದ್ವಯವಿಲ್ಲದಿದ್ದರೂ, ಅವಿರುದ್ಧವಾದ ಎರಡೆರಡಕ್ಕೆ ಮಾತ್ರವೇ ಸಾಮಾನಾಧಿಕರಣ್ಯ ಕಂಡು ಬರುತ್ತದೆ. ಆದುದರಿಂದ 'ನೀಲೋ ದೀರ್ಘೋ ರಕ್ತೋ ಹ್ರಸ್ವಃ ಕಃ' ? ಎಂಬ ಪ್ರಶ್ನೆಯು ನಾಲ್ಕು

ಗುಣಗಳಿಗೂ ಅಲ್ಲವೆಂಬುದು ಸ್ಪಷ್ಟ. ಇಬ್ಬರು ಪುರುಷರನ್ನು ಕುರಿತದ್ದೇ ಆಗಿದೆ. ಅಂತೆಯೇ ಇಲ್ಲೂ ಯಚ್ಚಬ್ದದೊಡನೆ ಅನ್ವಯಿಸುವ ಎರಡು 'ಚ' ಶಬ್ದವಿಲ್ಲದಿದ್ದರೂ ಸಹ ಸಾಮಾನಾಧಿಕರಣ್ಯವು ತೋರದಿರುವುದೇ ಉಚಿತವಾಗಿದೆ.

(ಅಥವಾ) ನೀವು ಹೇಳಿದಂತೆ ನಾಲ್ಕು ಅನ್ಯತ್ರಶಬ್ದಗಳಿಗೂ ಸಾಮಾನಾಧಿಕರಣ್ಯವೇ ಇರಲಿ, ಆದರೂ ಸಹ 'ಯದ್ವಾ' ಎಂಬ ಎರಡನೇ ವ್ಯಾಖ್ಯಾನ ಪ್ರಕಾರ ಉಪೇಯಪ್ರಶ್ನೆಯಲ್ಲಿಯೇ ಉಪೇತೃವೂ ಅಂತರ್ಭೂತವಾಗಿರುವಂತೆ, 'ಉಪಾಯವೂ ಅಂತರ್ಭೂತವಾಗಿರಬಹುದಾದುದರಿಂದ 'ತ್ರಯಾಣಾಮೇವಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಸೂತ್ರದಲ್ಲಿ ನಿರ್ದಿಷ್ಟವಾಗಿರುವ ಉಪಾಯ–ಉಪೇತೃ ವಿಷಯಕವಾದ ಪ್ರಶ್ನೋತ್ತರಗಳಿಗೆ ಹೊಂದಾಣಿಕೆ ಬರುವುದರಿಂದ ಯಾವ ತೊಂದರೆಯೂ ಇಲ್ಲ. 'ತತ್ ತೇ ಪದಂ ಸಂಗ್ರಹೇಣ ಬ್ರವೀಮಿ' ಎಂದು ಪದಶಬ್ದದಿಂದ ಪ್ರಾಪ್ಯವನ್ನೇ ಉತ್ತರದಲ್ಲಿ ಹೇಳಿರುವುದೆಂದು ಸ್ಪಷ್ಟವಾಗಿ ತೋರುವುದರಿಂದ ಪ್ರಶ್ನೋತ್ತರಗಳೆರಡರಲ್ಲೂ ಏಕರೂಪತೆಗೆ ಚ್ಯುತಿಯಿಲ್ಲ. ಪ್ರಕೃತಮನುಸರಾಮಃ

## ಭಾಷ್ಯಸಾರ

ಹನ್ನೆರಡನೆಯ ಮಂತ್ರದಲ್ಲಿ 'ಅಧ್ಯಾತ್ಮಯೋಗಾಧಿಗಮಃ' ಎಂಬ ಶಬ್ದದಿಂದ ಉಪಾಯವೂ, 'ದೇವಮ್' ಎಂಬ ಶಬ್ದದಿಂದ ಉಪೇಯವೂ, 'ಮತ್ವಾ ಧೀರೋ ಹರ್ಷಶೋಕೌ ಜಹಾತಿ' ಎಂಬುವುದರಿಂದ ಉಪೇತೃವೂ ಹೇಳಲ್ಪಟ್ಟಿತು. ಹೀಗೆ ಸಾಮಾನ್ಯವಾಗಿ ಹೇಳಿದ ವಿಷಯವನ್ನು ವಿಶೇಷರೂಪದಲ್ಲಿ ತಿಳಿಯಬೇಕೆಂದು ನಚಿಕೇತನು 'ಅನ್ಯತ್ರಧರ್ಮಾತ್' ಎಂಬ ಅಂಶದಿಂದ ಕೇಳುತ್ತಾನೆ.

ಸ್ವರ್ಗಾದಿಫಲಗಳನ್ನುದ್ದೇಶಿಸಿ ವೇದವಿಹಿತವಾದ ಪುಣ್ಯರೂಪೋಪಾಯಕ್ಕಿಂತಲೂ, ನರಕಾದಿದುಷ್ಟಫಲಗಳಿಗೆ ಸಾಧನವೆಂದೂ, ಮಾಡಬಾರದೆಂದೂ ತಿಳಿಸಿದ ಪಾಪರೂಪೋಪಾಯಕ್ಕಿಂತಲೂ ಭಿನ್ನವಾದ ಯೋಗಿಜನಪ್ರಸಿದ್ಧವಾದ ಮತ್ತೊಂದು ಉಪಾಯವನ್ನು ನೀನು ತಿಳಿದಿರುವುದಾಗಿ ನಿನ್ನ ಮಾತಿನಿಂದಲೇ ಕಂಡು ಬಂದುದರಿಂದ ಅದರ ಬಗ್ಗೆ ವಿಶೇಷ ಜಿಜ್ಞಾಸೆಯುಳ್ಳ ನನಗೆ ಉಪದೇಶಿಸುವವನಾಗು. ಇದರಿಂದ ಶಾಶ್ವತಫಲಸಾಧನವಾದ ಉಪಾಸನರೂಪೋಪಾಯದ ಬಗ್ಗೆ ಪ್ರಶ್ನಿಸಿದಂತಾಯಿತು.

'ಅನ್ಯತ್ರ ಅಸ್ಮಾತ್ ಕೃತಾಕೃತಾತ್' 'ಇಲ್ಲಿ ಕೃತ' ಮತ್ತು 'ಅಕೃತ' ವೆಂಬ ಅರ್ಥದ್ವಯವಿರುವ ಕಾರಣ 'ಕೃತಾಕೃತಾಭ್ಯಾಮ್' ಎಂಬ ದ್ವಿವಚನವಿರದೇ ಏಕವಚನವಿರುವುದು 'ಕೃತಂ ಚ ಅಕೃತಂ ಚ ಕೃತಾಕೃತಮ್' ಎಂದು ಸಮಾಹಾರದ್ವಂದ್ವದ ಸಲುವಾಗಿ ನಮ್ಮ ಬುದ್ಧಿಯಿಂದ ರೂಪಗೊಂಡಿದ್ದೆಲ್ಲವೂ ಕೃತವೆನಿಸುವುದು. ನಮ್ಮ ಬುದ್ಧಿಗೆ ಪ್ರೇರಕವಾಗಿ ಯಾವುದು ಇರುವುದೋ ಅದು ಅಕೃತವೆನಿಸುವುದು. ಇಹ–ಪರಗಳಲ್ಲಿ ಕಂಡು–ಕೇಳಬಹುದಾದ ಸಮಸ್ತವೂ ಇವೆರಡರಲ್ಲೇ ಅಡಕವಾಗಿದೆ. ಇವುಗಳ ಪೈಕಿ ಯಾವುದೇ ಒಂದರ ಲಾಭದಿಂದ, ಹರ್ಷಶೋಕಗಳ ದೆಸೆಯಿಂದ ಪಾರಾಗುವುದು ಲೋಕಶಾಸ್ತ್ರಗಳಲ್ಲಿ ಕಂಡು ಬಂದಿಲ್ಲ. ಆದಕಾರಣ ಯಾವುದರ ಪ್ರಾಪ್ತಿಯು ಮುಂದೆ ಮತ್ತೊಮ್ಮೆ ಈ ಹರ್ಷಶೋಕಗಳ ದ್ವಂದಕ್ಕೆ ಗುರಿಯಾಗದಂತೆ ನಮ್ಮನ್ನು ಇರಿಸಲು ಸಮರ್ಥವೋ ಅದು ತಾನೇ ನಿಜವಾದ

ಪ್ರಾಪ್ಯವೆನಿಸುವುದು. ಆದಕಾರಣ ಅಂತಹ ಪ್ರಾಪ್ಯವು ಈ ಕೃತಾಕೃತಗಳೆರಡಕ್ಕಿಂತಲೂ ಭಿನ್ನವಷ್ಟೆ! ಅಂತಹ ಪ್ರಾಪ್ಯವನ್ನು ಅದರಲ್ಲಿ ರುಚಿಗೊಂಡಿರುವ ನನಗೆ ಮನವರಿಕೆಯಾಗುವಂತೆ ತಿಳಿಸು ಇದರಿಂದ ಪರಮಾತ್ಮನೆಂಬ ಪ್ರಾಪ್ಯವಿಷಯಕವಾದ ಪ್ರಶ್ನೆಯನ್ನು ಇಟ್ಟಂತಾಯಿತು.

ಭೂತವೆಂದರೆ ಕಳೆದುಹೋದ ಕಾಲ ಮತ್ತು ಆ ಕಾಲದ ಪರಿಮಿತಿಗೆ ಒಳಪಟ್ಟ ವಸ್ತು ಭವ್ಯವೆಂದರೆ ಮುಂದೆ ಬರುವ ಕಾಲ ಮತ್ತು ಅದರ ಪರಿಮಿತಿಗೆ ಒಳಪಟ್ಟ ವಸ್ತು, ಎರಡನೆಯ 'ಚ ಕಾರದಿಂದ ವರ್ತಮಾನಕಾಲವನ್ನೂ ಅಳವಡಿಸಿಕೊಂಡು ನಡೆಯುತ್ತಿರುವ ಕಾಲ ಮತ್ತು ಅದರ ಪರಿಮಿತಿಗೆ ಒಳಪಟ್ಟವಸ್ತುವನ್ನೂ ಇಲ್ಲಿ ಅರಿಯಬೇಕು. ಈ ಹಿಂದೆ 'ಧೀರಃ ಜಹಾತಿ' ಎಂಬ ವಾಕ್ಯದಲ್ಲಿ ಕರ್ತೃವಾಗಿ ಯಾವ ಧೀರನನ್ನು ಹೇಳಿದೆಯೋ ಅಂತಹ ಕಾಲತ್ರಯ ಮತ್ತು ಅದರ ಪರಿಮಿತಿಗೆ ಒಳಪಟ್ಟ ವಸ್ತುಗಳಿಗಿಂತ ಭಿನ್ನನಾದ ಅಂದರೆ ನಿತ್ಯನಾದ ಉಪಾಯಾನುಷ್ಠಾತೃ (ಉಪೇತೃ)ವನ್ನು ಶ್ರದ್ಧಾಳುವಾದ ನನಗೆ ಉಪದೇಶಿಸು. ಇದರಿಂದ ಉಪಾಸಕನಾದ ಜೀವಾತ್ಮನ ಸ್ವರೂಪವನ್ನು ಪ್ರಶ್ನಿಸಿದಂತಾಯಿತು.

ಅಥವಾ 'ಭೂತಾತ್........ಕೃತಾಕೃತಾತ್ ಅನ್ಯತ್ರ' ಎಂಬ ಮೊತ್ತದಿಂದ ಪ್ರಾಪ್ಯಸ್ವರೂಪವೇ ಪ್ರಶ್ನಿಸಲ್ಪಟ್ಟಿತೆಂದೂ ವ್ಯಾಖ್ಯಾನಿಸಬಹುದು. ಪ್ರಾಪ್ಯಸ್ವರೂಪದಲ್ಲೇ ಮುಕ್ತಿದೆಸೆಯಲ್ಲಿ ತನ್ನ ಅಪಹತಪಾಪ್ಮತ್ವಾದಿ ಬ್ರಾಹ್ಮಗುಣಾಷ್ಟಕಗಳಿಂದ ಕೂಡಿದ ಉಪಾಸಕನು ಜೀವನು 'ಕೃತಾಕೃತ' ಮತ್ತು ಕಾಲತ್ರಯ ಪರಿಚ್ಛಿನ್ನಗಳಿಗಿಂತ ಭಿನ್ನನೇ ಆಗಿರುತ್ತಾನೆ; ಅವನು ನಿತ್ಯನಾಗಿರುವ ಕಾರಣ ಈ ಮಂತ್ರದಲ್ಲಿ ಉಪೇಯೋಪೇತೃಗಳನ್ನು ಒಂದೇ ಪ್ರಶ್ನೆಯಿಂದ ಕೇಳಿದನೆಂಬುದು ಕಂಡುಬರುತ್ತದೆ.

ಭೂತ–ಭವಿಷ್ಯತ್ತುಗಳಿಗಿಂತಲೂ ಭಿನ್ನವಾದ ಉಪೇತೃವಿನ ಸ್ವರೂಪವನ್ನು ಉಪದೇಶಿಸು ಎಂದರ್ಥ. ಸಾಧನದೆಸೆಯಲ್ಲಿ ಫಲವು ಭವಿಷ್ಯತ್ತಾಗುವುದು. ಫಲದೆಸೆಯಲ್ಲಿ ಸಾಧನವು ಕಳೆದುಹೋಗಿರುವುದು. ಈ ಎರಡೂ ದೆಸೆಗಳಲ್ಲೂ ಚ್ಯುತಿ ಇಲ್ಲದೇ ಇರುವವನು ಉಪೇತೃವೂ ಅವನೇ, ಇಲ್ಲಿ 'ಭೂತಾಚ್ಚ, ಭವ್ಯಾಚ್ಚ ಅನ್ಯತ್' ಎಂಬುದರಿಂದ ಹೇಳಲ್ಪಡುತ್ತಾನೆ. 'ಅಣುಮೇತಮಾಪ್ಯ ಮೋದನೀಯಂ ಹಿ ಲಬ್ಧ್ವಾ' ಎಂಬುದರಿಂದ ಉಪಾಸ್ಯನಾದ ಪರಮಾತ್ಮನಿಗಿಂತ ಭಿನ್ನವಾದ ಜೀವಸ್ವರೂಪವೊಂದಿದೆ ಎಂದು ತಿಳಿಸಲ್ಪಟ್ಟಿದೆ. ಆದಕಾರಣ ಅದನ್ನೇ ನನಗೆ ಸ್ಪಷ್ಟವಾಗಿ ತಿಳಿಸು ಎಂದು ಸುಬೋಧಿನೀಕಾರರು ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನ ಮಾಡಿರುವರು.



## ಮಂತ್ರ ೧೫

**सर्वे वेदाः यत्पदमामनन्ति तपांसि सर्वाणि च यद्वदन्ति ।**
**यदिच्छन्तो ब्रह्मचर्यं चरन्ति तत्ते पदं संग्रहेण ब्रवीमि ओमित्येतत् ॥**

ಸರ್ವೇ ವೇದಾಃ ಯತ್ಪದಮಾಮನಂತಿ ತಪಾಂಸಿ
ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ
ಸಂಗ್ರಹೇಣ ಬ್ರವೀಮಿ ಓಮಿತ್ಯೇತತ್ ॥

### ಪ್ರತಿಪದಾರ್ಥ

**ಸರ್ವೇವೇದಾಃ**—ಎಲ್ಲಾವೇದಗಳೂ, **ಯತ್ಪದಮ್**—ಯಾವ (ಭಗವಂತನ) ಸ್ವರೂಪವನ್ನು, **ಆಮನಂತಿ**—ಪ್ರತಿಪಾದಿಸುತ್ತವೆಯೋ, **ಸರ್ವಾಣಿ ತಂಪಾಂಸಿ**—ಎಲ್ಲಾ (ಕೃಚ್ಛ್ರಚಾಂದ್ರಾಯಣವೇ ಮೊದಲಾದ) ಬಗೆಯ ತಪಸ್ಸುಗಳೂ, **ಯದ್ವದಂತಿ**-ಯಾವ ಬ್ರಹ್ಮವನ್ನು ಹೊಂದಲೋಸುಗವೆಂದು ಶಾಸ್ತ್ರಗಳೂ, ಆಚಾರ್ಯರೂ ಹೇಳುವರೋ, **ಯದಿಚ್ಛಂತಃ ಬ್ರಹ್ಮಚರ್ಯಮ್**—ಯಾವ ಬ್ರಹ್ಮವೆಂಬ ಗುರಿಯನ್ನು ಬಯಸುತ್ತಾ, ಗುರುಕುಲ ವಾಸ ವೇದಾಧ್ಯಯನಗಳನ್ನು, **ಚರಂತಿ**—ಆಚರಿಸುತ್ತಾರೋ, **ತತ್ಪದಮ್**—ಆ ಭಗವತ್‌ಸ್ವರೂಪವನ್ನು, **ತೇ**—ನಿನಗೆ, **ಸಂಗ್ರಹೇಣ**—ಸಂಗ್ರಹವಾಗಿ, **ಬ್ರವೀಮಿ**—ಹೇಳುತ್ತೇನೆ. (ಅದೇನೆಂದರೆ), **ಏತತ್**—ಇದು, **ಓಮಿತಿ**—ಓಮ್ ಎಂಬುದೇ ಆಗಿದೆ. (ಈ 'ಓಮ್' ಎಂಬುದೇ ಪ್ರಾಪ್ಯವಾದ ಶ್ರೀಮನ್ನಾರಾಯಣನೆಂಬ ಭಗವತ್ಸ್ವರೂಪಕ್ಕೆ ವಾಚಕವಾಗಿದೆ.)

### ತಾತ್ಪರ್ಯ

ಕರ್ಮಕಾಂಡ-ದೇವತಾಕಾಂಡ-ಬ್ರಹ್ಮಕಾಂಡ ರೂಪವಾದ ಎಲ್ಲಾ ವೇದಗಳೂ ಯಾವ ಬ್ರಹ್ಮಸ್ವರೂಪವನ್ನು ಪ್ರತಿಪಾದಿಸುತ್ತವೆಯೋ, ಕೃಚ್ಛ್ರಚಾಂದ್ರಾಯಣಾದಿತಪೋರೂಪವಾದ ಕರ್ಮಗಳು ಯಾವ ವಸ್ತುವಿನ ಪ್ರಾಪ್ತ್ಯರ್ಥವಾದ ಆರಾಧನಾ ಸ್ವರೂಪವೆಂದು ಶಾಸ್ತ್ರಗಳು ಹೇಳುತ್ತವೆಯೋ, ಮುಮುಕ್ಷುಗಳು ಯಾವುದನ್ನು ಅಪೇಕ್ಷಿಸಿ, ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ, ಆ ಸ್ವರೂಪವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ. ಅದೇನೆಂದರೆ ಇದೇ ಓಂಕಾರವು. ಇದು ಬ್ರಹ್ಮಸ್ವರೂಪವನ್ನು ತಿಳಿಸುತ್ತದೆ ಎಂದು ಯಮನು ನಚಿಕೇತನಿಗೆ ತಿಳಿಸಿದನು.

### ರಂಗರಾಮಾನುಜಭಾಷ್ಯಮ್

ಏವಂ ಪ್ರಾಪ್ಯಂ ಪೃಷ್ಟೋ ಮೃತ್ಯುಃ 'ನ ಜಾಯತೇ ಮ್ರಿಯತೇ' (ಕ.ಉ. 2-18) ಇತ್ಯಾದಿನಾ ವಿಸ್ತರೇಣ ಪ್ರತಿಪಿಪಾದಯಿಷುಃ, ಇದಾನೀಂ ಶ್ರೋತುಃ ಆದರಾತಿಶಯ ಸಿದ್ಧ್ಯರ್ಥಂ ಪ್ರಾಪ್ಯವೈಭವಂ ಪ್ರಕಾಶಯನ್, ಸಂಗ್ರಹೋಕ್ತಿಂ ಪ್ರತಿಜಾನೀತೇ 'ಸರ್ವೇ ವೇದಾ ಯತ್ಪದಮಾಮನಂತಿ । 'ಪದ್ಯತೇ ಗಮ್ಯತೇ' ಇತಿ ವ್ಯುತ್ಪತ್ತ್ಯಾ. 'ಪದ'ಶಬ್ದಃ ಪ್ರಾಪ್ಯ ಸ್ವರೂಪವಾಚೀ । ಯತ್ಸ್ವರೂಪಂ ಸರ್ವೇವೇದಾಃ ಸಾಕ್ಷಾತ್ ಪರಂಪರಯಾ ವಾ ಪ್ರತಿಪಾದಯಂತಿ ಇತ್ಯರ್ಥಃ ।

ಅನೇನ—'ಅಸ್ಯಾಃ ಉಪನಿಷದಃ, ಪ್ರಜಾಪತಿ ವಿದ್ಯಾವತ್ ಪರಿಶುದ್ಧಾತ್ಮ ಸ್ವರೂಪವಿಷಯತ್ವೈವಾಸ್ತು —'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' (ಕ. ಉ. 2–18), 'ಹಂತಾ ಚೇನ್ಮನ್ಯತೇ ಹಂತುಮ್' (ಕ.ಉ. 2–19) ಇತಿ ಮಂತ್ರದ್ವಯಸ್ಯ ಪರಿಶುದ್ಧಾತ್ಮಸ್ವರೂಪಪರತ್ವಸ್ಯ ಸಂಪ್ರತಿಪನ್ನತ್ವಾತ್ ; 'ಅಣೋರಣೀಯಾನ್' ಇತಿ ಮಂತ್ರದ್ವಯ (ಮಂತ್ರ?)ಸ್ಯಾಪಿ, 'ಅವಿನಾಶಿತುತದ್ವಿದ್ಧಿ ಯೇನ ಸರ್ವಮಿದಂ ತತಮ್' (ಭ.ಗೀ.2–17), 'ನಿವ್ಯಾ೯ಪಾರಮನಾಖ್ಯೇಯಂ ವ್ಯಾಪ್ತಿಮಾತ್ರಮನೂಪಮಮ್' (ಪಾಂ.ರಾ.ಶ್ಲೋ.) ಇತಿ ಸ್ಮೃತಿವಚನಾಭ್ಯಾಂ, ಸರ್ವಾಂತಃ ಪ್ರವೇಶಯೋಗ್ಯಾತಿಸೂಕ್ಷ್ಮತಯಾ ವ್ಯಾಪಕತಯಾ ಚ ಪ್ರತಿಪಾದಿತೇ ಪ್ರತ್ಯಗಾತ್ಮನಿ ಉಪಪನ್ನತ್ವಾತ್, 'ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚ ಅಂತಿಕೇ ಚ ತತ್' (ಭ.ಗೀ.13–16) ಇತಿ ಗೀತಾನುಸಾರೇಣ 'ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ' (ಕ.ಉ. 2–21) ಇತಿ ವಚನಸ್ಯಾಪಿ ತತ್ರೈವ ಯುಕ್ತತ್ವಾತ್, 'ಗ್ರಸಿಷ್ಣು ಪ್ರಭವಿಷ್ಣು ಚ' (ಭ.ಗೀ. 13–16) ಇತ್ಯುಪಬೃಂಹಣಾನುಸಾರಾತ್ । 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' (ಕ.ಉ. 2–25) ಇತಿ ಮಂತ್ರಸ್ಯಾಪಿ ತತ್ರ ಸಂಗತಾರ್ಥತ್ವಾತ್, 'ದ್ವಿತೀಯಂ ವಿಷ್ಣುಸಂಜ್ಞಸ್ಯ ಯೋಗಿಧ್ಯೇಯಂ ಪರಂ ಪದಮ್'(ವಿ.ಪು. 6–7–69), 'ಪ್ರಸೂತಿ ನಾಶಸ್ಥಿತಿಹೇತುರೀಶ್ವರಸ್ತ್ವಮೇವ ನಾನ್ಯತ್ ಪರಮಂ ಚ ಯತ್ ಪದಮ್' (ವಿ.ಪು. 1–4–31) ಇತಿ ಸ್ಮೃತ್ಯನುಸಾರೇಣ, 'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' (ಕ. ಉ. 3–9) ಇತಿ ಮಂತ್ರಸ್ಯಾಪಿ ಪರಿಶುದ್ಧಾತ್ಮಸ್ವರೂಪೇ ಸಂಗತಾರ್ಥತ್ವಾತ್, 'ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್' (ಭ.ಗೀ. 8–21) ಇತಿ ಸ್ಮೃತ್ಯನುಸಾರೇಣ 'ಸಾ ಕಾಷ್ಠಾ ಸಾ ಪರಾಗತಿಃ' (ಕ.ಉ. 3⌐11) ಇತಿ ಮಂತ್ರಸ್ಯಾಪಿ ಪರಿಶುದ್ಧಾತ್ಮವಿಷಯತ್ವಸಂಭವಾತ್, 'ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್' (ಭ.ಗೀ. 13–27) ಇತಿ ಸ್ಮೃತ್ಯನುಸಾರೇಣ, 'ಏಷ ಸರ್ವೇಷು ಭೂತೇಷು' (ಕ.ಉ. 3–12) ಇತಿ ಮಂತ್ರಸ್ಯಾಪಿ ಪರಿಶುದ್ಧಸ್ವರೂಪಪರತ್ವೋಪಪತ್ತೇಃ, 'ಪರಾಂಚಿ ಖಾನಿ' (ಕ.ಉ. 4–1) ಇತಿ ಮಂತ್ರೇ ಪರಾಗರ್ಥನಿಂದಾದ್ವಾರೇಣ ಪ್ರತ್ಯಗರ್ಥಸ್ಯೈವ ಪ್ರಕರಣಪ್ರತಿಪಾದ್ಯತ್ವಾವಿಷ್ಕರಣಾತ್, 'ತಿಷ್ಠಂತಂ ಪರಮೇಶ್ವರಮ್' (ಭ. ಗೀ. 13–27) ಇತಿ ಗೀತಾನುಸಾರೇಣ, 'ಈಶಾನೋ ಭೂತಭವ್ಯಸ್ಯ' (ಕ.ಉ. 4–12) ಇತಿ ಮಂತ್ರಸ್ಯಾಪಿ ತತ್ರೈವ ಶುದ್ಧಾತ್ಮಸ್ವರೂಪೇ ಸಂಗತಾರ್ಥತ್ವಾತ್, ಭೇದಪ್ರಸಕ್ತಿಮತಿ ಪ್ರತ್ಯಗಾತ್ಮಸ್ವರೂಪೇ ಏವ 'ನೇಹ ನಾನಾ' ಇತಿ ನಿಷೇಧಸ್ಯಾಪಿ ಸಂಗತಾರ್ಥತ್ವಾತ್, 'ಅಭೇದವ್ಯಾಪಿನೋ ವಾಯೋಸ್ತಥಾಽಸೌ ಪರಮಾತ್ಮನಃ' (ವಿ.ಪು. 2–14–32) ಇತಿ ಸ್ಮೃತಿಪ್ರತ್ಯಭಿಜ್ಞಾಪಕಸ್ಯ 'ವಾಯುರ್ಯಥೈಕೋ ಭುವನಂ ಪ್ರವಿಷ್ಟಃ' (ಕ.ಉ. 5–10) ಇತಿ ಮಂತ್ರಸ್ಯಾಪಿ ಪರಿಶುದ್ಧಸ್ವರೂಪಪರತ್ವಸಂಭವಾತ್, 'ಸರ್ವತಃ ಪಾಣಿಪಾದಂ ತತ್' (ಭ.ಗೀ. 13–13) ಇತಿ ಗೀತಾಭಾಷ್ಯೇ, 'ಬ್ರಹ್ಮಣಾ ಪರಮಸಾಮ್ಯಮಾಪನ್ನೇ ಪರಿಶುದ್ಧಾತ್ಮಸ್ವರೂಪೇ, ಸರ್ವತಃ ಪಾಣಿಪಾದಾದಿಕಾರ್ಯಕರ್ತೃತ್ವಂ ಸಂಭವತಿ' ಇತಿ ಉಪಪಾದಿತತ್ವಾತ್, 'ಏಕಂ ಬೀಜಂ ಬಹುಧಾ ಯಃ ಕರೋತಿ' (ಕ.ಉ. 5–12) ಇತಿ ಮಂತ್ರಸ್ಯಾಪಿ ಪರಿಶುದ್ಧಪರತ್ವೇಽನುಪಪತ್ತ್ಯಭಾವಾತ್. 'ನ ತತ್ರ ಸೂರ್ಯೋ ಭಾತಿ' (ಕ.ಉ. 5–15) ಇತಿ ಮಂತ್ರಸ್ಯಾಪಿ, 'ನ ತದ್ಭಾಸಯತೇ ಸೂರ್ಯಃ' (ಭ.ಗೀ. 15–6) 'ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ' (ಭ.ಗೀ. 13–18) ಇತಿ ಗೀತಾವಚನೇನ ಪರಿಶುದ್ಧಾತ್ಮ

ಸ್ವರೂಪಪರತ್ವಸ್ಯ ಯುಕ್ತತ್ವಾತ್, 'ತಂ ಸ್ವಾಚ್ಛರೀರಾತ್ಪ್ರವೃಹೇತ್' (ಕ.ಉ. 6-17) ಇತಿ ಚೌಪಸಂಹಾರಿಕಮಂತ್ರಸ್ಯ ಪರಿಶುದ್ಧಾತ್ಮಪರತ್ವ ಏವ ಸ್ವಾರಸ್ಯಾತ್, ಕೃತ್ಸ್ನಾಯಾ ಅಪ್ಯುಪನಿಷದಃ, ಪ್ರಜಾಪತಿವಾಕ್ಯವತ್ ಪ್ರತ್ಯಗಾತ್ಮಸ್ವರೂಪ ಮಾತ್ರಪರತ್ವೋಪಪತ್ತೌ, ಪ್ರತ್ಯಗಾತ್ಮ ಪರಮಾತ್ಮರೂಪಪ್ರಾಪ್ಯದ್ವಯಪರತ್ವಕ್ಲೇಶಾಶ್ರಯಣಂ ವೃಥಾ'—

ಇತಿ ಶಂಕಾ ಪ್ರತ್ಯುಕ್ತಾ—ಸರ್ವವೇದಪ್ರತಿಪಾದ್ಯಸ್ಯೈವ, 'ತತ್ತೇ ಪದಂ ಸಂಗ್ರಹೇಣ ಬ್ರವೀಮಿ' ಇತಿ ವಕ್ತವ್ಯತ್ವೇನ ಪ್ರತಿಜ್ಞಾನಾತ್. ಪರಮಾತ್ಮಸ್ವರೂಪ ಪ್ರತಿಪಾದಕವೇದ ಭಾಗ ಪ್ರತಿಪಾದ್ಯತ್ವಸ್ಯ ಶುದ್ಧಸ್ವರೂಪೇ ಅಸಂಭವಾತ್, ಶುದ್ಧಸ್ವರೂಪಸ್ಯಾಪ್ಯಂತರ್ಯಾಮಿಣಃ ಪರಮಾತ್ಮಸ್ವರೂಪಸ್ಯ, ಶುದ್ಧ ಸ್ವರೂಪ ಪ್ರತಿಪಾದಕ ಭಾಗೇನಾಽಪಿ ಪ್ರತಿಪಾದ್ಯತ್ವಸಂಭವಾದಿತಿ ದ್ರಷ್ಟವ್ಯಮ್ ।

ತಪಾಂಸಿ ಸರ್ವಾಣಿ ಚ ಯದ್ವದಂತಿ। ತಪಾಂಸಿ–'ತಪಃ ಪ್ರಧಾನಾ ಉಪರಿತನ ಭಾಗಾಃ' ಇತಿ ವ್ಯಾಸಾರ್ಯೈಃ ವ್ಯಾಖ್ಯಾತಮ್ । ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ । ಬ್ರಹ್ಮಚರ್ಯಮ್–ಗುರುಕುಲವಾಸ–ಸ್ತ್ರೀಸಂಗರಾಹಿತ್ಯಾದಿಲಕ್ಷಣಂ ಯದಿಚ್ಛಂತೋಽನುತಿಷ್ಠಂತಿ । ತತ್ತೇ ಪದಂ ಸಂಗ್ರಹೇಣ ಬ್ರವೀಮಿ । 'ಸಂಗೃಹ್ಯತೇ ಅನೇನ' ಇತಿ ಸಂಗ್ರಹಃ ಶಬ್ದಃ । ಪ್ರಾಪ್ಯವಕ್ತವ್ಯತ್ವಪ್ರತಿಜ್ಞಾಪರೇ ಅಸ್ಮಿನ್ ಮಂತ್ರೇ ಅರ್ಥಾತ್ ಪ್ರಣವ ಪ್ರಶಂಸಾಯಾ ಲಾಭಾತ್, 'ಪ್ರಣವಂ ಪ್ರಶಸ್ಯ' ಇತಿ ಭಾಷ್ಯಸ್ಯ ಚ, 'ಸರ್ವೇ ವೇದಾ' ಇತ್ಯಾದಿ ಪಾದ ತ್ರಯೋಕ್ತಬಹ್ಮಪ್ರತಿಪಾದಕತಯಾ ಪ್ರಶಸ್ಯ ಇತ್ಯರ್ಥಃ' ಇತಿ ಶ್ರುತಪ್ರಕಾಶಿಕಾ ವಚನಸ್ಯ ಚ ನಾನುಪಪತ್ತಿಃ ಇತಿ ದ್ರಷ್ಟವ್ಯಮ್ । ಸಂಕ್ಷೇಪೇಣ ತತ್ಪ್ರತಿಪಾದಕಂ ಕಿಮ್ ? ಇತ್ಯತ ಆಹ— ಓಮಿತ್ಯೇತತ್ ಇತಿ । 'ಓಮ್ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಸ್ಮೃತಃ (ಭ. ಗೀ. 17-23) ಇತಿ ಪ್ರಣವಸ್ಯ ಬ್ರಹ್ಮವಾಚಕತ್ವಾತ್ ಪ್ರಣವಾವಯವಯೋಃ' ಅಕಾರ-ಮಕಾರಯೋಃ ಪರಜೀವವಾಚಿತಯಾ ಉಪಾಯೋಪೇತ್ರೋರಪಿ ಉಪದಿಷ್ಟತ್ವಮಸ್ತೀತಿ ದ್ರಷ್ಟವ್ಯಮ್ ;

## ಅನುವಾದ

ಈ ರೀತಿ ನಚಿಕೇತನು ಪ್ರಾಪ್ಯಸ್ವರೂಪವನ್ನು ಕುರಿತು ಕೇಳಲು, ಯಮನು 'ನ ಜಾಯತೇ ಮ್ರಿಯತೇ' ಮುಂತಾದವುಗಳಿಂದ ಪ್ರಾಪ್ಯಸ್ವರೂಪವನ್ನು ವಿಸ್ತಾರವಾಗಿ ವಿವರಿಸಲು ಇಚ್ಛೆಹೊಂದಿ, ಪ್ರಕೃತ ಈ ಬಗ್ಗೆ ಶ್ರೋತೃವಿಗೆ ವಿಶೇಷ ಆದರವನ್ನು ಉಂಟು ಮಾಡಲು ಪ್ರಾಪ್ಯವಸ್ತುವಿನ ಹಿರಿಮೆಯನ್ನು ಪ್ರಕಾಶಪಡಿಸುತ್ತಾ, 'ಸರ್ವೇ ವೇದಾ ಯತ್ಪದ ಮಾಮನಂತಿ' ಎಂಬುದರಿಂದ ಹೇಳುತ್ತಾನೆ. 'ಪದ್ಯತೇ–ಗಮ್ಯತೇ' ಎಂಬ ನಿರ್ವಚನಕ್ಕನು ಸಾರವಾಗಿ 'ಪದ'ಶಬ್ದವು ಪ್ರಾಪ್ಯಸ್ವರೂಪವನ್ನು ಹೇಳುತ್ತದೆ. ಎಲ್ಲಾ ವೇದಗಳೂ, ಯಾವ ಪ್ರಾಪ್ಯವಸ್ತುವಿನ ಸ್ವರೂಪವನ್ನೇ ಸಾಕ್ಷಾತ್ತಾಗಿ ಅಥವಾ ಪರಂಪರೆಯಾಗಿ ಪ್ರತಿಪಾದಿಸುತ್ತವೆಯೋ ಎಂದರ್ಥ.

ಈ ರೀತಿ ವ್ಯಾಖ್ಯಾನಿಸಿರುವುದರಿಂದ ಈ ಮುಂದೆ ಉಲ್ಲೇಖಿಸುವ ಆಕ್ಷೇಪಕ್ಕೆ ಎಡೆಕೊಡದಂತಾಗುತ್ತದೆ. (ಆಕ್ಷೇಪವಾವುದೆಂದರೆ)–ಈ ಉಪನಿಷತ್ತಿಗೂ ಸಹ ಪ್ರಜಾಪತಿ ವಿದ್ಯೆ (ಛಾಂ.ಉ. 8) ಯಂತೆಯೇ ಪರಿಶುದ್ಧಾತ್ಮಸ್ವರೂಪವನ್ನು ಪ್ರತಿಪಾದಿಸುವುದರಲ್ಲೇ ತಾತ್ಪರ್ಯ.

ಏಕೆಂದರೆ—'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್', (ಕ.ಉ. 2–18), 'ಹಂತಾ ಚೇನ್ಮನ್ಯತೇ ಹಂತುಮ್' (ಕ.ಉ. 2–19) ಎಂಬ ಇವೆರಡು ಮಂತ್ರಗಳೂ ಪರಿಶುದ್ಧಾತ್ಮ ಸ್ವರೂಪ ವಿಷಯಕವೆಂಬ ಬಗ್ಗೆ ಎಲ್ಲರಿಗೂ ಏಕಾಭಿಪ್ರಾಯವಿರುವುದರಿಂದಲೂ, 'ಅಣೋ ರಣೀಯಾನ್' (ಕ.ಉ. 2–20) ಎಂಬ ಮಂತ್ರಕ್ಕೂ ಸಹ 'ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್' (ಭ.ಗೀ. 2–17) ಅಂದರೆ ಯಾವನಿಂದ ಚರಾಚರಾತ್ಮಕವಾದ ಸಮಸ್ತ ವಿಶ್ವವೂವ್ಯಾಪಿಸಲ್ಪಟ್ಟಿರುವುದೋ ಆ ವಸ್ತುವು ನಾಶರಹಿತವಾದುದೆಂದು ತಿಳಿ 'ನಿರ್ವ್ಯಾಪಾರಮನಾಖ್ಯೇಯಂ ವ್ಯಾಪ್ತಿ ಮಾತ್ರಮನೂಪಮಮ್' (ಪಾಂ.ರಾ.ಶ್ಲೋ.) ಅಂದರೆ ಯಾವುದು ಸ್ವತಃ ಯಾವುದೇ ಕ್ರಿಯೆ ಇಲ್ಲದ್ದೂ, ಲೌಕಿಕ ವಸ್ತುಗಳಂತೆ ಹೇಳಲ ಸಾಧ್ಯವೂ, ಸರ್ವವ್ಯಾಪ್ತವೂ, ಅಸದೃಶವೂ, ಆಗಿರುವುದೂ ಎಂಬ ಸ್ಮೃತ್ಯುಕ್ತಿಗಳಿಂದ ಎಲ್ಲದರ ಒಳಗೂ ಪ್ರವೇಶಿಸಲು ಅನುಗುಣವಾಗಿ ಅತಿಸೂಕ್ಷ್ಮವೂ, ವ್ಯಾಪಕವೂ ಆಗಿರುವುದೆಂದು ಪ್ರತಿಪಾದಿಸಲ್ಪಟ್ಟ ಜೀವಾತ್ಮನಲ್ಲೂ ಹೊಂದಿಕೊಳ್ಳುವುದರಿಂದಲೂ, 'ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್' (ಭ.ಗೀ. 13–16) ಅಂದರೆ, ಆ ಆತ್ಮ ತತ್ತ್ವವು ಅತ್ಯಂತ ಸೂಕ್ಷ್ಮವಾದ ಕಾರಣ ದೇಹದಲ್ಲೇ ಇದ್ದರೂ, ದೇಹಕ್ಕಿಂತ ಬೇರೆಯೆಂದು ಸಂಸಾರಿಗಳಿಗೆ ತಿಳಿಯಲು ಅಸಾಧ್ಯವಾಗಿದೆ ಮತ್ತು ಹಿಂದೆ ಹೇಳಿದ (ಆತ್ಮ ಜ್ಞಾನೋಪಯೋಗಿ ಗುಣಗಳಿಲ್ಲದವರಿಗೆ ತನ್ನ ದೇಹದಲ್ಲೇ ಇದ್ದರೂ)ಅದು ದೂರಸ್ಥವೂ, ಅಂದರೆ ಆತ್ಮಜ್ಞಾನೋಪ ಯೋಗಿ ಗುಣಗಳುಳ್ಳವರಿಗೆ ಅದೇ ವಸ್ತುವು ಅತ್ಯಂತ ಸಮೀಪಸ್ಥವೂ ಆಗಿರುವುದು ಎಂಬ ಗೀತೋಕ್ತಿಯಂತೆ 'ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ' (ಕ.ಉ. 2–21) ಅಂದರೆ ಇದ್ದೆಡೆಯಲ್ಲೇ ಇದ್ದು ಅತ್ಯಂತ ದೂರವಾದ ಸ್ಥಾನವನ್ನೂ ಪಡೆದುದಾಗಿದೆ. ನಿದ್ರಿಸಿದವನಂತೆ ಅತ್ಯಂತ ಗೂಢವಾದ ಸ್ಥಾನದಲ್ಲಿದ್ದರೂ, ಸರ್ವದೇಶ–ಸರ್ವಕಾಲ–ಸಂಬಂಧ ವನ್ನುಳ್ಳದ್ದಾಗಿದೆ ಎಂಬ ಇಲ್ಲಿಯ ಮಾತಿಗೂ ಜೀವಾತ್ಮನಲ್ಲೇ ತಾತ್ಪರ್ಯವು ಹೊಂದಿಕೊಳ್ಳು ವುದರಿಂದಲೂ, 'ಗ್ರಸಿಷ್ಣು ಪ್ರಭವಿಷ್ಣು ಚ' (ಭ.ಗೀ. 13–16) ಅಂದರೆ ಭುಕ್ತವಾದ ಅನ್ನಾದಿ ಗಳನ್ನು ಸ್ವೀಕರಿಸುವಂತಹದ್ದೂ ಮತ್ತು ಅವುಗಳ ಜೀರ್ಣತೆಯೆಂಬ ಪರಿಣಾಮಕ್ಕೆ ಕಾರಣವೂ ಎಂಬ ಗೀತೋಪಬೃಂಹಣವನ್ನು ಅನುಸರಿಸಿ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' (ಕ.ಉ. 2–25) ಅಂದರೆ ಯಾವ ವಸ್ತುವಿಗೆ ಬ್ರಹ್ಮ ಕ್ಷತ್ರಗಳಿಂದ ಕೂಡಿದ ವಿಶ್ವವೆಲ್ಲವೂ ಭೋಗಾರ್ಹ ವಾಗಿದೆಯೋ ಎಂಬ ಮಂತ್ರಕ್ಕೂಸಹ ಅದೇ ಅರ್ಥದಲ್ಲಿ ಸಾಂಗತ್ಯ ಬರುವುದರಿಂದಲೂ, 'ದ್ವಿತೀಯಂ ವಿಷ್ಣು ಸಂಜ್ಞಸ್ಯ ಯೋಗಿಧ್ಯೇಯಂ ಪರಂ ಪದಮ್', (ವಿ.ಪು. 6–7–69)ಗೆ ಅಂದರೆ ವಿಷ್ಣುರೂಪಿಯಾದ ಭಗವಂತನ ಅಮೂರ್ತವಾದ ಎರಡನೆಯ ರೂಪವು ಯೋಗಿಗಳ ಧ್ಯಾನಗೋಚರವಾದ ಸರ್ವೋತ್ಕೃಷ್ಟಸ್ವರೂಪವಾಗಿರುವುದು. 'ಪ್ರಸೂತಿನಾಶಸ್ಥಿತಿಹೇತುಃ ಈಶ್ವರಸ್ತ್ವಮೇವ ನಾನ್ಯತ್ ಪರಮಂ ಚ ಯತ್ ಪದಮ್' (ವಿ.ಪು. 1–4–31) ಅಂದರೆ ವಿಶ್ವದ ಉತ್ಪತ್ತಿ, ಸಂಹಾರ ಮತ್ತು ಸ್ಥಿತಿಗಳಿಗೆ ಕಾರಣನಾದ ಈಶ್ವರನೂ ನೀನೇ, ಗಮ್ಯವಾದ ಉತ್ಕೃಷ್ಟಸ್ಥಾನವೂ ನೀನೇ, ಮತ್ಯಾವುದೂ ಇಲ್ಲ. ಎಂಬ ಸ್ಮೃತಿಗನುಗುಣವಾಗಿ 'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' (ಕ.ಉ. 3–9) ಎಂಬ ಮಂತ್ರಕ್ಕೂ ಸಹ ಪರಿಶುದ್ಧಾತ್ಮಸ್ವರೂಪದಂತೆಯೇ ತಾತ್ಪರ್ಯವು ಸಂಗತವಾಗುವುದರಿಂದಲೂ, 'ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್' (ಭ.ಗೀ, 8–21) ಅಂದರೆ ಪ್ರಕೃತಿ–ಸಂಸರ್ಗದಿಂದ ಬಿಡುಗಡೆ ಹೊಂದಿದ ನಿತ್ಯವಾದ ಜೀವಸ್ವರೂಪವೇ ಅವ್ಯಕ್ತ, ಅಕ್ಷರ, ಇವೇ ಮೊದಲಾದ ಶಬ್ದಗಳಿಂದ ಶಾಸ್ತ್ರಗಳಲ್ಲಿ ವ್ಯವಹರಿಸಲ್ಪಟ್ಟಿದೆ. ಅದನ್ನೇ 'ಪರಮಾಗತಿ

ಎಂದು ಹೇಳುವರು. ಈ ಸ್ಮೃತಿಗೆ ತಕ್ಕಂತೆ ಇಲ್ಲಿಯು 'ಸಾ ಕಾಷ್ಠಾ ಸಾ ಪರಾಗತಿಃ' ಎಂಬ ಮಂತ್ರಕ್ಕೂ ಸಹ ಪರಿಶುದ್ಧಾತ್ಮವಿಷಯತ್ವವು ಸಂಭವಿಸುವುದರಿಂದಲೂ, 'ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್' (ಭ. ಗೀ. 13–27)—ಅಂದರೆ ಸುರ-ನರ-ತಿರ್ಯಕ್ ಮನುಷ್ಯ-ಸ್ಥಾವರಾತ್ಮಕವಾದ ಸಮಸ್ತಭೂತಗಳಲ್ಲಿಯೂ, ಜ್ಞಾನೈಕಸ್ವರೂಪವಾಗಿ ಇದ್ದುಕೊಂಡು ಅದಕ್ಕೆ ನಿಯಂತೃವಾಗಿರುವ ಜೀವಾತ್ಮ ಸ್ವರೂಪವನ್ನು—ಎಂಬ ಗೀತಾ ಸ್ಮೃತಿಗನುಸಾರವಾಗಿ ಇಲ್ಲಿಯೂ 'ಏಷ ಸರ್ವೇಷು ಭೂತೇಷು' (ಕ.ಉ. 3–12) ಎಂಬ ಮಂತ್ರಕ್ಕೂ ಸಹ ಪರಿಶುದ್ಧ ಜೀವಸ್ವರೂಪದಲ್ಲೇ ತಾತ್ಪರ್ಯವು ಹೊಂದಿಕೊಳ್ಳುವುದರಿಂದಲೂ 'ಪರಾಂಚಿ ಖಾನಿ' (ಕ.ಉ. 4–1) ಎಂಬ ಮಂತ್ರದಲ್ಲೂ ಇಂದ್ರಿಯಗೋಚರವೆನಿಸುವ (ಪ್ರತ್ಯಕ್–ಪರಾಕ್) ಅರ್ಥಗಳನ್ನು ನಿಂದಿಸುವುದರ ಮೂಲಕ ಜೀವಸ್ವರೂಪವಾದ ಪ್ರತ್ಯಗರ್ಥವನ್ನೇ ಈ ಪ್ರಕರಣದಲ್ಲಿ ಪ್ರತಿಪಾದ್ಯವೆಂದು ಸ್ಪಷ್ಟೀಕರಿಸುವುದರಿಂದಲೂ, 'ತಿಷ್ಠಂತಂ ಪರಮೇಶ್ವರಮ್ (ಭ.ಗೀ. 13–27) ಎಂಬ ಗೀತಾವಾಕ್ಯಾನುಸಾರವಾಗಿ ಇಲ್ಲಿಯು 'ಈಶಾನೋ ಭೂತಭವ್ಯಸ್ಯ' (ಕ.ಉ. 4–12) ಎಂಬ ಮಂತ್ರಕ್ಕೂ ಸಹ (ದೇಹ ನಿಯಂತೃವಾದ) ಶುದ್ಧಾತ್ಮಸ್ವರೂಪದಲ್ಲೇ ತಾತ್ಪರ್ಯವಿರುವುದರಿಂದಲೂ, 'ನೇಹ ನಾನಾ' ಎಂಬ ನಿಷೇಧವೂ ಸಹ ನಾನಾತ್ವ (ಭೇದ) ಪ್ರಸಂಗವುಳ್ಳ ಜೀವಕ್ಕೆ ಅನ್ವಯಿಸುವುದರಿಂದಲೂ 'ಅಭೇದ ವ್ಯಾಪಿನೋ ವಾಯೋಸ್ತಥಾಽಸೌ ಪರಮಾತ್ಮನಃ' (ವಿ.ಪು. 2–14–32) ಅಂದರೆ ಕೊಳಲಿನ ಏಳು. ಬಗೆಯ ರಂಧ್ರಗಳಲ್ಲೂ ವ್ಯತ್ಯಾಸವಿಲ್ಲದೆ ವ್ಯಾಪಿಸುವಹಾಗಿದ್ದರೂ, ಷಡ್ಜಾದಿನಾಮಭೇದವನ್ನು ಹೊಂದುವ ವಾಯುವಿನಂತೆ ಅಭಿನ್ನಸ್ವರೂಪನಾದ ಪರಮಾತ್ಮನದೇ ಆಕಾರಭೇದವಿದು ಎಂಬ ಸ್ಮೃತಿಯನ್ನು ಜ್ಞಾಪಿಸುವ ಇಲ್ಲಿಯು 'ವಾಯುರ್ಯಥೈಕೋ ಭುವನಂ ಪ್ರವಿಷ್ಟಃ' (ಕ.ಉ. 5–10) ಎಂಬ ಮಂತ್ರಕ್ಕೂ ಸಹ ಕೇವಲ ಜ್ಞಾನಸ್ವರೂಪಿಯಾದ ಜೀವನಲ್ಲೂ ತಾತ್ಪರ್ಯ ಹೊಂದುವುದರಿಂದಲೂ, 'ಸರ್ವತಃ ಪಾಣಿಪಾದಂ ತತ್' (ಭ.ಗೀ. 13–13) ಎಂಬ ಗೀತಾವಚನದ ಭಾಷ್ಯದಲ್ಲಿ 'ಬ್ರಹ್ಮಣಾ ಪರಮಸಾಮ್ಯಮಾಪನ್ನೇ ಪರಿಶುದ್ಧಾತ್ಮಸ್ವರೂಪೇ ಸರ್ವತಃ ಪಾಣಿಪಾದಾದಿಕಾರ್ಯಕರ್ತೃತ್ವಂ ಸಂಭವತಿ' ಎಂಬುದಾಗಿ (ಪರಬ್ರಹ್ಮದೊಡನೆ ಪರಮಸಾಮ್ಯವನ್ನು ಹೊಂದಿದ ಪರಿಶುದ್ಧಜೀವಸ್ವರೂಪದಲ್ಲಿ 'ಸರ್ವತಃ ಪಾಣಿ–ಪಾದತ್ವಾದಿಗಳು ಸಂಭವಿಸುತ್ತವೆಯೆಂದು ನಿರೂಪಿಸಿರುವುದರಿಂದ) ಇಲ್ಲಿಯು 'ಏಕಂ ಬೀಜಂ ಬಹುಧಾ ಯಃ ಕರೋತಿ' (ಕ.ಉ. 5–12) ಎಂಬ ಮಂತ್ರಕ್ಕೂ ಸಹ ಪರಿಶುದ್ಧ ಜೀವಸ್ವರೂಪ ತಾತ್ಪರ್ಯವನ್ನು ಹೇಳುವುದರಲ್ಲಿ ಅನುಪಪತ್ತಿ ಇಲ್ಲದಿರುವುದರಿಂದಲೂ, 'ನ ತತ್ರ ಸೂರ್ಯೋ ಭಾತಿ' (ಕ.ಉ. 5–15) ಎಂಬ ಈ ಮಂತ್ರಕ್ಕೂ, 'ನ ತದ್ಭಾಸಯತೇ ಸೂರ್ಯಃ (ಭ.ಗೀ. 5–16) 'ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ' (ಭ. ಗೀ. 13–18) ಎಂಬ ಗೀತಾವಾಕ್ಯದಂತೆ ಪರಿಶುದ್ಧಜೀವಪರತ್ವ ಹೊಂದಿಕೊಳ್ಳುವುದರಿಂದಲೂ, ಇಲ್ಲಿಯು ಉಪನಿಷತ್ತಿನ ಉಪಸಂಹಾರದಲ್ಲಿ ಕಂಡುಬರುವ 'ತಂ ಸ್ವಾಚ್ಛರೀರಾತ್ಪ್ರವೃಹೇತ್' (ಕ.ಉ. 6–171) ಎಂಬ ಮಂತ್ರಕ್ಕೆ (ಶರೀರಿಯಾದ) ಶುದ್ಧಾತ್ಮಸ್ವರೂಪದಲ್ಲೂ ತಾತ್ಪರ್ಯ ಹೇಳುವುದೇ ಸ್ವರಸವಾಗಿರುವುದರಿಂದಲೂ, ಈ ಸಂಪೂರ್ಣಕಠೋಪನಿಷತ್ತು ಪ್ರತ್ಯಗಾತ್ಮವೆನಿಸುವ ಜೀವಸ್ವರೂಪದ ನಿರೂಪಣೆಯಲ್ಲೇ ಪರ್ಯವಸಾನ ಹೊಂದುವುದು ಯುಕ್ತವಾಗಿರಲಾಗಿ ಪ್ರತ್ಯಗಾತ್ಮ ಮತ್ತು ಪರಮಾತ್ಮಗಳೆಂಬ ಎರಡು ಪ್ರಾಪ್ಯವಸ್ತುಗಳಲ್ಲೂ ತಾತ್ಪರ್ಯವನ್ನು ಹೇಳಿ ಕ್ಲೇಶಪಡುವುದು ವ್ಯರ್ಥ ಎಂದು ಇದಕ್ಕೆ ಸಮಾಧಾನ.

ಸರ್ವವೇದ ಪ್ರತಿಪಾದ್ಯವಾದ ವಸ್ತುವನ್ನೇ ತಾನು ಇಲ್ಲಿ ಹೇಳಹೊರಟಿರುವುದಾಗಿ 'ತತ್ತೇ ಪದಂ ಸಂಗ್ರಹೇಣ ಬ್ರವೀಮಿ' ಎಂಬುದರಿಂದ ಪ್ರತಿಜ್ಞೆ ಮಾಡಿರುವ ಕಾರಣ ಕೇವಲ ಪರಮಾತ್ಮ ಸ್ವರೂಪವನ್ನು ಪ್ರತಿಪಾದಿಸುವ ವೇದಭಾಗಗಳಿಗೆ ಶುದ್ಧಾತ್ಮಸ್ವರೂಪವು ಪ್ರತಿಪಾದ್ಯಗುವುದು ಅಸಂಭವಿಯಾದುದರಿಂದ ಶುದ್ಧಸ್ವರೂಪಕ್ಕೂ ಅಂತರ್ಯಾಮಿಯಾದ ಪರಮಾತ್ಮ ಸ್ವರೂಪವನ್ನೂ, ಶುದ್ಧಜೀವಸ್ವರೂಪವನ್ನು ಹೇಳುವ ವೇದಭಾಗಗಳು ಪ್ರತಿಪಾದಿಸುತ್ತವೆಯೆಂದರೆ ಯುಕ್ತವಾಗುವುದರಿಂದ ಈ ಉಪನಿಷತ್ತು ಪರಮಾತ್ಮ ಸ್ವರೂಪಕ್ಕೆ ಸಾಕ್ಷಾತ್ತಾಗಿಯೂ, ಪರಂಪರೆಯಾಗಿಯೂ ಪ್ರತಿಪಾದಕವೆಂಬುದೇ ಸರಿ.

ತಪಾಂಸಿ ಸರ್ವಾಣಿ ಚ ಯದ್ವದಂತಿ। ತಪಾಂಸಿ–ತಪಃ ಪ್ರಧಾನವಾದ ವೇದದ ಕೊನೆಯ ಭಾಗಗಳು (ಉಪನಿಷತ್ತುಗಳು) ಎಂಬುದಾಗಿ ವ್ಯಾಸಾರ್ಯರಿಂದ ವಿವರಿಸಲ್ಪಟ್ಟಿದೆ. ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ, ಬ್ರಹ್ಮಚರ್ಯಮ್–ಗುರುಕುಲವಾಸ ಮತ್ತು ಸ್ತ್ರೀಸಹಸವಾಸವಿಲ್ಲದಿರುವಿಕೆ ಮೊದಲಾದ ಬ್ರಹ್ಮಚರ್ಯವನ್ನು, ಯಾವುದನ್ನು ಬಯಸುತ್ತಾ ನಡೆಸುವರೋ ತತ್ತೇ ಪದಂ ಸಂಗ್ರಹೇಣ ಬ್ರವೀಮಿ. 'ಸಂಗ್ರಹ' ಎಂಬುದಕ್ಕೆ ಶಬ್ದ ಎಂದರ್ಥ. 'ಸಂಗೃಹ್ಯತೇ ಅನೇನ' ಎಂದು ಇದರ ವ್ಯುತ್ಪತ್ತಿ. ಇಲ್ಲಿ 'ಪ್ರಣವಂ ಪ್ರಶಸ್ಯ' ಎಂಬುದಾಗಿ ಭಾಷ್ಯಗ್ರಂಥವಿದೆ. 'ಸರ್ವೇವೇದಾಃಇತ್ಯಾದಿ ಪಾದತ್ರಯೋಕ್ತಬ್ರಹ್ಮಪ್ರತಿಪಾದಕತಯಾ ಪ್ರಶಸ್ಯೇತ್ಯರ್ಥಃ' ಎಂಬ ಶ್ರುತಪ್ರಕಾಶಿಕೆಯ ವಚನವೂ ಇದೆ. ಪ್ರಾಪ್ಯವಸ್ತುವಿನ ನಿರೂಪಣೆಯನ್ನು ಪ್ರತಿಜ್ಞೆ ಮಾಡುವ ಈ ಮಂತ್ರದಲ್ಲಿ ಅರ್ಥಾತ್ ಪ್ರಣವದ ಪ್ರಶಂಸೆಯೂ ಕಂಡುಬರುವುದರಿಂದ, ಈ ಎರಡು ವಾಕ್ಯಗಳಿಗೆ ಅನುಪಪತ್ತಿ ಯಾವುದೂ ಇಲ್ಲ. ಸಂಕ್ಷಿಪ್ತವಾಗಿ ಆ ಪ್ರಾಪ್ಯವನ್ನು ಪ್ರತಿಪಾದಿಸುವುದು ಯಾವುದು? ಎಂಬ ಪ್ರಶ್ನೆಗೆ ಉತ್ತರ 'ಓಮಿತ್ಯೇತತ್' ಎಂಬುದಾಗಿ. 'ಓಮ್ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಸ್ಸ್ಮೃತಃ' ಎಂಬ ಗೀತಾವಾಕ್ಯಪ್ರಕಾರ ಪ್ರಣವವು ಬ್ರಹ್ಮಕ್ಕೆ ವಾಚಕವಾದುದರಿಂದ ಪ್ರಣವದ ಅವಯವವಾದಂತಹ ಅಕಾರ, ಮಕಾರಗಳು ಪರಮಾತ್ಮ–ಜೀವಾತ್ಮರುಗಳನ್ನು ಹೇಳುವ ಕಾರಣ (ಉಪೇಯನಾಗಿದ್ದು) ಸಿದ್ಧೋಪಾಯರೂಪಿಯಾದ ಪರಮಾತ್ಮನನ್ನೂ ಮತ್ತು ಉಪೇತೃವಾದ ಜೀವಾತ್ಮನನ್ನೂ ಇಲ್ಲಿ ಉಪದೇಶಿಸಿದೆ ಎಂದು ತಿಳಿಯತಕ್ಕದ್ದು.

## ಭಾಷ್ಯಸಾರ

ಹದಿನಾಲ್ಕನೆಯ ಮಂತ್ರದಲ್ಲಿ ಕಂಡಂತೆ ಪ್ರಶ್ನಿಸಿದ ನಚಿಕೇತನಿಗೆ, ಮೃತ್ಯುದೇವನು ತಾನು ಮುಂದೆ ಹೇಳುವ ವಿಷಯದ ಮಿಗಿಲಾದ ಆದರವನ್ನು ಒದಗಿಸಿಕೊಡಲು ಪ್ರಾಪ್ಯನಾದ ಪರಮಾತ್ಮನ ಮಹಿಮೆಯನ್ನು ವರ್ಣಿಸುತ್ತಾ ಪ್ರಣವೋಪಾಸನೆಯ ಸಂಕ್ಷಿಪ್ತರೂಪವನ್ನು 'ಸರ್ವೇ ವೇದಾಃ' ಎಂಬ ಮುಂದಿನ ಮಂತ್ರದಿಂದ ಹೇಳುತ್ತಾನೆ.

ಇಲ್ಲಿರುವ 'ಪದಮ್' ಎಂಬ ಶಬ್ದಕ್ಕೆ 'ಪದ್ಯತೇ-ಗಮ್ಯತೇ' ಎಂಬ ನಿರ್ವಚನದ ರೀತ್ಯಾ ಪ್ರಾಪ್ಯಸ್ವರೂಪವೆಂದರ್ಥ, ಯಜಮಾನ, ಅವನು ಮಾಡುವ ಯಜ್ಞ. ಅದಕ್ಕೆ ಆರಾಧ್ಯವೆನಿಸುವ ಇಂದ್ರಾದಿದೇವತೆ ಇವುಗಳ ಮೂಲಕ ವೇದದ ಪೂರ್ವಭಾಗಗಳು ಸರ್ವಾಂತರ್ಯಾಮಿಯಾದ ಪರಮಾತ್ಮನನ್ನು ಬೋಧಿಸುತ್ತವೆ. ವೇದದ ಅಪರಭಾಗವಾದ

ಉಪನಿಷತ್ತುಗಳು ನೇರವಾಗಿಯೇ ಪ್ರಾಪ್ಯವಾದ ಪರಮಾತ್ಮನನ್ನು ಬೋಧಿಸುತ್ತವೆ. ಒಟ್ಟಿನಲ್ಲಿ ಎಲ್ಲ ವೇದಗಳೂ ಯಾವ ಪ್ರಾಪ್ಯವಸ್ತುವನ್ನೇ ಬೋಧಿಸುತ್ತವೆಯೋ ಎಂದರ್ಥ.

'ತಪಾಂಸಿ ಸರ್ವಾಣಿ ಚ ಯದ್ವದಂತಿ' ಇಲ್ಲಿಯು 'ತಪಃ' ಶಬ್ದವು 'ಯಸ್ಯ ಜ್ಞಾನಮಯಂ ತಪಃ' ಇತ್ಯಾದಿಗಳಲ್ಲಿ ಜ್ಞಾನರೂಪವೆಂದು ಪ್ರಸಿದ್ಧವಾದ ತಪಸ್ಸನ್ನೇ ಪ್ರಧಾನವಾಗಿ ಉಳ್ಳ ಋಷಿಗಳನ್ನು ಬೋಧಿಸುತ್ತದೆ. ಜ್ಞಾನಿಗಳಾದ ಎಲ್ಲಾ ಋಷಿಗಳೂ ಏಕಾಭಿಪ್ರಾಯದಿಂದ ಯಾವ ಪ್ರಾಪ್ಯಸ್ವರೂಪವನ್ನೇ ಪ್ರತಿಪಾದಿಸುವರೋ, ಎಂದರ್ಥ. ಅಥವಾ ಕೃಚ್ಛ್ರ ಚಾಂದ್ರಾಯಣಾದಿ ಎಲ್ಲಾ ತಪಸ್ಸುಗಳೂ ಪರಂಪರೆಯೂ ಯಾವ ಪ್ರಾಪ್ಯವನ್ನು ಹೊಂದುವುದಕ್ಕಾಗಿಯೇ ಎಂದು ವೇದಗಳೇ ಘೋಷಿಸುತ್ತಿರುತ್ತವೆಯೋ ಎಂದರ್ಥ. 'ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ' ಯಾವ ಪ್ರಾಪ್ಯವಸ್ತುವನ್ನು ಹೊಂದಲು ಬಯಸುತ್ತಿರುವ ಮೋಕ್ಷಪರಾಯಣರು, ಅದಕ್ಕಾಗಿ ಎಂಟು ಬಗೆಯ ಸ್ತ್ರೀಸಂಗಪರಿತ್ಯಾಗಾದಿರೂಪವಾದ ಮತ್ತು ಗುರೂಪಸತ್ಯಾದಿರೂಪವಾದ ಶುದ್ಧಬ್ರಹ್ಮಚರ್ಯವನ್ನು ಕೈಗೊಳ್ಳುತ್ತಾರೋ ಎಂದರ್ಥ. 'ತತ್ತೇ ಪದಂ ಸಂಗ್ರಹೇಣ ಬ್ರವೀಮಿ' ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾದ ಆ ಪ್ರಾಪ್ಯಸ್ವರೂಪವನ್ನು ನಿನಗೆ ಸಂಕ್ಷಿಪ್ತವಾದ ಶಬ್ದದ ಮೂಲಕ ಉಪದೇಶಿಸುವೆನು, ಆ ಸಂಕ್ಷಿಪ್ತ ಶಬ್ದವಾವುದೆಂದರೆ, 'ಓಮ್' ಎಂಬುದು. ಇಲ್ಲಿ 'ಓಮಿತ್ಯೇತತ್' ಎಂಬ ಮಂತ್ರಖಂಡದ ಇತಿ ಶಬ್ದವು ಅದಕ್ಕೆ ಮೊದಲು ಹೇಳಿದ 'ಓಮ್' ಎಂಬ ಆನುಪೂರ್ವಿ ಪರಿಚಯಮಾಡಿಕೊಡುವುದಾಗಿದೆ. 'ಘಟ' ಎಂದು ಹೇಳಿದನು' ಎಂಬ ವಾಕ್ಯದಲ್ಲಿ 'ಎಂದು' ಎಂಬುದು ಅದರ ಹಿಂದಿನ 'ಘಟ' ಎಂಬ ಶಬ್ದದ ಆನುಪೂರ್ವಿಯನ್ನು ನಿರ್ದೇಶಿಸುವಂತೆ, 'ಏತತ್' ಎಂಬ ಶಬ್ದವೂ 'ಓಮ್' ಎಂಬ ಪದಕ್ಕೆ ವಿಶೇಷಣವಾಗಿದ್ದು ಅದು ಪ್ರತ್ಯಕ್ಷವಿಷಯವೆಂಬ ಅಂಶವನ್ನು ಬೋಧಿಸಿ ಅದರ ಮೂಲಕ ನಿನ್ನ ಕಿವಿಗೆ ಕೇಳಿಸುತ್ತಿರುವ ಈ 'ಓಮ್' ಎಂಬುದು ಸಂಕ್ಷೇಪವಾಗಿ ಪ್ರಾಪ್ಯವಾಚಕ ಶಬ್ದವಾಗಿದೆ ಎಂದರ್ಥ.

'ತಸ್ಯ ವಾಚಕಃ ಪ್ರಣವಃ', (ಯೋಗಸೂತ್ರ) 'ಓಮ್ ತತ್ಸದಿತಿ ನಿರ್ದೇಶೋ ಬ್ರಹ್ಮಣಃ ತ್ರಿವಿಧಃ ಸ್ಮೃತಃ' (ಭ.ಗೀ. 17–23) ಇತ್ಯಾದಿ ವಾಕ್ಯಗಳೂ ಸಹ ಓಂಕಾರವು ಪ್ರಾಪ್ಯವಾದ ಪರಮಾತ್ಮ ಸ್ವರೂಪಕ್ಕೆ ವಾಚಕ' ಎಂಬುದನ್ನು ಸಮರ್ಥಿಸುತ್ತವೆ. ಇದರಿಂದ ಪ್ರಾಪ್ಯವಸ್ತುವಿನಲ್ಲಿರುವ ಪ್ರಣವಪ್ರತಿಪಾದ್ಯತ್ವವೆಂಬ ಹಿರಿಮೆಯೂ, ಪ್ರಣವದಿಂದ ಅದನ್ನು ಉಪಾಸನೆ ಮಾಡುವದೆಂಬ ಉಪಾಯವೂ ತೋರಿಸಲ್ಪಟ್ಟಿತು.



## ಮಂತ್ರ ೧೬

**एतद्ध्येवाक्षरं ब्रह्म एतद्ध्येवाक्षरं परम् ।**
**एतद्ध्येवाक्षरं ज्ञात्वा यो यदिच्छति तस्य तत् ।**

ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥

### ಪ್ರತಿಪದಾರ್ಥ

ಏತತ್ ಅಕ್ಷರಮ್ ಏವ (ಹಿ)—ಈ ಪ್ರಸಿದ್ಧವಾದ 'ಓಮ್' ಎಂಬ ಅಕ್ಷರವೇ, ಬ್ರಹ್ಮ—ಪರಬ್ರಹ್ಮ ಪ್ರಾಪ್ತಿಸಾಧನವು, ಏತತ್ ಅಕ್ಷರಮೇವ (ಹಿ)—ಈ ಪ್ರಸಿದ್ಧವಾದ 'ಓಮ್' ಎಂಬ ಅಕ್ಷರವೇ. ಪರಮ್—ಶ್ರೇಷ್ಠವು ಜಪಿಸತಕ್ಕವುಗಳಲ್ಲಿ ಶ್ರೇಷ್ಠವಾದುದು. ಏತತ್ ಅಕ್ಷರಮ್ (ಹಿ)—ಈ ಪ್ರಸಿದ್ಧವಾದ 'ಓಮ್' ಎಂಬ ಅಕ್ಷರದ ಅರ್ಥವನ್ನೇ, ಜ್ಞಾತ್ವಾ—ಪರಬ್ರಹ್ಮವೆಂದು ತಿಳಿದುಕೊಂಡು, ಯಃ—ಯಾವ ಯಾವ ಅಧಿಕಾರಿಯು, ಯತ್ ಇಚ್ಛತಿ—ಯಾವ ಫಲವನ್ನು ಬಯಸುತ್ತಾನೋ, ತಸ್ಯ ತತ್—ಆಯಾಯಾ ಅಧಿಕಾರಿಗೆ ಆ ಫಲವು (ಭವತಿ—ಉಂಟಾಗುತ್ತದೆ.)

### ತಾತ್ಪರ್ಯ

'ಓಂಕಾರವೇ' ಪರಬ್ರಹ್ಮಪ್ರಾಪ್ತಿಗೆ ಸಾಧನವೂ ಮತ್ತು ಜಪಿಸತಕ್ಕವುಗಳಲ್ಲಿ ಶ್ರೇಷ್ಠವೂ ಆಗಿದ್ದು ಇದರ ಉಪಾಸಕನಿಗೆ ಅವನವನ ಉದ್ದೇಶಕ್ಕೆ ತಕ್ಕಂತೆ ಆಯಾ ಫಲವನ್ನು ದೊರಕಿಸಿ ಕೊಡುತ್ತದೆ ಎಂಬುದರ ಮೂಲಕ ಪರಬ್ರಹ್ಮವಾಚಕವಾದ ಈ ಪ್ರಣವವು ಪ್ರಶಂಸನೀಯ ವಾಗಿದೆ.

### ರಂಗರಾಮಾನುಜಭಾಷ್ಯಮ್

ಏವಂ ವಾಚಕಂ ಪ್ರಣವಂ ದ್ವಾಭ್ಯಾಂ ಸ್ತೌತಿ—ಏತದ್ಧ್ಯೇವಾಕ್ಷರಂ ಬ್ರಹ್ಮ । 'ಓಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' (ಪ್ರ.ಉ. 65) ಇತಿ ಬ್ರಹ್ಮ ಪ್ರಾಪ್ತಿಸಾಧನ ಧ್ಯಾನಾಲಬಂಬನತ್ವಾದಿದಮೇವಾಕ್ಷರಮ್, ಬ್ರಹ್ಮಪ್ರಾಪ್ತಿಸಾಧನತ್ವಾತ್ ಬ್ರಹ್ಮ । ಏತದ್ಧ್ಯೇವಾಕ್ಷರಂ ಪರಮ್ । ಜಪ್ಯೇಷು ಧ್ಯೇಯೇಷು ಚ ಶ್ರೇಷ್ಠಮಿತ್ಯರ್ಥಃ । ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ । ಏತದಕ್ಷರಮುಪಾಸ್ಯ, ಅನೇನ ಉಪಾಸನೇನ ಇದಂ ಫಲಂ ಮೇ ಭೂಯಾದಿತಿ [ಯೋ ?] ಯತ್ ಕಾಮಯತೇ, ತಸ್ಯ ತದ್ಭವತೀತ್ಯರ್ಥಃ ॥

### ಅನುವಾದ

ಬ್ರಹ್ಮವಾಚಕವಾದ ಪ್ರಣವವನ್ನು 'ಏತದ್ಧ್ಯೇವಾಕ್ಷರಮ್ ಇತ್ಯಾದಿ........' ಎರಡು ಮಂತ್ರಗಳಿಂದ ಸ್ತುತಿಸುತ್ತಾನೆ—'ಓಮಿತ್ಯನೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ' (ಪ್ರ. ಉ. 5-5) ಎಂದು ಬ್ರಹ್ಮಪ್ರಾಪ್ತಿಗೆ ಸಾಧನವಾದ ಧ್ಯಾನಕ್ಕೆ ಸಹಕಾರಿಯಾದ ಈ ಓಂಕಾರವೆಂಬ ಅಕ್ಷರವೇ ಧ್ಯಾನದ ಮೂಲಕ ಬ್ರಹ್ಮಪ್ರಾಪ್ತಿಗೆ ಸಾಧನವಾದುದರಿಂದ

'ಬ್ರಹ್ಮ' ಎನಿಸಿದೆ. ಏತದ್ಧ್ಯೇವಾಕ್ಷರಮ್ ಪರಮ್—ಜಪಿಸಬೇಕಾದ ಮಂತ್ರಗಳಲ್ಲಿಯೂ, (ಉಪಾಸ್ಯವು ಶಬ್ದಬ್ರಹ್ಮವಾದಲ್ಲಿ) ಧ್ಯೇಯಗಳಲ್ಲಿಯೂ ಈ ಓಂಕಾರವು ಶ್ರೇಷ್ಠತಮವಾದುದು. ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್—ಈ ಓಂಕಾರ ರೂಪವಾದ ಅಕ್ಷರವನ್ನು ಉಪಾಸನೆ ಮಾಡಿ 'ಇದರಿಂದ ನನಗೆ ಈ ಫಲ ಲಭಿಸಲಿ' ಎಂದು ಯಾವ ಫಲವನ್ನು ಉಪಾಸಕನು ಅಪೇಕ್ಷಿಸುವನೋ, ಅವನಿಗೆ ಆ ಫಲವೇ ದೊರಕುತ್ತದೆ.

### ಭಾಷ್ಯಸಾರ

16 ಮತ್ತು 17ನೇ ಮಂತ್ರಗಳಿಂದ ಪರಮಾತ್ಮವಾಚಕವಾದ ಓಂಕಾರದ ಮಹಿಮೆಯನ್ನು ವಿವರಿಸುತ್ತಾನೆ—

ಈ ಓಂಕಾರವೆಂಬ ಅಕ್ಷರವೇ ತನ್ನ ಜಪಾದಿಗಳ ಮೂಲಕ ಬ್ರಹ್ಮಪ್ರಾಪ್ತಿಗೆ ಸಾಧನವಾಗಿದೆ. ಬ್ರಹ್ಮಪ್ರಾಪ್ತಿಸಾಧನವಾದ ಪ್ರಣವದಲ್ಲಿ ಬ್ರಹ್ಮತ್ವವನ್ನು ಆರೋಪಿಸುವುದರ ಮೂಲಕ ಅದರ ಪ್ರಶಂಸೆಯು ವ್ಯಕ್ತವಾಗಿದೆ. ಈ ಪ್ರಣವವೆಂಬ ಅಕ್ಷರವೇ ಜಪಿಸತಕ್ಕ ಮಂತ್ರಗಳಲ್ಲಿ ಮತ್ತು ಧ್ಯಾನಿಸತಕ್ಕ ವಸ್ತುಗಳಲ್ಲಿ ಶ್ರೇಷ್ಠವು. ಏಕೆಂದರೆ ಇದರ ಜಪ ಮತ್ತು ಧ್ಯಾನಗಳು ಉಳಿದ ಮಂತ್ರಗಳ ಜಪಾದಿಗಳಿಗಿಂತಲೂ, ಅತ್ಯಂತ ಶೀಘ್ರವಾಗಿ ಬ್ರಹ್ಮಜ್ಞಾನಕ್ಕೆ ಸಾಧನವಾಗಿರುವುದೇ ಆಗಿದೆ. ಎರಡೂ ಕಡೆ ಶಬ್ದವು ಈ ಓಂಕಾರಕ್ಕೆ ಬ್ರಹ್ಮತ್ವವನ್ನು ಆರೋಪಿಸುವುದೂ ಶ್ರೇಷ್ಠತ್ವವೂ, ವೇದ ಪ್ರಸಿದ್ಧವೆಂದು ಸೂಚಿಸುತ್ತದೆ. ಈ ಪ್ರಣವವೆಂಬ ಅಕ್ಷರವನ್ನು ಉಪಾಸನೆ ಮಾಡಿ ಯಾವ-ಯಾವನು ಇದು ನನಗೆ ದೊರಕಲೆಂದು ಯಾವ ವಸ್ತುವನ್ನು ಬಯಸುತ್ತಾನೋ ಅದು ಅವನಿಗೆ ದೊರಕುತ್ತದೆ. ಇದೂ ವೇದಶಾಸ್ತ್ರಗಳಲ್ಲಿ ಪ್ರಸಿದ್ಧವೆಂದರ್ಥ.

'ಏತದ್ಧ್ಯೇವಾಕ್ಷರಂ ಬ್ರಹ್ಮ' ಎಂಬುದಕ್ಕೆ ಬ್ರಹ್ಮದಂತೆ 'ಓಮ್' ಎಂಬ ಅಕ್ಷರವೂ, ಉಪಾಸನಾದಿಗಳಿಂದ ಸಕಲ ಬಯಕೆಗಳನ್ನೂ ನೆರವೇರಿಸಿಕೊಡುವುದರಿಂದ ಈ ಅಕ್ಷರವನ್ನೂ 'ಬ್ರಹ್ಮ' ಎಂದು ಸ್ತುತಿಸಲಾಗಿದೆ. ವಾಚಕಸ್ತುತಿಯು ವಾಚ್ಯಸ್ತುತಿಯಲ್ಲಿ ಕೊನೆಗೊಳ್ಳುವುದರಿಂದ ಓಂಕಾರದ ಸ್ತುತಿಯೂ ಪರಮಾತ್ಮನ ಸ್ತುತಿಯಲ್ಲಿ ಕೊನೆಗೊಳ್ಳುತ್ತದೆ ಎಂದು ಸುಬೋಧಿನೀಕಾರರು ತಿಳಿಸಿರುವರು.



# ಮಂತ್ರ ೧೭

**एतदालम्बनं श्रेष्ठमेतदालम्बनं परम् ।**
**एतदालम्बनं ज्ञात्वा ब्रह्मलोके महीयते ॥**

ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್ ।
ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥

## ಪ್ರತಿಪದಾರ್ಥ

ಏತತ್ ಆಲಂಬನಮ್—'ಓಮ್' ಎಂಬ ಪ್ರಣವವನ್ನು ಆಶ್ರಯಿಸುವುದು, ಶ್ರೇಷ್ಠಮ್—ಎಲ್ಲ ಮಂತ್ರಗಳಿಗೂ ಮತ್ತು ಧ್ಯಾನಾದಿಗಳಿಗೂ, ಇರುವ ಹಿರಿಮೆಯನ್ನು ವ್ಯಕ್ತಗೊಳಿಸತಕ್ಕದ್ದು, ಏತತ್ ಆಲಂಬನಮ್—ಈ ಪ್ರಣವದ ಮೂಲಕ ಉಪಾಸನೆಯು, ಪರಮ್—ಪರಬ್ರಹ್ಮಜ್ಞಾನಕ್ಕೆ ಸಾಧನವಾದುದರಿಂದ ಹಿರಿದು, ಏತತ್—ಈ ಪ್ರಣವಾರ್ಥದ ಉಪಾಸನೆಯು, ಆಲಂಬನಮ್—ಐಹಿಕಾಮುಷ್ಮಿಕ ಸರ್ವಫಲಗಳಿಗೂ ಆಧಾರಭೂತವಾದುದು (ಎಂದು), ಜ್ಞಾತ್ವಾ—ತಿಳಿದು. (ಉಪಾಸಿಸಿದವನು), ಬ್ರಹ್ಮಲೋಕೇ—ಪರಬ್ರಹ್ಮದ ವೈಕುಂಠಲೋಕದಲ್ಲಿ, ಮಹೀಯತೇ—ಮುಕ್ತರಿಂದ ಪೂಜಿಸಲ್ಪಡುತ್ತಾನೆ.

## ತಾತ್ಪರ್ಯ

ಪ್ರಣವೋಪಾಸನೆಯು ಶ್ರೇಷ್ಠವಾದುದು. ಇದು ಪರಬ್ರಹ್ಮ ಜ್ಞಾನಕ್ಕೆ ಸಾಧನವು. ಯಾರು ಈ ಉಪಾಸನೆಯನ್ನು ಎಲ್ಲ ಫಲಗಳಿಗೂ ಜನಕವೆಂದು ತಿಳಿದುಕೊಳ್ಳುತ್ತಾರೋ, ಅವರು ಪರಬ್ರಹ್ಮನ ಲೋಕದಲ್ಲಿ ಮುಕ್ತರಿಂದ ಪೂಜಿಸಲ್ಪಡುತ್ತಾರೆ.

## ರಂಗರಾಮಾನುಜಭಾಷ್ಯಮ್

ಏತದಾಲಂಬನಂ ಶ್ರೇಷ್ಠಮ್-ಏತತ್ ಓಂಕಾರ ರೂಪಮಾಲಂಬನಮ್, ಶ್ರೇಷ್ಠಮ್-ಧ್ಯಾನಾದೇರಿತಿ ಶೇಷಃ । ಅತಏವ ಏತದಾಲಂಬನಂ ಪರಮ್-ಏತದಾಲಂಬನಕಂ ಧ್ಯಾನಾದಿ ಸರ್ವೋತ್ಕೃಷ್ಟಮಿತ್ಯರ್ಥಃ । ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ-ಸ್ಪಷ್ಟೋಽರ್ಥಃ ॥

## ಅನುವಾದ

ಏತದಾಲಂಬನಂ ಶ್ರೇಷ್ಠಮ್-ಧ್ಯಾನಾದಿಗಳಿಗೆ ಈ ಓಂಕಾರವೆಂಬ ಆಶ್ರಯವು ಶ್ರೇಷ್ಠವಾದುದು. ಅದುದರಿಂದ ಏತದಾಲಂಬನಂ ಪರಮ್-ಓಂಕಾರವನ್ನೇ ಆಶ್ರಯವಾಗಿ ಉಳ್ಳ ಧ್ಯಾನಮುಂತಾದವು ಎಲ್ಲದಕ್ಕಿಂತಲೂ ಉತ್ತಮವಾದುದು. ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ-ಪರಮಪುರುಷನ ಉಪಾಸನೆಗೆ ಈ ಓಂಕಾರದ ಆಶ್ರಯಣವು ಅತ್ಯುತ್ತಮವೆಂದು ತಿಳಿದು, ಉಪಾಸನೆ ಮಾಡಿ ಅದರ ಮೂಲಕ ಬ್ರಹ್ಮಲೋಕದಲ್ಲಿ ಹಿರಿದಾದ ಸ್ಥಿತಿಯನ್ನು ಹೊಂದುತ್ತಾನೆ.

## ಭಾಷ್ಯಸಾರ

ಯಾವುದನ್ನು ಆಶ್ರಯಿಸಿ ಎಲ್ಲ ದೇವತೆಗಳಿಗಿಂತಲೂ ಹಿರಿದಾದ ಪರಬ್ರಹ್ಮವು ಉಪಾಸಿಸಲ್ಪಡುವುದೋ ಅದೇ ಆಲಂಬನ, ಗಾಯತ್ರಿಯನ್ನಾಗಲೀ, ದ್ವಾದಶಾಕ್ಷರ ಮಂತ್ರವನ್ನಾಗಲೀ ಅವಲಂಬಿಸಿ ಅದರ ಮೂಲಕ ಕೆಲವರು ಉಪಾಸಿಸುತ್ತಾರೆ. ಮತ್ತೆ ಕೆಲವರು ಪರಮಾತ್ಮನ ಉಪಾಸನೆಯಲ್ಲಿ ಓಂಕಾರವನ್ನು ಅವಲಂಬಿಸುತ್ತಾರೆ. ಆದ್ದರಿಂದ ಗಾಯತ್ರ್ಯಾದಿಗಳಂತೆ ಓಂಕಾರವೂ ಸಹ ಆಲಂಬನವು. ಆದರೆ ಅವುಗಳೆಲ್ಲಕ್ಕಿಂತಲೂ ಧ್ಯಾನಾದಿ ಕಾರ್ಯಗಳಿಗೆ ಇದೇ ಅತ್ಯಂತಶ್ರೇಷ್ಠವು. ಅದಕಾರಣ ಇದನ್ನು ಅವಲಂಬಿಸಿ ಮಾಡಿದ ಧ್ಯಾನಾದಿಗಳೂ ಶ್ರೇಷ್ಠವು. ಪರಮಪುರುಷೋಪಾಸನಕ್ಕೆ ಈ ಓಂಕಾರದ ಆಲಂಬನವೇ ಶ್ರೇಷ್ಠವೆಂದು ನಿರ್ಣಯಿಸಿ ಅಂತಹ ಉಪಾಸನದ ಮೂಲಕ ಶ್ರೀರಾಮಚಂದ್ರನ ಸಾಕೇತಂಬ ಬ್ರಹ್ಮಲೋಕದಲ್ಲಿ ಉಪಾಸಕನು ಸತ್ಕಾರಪಾತ್ರನಾಗುತ್ತಾನೆ.



# ಮಂತ್ರ ೧೮

**न जायते म्रियते वा विपश्चिन्नायं कुतश्चिन्न बभूव कश्चित् ।
अजो नित्यः शाश्वतोऽयं पुराणो न हन्यते हन्यमानेशरीरे ॥**

ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ
ಕುತಶ್ಚಿನ್ನ ಬಭೂವ ಕಶ್ಚಿತ್ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇಶರೀರೇ ॥

### ಪ್ರತಿಪದಾರ್ಥ

ಅಯಮ್–ಈ, ವಿಪಶ್ಚಿತ್–ಜ್ಞಾನಿಯೂ ಜ್ಞಾನಸ್ವರೂಪನಾಗಿಯೂ ಇರುವ ಜೀವನು, ನ ಜಾಯತೇ–ಹುಟ್ಟುವುದಿಲ್ಲ. ನ ಮ್ರಿಯತೇ—ನಾಶಹೊಂದುವುದಿಲ್ಲ, ಆದ್ದರಿಂದಲೇ, ಕುತಶ್ಚಿದಪಿ—ಯಾವುದರಿಂದಲೂ, ಅಯಮ್ ಕಶ್ಚಿತ್—ಯಾರೊಬ್ಬಜೀವನೂ, ನ ಬಭೂವ—ಸ್ವರೂಪತಃ ಹಿಂದೆಂದೂ ಹುಟ್ಟಲಿಲ್ಲ.

### ತಾತ್ಪರ್ಯ

ಪ್ರತ್ಯಗಾತ್ಮಸ್ವರೂಪವು ಇಲ್ಲಿ ವಿವರಿಸಲ್ಪಟಿದೆ. ಇವನು ಜ್ಞಾನೈಕಾಕಾರನಾದ ಕಾರಣ ಇವನು ಯಾರಿಂದಲೂ ಹುಟ್ಟುವುದಿಲ್ಲ ಮತ್ತು ಸಾಯುವುದೂ ಇಲ್ಲ ಆದಕಾರಣದಿಂದ ಶಾಶ್ವತನೂ, ಎಲ್ಲಾ ಕಾಲದಲ್ಲಿಯೂ ಇರುವವನೂ, ಇವನು ಶರೀರಕ್ಕೆ ನಾಶವೇರ್ಪಟ್ಟರೂ ಇವನಿಗೆ ನಾಶವಿಲ್ಲದ ಕಾರಣ ಇವನು ಆದ್ಯಂತರಹಿತನು.

### ರಂಗರಾಮಾನುಜಭಾಷ್ಯಮ್

ಪ್ರಥಮಂ ತಾವತ್ ಪ್ರತ್ಯಗಾತ್ಮಸ್ವರೂಪಮಾಹ—ನ ಜಾಯತೇ ಮ್ರಿಯತೇ ವಾ ಇತ್ಯಾದಿನಾ ಮಂತ್ರದ್ವಯೇನ । ಇದಂ ಚ ಪ್ರಸ್ತುತ್ಯ ವ್ಯಾಸಾರ್ಯೈಃ ಇತ್ಥಂ ಹಿ ಉಕ್ತಮ್— ಇದಂ ಮಂತ್ರದ್ವಯಂ ತಾವತ್ ಏಕವಿಷಯಮ್ ; 'ನ ಹನ್ಯತೇ ಹನ್ಯಮಾನೇ ಶರೀರೇ' ಇತ್ಯೇತದ್ವಿವರಣರೂಪತ್ವಾತ್ ದ್ವಿತೀಯ ಮಂತ್ರಸ್ಯ ; ಹಂತಾ ಚೇದಿತಿ ಮಂತ್ರಶ್ಚ ಜೀವವಿಷಯ ಏವ ; ಲೋಕಸ್ಯ ಪರಮಾತ್ಮನಿ ಹಂತೃ–ಹಂತವ್ಯಭಾವಪ್ರತಿಪತ್ತ್ಯಭಾವಾತ್ । ಪರಮಾತ್ಮಾ ಹಿ ! ಪ್ರತ್ಯಕ್ಷಾಗೋಚರಃ । ಕಥಂ ತಸ್ಮಿನ್ ವಧ್ಯತಾದಿಪ್ರತಿಪತ್ತಿಃ ? ಅಹಮೇನಂ ಹನ್ಮಿ, ಅಯಂ ಮಾಂ ಹಂತುಮಾಗಚ್ಛತೀತಿ ವಧ್ಯಘಾತುಕಭಾವಾಭಿಮಾನೋ ಹಿ ! ದೇಹಿನಾಂ ಜೀವ ವಿಷಯ ಏವ । ನನು 'ನಾಸ್ಯ ಜರಯೈತಜ್ಜೀರ್ಯತಿ' ಇತಿವತ್ ಪರಮಾತ್ಮನೋಽಪಿ ಹನನ ಪ್ರತಿಷೇಧ ಉಪಪದ್ಯತೇ ॥

ಸತ್ಯಮ್ ; ತತ್ರ ದಹರಾಕಾಶಸ್ಯ ದೇಹಾಂತಃ ಸ್ಥಿತ್ಯಾ ಶಂಕಿತವಿಕಾರ ನಿಷೇಧ ಉಪಪದ್ಯತೇ । ಇಹ ತು ಲೋಕಾಸಿದ್ಧಾ ಭ್ರಾಂತಿರನೂದ್ಯ ನಿರಸ್ಯತೇ । ನ ಹಿ ! ಪರಮಾತ್ಮನಿ ವಧ್ಯಘಾತಕಭಾವಭ್ರಾಂತಿಃ ಕಸ್ಯಾಪ್ಯಸ್ತಿ । ಅತಃ ಅನುವಾದನಿಷೇಧಾವನುಪಪನ್ನೌ ।

'ನ ಜಾಯತೇ' ಇತಿ ಮಂತ್ರಶ್ಚ ತೇನೈಕಾರ್ಥಃ । ಅತಃ ಮಂತ್ರದ್ವಯಮಪಿ ಜೀವವಿಷಯಕ ಮೇವ ಇತಿ । ಅಕ್ಷರಾರ್ಥಸ್ತು — 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' — ವಿಪಶ್ಚಿತ್ತ್ವಾರ್ಹೋಽಯಮ್ ಇದಾನೀಮಪಿ ಜನನ ಮರಣಶೂನ್ಯ ಇತ್ಯರ್ಥಃ । ನಾಯಂ ಕುತಶ್ಚಿತ್ — ಉತ್ಪಾದಕ ಶೂನ್ಯಃ । ನ ಬಭೂವ ಕಶ್ಚಿತ್ — ಪೂರ್ವಮಪಿ ಮನುಷ್ಯಾದಿರೂಪೇಣ ಜನನ ಶೂನ್ಯಃ । 'ನ ಜಾಯತ' ಇತ್ಯತ್ರ ಹೇತುಮಾಹ — ಅಜ ಇತಿ । 'ನ ಮ್ರಿಯತ' ಇತ್ಯತ್ರ ಹೇತುಮಾಹ — ನಿತ್ಯ ಇತಿ । 'ನ ಕುತಶ್ಚಿತ್' ಇತ್ಯತ್ರ ಹೇತುಮಾಹ — ಶಾಶ್ವತ ಇತಿ । ಪೂರ್ವಂ 'ನ ಬಭೂವ' ಇತ್ಯತ್ರ ಹೇತುಮಾಹ — ಪುರಾಣ ಇತಿ । ನನು ಕಥಮಸ್ಯ ನಿತ್ಯತ್ವಮ್ ? ಶರೀರಾಂತರ್ವರ್ತಿನಃ ಶರೀರವಿನಾಶಾನುವಿನಾಶಿತ್ವಾವಶ್ಯಂ ಭಾವಾದಿತ್ಯತ ಆಹ — ನ ಹನ್ಯತೇ ಹನ್ಯಮಾನೇ ಶರೀರೇ ಇತಿ ಸ್ಪಷ್ಟೋಽರ್ಥಃ ॥

## ಅನುವಾದ

ಮೊದಲು (ಪ್ರತ್ಯಗಾತ್ಮ) ಜೀವಾತ್ಮಸ್ವರೂಪವನ್ನು 'ನ ಜಾಯತೇ ಮ್ರಿಯತೇ ವಾ....' ಮುಂತಾದ ಎರಡು ಮಂತ್ರಗಳಿಂದ ವಿವರಿಸುತ್ತಾನೆ.

ಈ ಮಂತ್ರವನ್ನು ಪ್ರಸ್ತಾಪಿಸಿ ಶ್ರುತಪ್ರಕಾಶಿಕಾಚಾರ್ಯರು ಹೀಗೆ ಹೇಳಿರುವರು :— ಈ ಎರಡು ಮಂತ್ರಗಳು ಒಂದೇ ವಿಷಯವನ್ನು ಕುರಿತಿದೆ. 'ನ ಹನ್ಯತೇ ಹನ್ಯಮಾನೇ ಶರೀರೇ' ಎಂಬ ವಾಕ್ಯದ ವಿವರಣರೂಪವಾಗಿದೆ 'ಹಂತಾ ಚೇತ್' ಎಂಬ ಎರಡನೇ ಮಂತ್ರವು ಜೀವಪರವಾದುದೇ ಆಗಿದೆ. ಜನರಿಗೆ ಪರಮಾತ್ಮನು ಕೊಲ್ಲುತ್ತಾನೆ, ಕೊಲ್ಲಲ್ಪಡುತ್ತಾನೆ ಎಂಬ ಭಾವನೆಯಿರುವುದಿಲ್ಲ. ಪರಮಾತ್ಮನು ಪ್ರತ್ಯಕ್ಷಗೋಚರನಲ್ಲ. ಆದುದರಿಂದ ಅವನಲ್ಲಿ ಕೊಲ್ಲಲ್ಪಡುತ್ತಾನೆ ಎಂಬ ಬುದ್ಧಿಗೆ ಅವಕಾಶವಿಲ್ಲ. ನಾನು ಇವನನ್ನು ಕೊಲ್ಲುತ್ತೇನೆ ; ಇವನು ನನ್ನನ್ನು ಕೊಲ್ಲಲು ಬರುತ್ತಾನೆ ಎಂಬ ಬುದ್ಧಿಯು ಜನರಿಗೆ ಜೀವಾತ್ಮನ ವಿಷಯದಲ್ಲಿಯೇ ಉಂಟಾಗುತ್ತದೆ.

'ನಾಸ್ಯ ಜರಯೈತಜ್ಜೀರ್ಯತಿ' ಎಂಬ ಶ್ರುತಿ ಪರಮಾತ್ಮನಿಗೂ ಕೊಲ್ಲುವುದರ ನಿಷೇಧವನ್ನು ಹೇಳಬಹುದಲ್ಲವೇ ! ಎಂಬ ಆಕ್ಷೇಪ ಸಲ್ಲದು. 'ಜರಯಾ ಏತಜ್ಜೀರ್ಯತಿ' ಎಂಬಲ್ಲಿ ದಹರಾಕಾಶರೂಪಿಯಾದ ಪರಮಾತ್ಮನು ದೇಹದಲ್ಲಿರುವುದರಿಂದ, ದೇಹದ ವಿಕಾರ ಪರಮಾತ್ಮನಲ್ಲೂ ಬರಬಹುದಲ್ಲ ಎಂಬುದರ ನಿಷೇಧ ಸರಿಯೆನಿಸುತ್ತದೆ. ಈ ಮಂತ್ರವು 'ಅಹಮೇನಂ ಹನ್ಮಿ', 'ಯಂ ಮಾಂ ಹಂತುಮಾಗಚ್ಛತಿ' ಮುಂತಾದೆಡೆಗಳಲ್ಲಿ ಲೋಕದಲ್ಲಿ ಸಿದ್ಧವಾಗಿರುವ ಭ್ರಮೆಯನ್ನು ತಿಳಿಸಿ, ಅದು ಆತ್ಮನಿಗೆ ಸಂಭವಿಸುವುದಿಲ್ಲ ಎಂದು ನಿಷೇಧಿಸುತ್ತದೆ. 'ಕೊಲ್ಲುತ್ತಾನೆ, ಕೊಲ್ಲಲ್ಪಡುತ್ತಾನೆ' ಎಂಬ ವಧ್ಯ–ಘಾತುಕಭಾವದ ಭ್ರಮೆಯು— ಪರಮಾತ್ಮನ ವಿಷಯದಲ್ಲಿ ಸಲ್ಲದು. ಆದುದರಿಂದ ಅನುವಾದ ಮತ್ತು ಅದರ ನಿಷೇಧ ಎರಡೂ ಪರಮಾತ್ಮನಲ್ಲಿ ಹೊಂದುವುದಿಲ್ಲ. 'ನ ಜಾಯತೇ' ಎಂಬ ಮಂತ್ರವೂ–ಮುಂದಿನ ಮಂತ್ರದೊಡನೆ ಸೇರಿ ಏಕಾರ್ಥವಾಗಿದೆ. ಆದ್ದರಿಂದ ಈ ಎರಡು ಮಂತ್ರಗಳೂ ಜೀವಪರವಾದವುಗಳೇ' ಎಂದು ವಿವರಿಸಿರುವರು. ಮಂತ್ರಾರ್ಥ ಹೀಗಿದೆ. ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ — ಮುಕ್ತಿದೆಶೆಯಲ್ಲಿ ಸರ್ವಜ್ಞತ್ವರೂಪವಾದ ವಿಪಶ್ಚಿತ್ತ್ವಕ್ಕೆ ಅರ್ಹನಾದ ಈ ಜೀವನು ಈಗಲೂ ಜನನ ಮರಣಶೂನ್ಯನೇ, ನಾಯಂ ಕುತಶ್ಚಿತ್ — ಇವನಿಗೆ ಜನಕನಿಲ್ಲ, ನ ಬಭೂವ ಕಶ್ಚಿತ್ — ಹಿಂದೆಯೂ ಮನುಷ್ಯಾದಿರೂಪದಲ್ಲಿ ಜನನ ಹೊಂದಿದವನಲ್ಲ. ಹುಟ್ಟುವುದಿಲ್ಲ

ಎಂಬಲ್ಲಿ 'ಅಜಃ' ಎಂಬುದು ಕಾರಣ, ಸಾಯುವುದಿಲ್ಲ ಎಂಬುದಕ್ಕೆ 'ನಿತ್ಯಃ' ಎಂಬುದು ಕಾರಣ. ಇವನಿಗೆ ಜನಕನಾರೂ ಇಲ್ಲ ಎಂಬುದಕ್ಕೆ 'ಶಾಶ್ವತಃ' ಎಂಬುದು ಕಾರಣ. ಹಿಂದೆ ಮನುಷ್ಯಾದಿ ರೂಪದಲ್ಲಿ ಹುಟ್ಟಿರಲಿಲ್ಲ ಎಂಬುದಕ್ಕೆ 'ಪುರಾಣಃ' ಎಂಬುದು ಜ್ಞಾಪಕ.

ಜೀವನಿಗೆ ನಿತ್ಯತ್ವ ಹೇಗೆ? ಜೀವನು ಶರೀರದೊಳಗಿರುವುದರಿಂದ ಶರೀರದ - ನಾಶವನ್ನು ಅನುಸರಿಸಿ ಬರುವ ನಾಶವು ಇವನಿಗೆ ತಪ್ಪದು ಅಲ್ಲವೇ! ಎಂದರೆ ಅದಕ್ಕೆ ಉತ್ತರ– 'ನ ಹನ್ಯತೇ ಹನ್ಯಮಾನೇ ಶರೀರೇ' ಎಂದು ಹೇಳುತ್ತಾನೆ. ಶರೀರ ನಶಿಸಿಹೋದರೂ ಜೀವನಿಗೆ ನಾಶವಿಲ್ಲ ಎಂಬರ್ಥ ಸ್ಪಷ್ಟವಾಗಿದೆ.

## ಭಾಷ್ಯಸಾರ

ಈ ರೀತಿ ಓಂಕಾರಕ್ಕೆ ಬ್ರಹ್ಮೋಪಾಸನೆಯಲ್ಲಿ ಉತ್ಕೃಷ್ಟ ಆಲಂಬನತ್ವವನ್ನು ಹೇಳಿ ಉಪಾಸಕನಾದ ಜೀವನ ಸ್ವರೂಪವನ್ನು ಮೊದಲು 'ನ ಜಾಯತೇ' ಮೊದಲಾದ ಎರಡು ಮಂತ್ರಗಳಿಂದ ತಿಳಿಸುತ್ತಾನೆ.

ಜೀವನು ಜ್ಞಾನಸ್ವರೂಪನು. ಇಂತಹ ಜೀವನು ಜನಿಸುವುದೂ ಇಲ್ಲ, ನಾಶ ಹೊಂದುವುದೂ ಇಲ್ಲ. 'ನ ಜಾಯತೇ ಮ್ರಿಯತೇ ವಾ' ಇಲ್ಲಿಯು 'ನ'ಕಾರವನ್ನು 'ಮ್ರಿಯತೇ' ಎಂಬುದಕ್ಕೂ ಅನ್ವಯಿಸಿ 'ವಾ'ಶಬ್ದಕ್ಕೆ 'ಚ' ಎಂಬ ಅರ್ಥವನ್ನು ಮಾಡಿದಾಗ ಜ್ಞಾನಸ್ವರೂಪನಾದ ಜೀವಾತ್ಮನಿಗೆ ಜನನ ಮರಣಗಳು ಎರಡೂ ಇಲ್ಲ ಎಂಬುದು ಸಿದ್ಧವಾಗುತ್ತದೆ. ಅಂತೆಯೇ ಇದಕ್ಕೆ ಉತ್ಪಾದಕನೂ ಇಲ್ಲ, ನಾಶಕನೂ ಇಲ್ಲ ಎಂದು ಹೇಳಿ, ಮೊದಲು ಹೇಳಿದ ನಿತ್ಯತ್ವವನ್ನೇ ಧೃಢಪಡಿಸುವಕಾರಣ ಪುನರುಕ್ತಿ ದೋಷವಿಲ್ಲ.

'ನ ಬಭೂವ ಕಶ್ಚಿತ್'—ಕಶ್ಚಿತ್—ಇವನು (ಹುಟ್ಟುವ) ದೇಹಧಾರಿಯಾದರೂ ಸ್ವರೂಪತಃ ಎಂದೂ ಹುಟ್ಟಲಿಲ್ಲ. ಹುಟ್ಟುತ್ತಾನೆ-ಸಾಯುತ್ತಾನೆ, ದೇವದತ್ತನಿಂದ ಯಜ್ಞದತ್ತನು ಜನಿಸಿದನು, ಈ ಬಾಲಕನು ಯುವಕನಾದನು, ಮುದುಕನಾದನು ಮುಂತಾದ ವ್ಯವಹಾರಗಳು, ಆತ್ಮಸ್ವರೂಪವನ್ನು ಕುರಿತದ್ದಲ್ಲ. ವಿಕಾರ ಹೊಂದುವ ಶರೀರವನ್ನು ಕುರಿತದ್ದು. ಜೀವಾತ್ಮ ಹಾಗಲ್ಲ. ಆತನು ಜನ್ಮರಹಿತನು. ಆದ್ದರಿಂದ ಅಜನು. ನಾಶವಿಲ್ಲದಿರುವುದರಿಂದಲೇ ನಿತ್ಯನು. ಯಾವಾಗಲೂ ಒಂದೇ ರೂಪದಲ್ಲಿರುವುದರಿಂದ ಶಾಶ್ವತನು. ಯಾವುದು ಹುಟ್ಟುವುದೋ ಅದು ಬೇರೆ ರೂಪವನ್ನು ಪಡೆಯುತ್ತದೆ. ಮತ್ತೆ ಮತ್ತೆ ರೂಪಿಸುವ ವಸ್ತುಗಳಲ್ಲಿ ಬೇರೆ ಬೇರೆ ರೂಪಗಳನ್ನು ಕಾಣುತ್ತೇವೆ, ಜೀವನು ಹಾಗಲ್ಲ. ಏಕರೂಪನು ಎಂದು ತಾತ್ಪರ್ಯ. ಹುಟ್ಟು, ಮನುಷ್ಯತ್ವ ಮುಂತಾದ ರೂಪಗಳು ಅವನ ಸ್ವರೂಪವಲ್ಲದ್ದರಿಂದ ಪುರಾಣನೆಂದು ಹೇಳುವರು, ಜೀವನು ಶಾಶ್ವತನಾದುದರಿಂದಲೇ ಪುರಾಣನು ಅಂದರೆ ಅನಾದಿಯೆಂದು ಹೇಳಲ್ಪಡುತ್ತಾನೆ ಎಂದು ತಾತ್ಪರ್ಯ.

'ನ ಹನ್ಯತೇ ಹನ್ಯಮಾನೇ ಶರೀರೇ'—ಶರೀರವು ಶಸ್ತ್ರ ಮುಂತಾದವುಗಳಿಂದ ಕತ್ತರಿಸಲ್ಪಡುತ್ತದೆ. ಶರೀರದಲ್ಲಿರುವ ಆತ್ಮನು ಎಲ್ಲಾ ವಿಧದಿಂದಲೂ ಸೂಕ್ಷ್ಮನಾಗಿರುವುದರಿಂದ ಕೊಲ್ಲಲ್ಪಡಲಾರನು. ಶರೀರವು ಛೇದಿಸಲ್ಪಟ್ಟರೆ ಶರೀರದಲ್ಲಿರುವ ಆತ್ಮನೂ ಛೇದಿಸಲ್ಪಡುತ್ತಾನೆ ಎಂದು ಭ್ರಾಂತಿ. ಏಕೆಂದರೆ—ಇವನು ಶರೀರದೊಳಗಿರುವ ಆಕಾಶದಂತೆಯೇ ಛೇದನಾರ್ಹನಲ್ಲದ್ದರಿಂದ ನಾಶರಹಿತನೂ, ನಿತ್ಯನೂ, ಸೂಕ್ಷ್ಮನೂ ಆಗಿದ್ದಾನೆ.

---

ಟಿಪ್ಪಣಿ :— ಶಶ್ವತ್–ಸದಾ ಕಾಲತ್ರಯೇಽಪಿ ಏಕರೂಪೇಣ ತಿಷ್ಠತೀತಿ–ಶಾಶ್ವತಃ

## ಮಂತ್ರ ೧೯

हन्ता चेन्मन्यते हन्तुं हतश्चेन्मन्यते हतम् ।
उभौ तौ न विजानीतो नायं हन्ति न हन्यते ॥

ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥

### ಪ್ರತಿಪದಾರ್ಥ

ಹಂತಾ—ಆತ್ಮನಿಗೆ ದೇಹವಿಯೋಗವನ್ನು ಏರ್ಪಡಿಸುವವನು, ಹಂತುಂ ಮನ್ಯತೇ ಚೇತ್—ದೇಹಾತ್ಮಾಭಿಮಾನದಿಂದ ನಾನು ಇವನನ್ನು ಹಿಂಸೆ ಮಾಡುತ್ತೇನೆ ಎಂದು ತಿಳಿದಿದ್ದೇ ಆದರೆ, ಹತಃ—ಕೊಲ್ಲಲ್ಪಟ್ಟವನು (ಸ್ವಾತ್ಮಾನಂ—ತನ್ನನ್ನು) ಹತಮ್—ಕೊಲ್ಲಲ್ಪಟ್ಟೆನು ಎಂದು, ಮನ್ಯತೇ ಚೇತ್—ಭಾವಿಸಿದ್ದೇ ಆದರೆ, ತೌ ಉಭೌ—ಆ ಇಬ್ಬರೂ, ನ ವಿಜಾನೀತಃ—(ಆತ್ಮಸ್ವರೂಪವನ್ನು) ತಿಳಿದವರಲ್ಲ, ಅಯಮ್—ಇವನು, ನ ಹಂತಿ—ಹಿಂಸಿಸುವುದಿಲ್ಲ, ನ ಹನ್ಯತೇ—ಇವನು ಹಿಂಸಿಸಲ್ಪಡುವುದೂ ಇಲ್ಲ.

### ತಾತ್ಪರ್ಯ

ದೇಹಾತ್ಮಾಭಿಮಾನವನ್ನು ಕುರಿತು ಹೇಳುತ್ತಾರೆ. ಹಿಂಸಿಸುವವನು ಜೀವಾತ್ಮನನ್ನು ಕೊಲ್ಲುವುದಕ್ಕೆ ಯೋಚಿಸಿದರೆ ಮತ್ತು ತಾನು ಕೊಲ್ಲಲ್ಪಟ್ಟವನೆಂದು ತಿಳಿದರೆ ಇವರಿಬ್ಬರೂ ಜೀವಾತ್ಮತತ್ತ್ವವನ್ನು ತಿಳಿಯರು. ಏಕೆಂದರೆ ಈ ಜೀವಾತ್ಮನಿಗೆ ಛೇದಕತ್ವವಾಗಲೀ, ಛೇದ್ಯತ್ವವಾಗಲೀ ಎರಡೂ ಇಲ್ಲ.

### ರಂಗರಾಮಾನುಜಭಾಷ್ಯಮ್

ತದೇವ ಉಪಪಾದಯತಿ—ಹಂತಾ ಚೇನ್ಮನ್ಯತೇ ಹಂತುಮ್—ಅಹಮೇನಂ ಹನಿಷ್ಯಾಮಿ ಇತಿ ದೇಹಾತ್ಮದೃಷ್ಟ್ಯಾ ಮನ್ಯತೇ ಚೇತ್ ಇತ್ಯರ್ಥಃ । ಹತಶ್ಚೇನ್ಮನ್ಯತೇ ಹತಮ್—ಛಿನ್ನದೇಹಾವಯವಃ ದೇಹಾತ್ಮದೃಷ್ಟ್ಯಾ ಆತ್ಮಾನಮ್, ಹತೋಽಹಮ್ ಇತಿ ಮನ್ಯತೇ ಚೇತ್ ಇತ್ಯರ್ಥಃ । ಉಭೌ ತೌ ನ ವಿಜಾನೀತಃ । ಆತ್ಮಸ್ವರೂಪಮಿತಿ ಶೇಷಃ । ನಾಯಂ ಹಂತಿ । ಆತ್ಮಾನಮಿತಿ ಶೇಷಃ । ನ ಹನ್ಯತೇ – ಆತ್ಮಸ್ವರೂಪಮಿತಿ ಶೇಷಃ । ನ ಚ ವೇದಾಂತವೇದ್ಯಪರಿಶುದ್ಧಾತ್ಮಸ್ವರೂಪೇ ಕಥಂ ಹನನಾದಿಪ್ರಸಕ್ತಿತತ್ಪೂರ್ವಕನಿಷೇಧಾವಿತಿ ವಾಚ್ಯಮ್ ; ತಸ್ಯೈವ ಕ್ಷೇತ್ರಜ್ಞತಯಾ(ಕ್ಷೇತ್ರೀ ಭೂತತಯಾ) ತತ್ತದ್ಯುಕ್ತ ತತ್ಸಂಭವಾದಿತಿ ದ್ರಷ್ಟವ್ಯಮ್।

### (ಆತ್ಮನಿತ್ಯತ್ವಾಧಿಕರಣಮ್)

ಇಮೌ ಮಂತ್ರೌ ಪ್ರಸ್ತುತ್ಯ ವಿಯತ್ಪಾದೇ ಚಿಂತಿತಮ್ । ತತ್ರ ಹಿ 'ವಾಯುಶ್ಚಾಂತರಿಕ್ಷಂ ಚ ಏತದಮೃತಮ್' ಇತಿ ವಾಯ್ವಂತರಿಕ್ಷಯೋಃ ನಿತ್ಯತ್ವಶ್ರವಣೇಽಪಿ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ' ಇತಿ ತಯೋಃ ಉತ್ಪತ್ತಿಶ್ರವಣಾತ್, ಏಕವಿಜ್ಞಾನೇನ ಸರ್ವವಿಜ್ಞಾನಸಿದ್ಧ್ಯರ್ಥಂ ಸರ್ವಸ್ಯ ವಸ್ತುನೋ ಬ್ರಹ್ಮವಿಕಾರತ್ವಸ್ಯಾವಶ್ಯಾಶ್ರಯಣೀಯತ್ವಾಚ್ಚ

ಯಥೋತ್ಪತ್ತಿಃ ಅಂಗೀಕ್ರಿಯತೇ, ಏವಂ ಜೀವಾನಾಂ ನಿತ್ಯತ್ವಶ್ರವಣೇಽಪಿ 'ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಮ್', 'ಪ್ರಜಾಪತಿಃ ಪ್ರಜಾ ಅಸೃಜತ' ಇತಿ ಜೀವಾನಾಮಪಿ ಸೃಷ್ಟಿಶ್ರವಣಾತ್ ಏಕವಿಜ್ಞಾನೇನ ಸರ್ವವಿಜ್ಞಾನಸಿದ್ಧ್ಯರ್ಥಂಚ ಜೀವಸ್ಯಾಪಿ ಸೃಷ್ಟಿರಭ್ಯುಪ ಗಂತವ್ಯ ಇತಿ ಪೂರ್ವಪಕ್ಷೇ ಪ್ರಾಪ್ತೇ–'ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯ' ಇತಿ ಸೂತ್ರೇಣ ಸಿದ್ಧಾಂತಿತಮ್। ಆತ್ಮಾ ನೋತ್ಪದ್ಯತೇ; 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್', 'ಜ್ಞಾಜ್ಞೌ ದ್ವಾವಜೌ' ಇತ್ಯುತ್ಪತ್ತಿನಿಷೇಧಶ್ರುತೇಃ। ತಾಭ್ಯಃ ಏವ ಶ್ರುತಿಭ್ಯಃ ನಿತ್ಯತ್ವಾವಗಮಾಚ್ಚ। ನ ಚ ಉತ್ಪತ್ತಿಶ್ರುತಿಸರ್ವವಿಜ್ಞಾನಪ್ರತಿಜ್ಞಾವಿರೋಧಃ ಶಂಕ್ಯಃ। ಸ್ವರೂಪಸ್ಯ ನಿತ್ಯತ್ವೇಽಪಿ ಜ್ಞಾನಸಂಕೋಚವಿಕಾಸಲಕ್ಷಣಾನ್ಯಥಾಭಾವರೂಪಾವಸ್ಥಾಂತರಾಪತ್ತಿಸತ್ತ್ವೇನ ಉತ್ಪತ್ತಿಶ್ರುತೇಃ ಸರ್ವವಿಜ್ಞಾನಪ್ರತಿಜ್ಞಾಯಾಶ್ಚ ಉಪಪತ್ತೇಃ। ಉತ್ಪತ್ತಿನಿಷೇಧಶ್ರುತೇಶ್ಚ ಸ್ವರೂಪಾನ್ಯಥಾ ಭಾವಲಕ್ಷಣೋತ್ಪತ್ತ್ಯಭಾವಪರತಯಾ ಅವಿರೋಧಾತ್। ಇಯಾಂಸ್ತು ವಿಶೇಷಃ—ಚಿದ ಚಿದೀಶ್ವರಾಣಾಂ ತ್ರಯಾಣಾಮಪಿ ಅವಸ್ಥಾಂತರಾಪತ್ತಿಲಕ್ಷಣೋತ್ಪತ್ತಿರೂಪೋ ವಿಕಾರೋಽ ಸ್ತ್ಯೇವ। ತಥಾಽಪ್ಯಚೇತನಾನಾಂ ಸ್ವರೂಪಾನ್ಯಥಾಭಾವಲಕ್ಷಣಾ ಉತ್ಪತ್ತಿಃ। ಜೀವಾನಾಂ ತು ಸಾ ನಾಸ್ತಿ। ಅಪಿತು ಜ್ಞಾನಸಂಕೋಚವಿಕಾಸಲಕ್ಷಣಸ್ವಭಾವ ಅನ್ಯಥಾಭಾವರೂಪಾ ಉತ್ಪತ್ತಿಃ। ಈಶ್ವರಸ್ಯ ತು ತತ್ತನ್ನಿಯಂತೃತ್ವಾದ್ಯವಸ್ಥಾಸತ್ತ್ವೇಽಪಿ ಉಕ್ತಲಕ್ಷಣಾನಿಷ್ಟ ವಿಕಾರದ್ವಯಾಭಾವಾತ್ 'ನಿತ್ಯೋ ನಿತ್ಯಾನಾಮ್' ಇತಿ ಪರಮಾತ್ಮನಃ ಇತರವಿಲಕ್ಷಣ ನಿತ್ಯತ್ವೋಕ್ತಿಃ ಇತಿ ದ್ರಷ್ಟವ್ಯಮ್। ವರ್ಣಿತಶ್ಚ ಸೂತ್ರಾರ್ಥಃ ॥

(ಉತ್ಪತ್ತ್ಯಸಂಭವಾಧಿಕರಣಮ್)

ನನು 'ನ ಜಾಯತೇ ಮ್ರಿಯತೇ ವಾ' ಇತಿ ಶ್ರುತಿಪ್ರತಿಷಿದ್ಧಾಂ ಜೀವೋತ್ಪತ್ತಿಮ್, 'ವಾಸುದೇವಾತ್ ಸಂಕರ್ಷಣೋ ನಾಮ ಜೀವೋ ಜಾಯತೇ' ಇತಿ ಪ್ರತಿಪಾದಯತಃ ಪಾಂಚರಾತ್ರಸ್ಯ ಕಥಂ ಪ್ರಾಮಾಣ್ಯಮಿತಿ ಚೇತ್—ಅಸ್ಯಾಃ ಶಂಕಾಯಾಃ ತರ್ಕಪಾದೇ ನಿರಾ ಕೃತತ್ವಾತ್। ತಥಾ ಹಿ—'ವಾಸುದೇವಾತ್ ಸಂಕರ್ಷಣೋ ನಾಮ ಜೀವೋ ಜಾಯತೇ' ಇತಿ ಜೀವೋತ್ಪತ್ತಿಃ [ಪಾಂಚರಾತ್ರೇ] ಪ್ರತಿಪಾದ್ಯತೇ। ಸಾ ಚ ಜೀವೇ ನ ಸಂಭವತಿ। ತಥಾ 'ಸಂಕರ್ಷಣಾತ್ ಪ್ರದ್ಯುಮ್ನಸಂಜ್ಞಂ ಮನೋ ಜಾಯತೇ ಇತಿ ಕರ್ತುರ್ಜೀವಾತ್ಕರ ಣೋತ್ಪತ್ತೇಃ, 'ಏತಸ್ಮಾಜ್ಜಾಯತೇ ಪ್ರಾಣೋ ಮನಃಸರ್ವೇಂದ್ರಿಯಾಣಿ ಚ' ಇತಿ ಮನಸೋ ಬ್ರಹ್ಮೋತ್ಪತ್ತಿ ಪ್ರತಿಪಾದಕಶ್ರುತಿವಿರುದ್ಧತ್ವಾತ್ ಇತಿ, 'ಉತ್ಪತ್ತ್ಯಸಂಭವಾತ್', 'ನ ಚ ಕರ್ತುಃ ಕರಣಮ್' ಇತಿ ದ್ವಾಭ್ಯಾಂ ಸೂತ್ರಾಭ್ಯಾಂ ಪೂರ್ವಪಕ್ಷಂ ಕೃತ್ವಾ, 'ವಿಜ್ಞಾನಾದಿ ಭಾವೇ ವಾ ತದಪ್ರತಿಷೇಧಃ', 'ವಿಪ್ರತಿಷೇಧಾಚ್ಚ' ಇತಿ ದ್ವಾಭ್ಯಾಂ ಸೂತ್ರಾಭ್ಯಾಂ ಸಿದ್ಧಾಂತಿ ತಮ್। 'ವಾ'ಶಬ್ದಃ ಪೂರ್ವಪಕ್ಷವ್ಯಾವೃತ್ತ್ಯರ್ಥಃ। ವಿಜ್ಞಾನಂ ಚ ತದಾದಿ ಚ ವಿಜ್ಞಾನಾದಿ। ನನು[ಚ] 'ಕ್ಯಂತೋ ಘುಃ' ಇತಿ ಆದಿಶಬ್ದಸ್ಯ ನಿತ್ಯಪುಲ್ಲಿಂಗತ್ವಾತ್ ಕಥಮೇತದಿತಿ ಚೇತ್—ನಾಯಂ ಘುಃ, ಅಪಿತು 'ಅದಭಕ್ಷಣೇ' ಇತ್ಯಸ್ಮಾದಾವಶ್ಯಕಾರ್ಥೇ ಣಿನಿಪ್ರತ್ಯಯೇ 'ಆದಿ' ಇತಿ ರೂಪಂ ಸಿದ್ಧ್ಯತಿ। ತೇನ ಚ ನಿಖಿಲಜಗತ್ಸಂಹರ್ತೃತ್ವಮುಖೇನ ಕಾರಣತ್ವಂ ಪ್ರತಿಪಾದ್ಯತ ಇತಿ ದ್ರಷ್ಟವ್ಯಮ್। ಆದಿ ವಿಜ್ಞಾನಮ್ ಪರಮಾತ್ಮಾ ಇತ್ಯರ್ಥಃ। 'ಸಂಕರ್ಷಣೋ ನಾಮ ಜೀವೋ ಜಾಯತೇ' ಇತಿ ಶ್ರುತಸ್ಯ ಜೀವಶಬ್ದಾರ್ಥಸ್ಯ ತದಭಿಮಾನಿಪರಮಾತ್ಮಭಾವೇ ಸತಿ ಶಾಸ್ತ್ರಪ್ರಾಮಾಣ್ಯಾಪ್ರತಿಷೇಧಸ್ಸಿಧ್ಯತಿ। ಪರಮಾತ್ಮನಶ್ಚ ಜನನಂ ನಾಮ ಸ್ವೇಚ್ಛಾಧೀನ ಶರೀರ ಪರಿಗ್ರಹಃ। ತಸ್ಮಿನ್ನೇವ ಪಂಚರಾತ್ರತಂತ್ರೇ, 'ಸಹ್ಯನಾದಿರನಂತಶ್ಚ' ಇತಿ ಜೀವೋತ್ಪತ್ತೇಃ

ವಿಶೇಷೇಣ ಪ್ರತಿಷಿದ್ಧತಯಾ ತದ್ವಿರುದ್ಧಾಭಿಧಾನಾಸಂಭವಾತ್ 'ಸಂಕರ್ಷಣೋ ನಾಮ ಜೀವೋ ಜಾಯತೇ' ಇತ್ಯನೇನ ಜೀವಾಭಿಮಾನಿಸಂಕರ್ಷಣಸ್ಯ ಇಚ್ಛಾಧೀನಶರೀರಪರಿಗ್ರಹ ರೂಪೋತ್ಪತ್ತಿಃ ಪ್ರತಿಪಾದ್ಯತ ಇತಿ ನ ಪಾಂಚರಾತ್ರಾಪ್ರಾಮಾಣ್ಯಮಿತಿ ಸೂತ್ರಯೋರರ್ಥಃ ।

ನನು ಸಾಂಖ್ಯಪಾಶುಪತಾದ್ಯಧಿಕರಣವತ್ ಇದಮಪ್ಯಧಿಕರಣಂ ಪಾಂಚರಾತ್ರ ಪ್ರಾಮಾಣ್ಯ ಪ್ರತಿಷೇಧಕಂ ಕಿಂ ನ ಸ್ಯಾದಿತಿ ಚೇತ್—ವೇದೋಪಬೃಂಹಣಾಯ ಭಾರತಸಂಹಿತಾಂ ಕುರ್ವತಾ ಬಾದರಾಯಣೇನ—

'ಇದಂ ಶತಸಹಸ್ರಾದ್ಧಿ ಭಾರತಾಖ್ಯಾನವಿಸ್ತರಾತ್ ।
ಆಮಥ್ಯ ಮತಿ ಮಂಥಾನಂ ದದ್ನೋ ಘೃತಮಿವೋದ್ಧೃತಮ್ ॥
ನವನೀತಂ ಯಥಾ ದಧ್ನೋ ದ್ವಿಪದಾಂ ಬ್ರಾಹ್ಮಣೋ ಯಥಾ ।
ಆರಣ್ಯಕಂ ಚ ವೇದೇಭ್ಯಃ ಓಷಧೀಭ್ಯೋ ಯಥಾಽಮೃತಮ್ ॥
ಇದಂ ಮಹೋಪನಿಷದಂ ಚತುರ್ವೇದಸಮನ್ವಿತಮ್ ।
ಸಾಂಖ್ಯಯೋಗಕೃತಾಂತೇನ ಪಾಂಚರಾತ್ರಾನುಶಬ್ದಿತಮ್' ॥ (ಭಾ.ಶಾಂ. 343)

'ಇದಂ ಶ್ರೇಯ ಇದಂ ಬ್ರಹ್ಮ ಇದಂ ಹಿತಮನುತ್ತಮಮ್ ।
ಋಗ್ಯಜುಸ್ಸಾಮಭಿರ್ಜುಷ್ಟಮಥರ್ವಾಂಗಿರಸೈಸ್ತಥಾ ॥
ಭವಿಷ್ಯತಿ ಪ್ರಮಾಣಂ ವೈ ಏತದೇವಾನುಶಾಸನಮ್ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ ॥
ಅರ್ಚನೀಯಶ್ಚ ಸೇವ್ಯಶ್ಚ ಪೂಜನೀಯಶ್ಚ ಮಾಧವಃ ।
ಸಾತ್ವತಂ ವಿಧಿಮಾಸ್ಥಾಯ ಗೀತಸ್ಸಂಕರ್ಷಣೇನ ಯಃ ॥ (ಭಾ.ಶಾಂ. 335)
'ಅಸ್ಮಾತ್ಪ್ರವಕ್ಷ್ಯತೇ ಧರ್ಮಾನ್ ಮನುಸ್ಸ್ವಾಯಂಭುವಸ್ತಥಾ ॥'
(ಭಾ.ಶಾಂ. 343)

ಇತ್ಯಾದಿಭಿಃ ವಚನೈಃ ಬಹುಷು ಸ್ಥಲೇಷು ಪಾಂಚರಾತ್ರಪ್ರಾಮಾಣ್ಯಂ ಪ್ರತಿಷ್ಠಾಪಿತವತಾ ಶಾರೀರಕಶಾಸ್ತ್ರೇ ತತ್ಪ್ರಾಮಾಣ್ಯಂ ನಿರಾಕ್ರಿಯತ ಇತ್ಯಸ್ಯ ಅಸಂಗತತ್ವಾತ್ । ನನ್ವೇವಮ್—

'ಏವಂ ತತ್ತ್ವಮಿದಂ ಕೃತ್ಸ್ನಂ ಸಾಂಖ್ಯಾನಾಂ ವಿದಿತಾತ್ಮನಾಮ್ ।
ಯದುಕ್ತಂ ಯತಿಭಿರ್ಮುಖ್ಯೈಃ ಕಪಿಲಾದಿಭಿರೀಶ್ವರೈಃ ॥
ಯಸ್ಮಿನ್ನ ವಿಭ್ರಮಾಃ ಕೇಚಿತ್ ದೃಶ್ಯಂತೇ ಮನುಜರ್ಷಭ ।
ಗುಣಾಶ್ಚ ಯಸ್ಮಿನ್ ಬಹವೋ ದೋಷಹಾನಿಶ್ಚ ಕೇವಲಾ ॥'

ಇತಿ ಕಾಪಿಲಮತಸ್ಯ ಭಾರತೇ ಭ್ರಮಾದಿದೋಷಾಭಾವಪ್ರತಿಪಾದನಾತ್,

'ಸರ್ವೇಷು ಚ ನೃಪಶ್ರೇಷ್ಠ ಜ್ಞಾನೇಷ್ವೇತೇಷು ದೃಶ್ಯತೇ ।
ಯಥಾಗಮಂ ಯಥಾನ್ಯಾಯಂ ನಿಷ್ಠಾನಾರಾಯಣಃ ಪ್ರಭುಃ' ॥

ಇತಿ ಸಾಂಖ್ಯಯೋಗಪಾಶುಪತಾದೀನಾಮಪಿ ನಾರಾಯಣನಿಷ್ಠತ್ವಪ್ರತಿಪಾದನಾತ್, 'ತಮೇವ ಶಾಸ್ತ್ರಕರ್ತಾರಃ ಪ್ರವದಂತಿ ಮನೀಷಿಣಃ ಇತಿ ತಚ್ಛಾಸ್ತ್ರಕರ್ತೄಣಾಮಪಿ ನಾರಾಯಣ ಪ್ರತಿ ಪಾದಕತ್ವಸ್ಯ ಪ್ರತಿಪಾದನಾತ್ ।

'ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಆತ್ಮಪ್ರಮಾಣಾನ್ಯೇತಾನಿ ನ ಹಂತವ್ಯಾನಿ ಹೇತುಭಿಃ ॥'

ಇತಿ ಸರ್ವೇಷಾಮಪ್ಯಾತ್ಮಪ್ರಮಾಣತ್ವಪ್ರತಿಪಾದನಾಚ್ಚ, 'ಸರ್ವೇ ಪ್ರಮಾಣಂ ಹಿ ತಥಾ ಯುಥೈತಚ್ಛಾಸ್ತ್ರಮುತ್ತಮಮ್' ಇತಿ ಪಾಂಚರಾತ್ರದೃಷ್ಟಾಂತೇನ ಇತರಶಾಸ್ತ್ರಾಣಾಮಪಿ ಪ್ರಾಮಾಣ್ಯಪ್ರತಿಪಾದನಾಚ್ಚ ತತ್ಪಾದೇ ಸಾಂಖ್ಯಪಾಶುಪತಾದ್ಯಾಗಮಾನಾಮಪಿ ಪ್ರಾಮಾಣ್ಯಂ ನ ನಿರಾಕ್ರಿಯತ ಇತಿ ಚೇತ್—ಸತ್ಯಮ್ । ಭ್ರಮವಿಪ್ರಲಿಪ್ಸಾದಿರಾಹಿತ್ಯಂ ಶಾಸ್ತ್ರಕರ್ತೃಣಾಮ್, ಪರಮತಾತ್ಪರ್ಯಂ ಚ ನಾರಾಯಣ ಏವೇತಿ ಸಮಾನಮ್ । ತಥಾಪಿ ಅಬಹುಶ್ರುತತಯಾ ತದ್ವಕ್ತ್ರಾಣಾಂ ಹೃದಯಮಜಾನಂತಃ ಆಪಾತಪ್ರತಿಪನ್ನಮೇವಾರ್ಥಂ ತಾತ್ತ್ವಿಕಂ ಮನ್ಯಮಾನಾ ಯೇ ಪ್ರತ್ಯವತಿಷ್ಠಂತೇ, ತಾನ್ ಪ್ರತಿ ಸಾಂಖ್ಯಾದ್ಯಾಗಮಾನಾಮ್ ಆಪಾತಪ್ರತಿಪನ್ನಾರ್ಥಮಾತ್ರಪರತ್ವಮನ್ವಾರುಹ್ಯ ಸೂತ್ರಕೃತಾ ತನ್ನಿರಸನಂ ಕೃತಮ್ । ಪಾಂಚರಾತ್ರಶಾಸ್ತ್ರೇ ತು ಪರತತ್ತ್ವಹಿತಪುರುಷಾರ್ಥಾನಾಮೇವ ಆಪಾತತೋಽಪಿ ಪ್ರತೀತೇಃ ವೇದ ವಿರುದ್ಧ ನಿಮಿತ್ತೋಪಾದಾನ ಭೇದಾದ್ಯಪ್ರತೀತೇಶ್ಚ ಕೃತ್ಸ್ನಂ ಪಂಚರಾತ್ರಂ ಪ್ರಮಾಣಮೇವೇತಿ ನೈಕದೇಶೇಽಪ್ಯಪ್ರಾಮಾಣ್ಯಶಂಕಾವಕಾಶ ಇತಿ ದ್ರಷ್ಟವ್ಯಮ್ । ಏವಮೇವ ವ್ಯಾಸಾರ್ಯೈಃ ಉಕ್ತಮ್ । ಪ್ರಕೃತಮನುಸರಾಮಃ ॥

ಅನುವಾದ

ಹಿಂದಿನ ಮಂತ್ರದಲ್ಲಿ ಹೇಳಿದ ವಿಷಯವನ್ನೇ ವಿವರಿಸುತ್ತಾನೆ :—ಹಂತಾ ಚೇನ್ಮನ್ಯತೇ ಹಂತುಮ್— ದೇಹವೇ ಆತ್ಮವೆಂದು ಭಾವಿಸಿ 'ನಾನಿವನನ್ನು ಕೊಲ್ಲುವೆನು' ಎಂದು ತಿಳಿದಿದ್ದೇ ಆದರೆ, ಹತಶ್ಚೇನ್ಮನ್ಯತೇ ಹತಮ್— ಕತ್ತರಿಸಲ್ಪಟ್ಟ ಶರೀರಾವಯವಗಳುಳ್ಳವನು, ದೇಹವನ್ನೇ ಆತ್ಮವೆಂದು ತಿಳಿದು 'ನಾನು ಕೊಲ್ಲಲ್ಪಟ್ಟನು' ಎಂದು ತನ್ನನ್ನು ಭಾವಿಸಿದ್ದೇ ಆದರೆ, ಉಭೌ ತೌ ನ ವಿಜಾನೀತಃ—ಅವರಿಬ್ಬರೂ ಆತ್ಮಸ್ವರೂಪವನ್ನು ತಿಳಿದವರಲ್ಲ. (ಏಕೆಂದರೆ), ನಾಯಂ ಹಂತಿ—ಇವನು ಆತ್ಮನನ್ನು ಕೊಲ್ಲಲಾರನು. ನ ಹನ್ಯತೇ—ಆತ್ಮಸ್ವರೂಪವು ಕೊಲ್ಲಲ್ಪಡುವುದಿಲ್ಲ.

ಆಕ್ಷೇಪ :—ವೇದಾಂತದ ಮೂಲಕ ತಿಳಿದ ಪರಿಶುದ್ಧ ಜೀವಾತ್ಮಸ್ವರೂಪದಲ್ಲಿ 'ಕೊಲ್ಲುವುದು' ಎಂಬ ಕ್ರಿಯೆಯ ಪ್ರಸಕ್ತಿಯಾಗಲೀ ಅದರ ನಿಷೇಧವಾಗಲೀ ಹೇಗೆ ಸಂಭವಿಸೀತು.

ಸಮಾಧಾನ :—ಆ ವೇದಾಂತವೇದ್ಯನೇ (ಮರ್ತ್ಯವಾದ ದೇಹವನ್ನು ಧರಿಸಿ) ಕ್ಷೇತ್ರಜ್ಞನೆನಿಸಿರುವುದರಿಂದ (ಶರೀರ–ಶರೀರಿಗಳ ವಿವೇಚನೆಯಿಲ್ಲದಿರುವಾಗ) ಶರೀರಕ್ಕೆ ಸಂಭವಿಸುವ ದಹನಾದಿಗಳು ಇವನಲ್ಲೂ ಬರಬಹುದೆಂಬ ಶಂಕೆಯಿಂದ ಅದನ್ನು ನಿವಾರಿಸಲು ಈ ಪ್ರಸಕ್ತಿ. ಅಂದರೆ ಕ್ಷೇತ್ರಸಂಬಂಧದಿಂದ ಕ್ಷೇತ್ರದಲ್ಲಿ ಉಂಟಾಗುವ ವಿಕಾರವನ್ನು ತನ್ನಲ್ಲಿ ತಿಳಿಯುತ್ತಾನೆ ಎಂಬುದಾಗಿ ಭಾವಿಸಬೇಕು.

(ಆತ್ಮನಿತ್ಯತ್ವಾಧಿಕರಣ)

ವಿಯತ್ಪಾದದಲ್ಲಿ ಈ ಎರಡು ಮಂತ್ರಗಳನ್ನು ಕುರಿತು ವಿಚಾರ ಮಾಡಲಾಗಿದೆ. ಅಲ್ಲಿ 'ವಾಯುಶ್ಚಾಂತರಿಕ್ಷಂ ಚ ಏತದಮೃತಮ್' (ಬೃ.ಉ. 4–3–3) ಎಂದು, ವಾಯು–ಆಕಾಶಗಳು ನಿತ್ಯ ಎಂದು ಹೇಳಿದ್ದರೂ, 'ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ' (ತೈ.ಆ. 1) ಎಂದು ವಾಯು–ಆಕಾಶಗಳಿಗೆ ಉತ್ಪತ್ತಿಯನ್ನು ಹೇಳಿರುವುದರಿಂದಲೂ,

ಏಕವಿಜ್ಞಾನದಿಂದ ಸರ್ವವಿಜ್ಞಾನ ಸಿದ್ಧಿಗಾಗಿ ಎಲ್ಲ ವಸ್ತುಗಳೂ ಬ್ರಹ್ಮವಿಕಾರಗಳು ಎಂಬುದನ್ನು ಹೇಳಲೇಬೇಕಾಗಿರುವುದರಿಂದಲೂ, ವಾಯು ಮತ್ತು ಆಕಾಶಾದಿಗಳಿಗೂ ಉತ್ಪತ್ತಿಯುಂಟು ಎಂದು ಒಪ್ಪಲಾಗಿದೆ. ಹೀಗೆ ಜೀವಾತ್ಮರು ನಿತ್ಯವೆಂದು ಹೇಳಿದ್ದರೂ 'ತೋಯೇನ ಜೀವಾನ್ ವ್ಯಸಸರ್ಜಭೂಮ್ಯಾಮ್' (ತೈ.ನಾ. 1–1) [ಭೂಮಿಯಲ್ಲಿ ನೀರಿನಿಂದ ಜೀವಗಳನ್ನು ಸೃಷ್ಟಿಸಿದನು.] 'ಪ್ರಜಾಪತಿಃ ಪ್ರಜಾ ಅಸೃಜತ' (ತೈ.ಬ್ರಾ.1–10) [ಚತುರ್ಮುಖನು ಪ್ರಜೆಗಳನ್ನು ಸೃಷ್ಟಿಸಿದನು] ಮುಂತಾದ ವಾಕ್ಯಗಳಲ್ಲಿ ಜೀವಗಳಿಗೂ ಸೃಷ್ಟಿಯುಂಟೆಂದು ಹೇಳಿರುವುದರಿಂದಲೂ, ಏಕವಿಜ್ಞಾನದಿಂದ ಸರ್ವವಿಜ್ಞಾನವು ಉಂಟಾಗುವುದೆಂಬುದನ್ನು ಸಿದ್ಧಪಡಿಸಲೋಸುಗವೂ, ಜೀವಗಳಿಗೂ ಸೃಷ್ಟಿ ಉಂಟೆಂಬುದನ್ನು ಒಪ್ಪಬೇಕು ಎಂದು ಪೂರ್ವಪಕ್ಷಿಗಳು ಹೇಳುತ್ತಾರೆ.

'ನಾತ್ಮಾ ಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ'(ಬ್ರ.ಸೂ.2-3-17)ಎಂಬ ಸೂತ್ರದಿಂದ ಪೂರ್ವಪಕ್ಷದ ಆಶಂಕೆಯನ್ನು ಪರಿಹರಿಸಿ, ಸಿದ್ಧಾಂತವನ್ನು ಹೇಳಿದ್ದಾರೆ. ಜೀವಾತ್ಮವು ಹುಟ್ಟುವುದಿಲ್ಲ. 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' (ಕ.ಉ. 2–18) 'ಜ್ಞಾಜ್ಞೌ ದ್ವಾವಜೌ' (ಶ್ವೇ.ಉ. 1–9) ಮುಂತಾದ ಶ್ರುತಿಗಳಲ್ಲಿ ಜೀವದ ಉತ್ಪತ್ತಿಯನ್ನು ನಿಷೇಧಿಸಲಾಗಿದೆ. ಆ ಶ್ರುತಿಗಳಿಂದಲೇ ಜೀವನು ನಿತ್ಯನು ಎಂಬ ಅಂಶವೂ ತಿಳಿದು ಬರುತ್ತದೆ. ಹೀಗಾದಲ್ಲಿ ಉತ್ಪತ್ತಿ ನಿಷೇಧಶ್ರುತಿಗಳಿಗೂ ;ಏಕವಿಜ್ಞಾನಪ್ರತಿಜ್ಞೆಗೂ ವಿರೋಧವುಂಟಾಗುವುದಲ್ಲವೇ ? ಎಂಬ ಆಶಂಕೆ ಸಲ್ಲದು. ಜೀವಸ್ವರೂಪಕ್ಕೆ ಉತ್ಪತ್ತಿ ಇಲ್ಲದೇ ಇದ್ದರೂ ಧರ್ಮಭೂತಜ್ಞಾನದ ಸಂಕೋಚ ವಿಕಾಸಗಳಿಂದ ಭಿನ್ನ ಭಿನ್ನ ಅವಸ್ಥೆಗಳುಂಟು. ಆದ್ದರಿಂದ ಉತ್ಪತ್ತಿ ನಿಷೇಧ ಶ್ರುತಿಯೂ, ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞೆಯೂ ಹೊಂದಿಕೊಳ್ಳುತ್ತದೆ. ಉತ್ಪತ್ತಿಯನ್ನು ನಿಷೇಧಿಸುವ ಶ್ರುತಿಗೆ, ಸ್ವರೂಪದ ಬದಲಾವಣೆ ಎಂಬಲ್ಲಿ ಉತ್ಪತ್ತಿ ಇಲ್ಲ ಎಂಬ ತಾತ್ಪರ್ಯವಿರುವುದರಿಂದ ಈ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ (ಆದರೆ) ಚಿತ್–ಅಚಿತ್–ಈಶ್ವರ ಈ ಮೂರು ತತ್ತ್ವಗಳೂ ಬೇರೊಂದು ಅವಸ್ಥೆಯನ್ನು ಹೊಂದುತ್ತವೆ ಎಂಬ ಉತ್ಪತ್ತಿರೂಪವಾದ ವಿಕಾರವು ಇದ್ದೇ ಇದೆ.ಅಚೇತನಗಳಿಗೆ ಸ್ವರೂಪಬದಲಾವಣೆಯೇ ಉತ್ಪತ್ತಿಯೆನಿಸುತ್ತದೆ. ಜೀವಗಳಿಗೆ ಈ ಸ್ವರೂಪಬದಲಾವಣೆ ಇಲ್ಲ. ಧರ್ಮಭೂತಜ್ಞಾನದ ಸಂಕೋಚವಿಕಾಸರೂಪವಾದ ಬದಲಾವಣೆಗಳೇ ಅವನ ಉತ್ಪತ್ತಿ ಎನಿಸುತ್ತದೆ. ಈಶ್ವರನಿಗೆ ಆಯಾಯ ಅವಸ್ಥಾವಿಶಿಷ್ಟವಾದ ನಿಯಂತ್ರಣವೆಂಬ ಅವಸ್ಥಾಸಂಬಂಧವಿದ್ದರೂ ಜ್ಞಾನಸಂಕೋಚ–ವಿಕಾಸಗಳೆಂಬ ಅನಿಷ್ಟವಾದ ಎರಡು ಬಗೆಯ ವಿಕಾರಗಳು ಇಲ್ಲದುದರಿಂದ ಚಿದಚಿತ್ತಿಗಿಂತ ವಿಲಕ್ಷಣವಾದ ನಿತ್ಯತ್ವವುಂಟೆಂದು ತಿಳಿಯಬೇಕು.

## ಉತ್ಪತ್ತ್ಯಸಂಭವಾಧಿಕರಣಮ್

ಆಕ್ಷೇಪಃ —'ನ ಜಾಯತೇ ಮ್ರಿಯತೇ ವಾ' (ಕ.ಉ. 2–18) ಎಂದು ವೇದದಲ್ಲಿ ಜೀವದ ಅನುತ್ಪತ್ತಿಯನ್ನು 'ವಾಸುದೇವಾತ್ ಸಂಕರ್ಷಣೋ ನಾಮ ಜೀವೋ ಜಾಯತೇ' ಎಂದು ಜೀವದ ಉತ್ಪತ್ತಿಯನ್ನು ಪಾಂಚರಾತ್ರದಲ್ಲಿ ಹೇಳಿರುವುದರಿಂದ ಪಾಂಚರಾತ್ರಕ್ಕೆ ಪ್ರಾಮಾಣ್ಯ ಹೇಗೆ ? ಎಂಬುದಾಗಿ ಶಂಕಿಸಿದರೆ—

ಸಮಾಧಾನ :—'ತರ್ಕಪಾದದಲ್ಲಿ ಈ ಆಶಂಕೆಯನ್ನು ಪರಿಹರಿಸಿರುವುದರಿಂದ ಇದು

ಕಲ್ಲದು. 'ವಾಸುದೇವಾತ್ ಸಂಕರ್ಷಣೋ ನಾಮ ಜೀವೋ ಜಾಯತೇ' ಎಂದು ಜೀವೋತ್ಪತ್ತಿಯನ್ನು (ಪಾಂಚರಾತ್ರದಲ್ಲಿ) ಪ್ರತಿಪಾದಿಸಿದೆ. ಅದು ಜೀವನಲ್ಲಿ ಸಂಭವಿಸುವುದಿಲ್ಲ ಮತ್ತು 'ಸಂಕರ್ಷಣನಿಂದ ಪ್ರದ್ಯುಮ್ನ ಸಂಜ್ಞೆಯುಳ್ಳ ಮನಸ್ಸು ಹುಟ್ಟುತ್ತದೆ' ಎಂದು ಕರ್ತೃವಾದ ಜೀವನಿಂದ ಇಂದ್ರಿಯರೂಪವಾದ ಮನಸ್ಸಿಗೆ ಉತ್ಪತ್ತಿಯನ್ನು ಹೇಳಿರುವುದೂ ಸರಿ ಹೊಂದುವುದಿಲ್ಲ. 'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' (ಮುಂ.ಉ. 2–1–3) ಎಂಬಲ್ಲಿ ಮನಸ್ಸು ಬ್ರಹ್ಮನಿಂದ ಹುಟ್ಟುತ್ತದೆ ಎಂಬ ಮಾತಿಗೆ ವಿರುದ್ಧವಾಗುವುದು. ಈ ವಿಷಯವನ್ನು 'ಉತ್ಪತ್ತ್ಯಸಂಭವಾತ್' (ಬ್ರ.ಸೂ. 2–2–39) 'ನ ಚ ಕರ್ತುಃ ಕರಣಮ್' (ಬ್ರ.ಸೂ. 2–2–40) ಎಂಬ ಎರಡು ಸೂತ್ರಗಳಿಂದ ಪೂರ್ವಪಕ್ಷಮಾಡಿ 'ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ' (ಬ್ರ.ಸೂ. 2–2–41) 'ವಿಪ್ರತಿಷೇಧಾಚ್ಚ' (ಬ್ರ.ಸೂ. 2–2–42) ಎಂಬ ಎರಡು ಸೂತ್ರಗಳಿಂದ ಸಿದ್ಧಾಂತಿಸಿದೆ. 'ವಾ' ಶಬ್ದವು ಪೂರ್ವಪಕ್ಷಪರಿಹಾರಾರ್ಥಕವಾಗಿದೆ. 'ವಿಜ್ಞಾನಂ ಚ ತತ್ ಆದಿ ಚ ವಿಜ್ಞಾನಾದಿ' ಎಂದು ವಿಗ್ರಹವಾಕ್ಯ 'ಆದಿ' ಎಂಬುದು 'ಅದ ಭಕ್ಷಣೇ' ಎಂಬ ಧಾತುವಿನ ಮೇಲೆ ಆವಶ್ಯಕ ಎಂಬ ಅರ್ಥದಲ್ಲಿ 'ಣಿನಿ' ಪ್ರತ್ಯಯ ಬಂದು ರೂಪಗೊಂಡಿರುವುದರಿಂದ, 'ಕ್ಯಂತೋ ಘುಃ' (ಲಿಂಗಾನು.ಶಾ. 40) ಎಂಬ ಸೂತ್ರದಂತೆ ನಿತ್ಯಪುಲ್ಲಿಂಗವಾಗಬೇಕೆಂಬ ಆಕ್ಷೇಪಣೆಗೆ ಎಡೆಯಿಲ್ಲ' ಇದರಿಂದ ಸಮಸ್ತ ಜಗತ್ಸಂಹರ್ತೃತ್ವದ ಮೂಲಕ ಪರಮಾತ್ಮನಿಗೆ ಕಾರಣತ್ವವನ್ನು ಪ್ರತಿಪಾದಿಸಿದೆ. ವಿಜ್ಞಾನ ಎಂದರೆ ಜ್ಞಾನಸ್ವರೂಪಿ ಪರಮಾತ್ಮ, 'ಸಂಕರ್ಷಣೋ ನಾಮ ಜೀವೋ ಜಾಯತೇ' ಎಂದು ಹೇಳಿದ ಜೀವಶಬ್ದಕ್ಕೆ ಜೀವಾಭಿಮಾನಿ ಪರಮಾತ್ಮ ಎಂಬ ತಾತ್ಪರ್ಯ ಸ್ವೀಕರಿಸಿದರೆ ಆಗಮಶಾಸ್ತ್ರದ ಅಪ್ರಾಮಾಣ್ಯಶಂಕೆಗೂ ಎಡೆಯಿಲ್ಲದಂತಾಗುತ್ತದೆ. ಪರಮಾತ್ಮನಿಗೆ ಜನನ ಅಂದರೆ ಅವನ ಇಚ್ಛೆಗೆ ಅನುಗುಣವಾದ ಶರೀರವನ್ನು ಪಡೆಯುವುದು. ಅದೇ ಪಾಂಚರಾತ್ರತಂತ್ರದಲ್ಲಿ 'ಸ ಹ್ಯನಾದಿರನಂತಶ್ಚ' ಎಂದು ಜೀವೋತ್ಪತ್ತಿಯನ್ನು ವಿಶೇಷವಾಗಿ ನಿಷೇಧಿಸಿರುವುದರಿಂದ ಅದಕ್ಕೆ ವಿರುದ್ಧವಾದ ಉಕ್ತಿಯು ಇದರಲ್ಲಿ ಬರಲಾರದು. 'ಸಂಕರ್ಷಣೋ ನಾಮ ಜೀವೋ ಜಾಯತೇ' ಎಂಬುದರಿಂದ ಜೀವಾಭಿಮಾನಿದೇವತೆಯಾದ ಸಂಕರ್ಷಣನಿಗೆ ತನ್ನ ಇಚ್ಛಾನುಗುಣವಾದ ಶರೀರ ಪರಿಗ್ರಹವೆಂಬ ಉತ್ಪತ್ತಿಯೇ ಇಲ್ಲಿ ಪ್ರತಿಪಾದ್ಯವಾಗುವ ಕಾರಣ ಅಪ್ರಾಮಾಣ್ಯಕ್ಕೆ ಅವಕಾಶವಿಲ್ಲ ಎಂಬುದು ಸಿದ್ಧಾಂತಪರವಾದ ಈ ಸೂತ್ರಗಳಿಗೆ ಅರ್ಥ.

ಆಕ್ಷೇಪ :— ಸಾಂಖ್ಯಾಧಿಕರಣವು (ಸ್ಮೃತ್ಯಧಿಕರಣ 2–1–1) ಸಾಂಖ್ಯತಂತ್ರಕ್ಕೆ ಹೇಗೆ ಅಪ್ರಮಾಣ್ಯವನ್ನೂ, ಪಾಶುಪತಾಧಿಕರಣವು ಪಾಶುಪತತಂತ್ರಕ್ಕೆ ಅಪ್ರಾಮಾಣ್ಯವನ್ನೂ ಹೇಗೆ ಬೋಧಿಸುತ್ತದೋ ಅದರಂತೆ ಈ ಉತ್ಪತ್ತ್ಯಸಂಭವಾಧಿಕರಣವೂ ಸಹ, ಪಾಂಚರಾತ್ರತಂತ್ರದ ಪ್ರಾಮಾಣ್ಯಕ್ಕೆ ನಿಷೇಧಕವೇ ಏಕೆ ಆಗಿರಬಾರದು ?

ಸಮಾಧಾನ :— ಭಾರತಸಂಹಿತೆಯನ್ನು ರಚಿಸಿದ ವ್ಯಾಸಮಹರ್ಷಿಗಳು—

'ಇದಂ ಶತಸಹಸ್ರಾದ್ಧಿ.........ಪಾಂಚರಾತ್ರಾನು ಶಬ್ದಿತಮ್ ॥

(ಈ ಪಾಂಚರಾತ್ರವೆಂಬುದು ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆದಂತೆ ಒಂದು ಲಕ್ಷ ಗ್ರಂಥವಿಸ್ತಾರವಾದ ಮಹಾಭಾರತವೆಂಬ ಆಖ್ಯಾನವನ್ನು ಶುದ್ಧವಾದ ಬುದ್ಧಿಯಿಂದ ಮಥನ ಮಾಡಿ ತೆಗೆದದ್ದು.

ಮೊಸರಿನಲ್ಲಿ–ನವನೀತವೂ (ಬೆಣ್ಣೆಯೂ), ಮನುಷ್ಯರಲ್ಲಿ–ಬ್ರಾಹ್ಮಣರೂ, ವೇದಗಳಲ್ಲಿ–ಆರಣ್ಯಕವೂ, ಓಷಧಿಗಳಲ್ಲಿ—ಅಮೃತವೂ ಸಾರವಾಗಿರುವಂತೆ ನಾಲ್ಕು ವೇದಗಳೂ ಮತ್ತು ಸಾಂಖ್ಯ–ಯೋಗ ಇವುಗಳ ಸಾರರೂಪವಾಗಿದ್ದು ಪಾಂಚರಾತ್ರವೆಂಬ ಮಹೋಪನಿಷತ್ತು ಆಗಿದೆ.)

'ಇದಂ ಶ್ರೇಯಃ………… ಸಂಕರ್ಷಣೇನ ಯಃ'

(ಈ ಪಾಂಚರಾತ್ರದಲ್ಲಿ ಪ್ರತಿಪಾದಿತವಾದದ್ದೇ ಸಾಂಸಾರಿಕಫಲಸಾಧನವಾದ ಶ್ರೇಯಸ್ಸೆನಿಸಿದೆ. ಇದರಲ್ಲಿ ಹೇಳಿದ್ದೇ ಪರಮಪ್ರಾಪ್ಯವಾದ ಪರಬ್ರಹ್ಮ. ಮೋಕ್ಷವೆಂಬ ಪರಮಪುರುಷಾರ್ಥಸಾಧನವನ್ನು ಸ್ಪಷ್ಟವಾಗಿ ತಿಳಿಸುವುದರಿಂದ ಈ ಶಾಸ್ತ್ರವೇ ಸರ್ವೋತ್ಕೃಷ್ಟವಾದ ಹಿತವು, ಇದೇ ಚತುರ್ವೇದಸಾರದಿಂದ ಕೂಡಿದ್ದು ತತ್ತ್ವ–ಹಿತ–ಪುರುಷಾರ್ಥಗಳ ಪೂರ್ಣಜ್ಞಾನವನ್ನು ದೊರಕಿಸಿಕೊಟ್ಟು, ಅನುಶಾಸನವೆಂದು ಹೇಳಬಹುದಾದ ಪ್ರಮಾಣಮೂರ್ಧನ್ಯವಾಗಿದೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣದವರೂ, (ಪೂಜಾಯೋಗ್ಯವಾದ) ಲಕ್ಷಣಗಳಿಂದ ಕೂಡಿ, ಸಂಕರ್ಷಣೋಕ್ತವಾದ ಪಾಂಚರಾತ್ರತಂತ್ರದವಿಧಿಯನ್ನು ಅನುಸರಿಸಿ ಶ್ರಿಯಃಪತಿಯಾದ ನಾರಾಯಣನ ಅರ್ಚನೆ, ಸೇವೆ, ಪೂಜೆಗಳನ್ನು ಅನುಷ್ಠಿಸಬೇಕು.)

'ಅಸ್ಮಾತ್ಪ್ರವಕ್ಷ್ಯತೇ ಧರ್ಮಾನ್ ಮನುಸ್ಸ್ವಾಯಂಭುವಸ್ತಥಾ'

(ವಿಶ್ವಭೇಷಜವಾದ ಧರ್ಮಗಳನ್ನು ತಿಳಿಸುವ) ಸ್ವಾಯಂಭುವಮನುವೂ ಸಹ ತನ್ನ ಧರ್ಮಶಾಸ್ತ್ರದಲ್ಲೂ, ಇದರಿಂದ (ಈ ಪಾಂಚರಾತ್ರದಿಂದ) ಉದ್ಧರಿಸಿದ ಧರ್ಮತತ್ತ್ವಗಳನ್ನೇ ಮುಂದೆ ಸ್ಪಷ್ಟಪಡಿಸುವನು.)

ಇದೇ ಮೊದಲಾದ ವಚನಗಳ ಮೂಲಕ ತನ್ನ ಮಹಾಭಾರತದ ಅನೇಕಸ್ಥಳಗಳಲ್ಲಿ ಪಾಂಚರಾತ್ರಪ್ರಾಮಾಣ್ಯವನ್ನು ಪ್ರತಿಷ್ಠಿಸಿ, ಈ ಶಾರೀರಕಶಾಸ್ತ್ರದಲ್ಲಿ ಅದರ ಪ್ರಾಮಾಣ್ಯವನ್ನು ನಿಷೇಧಿಸಿದ್ದಾರೆಂದು ಭಾವಿಸುವುದು ಅಯುಕ್ತವೇ ಸರಿ.

ಆಕ್ಷೇಪ :—'ಏವಂ ತತ್ತ್ವಮಿದಂ…………ದೋಷಹಾನಿಶ್ಚ ಕೇವಲಾ'

ಕಪಿಲರೇ ಮೊದಲಾದ ಈಶ್ವರಾವತಾರರೂಪಿಗಳಾದ ಶುದ್ಧಯತಿಗಳಿಂದ ಪ್ರತಿಪಾದಿಸಲ್ಪಟ್ಟದ್ದು ಯಾವುದುಂಟೋ ಅದು, ತತ್ತ್ವಜ್ಞರಾದ ಸಾಂಖ್ಯರ, ಸಮಗ್ರವಾದ ನಿಶ್ಚಿತ ಸಿದ್ಧಾಂತವಾಗಿದೆ.

ಇದರಲ್ಲಿ ತ್ಯಾಜ್ಯವಾದ ದೋಷಗಳೂ, ಉಪಾದೇಯವಾದ ಗುಣಗಳೂ, ಪ್ರತಿಪಾದಿತವಾಗಿದ್ದು ಯಾವುದೇ ಭ್ರಮೆಗೂ ಅವಕಾಶವಿಲ್ಲದಂತೆ, ಸ್ಪಷ್ಟೋಕ್ತಿ ಇದೆ ಎಂಬುದಾಗಿ 'ಏವಂ……ಕೇವಲಾ' ಎಂಬ ವಾಕ್ಯಗಳಿಂದ, ಕಪಿಲಮತದಲ್ಲಿ ಭ್ರಮಾದಿದೋಷಸಂಬಂಧವಿಲ್ಲವೆಂಬುದನ್ನು ಭಾರತದಲ್ಲಿ ಪ್ರತಿಪಾದಿಸಿರುವುದರಿಂದಲೂ, 'ಸರ್ವೇಷು ಚ……ಪ್ರಭಾಃ' (ಮಹಾ. ಶಾಂ. 349–68) (ಎಲೈ ರಾಜಶ್ರೇಷ್ಠನೆ! ಈ ಹಿಂದೆ ಹೇಳಿದ ಕಪಿಲಾದಿ

ಆಯಾ ತತ್ತ್ವಪ್ರವರ್ತಕರಿಗೆ ಸಮ್ಮತವಾದ ಸಾಂಖ್ಯಾದಿ ನಾನಾ ಬಗೆಯ ಜ್ಞಾನಗಳನ್ನು ತರ್ಕ ಮತ್ತು ಆಗಮಗಳ ಸಹಕಾರದೊಂದಿಗೆ ವಿಚಾರಿಸಿದ್ದೇ ಆದರೆ, ಶ್ರೀಮನ್ನಾರಾಯಣನೇ ಇವೆಲ್ಲ ತತ್ತ್ವಶಾಸ್ತ್ರಗಳ ಪರ್ಯವಸಾನಭೂಮಿ ಎಂದೂ, ಅವನೇ ಇವೆಲ್ಲಕ್ಕೂ ಆರಾಧ್ಯ ದೈವವಾಗಿ ಫಲಪ್ರದನೆಂದೂ ನಿಶ್ಚಿತವಾಗುತ್ತದೆ,) ಎಂಬುದಾಗಿ ಸಾಂಖ್ಯ, ಯೋಗ, ಪಾಶುಪತಾದಿತಂತ್ರಗಳೂ ಸಹ ನಾರಾಯಣನಲ್ಲೇ ತಾತ್ಪರ್ಯವುಳ್ಳವುಗಳೆಂದು ಪ್ರತಿಪಾದಿಸಿರುವುದರಿಂದಲೂ, 'ತಮೇವ....ಮನೀಷಿಣಃ' (ಶಾಸ್ತ್ರಕಾರರಾದ ಜ್ಞಾನಿಗಳೂ ಸಹ, ನಾರಾಯಣನನ್ನೇ ಪ್ರತಿಪಾದಿಸಿರುವರೆಂದು ಹೇಳಿರುವುದರಿಂದಲೂ) 'ಸಾಂಖ್ಯಂ ಯೋಗಃ....ಹೇತುಭಿಃ' (ಕಪಿಲೋಕ್ತವಾದ ಸಾಂಖ್ಯತಂತ್ರವೂ ಹಿರಣ್ಯಗರ್ಭೋಪದಿಷ್ಟವಾದ ಯೋಗತಂತ್ರವೂ, ವಿಷ್ಣುವಿನಿಂದ ಪ್ರವರ್ತಿತವಾದ ಪಾಂಚರಾತ್ರತಂತ್ರವೂ, ಅಂತೆಯೇ ಶಿವಪ್ರೋಕ್ತವಾದ ಪಾಶುಪತತಂತ್ರವೂ, ಋಗಾದಿ ನಾಲ್ಕು ವೇದಗಳೂ, ಇವೆಲ್ಲವೂ, ದೇಹಾತಿರಿಕ್ತನಾದ ಆತ್ಮನನ್ನು ನಿಶ್ಚಯಿಸಲು ಸಾಧನಭೂತವಾದ ಪ್ರಮಾಣವಾಗಿರುವುದರಿಂದ ಯಾವಾಗಲೂ ಹೇತುವಾದಗಳಿಂದ ಬಾಧಿಸಲ್ಪಡತಕ್ಕವುಗಳಲ್ಲ) ಎಂಬುದಾಗಿ ಇವುಗಳಿಗೆ ಸ್ವತಃಪ್ರಮಾಣತ್ವವನ್ನು ಹೇಳಿರುವುದರಿಂದಲೂ, 'ಸರ್ವೇ....ಉತ್ತಮಮ್' ('ಈ ಪಾಂಚರಾತ್ರದಂತೆಯೇ ಉಳಿದ ಎಲ್ಲ ಶಾಸ್ತ್ರಗಳೂ ಪ್ರಮಾಣವೇ') ಎಂದು ಹೇಳಿರುವುದರಿಂದಲೂ, ಬ್ರಹ್ಮಸೂತ್ರದ ಆ ಪಾದದಲ್ಲಿಯೂ, ಸಾಂಖ್ಯಾದಿಗಳಿಗೆ ಪ್ರಾಮಾಣ್ಯ ನಿರಾಕರಣೆ ಇಲ್ಲ ಎಂದು ಹೇಳಿರುವುದು ಯುಕ್ತ.

ಸಮಾಧಾನ:—ನಿಜ–ಭ್ರಮೆ ಮತ್ತು ವಂಚನೇಚ್ಛೆ ಇವುಗಳು ಶಾಸ್ತ್ರಕಾರರಿಗೆ ಇರುವುದಿಲ್ಲ ಮತ್ತು ಆಯಾಯಾ ಸೂತ್ರಕಾರರು ಮತ್ತು ಕಪಿಲಾದಿ ಋಷಿಗಳಿಗೆ ಶಾಸ್ತ್ರದ ಮುಖ್ಯಲಕ್ಷಣ ಶ್ರೀಮನ್ನಾರಾಯಣನೇ ಎಂಬುದು ಎಲ್ಲರಿಗೂ ಸಮಾನ. ಆದರೂ ಸಹ ಬಹುಶ್ರುತರಲ್ಲದ ಕಾರಣ ಆಯಾಶಾಸ್ತ್ರಕಾರರ ಹೃದಯವನ್ನರಿಯದೇ ಮೇಲ್ನೋಟಕ್ಕೆ ತೋರಿದ ಅರ್ಥವನ್ನೇ ತಾತ್ತ್ವಿಕವೆಂದರಿತು ಯಾರು ಆಕ್ಷೇಪಿಸುವರೋ ಅವರ ಅಭಿಮತದಂತೆ ಸಾಂಖ್ಯಾದ್ಯಾಗಮಗಳಿಗೆ, ಅವರ ನೋಟದಂತೆ ತೋರಿದ ಅರ್ಥವನ್ನು ಒಪ್ಪಿಕೊಂಡಂತೆ ಮಾಡಿ ಸೂತ್ರಕಾರರಾದ ಬಾದರಾಯಣರು ಅದನ್ನು ನಿರಾಸಮಾಡಿರುವರು.

ಪಾಂಚರಾತ್ರಾಗಮದಲ್ಲಾದರೋ ಮೇಲ್ನೋಟಮಾತ್ರಕ್ಕೂ ಭ್ರಮೆಗೆ ಎಡೆಯಿಲ್ಲದೆ ಪರತತ್ತ್ವ ಪರಮಹಿತ ಮತ್ತು ಪರಮಪುರುಷಾರ್ಥಗಳೇ ತೋರಿಬರುವುದರಿಂದಲೂ, ವೇದ ಸಿದ್ಧಾಂತಕ್ಕೆ ವಿರುದ್ಧವಾದ, ಜಗನ್ನಿಮಿತ್ತಜಗದುಪಾದಾನಕಾರಣಗಳ ಭೇದವು ತೋರದಿರುವುದರಿಂದಲೂ, ಸ್ವಲ್ಪಭಾಗದಲ್ಲಿಯೂ ಅಪ್ರಾಮಾಣ್ಯಸಂಶಯಕ್ಕೆ ಅವಕಾಶವಿಲ್ಲದೇ ಸಂಪೂರ್ಣ ಪಾಂಚರಾತ್ರವೂ ಪ್ರಮಾಣಭೂತವೇ ಸರಿ ಎಂದು ಭಾವಿಸತಕ್ಕದ್ದು. ವ್ಯಾಸಾರ್ಯರೂ ಹೀಗೆಯೇ ಸ್ಪಷ್ಟಪಡಿಸಿರುವರು. ಪ್ರಕೃತಮನುಸರಾಮಃ ॥

## ಭಾಷ್ಯಸಾರ

ದೇಹಕ್ಕೆ ಸಂಬಂಧಪಟ್ಟ (ತ್ರಿಗುಣಸಂಬಂಧಕೃತವಾದ) ಹನನಕರ್ತೃತ್ವವನ್ನು ಭ್ರಮೆಯಿಂದ ಆತ್ಮನಲ್ಲಿ ಆರೋಪಿಸಿ, ನಾನು ಇವನಿಗೆ ಹಂತೃವಾಗಿದ್ದೇನೆ ಎಂದು ಭಾವಿಸಿಕೊಂಡು ಇನಿವನನ್ನು ಕೊಲ್ಲುವೆನು; ಎಂದು ಸಂಕಲ್ಪಿಸುವುದಾದರೆ ಅವನೂ, ಅಂತೆಯೇ ದೇಹಾತ್ಮಾಭಿಮಾನಿಯಾದ ಮತ್ತೊಬ್ಬನು ಓರ್ವನಿಂದ ತನ್ನ ಹಸ್ತಪಾದಾದ್ಯಂಗಗಳು ಛೇದಿಸಲ್ಪಟ್ಟಿದ್ದನ್ನು

ಕಂಡು ನಾನು ಇವನಿಂದ ಕೊಲ್ಲಲ್ಪಟ್ಟೆನು ಎಂದು ಭಾವಿಸುವುದಾದರೆ ಇವರಿಬ್ಬರೂ ಅಂದರೆ (ಹಂತೃವಲ್ಲದ ಆತ್ಮನಲ್ಲಿ ಹಂತೃತ್ವಾರೋಪ, ಹತನಲ್ಲದ ಆತ್ಮನಲ್ಲಿ ಹತತ್ವಾರೋಪ ಮಾಡಿಕೊಳ್ಳುವವರಿಬ್ಬರೂ,) ವಾಸ್ತವಿಕವಾದ ಆತ್ಮಸ್ವರೂಪವನ್ನು ಅರಿಯದವರೇ ಸರಿ. ಏಕೆಂದರೆ ಛೇದನವನ್ನು ಮಾಡಿದ್ದು ಶರೀರವೇ, ಛೇದಿಸಲ್ಪಟ್ಟಿದ್ದೂ ಶರೀರವೇ ಹೊರತು ಆತ್ಮನಲ್ಲ. ಅವನು ಛೇದನಕರ್ತೃವೂ ಅಲ್ಲ, ಛೇದನಕರ್ಮವೂ ಅಲ್ಲ, ಅವನು ನಿತ್ಯ. ಅವಿನಾಶಿ.

ಇವೆರಡು ಮಂತ್ರಗಳನ್ನು ಕೆಲವರು ಜನನ-ಮರಣಾದಿ ವಿಕಾರರಹಿತನಾದ ಪರಮಾತ್ಮನಿಗೆ ಅನ್ವಯಿಸಿ ವ್ಯಾಖ್ಯಾನಮಾಡಿರುವರು. ಅದು ಹಂತೃತ್ವ-ಹತತ್ವಾದ್ಯಭಿಮಾನಗಳೆಲ್ಲವೂ, ಪ್ರಾಕೃತಶರೀರವನ್ನವಲಂಬಿಸಿಯೇ ಬರುವುದು ಸಹಜವಾದುದರಿಂದ ಪ್ರಾಕೃತಶರೀರಸಂಬಂಧವಿಲ್ಲದ ಪರಮಾತ್ಮನಿಗೆ ಹೊಂದದಕಾರಣ ಅನುಚಿತವು. ಲೋಕದಲ್ಲಿ ದೊರಕಿದ ಭ್ರಾಂತಿಯನ್ನು ಹೋಗಲಾಡಿಸಲು ಇವೆರಡು ಮಂತ್ರಗಳೂ ಬಂದುದರಿಂದ ಭ್ರಾಂತಿರಹಿತನಾದ ಪರಮಾತ್ಮನಿಗೆ ಅನ್ವಯಿಸದೇ ಜೀವನಿಗೆ ಅನ್ವಯಿಸುವುದೇ ಯುಕ್ತವಾಗಿದೆ.

ಸುಬೋಧಿನೀಕಾರರು — 'ನಾಯಂ ಹಂತಿ ನ ಹನ್ಯತೇ' ಎಂಬುದರಿಂದ ಆತ್ಮನಲ್ಲಿ ಹನನಕ್ರಿಯಾಕರ್ತೃತ್ವನಿಷೇಧವನ್ನು ವ್ಯಾಜವಾಗಿಟ್ಟು, ಅದರ ಮೂಲಕ ಕರ್ತೃತ್ವಸಾಮಾನ್ಯವನ್ನು ನಿಷೇಧಿಸಲು ಈ ಮಂತ್ರ ಹೊರಟಿದೆ ಎಂಬ ಕೆಲವರ ವ್ಯಾಖ್ಯಾನವನ್ನು ಅನುವಾದಮಾಡಿ, ಅದು ಅನುಚಿತ ಎಂದಿರುವರು. ಏಕೆಂದರೆ ಕರ್ತೃತ್ವಸಾಮಾನ್ಯನಿಷೇಧವು ಅಭಿಪ್ರಾಯವಿಷಯವಾಗಿದ್ದಲ್ಲಿ(ದರ್ಶನ, ಗಮನಾಗಮನ, ಭೋಜನ ಮೊದಲಾದ ನಾಲ್ಕಾರು ಕ್ರಿಯೆಗಳನ್ನು ಹೇಳಿ, ಅವುಗಳ ನಿಷೇಧಮಾಡದೇ) ವಿಶೇಷವಾಗಿ ಹನನಕ್ರಿಯೆಯನ್ನೇ ಉಲ್ಲೇಖಿಸಿ ನಿಷೇಧಿಸಿರುವ ಕಾರಣ ಇದು ವಿಕಾರಕ್ಕೆ ಸಂಬಂಧಪಟ್ಟಂಥ ಕ್ರಿಯೆಯಾದುದರಿಂದ ಆ ವಿಕಾರಸಂಬಂಧವು ಆತ್ಮನಿಗೆ ಸಲ್ಲದು ; ಎಂಬುದರಲ್ಲಿ ತಾತ್ಪರ್ಯವೇ ಹೊರತು, ಕರ್ತೃತ್ವಸಾಮಾನ್ಯನಿಷೇಧದಲ್ಲಲ್ಲ. ಹಾಗೆ ಅನ್ವಯಿಸಿದಲ್ಲಿ ಕ್ರಿಯಾವಿಶೇಷೋಲ್ಲೇಖವು ಅಸ್ವರಸವಾದೀತು. ಆದಕಾರಣ ಪೂರ್ವೋಕ್ತ ಮಂತ್ರದ ವಿವರಣೆಯೇ ಈ ಮಂತ್ರದಿಂದ ಆಗಿದೆ — ಎಂದಿರುವರು.



## ಮಂತ್ರ ೨೦

**अणोरणीयान् महतो महीयान् आत्माऽस्य जन्तोर्निहितो गुहायाम् ।**
**तमक्रतुः पश्यति वीतशोको धातुप्रसादान्महिमानमात्मनः ॥**

ಅಣೋರಣೀಯಾನ್ ಮಹತೋ ಮಹೀಯಾನ್
ಆತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಮ್ ।
ತಮಕ್ರತುಃ ಪಶ್ಯತಿ ವೀತಶೋಕೋ ಧಾತು-
ಪ್ರಸಾದಾನ್ಮಹಿಮಾನಮಾತ್ಮನಃ ॥

### ಪ್ರತಿಪದಾರ್ಥ

**ಅಣೋಃ ಅಣೀಯಾನ್**—ಸೂಕ್ಷ್ಮನಾದ ಚೇತನನಿಗಿಂತಲೂ ಅತ್ಯಂತ ಸೂಕ್ಷ್ಮನೂ, **ಮಹತೋ ಮಹೀಯಾನ್**—ಮಹತ್ತಾದ ಆಕಾಶಾದಿಗಳಿಗಿಂತಲೂ ಅತ್ಯಂತ ಮಹತ್ತೂ ಆದ, **ಆತ್ಮಾ**—ಪರಮಾತ್ಮನು, **ಅಸ್ಯ ಜಂತೋಃ**—ಈ ಚೇತನನ, **ಗುಹಾಯಾಮ್**—ಹೃದಯ ಗುಹೆಯಲ್ಲಿ, **ನಿಹಿತಃ**—ನಿಯಮನಕ್ಕಾಗಿ ಇರತಕ್ಕವನು. **ತಮ್**—ಅಂತಹ ಪರಮಾತ್ಮನನ್ನು, **ಅಕ್ರತುಃ**—ಕಾಮ್ಯಕರ್ಮಗಳನ್ನು ತ್ಯಜಿಸಿದ ಯಾವ ಮುಮುಕ್ಷುವಿರುವನೋ, ಅವನು, **ಆತ್ಮನಃ**—ಪರಮಾತ್ಮನ, **ಮಹಿಮಾನಮ್**—ಅಘಟಿತಘಟನಾಸಾಮರ್ಥ್ಯರೂಪವಾದ ಮಹಿಮೆಯನ್ನೂ, **ಧಾತುಃ**—ಸರ್ವಕಾರಣನಾದ ಆ ಪರಮಾತ್ಮನ, **ಪ್ರಸಾದಾತ್**—ಅನುಗ್ರಹದಿಂದ, **ಪಶ್ಯತಿ**—ಕಂಡುಕೊಳ್ಳುತ್ತಾನೋ (ಅವನು), **ವೀತಶೋಕಃ**—ಸರ್ವದುಃಖಗಳನ್ನೂ ದಾಟಿದವನಾಗುತ್ತಾನೆ.

### ತಾತ್ಪರ್ಯ

ಪರಮಾತ್ಮ ಸ್ವರೂಪವನ್ನು ಅರಿತವನಿಗೆ ದೊರಕುವ ಫಲವನ್ನು ಈ ಮಂತ್ರದಿಂದ ತಿಳಿಸುತ್ತಾನೆ. ಸೂಕ್ಷ್ಮತಮನೂ ಆಕಾಶಾದಿಗಳಿಗಿಂತ ಮಹತ್ತಮನೂ ಆದ ಪರಮಾತ್ಮನು ಜೀವಿಗಳ ಹೃದಯಗುಹೆಯಲ್ಲಿ ಅವರವರ ಜೀವನವನ್ನು ಸುವ್ಯವಸ್ಥಿತವಾಗಿ ನಡೆಸಲೋಸುಗ ಕಾಮ್ಯಗಳಿಂದ ದೂರನಾದ ಮುಮುಕ್ಷುವು ಪರಮಾತ್ಮನನ್ನೂ ಅವನ ಮಹಿಮೆಯನ್ನೂ ಅವನ ದಯೆಯಿಂದಲೇ ತಿಳಿದು ಶೋಕಾದಿಗಳನ್ನು ದಾಟುತ್ತಾನೆ. (ಮುಕ್ತನಾಗುತ್ತಾನೆ.)

### ರಂಗರಾಮಾನುಜಭಾಷ್ಯಮ್

ಏವಂ ಮಂತ್ರದ್ವಯೇನ ಪ್ರತ್ಯಗಾತ್ಮಸ್ವರೂಪಂ ವಿಶೋಧ್ಯ ತದಾತ್ಮಭೂತಪರಮಾತ್ಮಸ್ವರೂಪಮಾಹ—**ಅಣೋರಣೀಯಾನ್ ಮಹತೋ ಮಹೀಯಾನ್** । **ಅಣೋಃ**—ಸರ್ವಾಚೇತನಾಪೇಕ್ಷಯಾ ಸೂಕ್ಷ್ಮಾಚ್ಚೇತನಾತ್ ಅಣುತರಃ ತತೋಽಪಿ ಸೂಕ್ಷ್ಮಃ ತದಂತಃ ಪ್ರವೇಶಯೋಗ್ಯ ಇತ್ಯರ್ಥಃ । **ಮಹತಃ**—ಆಕಾಶಾದೇರಪಿ ಮಹತ್ತರಃ । ಸ್ವಾವ್ಯಾಪ್ತವಸ್ತುರಹಿತ ಇತ್ಯರ್ಥಃ । **ಆತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಮ್**। **ಅಸ್ಯ ಜಂತೋಃ**—'ನ ಜಾಯತೇ ಮ್ರಿಯತೇ ವಾ' ಇತಿ ಮಂತ್ರದ್ವಯನಿರ್ದಿಷ್ಟಸ್ಯ ಚೇತನಸ್ಯ, **ಆತ್ಮಾ**—ಅಂತಃ ಪ್ರವಿಶ್ಯ ನಿಯಂತಾ ಇತ್ಯರ್ಥಃ । ಅತಶ್ಚ ಪೂರ್ವಮಂತ್ರದ್ವಯನಿರ್ದಿಷ್ಟಾತ್ ಪ್ರತ್ಯಗಾತ್ಮಸ್ವರೂಪಾತ್, ಅಣೋರಣೀಯಾನ್ ಇತಿ ಮಂತ್ರಸಂದರ್ಭಪ್ರತಿಪಾದ್ಯೋಽನ್ಯ ಏವೇತಿ ಸಿದ್ಧಮ್ । ನ ಚ ಅಸ್ಯ ಜಂತೋಃ ಇತ್ಯಸ್ಯ ಹೃದಯಗುಹಾವಾಚಿನಾ ಸಂಬಂಧ(ಧಿ?)—ಸಾಪೇಕ್ಷೇಣ ಗುಹಾಯಾಮ್

ಇತ್ಯನೇನೈವ ಅನ್ವಿತತ್ವೇನ ನ ಆತ್ಮಾ ಇತ್ಯನೇನ ಅನ್ವಯ ಇತಿ ಶಂಕ್ಯಮ್ ; ಆತ್ಮಶಬ್ದಾನ್ವಿತಸ್ಯೈವ 'ಕಾಕಾಕ್ಷಿನ್ಯಾಯೇನ' ಉಭಯತ್ರ ಅನ್ವಯೇ ದೋಷಾಭಾವಾತ್ । 'ಮೂಲತಃ ಶಾಖಾಂ ಪರಿವಾಸ್ಯೋಪವೇಷಂ ಕರೋತಿ' ಇತ್ಯತ್ರ ಶಾಖಾಂ ಮೂಲತಃ ಪರಿವಾಸ್ಯ ಮೂಲತ ಉಪವೇಷಂ ಕರೋತಿ ಇತಿ ಪರಿವಾಸನಾನ್ವಿತಸ್ಯಾಪಿ ಮೂಲತಃ ಇತ್ಯಸ್ಯ ಉಪವೇಷಂ ಕರೋತಿ ಇತ್ಯನೇನಾಪಿ ಅನ್ವಯಸ್ಯ ಅಂಗೀಕೃತತ್ವಾತ್। ಜೀವಹೃದಯಗುಹಾವರ್ತಿತ್ವಪ್ರತಿಪಾದನೇಽಪಿ ಜೀವಭೇದಸಿದ್ಧೇಶ್ಚ। ನ ಹಿ ಜೀವಸ್ಯೈವ ಜೀವಗುಹಾವರ್ತಿತ್ವಪ್ರತಿಪಾದನೇ ಪ್ರಯೋಜನಮಸ್ತಿ ।

ನನು 'ನ ಜಾಯತೇ' ಇತ್ಯುಪನ್ಯಸ್ತಸ್ಯ ಆತ್ಮನಃ ಜಾಯಮಾನವಾಚಿಜಂತುಶಬ್ದೇನ ಪರಾಮರ್ಶಸ್ಯ ಅನುಪಪನ್ನತಯಾ, ಅಸ್ಯ ಜಂತೋಃ ಇತ್ಯಸ್ಯ ಪ್ರತ್ಯಕ್ಷಾದಿಸನ್ನಿಧಾಪಿತದೇಹಪರತಾಯಾ ಏವ ವಕ್ತವ್ಯತ್ವೇನ ತದ್ಗುಹಾಹಿತ ಆತ್ಮಾ ಪ್ರಾಗುಪನ್ಯಸ್ತೋ ಜೀವ ಏವಾಸ್ತು । ನ ಚ ಕರ್ತೃತ್ವ–ಭೋಕ್ತೃತ್ವಾದಿವಿಶಿಷ್ಟತಯಾ ಸದಾ ಅಹಮ್ ಇತಿ ಭಾಸಮಾನೇ ಜೀವೇ, 'ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ', 'ಕ ಇತ್ಥಾ ವೇದ ಯತ್ರ ಸಃ' ಇತಿ ಉತ್ತರಸಂದರ್ಭಪ್ರತಿಪಾದ್ಯಂ ದುರ್ವಿಜ್ಞಾನತ್ವಂ ಕಥಮ್ ಅನ್ವೇತ್ವಿ(ತೀ)ತಿ ವಾಚ್ಯಮ್ ಜೀವಸ್ಯ ಕರ್ತೃತ್ವಾದಿ ವಿಶಿಷ್ಟತಯಾ ಸರ್ವಲೋಕವಿದಿತತ್ವೇಽಪಿ ಮುಕ್ತಪ್ರಾಪ್ಯಬ್ರ(ಬ್ರಾ?)ಹ್ಮರೂಪವಿಶಿಷ್ಟತಯಾ ದುರ್ವಿಜ್ಞಾನತ್ವಸಂಭವಾದಿತಿ ಚೇತ್–ನ ; 'ಪ್ರಾಣೀ ತು ಚೇತನೋ ಜನ್ಮೀ 'ಜಂತುಜ[1] ನ್ಯುಶರೀರಿಣಃ' ಇತಿ ಜಂತುಶಬ್ದಸ್ಯ ಚೇತನಪರ್ಯಾಯತಯಾ ಪ್ರಕೃತಜೀವವಾಚಿತ್ವಸಂಭವಾತ್ । ಅಸ್ಯೇತಿ ಶಬ್ದಸ್ಯ ಚ ಪೂರ್ವಸಂದರ್ಭೋಪಸ್ಥಾಪಿತಪ್ರತ್ಯಗಾತ್ಮವಿಷಯತ್ವಸಂಭವೇ, ಪ್ರತ್ಯಕ್ಷಾದ್ಯುಪಸ್ಥಾಪಿತದೇಹವಿಷಯತ್ವಾಶ್ರಯಣಸ್ಯ ಅಯುಕ್ತತ್ವಾತ್। ಅತ್ಯಂತಾಣುತ್ವಮಹತ್ತ್ವಯೋಃ, 'ಏಷ ಮ ಆತ್ಮಾಂತರ್ಹೃದಯೇ ಅಣೀಯಾನ್ ವ್ರೀಹೇರ್ವಾ ಯವಾದ್ವಾ ಸರ್ಷಪಾದ್ವಾ ಶ್ಯಾಮಾಕಾದ್ವಾ ಶ್ಯಾಮಾಕತಂಡುಲಾದ್ವಾ, ಏಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾ ಜ್ಯಾಯಾನಂತರಿಕ್ಷಾತ್ ಜ್ಯಾಯಾನ್ ದಿವೋ ಜ್ಯಾಯಾನೇಭ್ಯೋ ಲೋಕೇಭ್ಯಃ' ಇತ್ಯಾದಿಷು ಪರಮಾತ್ಮಧರ್ಮತಯಾ ಸಿದ್ಧತ್ವೇನ ಅಣೋರಣೀಯಾನ್ ಇತಿ ಮಂತ್ರಪ್ರತಿಪಾದ್ಯಸ್ಯ ಜೀವತ್ವಶಂಕಾಯಾಃ ಅಸಂಭವಾತ್ ॥

ನನು 'ನೇತರೋಽನುಪಪತ್ತೇಃ' ಇತಿ ಸೂತ್ರೇ 'ಸಹ ಬ್ರಹ್ಮಣಾ ವಿಪಶ್ಚಿತಾ' ಇತಿ ವಾಕ್ಯಶ್ರುತವಿಪಶ್ಚಿತ್ತ್ವಸ್ಯ ಬ್ರಹ್ಮಾಸಾಧಾರಣಲಿಂಗತ್ವಸ್ಯ ಭಾಷ್ಯೇ ಪ್ರತಿಪಾದಿತತ್ವಾತ್, ತದ್ಬಲಾತ್ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಇತಿ ಮಂತ್ರಸ್ಯಾಪಿ ಪರರೀತ್ಯಾ ಪರಮಾತ್ಮಪರತ್ವಮೇವಾಸ್ತು । ಏವಂ ಸತಿ 'ಅನ್ಯತ್ರ ಧರ್ಮಾತ್' ಇತಿ ಪ್ರಶ್ನಸ್ಯ ಪ್ರಾಪ್ಯದ್ವಯಪರತ್ವಂ ಪ್ರತಿವಚನಸ್ಯ[ಚ?] ಪ್ರಾಪ್ಯದ್ವಯಪರತ್ವಮಾಶ್ರಿತ್ಯ, 'ನ ಜಾಯತೇ' ಇತ್ಯಾದಿ ಮಂತ್ರದ್ವಯಸ್ಯ ಪ್ರಾಪ್ಯಜೀವಸ್ವರೂಪಪರತ್ವಮ್, ಅಣೋರಣೀಯಾನ್ ಇತಿ ಸಂದರ್ಭಸ್ಯ ಚ ಪರಮಾತ್ಮಪರತ್ವಮ್ ಇತ್ಯಾದಿ ಪರಿಕಲ್ಪನಕ್ಲೇಶೋ ನ ಆಶ್ರಯಣೀಯ ಇತಿ ಚೇತ್–ನ । ಹನನಾದಿಪ್ರತಿಷೇಧಾದ್ಯನುಪಪತ್ತ್ಯಾ ವಿಪಶ್ಚಿಚ್ಛಬ್ದೇ ಮುಖ್ಯಾರ್ಥತ್ಯಾಗಸ್ಯ ಅವಶ್ಯಕತ್ವೇನ ತನ್ಮಂತ್ರದ್ವಯಸ್ಯ ಅಣೋರಣೀಯಾನ್ ಇತ್ಯಾದಿಮಂತ್ರಸಂದರ್ಭಸ್ಯ ಚ ಏಕವಿಷಯತ್ವಾಸಂಭವಾತ್ । ಶಿಷ್ಟಮುತ್ತರತ್ರ ಸ್ಪಷ್ಟಯಿಷ್ಯತೇ ॥

---

1 'ಜನ್ಯುಃ' – ಪದವು 'ಚೇತನ–ಅಚೇತನ' ಸಾಮಾನ್ಯವಾಚಕವಾಗಿದೆಯೇ ಹೊರತು ; ಜಂತು ಮಾತ್ರವಾಚಕವಾಗಿಲ್ಲ. ಆದ್ದರಿಂದ ಇಲ್ಲಿ ಜಂತು ಪರ್ಯಾಯವಾಗಿ ಅಮರಕೋಶಾನುಸಾರ 'ಜನ್ಯುಃ' ಪದವನ್ನೇ ಬಳಸುವುದು ಸೂಕ್ತವಾಗಿದೆ.

ತಮಕ್ರತುಃ ಪಶ್ಯತಿ ವೀತಶೋಕೋ ಧಾತುಪ್ರಸಾದಾನ್ಮಹಿಮಾನಮಾತ್ಮನಃ । ತಮ್—ತಾದೃಶಂ ಪರಮಾತ್ಮಾನಮ್, ಅಕ್ರತುಃ—ಕಾಮ್ಯ(ಮ)ಕರ್ಮಾದಿರಹಿತಸ್ಸನ್ ಧಾತೋಃ ಧಾರಕಸ್ಯ ಪರಮಾತ್ಮನಃ ಪ್ರಸಾದಾತ್, ಆತ್ಮನಃ ಮಹಿಮಾನಮ್ ಮಹತ್ತ್ವಸಂಪಾದಕಂ ಸ್ವಸಾರ್ವಜ್ಞ್ಯಾದಿಗುಣಾವಿರ್ಭಾವಹೇತುಭೂತಂ ಪರಮಾತ್ಮಾನಂ ಯದಾ ಪಶ್ಯತಿ, ತದಾ ವೀತಶೋಕೋ ಭವತಿ ಇತ್ಯರ್ಥಃ ।

(ಯದ್ವಾ?) ದ್ಯುಭ್ವಾದ್ಯಧಿಕರಣೇ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಇತಿ ಮಂತ್ರಖಂಡಂ ಪ್ರಸ್ತುತ್ಯ 'ಅಯಂ ಯದಾ ಸ್ವಸ್ಮಾದನ್ಯಂ ಸರ್ವಸ್ಯೇಶಂ ಪ್ರೀಯಮಾಣಮ್, ಅಸ್ಯ ಈಶ್ವರಸ್ಯ ಮಹಿಮಾನಂ ಚ ನಿಖಿಲಜಗನ್ನಿಯಮನರೂಪಂ ಪಶ್ಯತಿ,ತದಾ ವೀತಶೋಕೋ ಭವತಿ' ಇತಿ ಭಗವತಾ ಭಾಷ್ಯಕೃತಾ ವ್ಯಾಖ್ಯಾತತ್ವಾತ್, ತದನುಸಾರೇಣ ಇಹಾಪಿ ಪರಮಾತ್ಮನಃ ನಿಖಿಲಜಗನ್ನಿಯಮನರೂಪಂ ಮಹಿಮಾನಂ ಚ ಯಃ ಪಶ್ಯತಿ, ಸ ವೀತಶೋಕೋ ಭವತೀತ್ಯರ್ಥಃ । ಧಾತುಃಪ್ರಸಾದಾದ್ವೀತಶೋಕೋ ಭವತೀತಿ ವಾಽನ್ವಯಃ । 'ಪ್ರಸೀದತ್ಯಚ್ಯುತಸ್ತಸ್ಮಿನ್ ಪ್ರಸನ್ನೇ ಕ್ಲೇಶಸಂಕ್ಷಯಃ' ಇತಿ ಸ್ಮೃತೇರಿತಿ ದ್ರಷ್ಟವ್ಯಮ್, 'ಅಕ್ರತುಂ ಪಶ್ಯತಿ—ಧಾತುಃ ಪ್ರಸಾದಾನ್ಮಹಿಮಾನಮೀಶಮ್' ಇತಿ ಪಾಠೇ ಅಕ್ರತುಮ್—ಕರ್ಮಕೃತೋತ್ಕರ್ಷಾಪಕರ್ಷಶೂನ್ಯಮ್ ಇತ್ಯರ್ಥಃ ॥ ಧಾತುಃ—ಭಗವತಃ ॥

## ಅನುವಾದ

ಈ ರೀತಿ ಹದಿನೆಂಟು, ಹತ್ತೊಂಭತ್ತನೆಯ ಮಂತ್ರಗಳಿಂದ ಜೀವಾತ್ಮಸ್ವರೂಪವನ್ನು ವಿಮರ್ಶಿಸಿ ಜೀವನಿಗೂ ಅಂತರಾತ್ಮನಾದ ಪರಮಾತ್ಮನ ಸ್ವರೂಪವನ್ನು ಈ ಮಂತ್ರದಲ್ಲಿ ವಿವರಿಸುತ್ತಾನೆ. 'ಅಣೋರಣೀಯಾನ್ ಮಹತೋ ಮಹೀಯಾನ್' । ಅಣೋಃ—ಎಲ್ಲ ಅಚೇತನಗಳಿಗಿಂತಲೂ ಸೂಕ್ಷ್ಮನಾದವನು ಚೇತನನಾದ ಜೀವ. ಅವನಿಗಿಂತಲೂ ಸೂಕ್ಷ್ಮತರನಾಗಿ ಅವನೊಳಗೂ ಪ್ರವೇಶಿಸಲು ಅರ್ಹತೆಯುಳ್ಳವನು ಪರಮಾತ್ಮ. ಮಹತಃ—ಆಕಾಶ ಮುಂತಾದ ಹಿರಿದಾದವುಗಳಿಗಿಂತಲೂ ಹಿರಿಯನು. ತಾನು ವ್ಯಾಪಿಸದೇ ಇರುವ ವಸ್ತುವೇ ಇಲ್ಲ ಎಂದರ್ಥ. ಆತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಮ್। ಅಸ್ಯ ಜಂತೋಃ—'ನ ಜಾಯತೇ ಮ್ರಿಯತೇ ವಾ' (ಕ.ಉ. 2–18) ಎಂಬ ಎರಡು ಮಂತ್ರಗಳಿಂದ ಹೇಳಿದ ಜೀವನಿಗೆ ಆತ್ಮಾ ಒಳಗೆ ಪ್ರವೇಶಿಸಿ ನಿಯಮಿಸುವವನು. ಇದರಿಂದ ಹಿಂದೆ ಎರಡು ಮಂತ್ರಗಳಿಂದ ಹೇಳಿದ ಜೀವಾತ್ಮನಿಗಿಂತಲೂ 'ಅಣೋರಣೀಯಾನ್' ಎಂಬ ಈ ಮಂತ್ರದಲ್ಲಿ ವಿವರಿಸಲ್ಪಡುವವನು ಭಿನ್ನನೇ ಎಂದು ಸಿದ್ಧವಾಗುವುದು.

(ಅನ್ವಯದ ಬಗ್ಗೆ ಆಕ್ಷೇಪ ಮತ್ತು ಸಮಾಧಾನ.) ಹೃದಯ ಗುಹೆಯನ್ನು ಹೇಳುವ—'ಗುಹಾಯಾಮ್' ಎಂಬ ಪದವು (ಪುತ್ರಾದಿಪದಗಳಂತೆ) ಪ್ರತಿಸಂಬಂಧಿಯನ್ನು ಅಪೇಕ್ಷಿಸುವ ಕಾರಣ (ಅದನ್ನು ಪೂರ್ತಿಗೊಳಿಸಲು) 'ಅಸ್ಯ ಜಂತೋಃ' ಎಂಬುದನ್ನು 'ಗುಹಾಯಾಮ್' ಎಂಬುದರಲ್ಲಿಯೇ ಅನ್ವಯಮಾಡುವುದು ಉಚಿತವೇ ಹೊರತು 'ಆತ್ಮಾ' ಎಂಬುದರ ರೂಪವೇ ಉಚಿತವಲ್ಲ.

'ಅಸ್ಯ ಜಂತೋಃ' ಎಂಬ ಪದವು ಆತ್ಮಶಬ್ದದೊಡನೆ ಅನ್ವಯಿಸಿ 'ಕಾಕಾಕ್ಷಿನ್ಯಾಯ'ದಿಂದ 'ಗುಹಾಯಾಮ್' ಎಂಬುದರೊಡನೆಯೂ ಅನ್ವಯಿಸಲು ಯಾವ ದೋಷವೂ ಇಲ್ಲ.

(ಇದಕ್ಕೆ ಮೀಮಾಂಸಕ ಪ್ರಯೋಗದ ದೃಷ್ಟಾಂತ 'ಮೂಲತಃ ಶಾಖಾಂ ಪರಿವಾಸ್ಯೋಪವೇಷಂ ಕರೋತಿ' (ಪೂ.ಮೀ. 4–2–8) ಎಂಬ ವಾಕ್ಯದಲ್ಲಿ (ಒಂದೇ ಬಾರಿ ಪ್ರಯೋಗಿಸಿರುವ) 'ಮೂಲತಃ' ಎಂಬ ಪದವನ್ನು ಪರಿವಾಸ್ಯ ಎಂಬಲ್ಲಿಯೂ 'ಉಪವೇಷಂ ಕರೋತಿ' ಎಂಬಲ್ಲಿಯೂ ಅನ್ವಯಿಸಿ (ಪಲಾಶವೃಕ್ಷದ ಶಾಖೆಯನ್ನು ಬುಡದಲ್ಲಿ ಕತ್ತರಿಸಿ ಬುಡದ ಭಾಗವನ್ನು ಉಪವೇಷವಾಗಿ ಮಾಡತಕ್ಕದ್ದು.)ರುವುದು ಕಂಡುಬಂದಿದೆ.

'ಆತ್ಮನು ಜೀವನ ಹೃದಯಗುಹೆಯಲ್ಲಿ ಇರುವವನು' ಎಂದಾಗ 'ಆತ್ಮನಃ' ಎಂಬುದರಿಂದ ಜೀವನನ್ನು ಇಟ್ಟುಕೊಳ್ಳುವುದಾದರೆ ಯಾವುದೇ ಪ್ರಯೋಜನವೂ ಇಲ್ಲದುದರಿಂದ ಆತ್ಮನು ಎಂಬುದು ಜೀವನಿಗಿಂತ ಭಿನ್ನನಾದವನೇ ಆಗಬೇಕು. ಅರ್ಥಾತ್ ಅವನು ಪರಮಾತ್ಮನೇ.

ಆಕ್ಷೇಪ :– ಈ ಮಂತ್ರದಲ್ಲಿ 'ಅಸ್ಯ ಜಂತೋಃ' ಎಂಬಲ್ಲಿಯ 'ಜಂತು'ಶಬ್ದವು (ಜಾಯತ ಇತಿ–ಜಂತುಃ) ಹುಟ್ಟುವದನ್ನು ಮಾತ್ರ ಹೇಳುವುದಾದ್ದರಿಂದ ಇದು 'ನ ಜಾಯತೇ' ಎಂಬ ಮಂತ್ರದಲ್ಲಿ ಹೇಳಿದ, ಜನ್ಮರಹಿತನಾದ, ಆತ್ಮನನ್ನು ಬೋಧಿಸಲು ಅಸಮರ್ಥವಾಗಿದೆಯಾದ್ದರಿಂದ ಉತ್ಪತ್ತ್ಯಾಶ್ರಯವಾಗಿ ಪ್ರತ್ಯಕ್ಷಗೋಚರವಾದ ದೇಹವನ್ನೇ 'ಜಂತು'ಪದದಿಂದ ಉಲ್ಲೇಖಿಸಿ, ಆ ದೇಹದೊಳಗಿನ ಗುಹೆಯಲ್ಲಿ ಇರುವ ಆತ್ಮನು ಜೀವನೆಂಬುದೇ ಸರಿ – ಪರಮಾತ್ಮನಲ್ಲ.

ಅವಾಂತರಾಕ್ಷೇಪ :–ಮುಂದಿನ ಈ ಮಂತ್ರಗಳಲ್ಲಿ 'ಕಸ್ತಂ.......ಜ್ಞಾತುಮರ್ಹತಿ' (ಕ.ಉ. 2–21) (ಹರ್ಷಶೋಕಗಳೆರಡಕ್ಕೂ ಸೇರದೆ ಮಧ್ಯಸ್ಥನಾಗಿರುವ ಅವನನ್ನು ನಾನು ಹೊರತು ಮತ್ತ್ಯಾರು ಅರಿತಾರು.) 'ಕ ಇತ್ಥಾ ವೇದ ಯತ್ರ ಸಃ' (ಅವನು ಯಾವ ರೀತಿಯಲ್ಲಿರುವನೋ ಆ ರೀತಿಯನ್ನು ಅರಿತವರು ಯಾರು?) ಎಂದು ಹೇಳಿರುವ ದುರ್ವಿಜ್ಞೇಯತ್ವವು 'ಅಹಂ ಕರ್ತಾ', 'ಅಹಂ ಭೋಕ್ತಾ' ಎಂಬುದಾಗಿ ಯಾವಾಗಲೂ 'ಅಹಮ್ ಅಹಮ್' ಎಂದು ತೋರುವ ಜೀವನಲ್ಲಿ ಹೇಗೆ ಅನ್ವಯಿಸಲು ಸಾಧ್ಯ.

ಅವಾಂತರ ಸಮಾಧಾನ :–ಜೀವಾತ್ಮನು ಕರ್ತೃವೆಂಬುದು ಲೌಕಿಕವಾಗಿ ಎಲ್ಲರಿಗೂ ಅರಿತ ವಿಷಯವಾದರೂ ಮುಕ್ತಾವಸ್ಥೆಯಲ್ಲಿ ದೊರಕುವ ಅವನ ಸ್ವಾಭಾವಿಕ ಬ್ರಹ್ಮರೂಪದೊಡನೆ ಅವನು ದುರ್ವಿಜ್ಞೇಯ ಎಂಬುದು ಸರಿಯಷ್ಟೇ.

ಸಮಾಧಾನ :– ಜಂತು ಶಬ್ದವನ್ನು 'ದೇಹೀ' ಎಂಬ ಅರ್ಥದಲ್ಲಿ 'ಪ್ರಾಣೀ ತು....ಜಂತುಜನ್ಯಶರೀರಿಣಃ' ಎಂದು ಕೋಶದಲ್ಲಿ ಪರ್ಯಾಯವಾಗಿ ಬಳಸಿರುವ ಕಾರಣ 'ದೇಹಿ'ಯಾದ ಜೀವನನ್ನೂ ಹೇಳಬಹುದು. ಇಲ್ಲಿರುವ 'ಅಸ್ಯ' ಎಂಬ ಇದಂ ಶಬ್ದವು ಹಿಂದಿನ ಸಂದರ್ಭದಿಂದ ಬುದ್ಧಿಸ್ಥನಾದ ಜೀವಾತ್ಮನನ್ನು ಬೋಧಿಸುವುದು ಯುಕ್ತವೇ ಹೊರತು ಪ್ರತ್ಯಕ್ಷವಾದ ದೇಹವನ್ನು ಬೋಧಿಸುವುದು ಯುಕ್ತವಲ್ಲ. ಇಲ್ಲಿ ಹೇಳಿದ ಸೂಕ್ಷ್ಮತಮತ್ವ ಮತ್ತು ಮಹತ್ವಗಳು 'ಏಷ ಮೇ.......ತಂಡುಲಾದ್ವಾ'. 'ಏಷ ಮೇ.......ಲೋಕೇಭ್ಯಃ' (ಛಾಂ. ಉ. 3–14–3) ಎಂಬ ಛಾಂದೋಗ್ಯ ಶ್ರುತಿಯಲ್ಲಿ ಪರಮಾತ್ಮನ ಧರ್ಮವೆಂಬುದಾಗಿ ಸಿದ್ಧವಾಗಿರುವ ಕಾರಣ 'ಅಣೋರಣೀಯಾನ್' ಎಂಬ ಮಂತ್ರಕ್ಕೆ ಪ್ರತಿಪಾದ್ಯವಸ್ತುವು ಜೀವವೇ ಆಗಲೆಂಬ ಶಂಕೆಗೆ ಸರ್ವಥಾ ಅವಕಾಶವಿಲ್ಲ.

ಆಕ್ಷೇಪ :— ಇಲ್ಲಿಯವರೆಗೆ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಎಂಬ ಮಂತ್ರ ನ್ನು ಜೀವಾತ್ಮಪರವಾಗಿಯೂ, 'ಅಣೋರಣೀಯಾನ್' ಎಂಬ ಮಂತ್ರವನ್ನು ಪರಮಾತ್ಮ ರವಾಗಿಯೂ, ವರ್ಣಿಸಿದ್ದಾಯಿತಷ್ಟೇ. ಆದರೆ ಇದು ಅಷ್ಟು ಉಚಿತವಾಗಿ ಕಂಡುಬರುವು ಲ್ಲ. 'ವಿಪಶ್ಚಿತ್' ಶಬ್ದಕ್ಕೆ (ವಿವಿಧಂ ಪಶ್ಯತ್ ಚಿತ್) ಎಂದು ನಿರ್ವಚನ ತೋರಿಸಿ, ಅದು ರುಪಾಧಿಕ ಸರ್ವಜ್ಞತ್ವವನ್ನೇ ಹೇಳುವುದರಿಂದ ಪರಮಾತ್ಮನಿಗೇ ಬೋಧಕವಾಗುವುದು. ದು ಅವನಿಗೆ ಅಸಾಧಾರಣ ಧರ್ಮವಷ್ಟೇ ಎಂಬುದಾಗಿ 'ಸಹ ಬ್ರಹ್ಮಣಾ ವಿಪಶ್ಚಿತಾ' ಎಂಬ ಾಕ್ಯದಲ್ಲಿ ಶ್ರುತವಾಗಿರುವ ವಿಪಶ್ಚಿತ್ತ್ವವನ್ನು ಬ್ರಹ್ಮಕ್ಕೆ ಪ್ರತಿಪಾದಿಸಿರುವುದು 'ನೇತರೋನುಪ ತ್ತೇಃ' ಎಂಬ ಸೂತ್ರದ ಶ್ರೀಭಾಷ್ಯದಲ್ಲಿ ಕಂಡುಬರುತ್ತದೆ, ಅದನ್ನು ಅನುಸರಿಸಿ ಇಲ್ಲಿಯು ಿಪಶ್ಚಿತ್' ಶಬ್ದವೂ ಪರಮಾತ್ಮಪರವೇ ಆಗುವುದು ಸರಿ. ಹೀಗೆ ಅನ್ವಯಮಾಡಿದ್ದೇ ದರೆ 'ಅನ್ಯತ್ರ ಧರ್ಮಾತ್' ಎಂಬ ಪ್ರಶ್ನಪರವಾದ ಮಂತ್ರಕ್ಕೆ ಎರಡು ಪ್ರಾಪ್ಯವಸ್ತುಗಳ ್ರಶ್ನದಲ್ಲಿ ತಾತ್ಪರ್ಯವನ್ನೂ, ಅದಕ್ಕೆ ತಕ್ಕಂತೆ 'ನ ಜಾಯತೇ' (ಕ.ಉ. 2–18) 'ಅಣೋ ಣೀಯಾನ್' ಎಂಬ ಎರಡು ಮಂತ್ರಗಳಿಗೆ ಯಥಾಯೋಗ್ಯ ಪ್ರಾಪ್ಯನಾದ ಜೀವ, ಮತ್ತು ್ರಾಪ್ಯನಾದ ಪರಮಾತ್ಮ ಇವರುಗಳ ಬಗ್ಗೆ ಪ್ರತ್ಯುತ್ತರ ರೂಪತೆಯನ್ನು ಪೃಥಕ್ ಪೃಥಕ್ ಲ್ಪಿಸುವ ಕ್ಲೇಶಕ್ಕೂ ಅವಕಾಶವಿಲ್ಲ. ಆದ್ದರಿಂದ ಇವೆರಡು ಮಂತ್ರಗಳೂ ('ನ ಜಾಯತೇ', ಅಣೋಃ') ಪರಮಾತ್ಮಪರವೆಂಬುದೇ ಯುಕ್ತವಾಗಿದೆ.

ಸಮಾಧಾನ :—ಈ ಹಿಂದಿನ ಆಕ್ಷೇಪದಲ್ಲಿ ತೋರಿಸಿದ ಕ್ಲೇಶವನ್ನು ಪರಿಹಾರ ಮಾಡಲು ರಡು ಮಂತ್ರಕ್ಕೂ ಪರಮಾತ್ಮನಲ್ಲಿ ತಾತ್ಪರ್ಯ ಹೇಳುವುದಾದರೆ, ಲೋಕ ಪ್ರಸಿದ್ಧವಾದ ೀತಿಯಲ್ಲಿ ಹನನಯೋಗ್ಯವಾದಶರೀರಸಂಬಂಧಾರ್ಹನಲ್ಲದ (ಶರೀರಿಯಲ್ಲದ) ಪರಮಾತ್ಮ ಲ್ಲಿ ಹನನನಿಷೇಧವು ಹೊಂದಿಕೊಳ್ಳುವುದಿಲ್ಲವೆಂಬ ದೋಷವು ತಲೆ ಎತ್ತಿಕೊಳ್ಳುತ್ತದೆ. ಉದ್ಭವಿಸುತ್ತದೆ.) ಆದ್ದರಿಂದ ಇದನ್ನು ಹೊಂದಿಸುವುದಕ್ಕಾಗಿ 'ವಿಪಶ್ಚಿತ್' ಶಬ್ದದ ಮುಖ್ಯಾರ್ಥವನ್ನು ಸಂಕೋಚಗೊಳಿಸಿ (ವಿಪಶ್ಚಿತ್ತ್ವಾರ್ಹ) ವಿಪಶ್ಚಿತ್ತ್ವಕ್ಕೆ ಅರ್ಹನಾದ ಜೀವಾತ್ಮನನ್ನೇ ಈ ಮಂತ್ರವು ಹೇಳುತ್ತದೆಂದೂ,'ಅಣೋರಣೀಯಾನ್' ಎಂಬುದು (ಅವನ ಹೃದಯ ಗುಹಾವಾಸಿಯಾದ) ಪರಮಾತ್ಮನನ್ನೇ ಹೇಳುತ್ತದೆಂದೂ, ವರ್ಣಿಸುವುದೇ ಉಚಿತ. ಎರಡು ಮಂತ್ರಕ್ಕೂ ಒಂದೇ ವಿಷಯವೆಂಬುದು ಅಸಂಭವ, ಉಳಿದುದನ್ನು ಮುಂದೆ ವಿಶದಪಡಿಸಲಾಗುತ್ತದೆ.

'ತಮಕ್ರತುಃ........ಆತ್ಮನಃ' ಮುಮುಕ್ಷುವಾದ ಯಾವ ಜೀವನು ಕ್ಷುದ್ರಫಲ ಪ್ರದಗಳಾದ ಕಾಮ್ಯಕರ್ಮಗಳನ್ನು ತ್ಯಜಿಸಿ ತನಗೆ ಸ್ವಾಭಾವಿಕವಾದ ಸಾರ್ವಜ್ಞ್ಯಾದಿಗುಣ ಗಳ ಆವಿರ್ಭಾವವೆಂಬ ಹಿರಿಮೆಯನ್ನು ದೊರಕಿಸಿಕೊಡುವ ಆ ಪರಮಾತ್ಮನನ್ನು ಸರ್ವ ಪ್ರಕಾರದಲ್ಲಿಯೂ ತನಗೆ ಧಾರಕನಾದ ಅವನ ಅನುಗ್ರಹದಿಂದಲೇ ಯಾವಾಗ ಸಾಕ್ಷಾತ್ಕರಿಸಿ ಕೊಳ್ಳುವನೋ, ಆಗ ಸಮಸ್ತಶೋಕಗಳಿಂದಲೂ ದೂರ (ಮುಕ್ತ) ನಾಗುವನು ಎಂದರ್ಥ.

ಅಥವಾ—'ದ್ಯುಭ್ವಾದ್ಯಧಿಕರಣ' (ಬ್ರ. ಸೂ. 1–3–1)ದ ಶ್ರೀಭಾಷ್ಯಗ್ರಂಥದಲ್ಲಿ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' (ಮುಂ. ಉ. 3–1) ಎಂಬ ಮಂತ್ರಖಂಡ

ವನ್ನುದ್ಧರಿಸಿ, 'ಅಯಂ ಯದಾ, ಸ್ವಸ್ಮಾದನ್ಯಂ ..........ತದಾ ವೀತಶೋಕೋ ಭವತಿ' (ಶ್ರೀ.ಭಾ. 1-3-4) ಎಂಬುದಾಗಿ ವ್ಯಾಖ್ಯಾನಮಾಡಿರುವುದರಿಂದ, ಅದಕ್ಕೆ ತಕ್ಕಂತೆ ಇಲ್ಲಿಯೂ ಸಹ 'ಆ ಪರಮಾತ್ಮನನ್ನೂ, ಅವನ ಸರ್ವಜಗನ್ನಿಯಮನರೂಪವಾದ ಮಹಿಮೆ ಯನ್ನೂ, ಯಾವನು ಸಾಕ್ಷಾತ್ಕರಿಸಿಕೊಳ್ಳುತ್ತಾನೋ ಅವನು ಶೋಕಾತೀತನಾಗುತ್ತಾನೆ' ಎಂದರ್ಥ.

ಹೀಗೂ ಅನ್ವಯಿಸಬಹುದು—'ಪ್ರಸೀದತಿ .. ....ಸಂಕ್ಷಯಃ' (ಇವನನ್ನೂ ಇವನ ಮಹಿಮೆಯನ್ನೂ ಕಂಡುಕೊಳ್ಳುವಂಥವನಲ್ಲಿ ಪರಮಾತ್ಮನು ಪ್ರಸನ್ನನಾಗುತ್ತಾನೆ. ಅವನು ಪ್ರಸನ್ನನಾದಲ್ಲಿ ಸಮಸ್ತ ಕ್ಲೇಶಗಳೂ, ಕ್ಷೀಣವಾಗುತ್ತವೆ, ನಿರ್ಮೂಲವಾಗುತ್ತವೆ.) ಎಂಬ ಸ್ಮೃತಿಯ ಪ್ರಕಾರ ಧಾರಕನೆನಿಸಿದ ಪರಮಾತ್ಮನ ಅನುಗ್ರಹದಿಂದ ಶೋಕಾತೀತನಾಗುತ್ತಾನೆ ಎಂದರ್ಥ. ಅಕ್ರತುಮ್ ಪಶ್ಯತಿ ಧಾತುಃ ಪ್ರಸಾದಾತ್' ಎಂಬ ಪಾಠ ಪ್ರಕಾರ 'ಅಕ್ರತುಮ್' ಎಂಬುದು ಪರಮಾತ್ಮನಿಗೆ ಅನ್ವಯಿಸುವುದು, ಕರ್ಮಕೃತವಾದ ವೃದ್ಧಿಕ್ಷಯಗಳಿಲ್ಲದವನನ್ನು ಎಂದರ್ಥ, 'ಧಾತುಃ' ಎಂಬುದು 'ಧಾತೃ' ಶಬ್ದದ ಷಷ್ಠೀವಿಭಕ್ತಿಯಾಗಿದ್ದು ಭಗವಂತನ ಎಂಬ ಅರ್ಥವನ್ನು ಕೊಡುತ್ತದೆ. (ಬೋಧಿಸುತ್ತದೆ.)

## ಭಾಷ್ಯಸಾರ

ಮೇಲಿನ ಎರಡು ಮಂತ್ರಗಳಿಂದ ಜೀವಸ್ವರೂಪವನ್ನು ವಿವರಿಸಿದ ಮೇಲೆ 'ಅಣೋ ರಣೀಯಾನ್' ಮುಂತಾದ ಎರಡು ಮಂತ್ರಗಳಿಂದ ಜೀವನಿಗೂ ಆತ್ಮನಾದ ಪರಮಾತ್ಮನ ಸ್ವರೂಪವನ್ನು ಉಪದೇಶಿಸುತ್ತಾನೆ.

ಈ ಪರಮಾತ್ಮನು ಸೂಕ್ಷ್ಮವಾದ ಭತ್ತ, ಸಾಸಿವೆ, ಮೊದಲಾದವುಗಳಿಗಿಂತಲೂ ಸೂಕ್ಷ್ಮ ರೂಪಿಯಾಗಿರುವ ಜೀವಾತ್ಮರನ್ನೂ ಸಹ ವ್ಯಾಪಿಸಲು ಅರ್ಹನಾದುದರಿಂದ ಅತ್ಯಂತ ಸೂಕ್ಷ್ಮನೂ, ಅಂತೆಯೇ 'ಮಹತ್' ಎನಿಸುವ ಭೂಮ್ಯಾಕಾಶಾದಿಗಳನ್ನೂ ವ್ಯಾಪಿಸಿರುವ ಕಾರಣ ಮಹತ್ತಮನು. ಪರಮಾತ್ಮನು ವ್ಯಾಪಿಸುವಂತೆ ವ್ಯಾಪಿಸಬಲ್ಲ ಸೂಕ್ಷ್ಮ ಅಥವಾ ಮಹತ್ತಾದ ವಸ್ತು ಮತ್ತೊಂದಿಲ್ಲ. 'ಅಣೀಯಾನ್ ವ್ರೀಹೇರ್ವಾ ಯವಾದ್ವಾ, ಸರ್ಷಪಾದ್ವಾ ಶ್ಯಾಮಾಕಾದ್ವಾ, ಶ್ಯಾಮಾಕತಂಡುಲಾದ್ವಾ, ಜ್ಯಾಯಾನ್ ಪೃಥಿವ್ಯಾಃ, ಜ್ಯಾಯಾನಂತ ರಿಕ್ಷಾತ್, ಜ್ಯಾಯಾನ್ದಿವೋ, ಜ್ಯಾಯಾನೇಭ್ಯೋ ಲೋಕೇಭ್ಯಃ' (ಛಾಂ.ಉ. 3-14-3) ಇತ್ಯಾದಿಗಳಿಂದ ಪರಮಾತ್ಮಸ್ವರೂಪವು ಸೂಕ್ಷ್ಮತಮ ಮತ್ತು ಮಹತ್ತಮವೆಂಬುದಾಗಿ ತಿಳಿದು ಬರುತ್ತದೆ. ಇಂತಹ ಪರಮಾತ್ಮತತ್ತ್ವವು ಈ ಸಮಸ್ತ ಶರೀರಗಳ (ಜೀವಿಗಳ) ಹೃದಯ ಗುಹೆಯಲ್ಲಿ ಪ್ರವೇಶಿಸಿ ಅಂತರ್ಯಾಮಿಸ್ವರೂಪದಲ್ಲಿ ನೆಲೆಸಿದೆ. ಈ ವಿಷಯ 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ' (ಶ್ವೇ.ಉ. 3-13) ಎಂಬ ಶ್ರುತಿಯಲ್ಲಿಯೂ ತಿಳಿದುಬರುತ್ತದೆ. ಅಂತಹ ತನ್ನನ್ನು ಸರ್ವಸತ್ತ್ವಾದಿ ಗುಣಗಳ ಆವಿರ್ಭಾವ ವೆಂಬ ಅರಿವಿಗೆ ಕೊಂಡೊಯ್ಯುವ ಪರಮಾತ್ಮನನ್ನು ಕರ್ಮಗಳಿಂದ ದೊರಕಬಹುದಾದ ಫಲಗಳಲ್ಲಿ ಆಸೆ ಪಡದೆ ವಿರಕ್ತವಾದ ಬುದ್ಧಿ ಹೊಂದಿದ ಯಾವನೊಬ್ಬನು, ಸಾಕ್ಷಾತ್ಕರಿಸಿ ಕೊಳ್ಳುವನೋ, ಅವನು 'ಏಷ ಸೇತುರ್ವಿಧರಣಃ, ಏಷಾಂ ಲೋಕಾನಾಮಸಂಭೇದಾಯ'

(ಬೃ.ಉ. 6–4–22) ಎಂದು ಶ್ರುತಿಯಲ್ಲಿ ಹೇಳಿರುವಂತೆ ಸಮಸ್ತವಿಶ್ವಕ್ಕೂ ಧಾರಕನಾದ ಪರಮಾತ್ಮನ ಪ್ರೀತಿರೂಪವಾದ ಅನುಗ್ರಹದಿಂದ ಸಂಸಾರಾಗ್ನಿಯ ಬಿರುಬೇಗೆಯನ್ನು ದಾಟಿ ಶೋಕಾತೀತ (ಮುಕ್ತ)ನಾಗುವನು ಎಂದರ್ಥ.

ಇಲ್ಲಿ 'ಧಾತುಃ–ಪ್ರಸಾದಾತ್' ಎಂಬ ಪಾಠಕ್ಕೆ ಧಾತು—ಧಾರಕ, ಪರಮಾತ್ಮ ಎಂಬುದಾಗಿಯೂ, ಧಾತು–ಶರೀರೇಂದ್ರಿಯಾದಿಗಳಿಗೆ ಧಾರಕವಾದ ಮನಸ್ಸು ಮೊದಲಾದುದು. ಎರಡನೆಯ ಅರ್ಥದಲ್ಲಿ ಪ್ರಸಾದವೆಂದರೆ ನೈರ್ಮಲ್ಯ. ಇದು ಪರಮಾತ್ಮ ಸಾಕ್ಷಾತ್ಕಾರಕ್ಕೆ ಕಾರಣವೆಂಬುದಾಗಿ ಸುಬೋಧಿನೀಕಾರರ ವಿವರಣೆ.



# ಮಂತ್ರ ೨೧

**आसीनो दूरं व्रजति शयानो याति सर्वतः ।**
**कस्तं मदामदं देवं मदन्यो ज्ञातुमर्हति ॥**

ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ।
ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥

## ಪ್ರತಿಪದಾರ್ಥ

**ಆಸೀನಃ**—ಚಲಿಸದೇ ಇದ್ದೆಡೆಯಲ್ಲೇ ಇದ್ದು, **ದೂರಂ ವ್ರಜತಿ**—ದೂರ ನಡೆದು ಹೊಂದಬೇಕಾದ ಸ್ಥಳವನ್ನೂ ಮುಟ್ಟಿದ್ದಾನೆ. **ಶಯಾನಃ**—ಮಲಗಿದವನಂತೆ ಗತಾಗತಪ್ರಯತ್ನವಿಲ್ಲದವನೇ ಆಗಿದ್ದು, **ಸರ್ವತಃ ಯಾತಿ**—ಸರ್ವದೇಹಗಳೊಡನೆ ಸಂಬಂಧ ಹೊಂದಿದ್ದಾನೆ. **ಮದಾಮದಮ್**—ತನ್ನ ನಿಗ್ರಹಕ್ಕೊಳಗಾದವರ ವಿಷಯದಲ್ಲಿ ಅಪ್ರಸನ್ನತೆಯನ್ನೂ ತನ್ನ ಅನುಗ್ರಹಕ್ಕೊಳಗಾದವರ ವಿಷಯದಲ್ಲಿ ಪ್ರಸನ್ನತೆಯನ್ನೂ ಹೊಂದಿರುವವನೂ, **ದೇವಮ್**—ಸದಾ ಪ್ರಕಾಶಮಾನನೂ ಆದ, **ತಮ್**—ಆ ಪರಮಾತ್ಮನನ್ನು, **ಮದನ್ಯಃ**—ಭಗವದನುಗ್ರಹಭಾಗಿಯಾದ ನನಗಿಂತಲೂ ಬೇರೆಯವನು, **ಕಃ**—ಯಾರು ತಾನೇ, **ಜ್ಞಾತುಮ್ ಅರ್ಹತಿ**—ತಿಳಿಯಲು ಸಮರ್ಥನಾದಾನು !

## ತಾತ್ಪರ್ಯ

ಭಗವದನುಗ್ರಹಶೂನ್ಯನಾದವನಿಗೆ ಪರಮಾತ್ಮತತ್ತ್ವವು ದುರ್ಲಭವೆಂದು ತಿಳಿಸುತ್ತಾರೆ. ಇವನು ಅಚಲನಾಗಿದ್ದುಕೊಂಡೇ ದೂರ ಹೋಗಿರುತ್ತಾನೆ. ಮಲಗಿಕೊಂಡೇ ಎಲ್ಲೆಲ್ಲೂ ಸಂಚರಿಸುತ್ತಾನೆ. ಭಕ್ತರಿಗೆ ಅನುಗ್ರಹವನ್ನು, ಭಕ್ತರಲ್ಲದವರಲ್ಲಿ ನಿಗ್ರಹವನ್ನೂ ಮಾಡಬಲ್ಲ. ಪರಮಾತ್ಮನನ್ನು ಪರಮಾತ್ಮನ ಅನುಗ್ರಹವಿಲ್ಲದ ಬೇರೆಯವನು ಯಾವನು ತಾನೇ ತಿಳಿಯಬಲ್ಲನು ? ಅಂದರೆ ಅವನ ಅನುಗ್ರಹವಿಲ್ಲದೇ ಯಾರೂ ಪರಮಾತ್ಮತತ್ತ್ವವನ್ನು ಅರಿಯಲು ಸಾಧ್ಯವಿಲ್ಲ ಎಂದು ತಾತ್ಪರ್ಯ.

## ರಂಗರಾಮಾನುಜಭಾಷ್ಯಮ್

ಧಾತು ಪ್ರಸಾದಶಬ್ದಿತಭಗವದನುಗ್ರಹಶೂನ್ಯಸ್ಯ ಪರಮಾತ್ಮತತ್ತ್ವಮತ್ಯಂತಾಲೌಕಿಕತ್ವಾತ್ ದುರಧಿಗಮಮಿತಿ ದರ್ಶಯತಿ—ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ । ಪರಮಾತ್ಮನಃ ಸರ್ವಾತ್ಮಗ (ಕ)ತ್ವೇನ ಇತರತ್ರ ವಿರುದ್ಧತಯಾ ಪ್ರತೀಯಮಾನಾ ಆಪ್ಯಾಸೀನತ್ವದೂರಗಂತೃತ್ವಾದಿಧರ್ಮಾಃ ಜೀವದ್ವಾರಾ ತತ್ರ ಸಂತಿ ಇತಿ ಭಾವಃ । ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ಹರ್ಷಾಹರ್ಷವಿರುದ್ಧಧರ್ಮಾಮಧ್ಯಸ್ಥಂ ತಂ ಪರಮಾತ್ಮಪ್ರಸಾದಾನುಗೃಹೀತಮಾದೃಶಜನಾದಯಃ ಕೋ ವಾ ಜ್ಞಾತಾ ಇತ್ಯರ್ಥಃ ॥

## ಅನುವಾದ

'ಧಾತು—ಪ್ರಸಾದ' ಎಂಬ ಶಬ್ದದಿಂದ ಹೇಳಿದ ಭಗವದನುಗ್ರಹವಿಲ್ಲದವನಿಗೆ, ಅತ್ಯಂತ ಅಲೌಕಿಕವಾದ ಪರಮಾತ್ಮತತ್ತ್ವವು ತಿಳಿಯಲು ಅಸಾಧ್ಯವಾದುದು ಎಂದು ವಿವರಿಸುತ್ತಾನೆ.

ಆಸೀನೋ ದೂರಂ........ಯಾತಿಸರ್ವಶಃ-ಪರಮಾತ್ಮನು ಎಲ್ಲದಕ್ಕೂ ಆತ್ಮನಾಗಿರುವನು. ಆದುದರಿಂದ ಇತರೆಡೆಗಳಲ್ಲಿ ವಿರುದ್ಧವೆಂದು ಕಾಣುವ ಕುಳಿತಿರುವಿಕೆ, ದೂರ ಹೋಗುವಿಕೆ, ಮುಂತಾದ ಧರ್ಮಗಳು ಜೀವನ ಮೂಲಕ ಪರಮಾತ್ಮನಲ್ಲಿ ಎಂದು ತಾತ್ಪರ್ಯ. ಕಸ್ತಂ ಮದಾ ಮದಂ....... ಜ್ಞಾತುಮರ್ಹತಿ-ಹರ್ಷ ಮತ್ತು ಅಹರ್ಷಗಳೆಂಬ ಪರಸ್ಪರ ವಿರುದ್ಧವಾದ ಧರ್ಮಗಳಿಗೆ ಅಂಟಿಕೊಳ್ಳದೇ ಮಧ್ಯಸ್ಥನಾಗಿರುವ ಅವನನ್ನು ಪಡೆದ ನನ್ನಂತಹವನಲ್ಲದವನು ಯಾವನು ತಾನೇ ತಿಳಿಯಬಲ್ಲನು ಎಂದರ್ಥ.

## ಭಾಷ್ಯಸಾರ

ಅಣುವಿಗಿಂತ ಅಣುವೂ, ಮಹತ್ತಿಗಿಂತ ಮಹತ್ತೂ ಎಂಬುದು ವಿರುದ್ಧ ಧರ್ಮಗಳು. ಈ ವಿರುದ್ಧ ಧರ್ಮಗಳಿಗೆ ಪರಮಾತ್ಮನು ಆಶ್ರಯವಾಗಿರುವನು ಎಂಬುದು ಆಶ್ಚರ್ಯವಾದ ವಿಷಯ. ಹೀಗೆ ಇನ್ನೂ ಅನೇಕ ಆಶ್ಚರ್ಯವಾದ ವಿರುದ್ಧಧರ್ಮಗಳಿಗೆ ಪರಮಾತ್ಮನು ಆಧಾರ ವಾಗಿರುವನು ಎಂದು ಹೇಳಿ ಈ ಪರಮಾತ್ಮತತ್ತ್ವವನ್ನು ತಿಳಿಯುವುದು ಕಷ್ಟ ಎಂದು 'ಆಸೀನೋ' ಎಂಬ ಮಂತ್ರದಿಂದ ವಿವರಿಸುತ್ತಾನೆ.

ಲೋಕದಲ್ಲಿ ಕುಳಿತವನು ಹೋಗಲಾರ. ಇನ್ನು ದೂರ ಹೋಗುವ ಮಾತುಂಟೇ? ಪರಮಾತ್ಮನು ಕುಳಿತಿದ್ದರೂ ಬಹಳ ದೂರ ಪ್ರದೇಶಗಳಿಗೆ ಹೋಗುತ್ತಾನೆ. ಮಲಗಿದವನು ಸಂಚರಿಸಲಾರನು ; ಇನ್ನು ಎಲ್ಲ ಕಡೆ ಸಂಚರಿಸುವ ಮಾತು ಬಹಳ ದೂರ. ಪರಮಾತ್ಮನು ಮಲಗಿದ್ದರೂ ಎಲ್ಲ ಕಡೆಯೂ ಹೋಗುತ್ತಾನೆ. ಸರ್ವಾಂತರ್ಯಾಮಿಯಾದ ಪರಮಾತ್ಮನಲ್ಲಿ ಈ ಎಲ್ಲಾ ಆಶ್ಚರ್ಯ ವಿಷಯಗಳೂ ಸಂಭವಿಸುತ್ತವೆ. ಮದ-ಹರ್ಷ, ಅಮದ-ಹರ್ಷವಿಲ್ಲದಿರು ವಿಕೆ ಪರಮಾತ್ಮನಲ್ಲಿ ಹರ್ಷ-ಅಹರ್ಷ ಎರಡೂ ಇದೆ. [ಮದಶ್ಚ ಅಮದಶ್ಚ ಮದಾಮದೌ ತೌ ಅಸ್ಯ ಸ್ತಃ ಇತಿ ಮದಾಮದಃ] ಹೀಗೆ ವಿರುದ್ಧವಾದ ಧರ್ಮಗಳಿಗೆ ಪರಮಾತ್ಮನು ಆಶ್ರಯನಾಗಿರುವನು. ಹೀಗೆ ಎಲ್ಲ ಕಡೆಯೂ ಪ್ರಕಾಶಿಸುತ್ತಿರುವ ಪರಮಾತ್ಮನನ್ನು ಅವನ ಅನುಗ್ರಹಕ್ಕೆ ಪಾತ್ರನಾದ ನನ್ನಂತಹವರಿಗಿಂತ ಭಿನ್ನನಾದವನು ಹೇಗೆ ಅರಿಯಬಲ್ಲನು? ಪರಮಾತ್ಮನ ಅನುಗ್ರಹದಿಂದ ಸೂಕ್ಷ್ಮಬುದ್ಧಿಯುಳ್ಳ ನನ್ನಂತಹವರು ಅರಿಯಲು ಸಮರ್ಥ ರಾಗುತ್ತಾರೆ. ಬೇರೆಯವರು ಅರಿಯಲೂ ಸಮರ್ಥರಾಗಲಾರರು ಎಂದು ತಾತ್ಪರ್ಯ. ಪರಮಾತ್ಮನ ಅನುಗ್ರಹವಿಲ್ಲದೆ ಆತನನ್ನು ಅರಿಯುವುದು ಬಹಳ ಕಷ್ಟ ಎಂದು ತಿಳಿಸಿ ದಂತಾಯಿತು. ಇಲ್ಲಿ ಪರಮಾತ್ಮನಿಗೆ ವಿರುದ್ಧಧರ್ಮಗಳ ಸಂಬಂಧವು ಸರ್ವವ್ಯಾಪಕ ವಾದುದರಿಂದ ಅಥವಾ ಅಂಥಹ ಧರ್ಮಗಳಿಗೆ ಆಶ್ರಯರಾದ ಜೀವಾತ್ಮರುಗಳ ಮೂಲಕ ಎಂದು ಭಾವಿಸಬೇಕು.



# ಮಂತ್ರ ೨೨

**अशरीरं शरीरेष्वनवस्थेष्ववस्थितम् ।**
**महांतं विभुमात्मानं मत्वा धीरो न शोचति ॥**

ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ॥

### ಪ್ರತಿಪದಾರ್ಥ

ಧೀರಃ — ('ಧಿಯಾ ರಮತೇ') ಭಗವಂತನ ಅನುಗ್ರಹವನ್ನು ಪಡೆದ ಜ್ಞಾನಿಯು, ಅನವಸ್ಥೇಷು — ಅಶಾಶ್ವತಗಳಾದ, ಶರೀರೇಷು — ದೇವ-ತಿರ್ಯಙ್-ಮನುಷ್ಯ-ಸ್ಥಾವರಾತ್ಮಕವಾದ ದೇಹಗಳಲ್ಲಿ, ಅಶರೀರಮ್ ಅವಸ್ಥಿತಮ್ — ಕರ್ಮಾಧೀನವಾದ ಶರೀರವನ್ನು ಹೊಂದದೇ ಅಪ್ರಾಕೃತದಿವ್ಯರೂಪದೊಡನೆ ನೆಲೆಸಿರುವ, ವಿಭುಮ್ — ಮಹಾ ವೈಭವಾದಿ ಗುಣಗಳುಳ್ಳ, ಮಹಾಂತಮ್ — ಪೂಜ್ಯನಾದ, ಆತ್ಮಾನಮ್ — ಪರಮಾತ್ಮನನ್ನು, ಮತ್ವಾ — ತಿಳಿದು, (ಸಾಕ್ಷಾತ್ಕರಿಸಿ) ನ ಶೋಚತಿ — ಮತ್ತೆ ಸಂಸಾರ ದುಃಖವನ್ನು ಹೊಂದುವುದಿಲ್ಲ.

### ತಾತ್ಪರ್ಯ

ಭಗವದನುಗ್ರಹ ಪಡೆದ ಜ್ಞಾನಿಯು ಅನಿತ್ಯವಾದ ದೇವಾದಿಶರೀರಗಳಲ್ಲಿ ಪ್ರಾಕೃತ ಶರೀರರಹಿತನಾಗಿ, ಅಪ್ರಾಕೃತರೂಪನಾಗಿ ನೆಲೆಸಿರುವ ಸರ್ವವ್ಯಾಪಿಯೂ, ಪೂಜ್ಯನೂ ಆದ ಪರಮಾತ್ಮನನ್ನು ತಿಳಿಯುತ್ತಾನೆ. ತಿಳಿದನಂತರ ಪುನಃ ದುಃಖರೂಪವಾದ ಸಂಸಾರವನ್ನು ಹೊಂದುವುದಿಲ್ಲ.

### ರಂಗರಾಮಾನುಜಭಾಷ್ಯಮ್

ಅಶರೀರಮ್ ಶರೀರೇಷ್ವನವಸ್ಥೇಷ್ವವಸ್ಥಿತಮ್। ಕರ್ಮಕೃತಶರೀರರಹಿತಮ್, ಅನವಸ್ಥೇಷು—ಅಸ್ಥಿರೇಷು, ಶರೀರೇಷು—ನಿತ್ಯತ್ವೇನ ತತ್ರ(?)ಸ್ಥಿತಮ್ । ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ । ಮಹಾಂತಂ ವಿಭುಮ್—ಮಹಾವೈಭವಶಾಲಿನಮ್ । ಶಿಷ್ಟಂ ಸ್ಪಷ್ಟಮ್ ।

### ಅನುವಾದ

ಅಶರೀರಂ........ಅವಸ್ಥಿತಮ್—ಕರ್ಮಫಲದಿಂದುಂಟಾದ ಶರೀರವಿಲ್ಲದವನು, ಅನವಸ್ಥೇಷು—ನಶ್ವರವಾದ, ಶರೀರೇಷು—ಶರೀರದಲ್ಲಿ ಯಾವಾಗಲೂ ಇರುವವನು. ಮಹಾಂತಂ.... ....ನ ಶೋಚತಿ । ಮಹಾಂತಂ ವಿಭುಮ್—ಮಹಾ ವೈಭವವುಳ್ಳವ (ಪರಮಾತ್ಮ)ನನ್ನು, ಉಳಿದವುಗಳ ಅರ್ಥಸ್ಪಷ್ಟವಾಗಿದೆ.

### ಭಾಷ್ಯಸಾರ

ಹಿಂದಿನ ಎರಡು ಮಂತ್ರಗಳಿಂದ ಪ್ರಾಪ್ಯವಸ್ತುವಾದ ಪರಮಾತ್ಮನ ಸ್ವರೂಪವನ್ನು ತಿಳಿಸಿ, ಮುಂದಿನ ಎರಡು ಮಂತ್ರಗಳಿಂದ ಉಪಾಯದ ಸ್ವರೂಪವನ್ನು ಹೇಳುತ್ತಾನೆ.

(ಶೀರ್ಯತೇ ಇತಿ ಶರೀರಮ್, ತನ್ನ ಮೊದಲ ಸ್ವರೂಪವನ್ನು ಕಳೆದುಕೊಂಡು ಚದುರಿ ಹೋಗುವ ಸ್ವಭಾವವುಳ್ಳ ದೇಹ.) ದೇಹದಲ್ಲಿ ಕಾಣುವ ಚದುರಿಹೋಗುವ ಸ್ವಭಾವವು ಪುಣ್ಯ–ಪಾಪಾತ್ಮಕವಾದ ಕರ್ಮಾಧೀನವಾದುದರಿಂದ, ಪರಮಾತ್ಮನಲ್ಲಿ ಅಂತಹ ಕರ್ಮವಿಲ್ಲದ ಕಾರಣ, ಕರ್ಮಾಧೀನವಾದ ಶರೀರವಿಲ್ಲದಿರುವಿಕೆಯೇ ಇಲ್ಲಿ ವಿವಕ್ಷಿತವಾದದ್ದು, ಪರಮಾತ್ಮನಿಗೆ ಅಪ್ರಾಕೃತನಿತ್ಯಶರೀರ ಸಂಬಂಧವನ್ನು 'ಆದಿತ್ಯವರ್ಣಂ ತಮಸಃ ಪರಸ್ತಾತ್' ಇತ್ಯಾದಿ ಶ್ರುತಿಗಳು ಹೇಳಿರುತ್ತವೆಯಷ್ಟೆ! ಇಲ್ಲಿ ಅವಸ್ಥಾಪನದಿಂದ ಸಾರ್ವಕಾಲಿಕವಾದ ಸ್ಥಿತಿಯೇ ವಿವಕ್ಷಿತ. ಅದು ಇಲ್ಲದಂತಹ ನಶ್ವರವಾದ ಸಕಲಪ್ರಾಣಿಶರೀರಗಳಲ್ಲಿ ಅಂತರ್ಯಾಮಿರೂಪದಿಂದ ಇರುವವನೂ, 'ಮಹತೋ ಮಹೀಯಾನ್', ಎಂಬ ಶ್ರುತಿಯಲ್ಲಿ ಹೇಳಿದಂತೆ ಸರ್ವೋತ್ಕೃಷ್ಟವಾದ ಮಹತ್ವವುಳ್ಳವನೂ, 'ಆಕಾಶವತ್ ಸರ್ವಗತಶ್ಚ ನಿತ್ಯಃ, ಎಂಬಂತೆ ಸರ್ವವ್ಯಾಪಕನೂ ಆದ ಪರಮಾತ್ಮನನ್ನು ತಾತ್ವಿಕವಾಗಿ ಅರಿತು ಅಂದರೆ ಭಕ್ತಿರೂಪವನ್ನು ತಾಳಬಹುದಾದ ದರ್ಶನಸಮಾನಾಕಾರ ಜ್ಞಾನಕ್ಕೆ ಗೋಚರನನ್ನಾಗಿ ಮಾಡಿಕೊಂಡು ಧೀರನಾದವನು ಶೋಕ ಸಮುದ್ರದ ಆಚೆ ದಡವನ್ನು ಹೊಂದುತ್ತಾನೆ. ಅಂದರೆ ಎಲ್ಲ ದುಃಖಗಳನ್ನೂ ಮೀರಿ ಹೋಗುತ್ತಾನೆ.

ಸುಬೋಧಿನೀಕಾರರು ಮೊದಲನೆಯ ಅರ್ಥಕ್ಕೆ ಮತ್ತೊಂದು ಬಗೆಯ ಅನ್ವಯವನ್ನೂ ಹೇಳಿದ್ದಾರೆ—'ಅನವಸ್ಥೇಷು ಶರೀರೇಷು ಅವಸ್ಥಿತಂ ಅಥಾಪಿ ಅಶರೀರಮ್' ಎಂದು. ಅಭಿಪ್ರಾಯವಿದು–ನಶ್ವರವಾದ ಶರೀರಗಳಲ್ಲಿ ಇದ್ದುಕೊಂಡೂ ಸಹ, ಅವನು ಶರೀರ ಸಂಸರ್ಗದಿಂದಾಗಬಹುದಾದ ಸುಖದುಃಖಾದಿಸಂಬಂಧವಿಲ್ಲದ ಕಾರಣ ಅಶರೀರನೇ ಆಗಿದ್ದಾನೆ ಎಂಬುದಾಗಿದೆ.



## ಮಂತ್ರ ೨೩

**नायमात्मा प्रवचनेन लभ्यो न मेधया न बहुना श्रुतेन ।**
**यमेवैष वृणुते तेन लभ्यस्तस्यैष आत्मा विवृणुते तनूँ स्वाम् ॥**

ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ
ನ ಬಹುನಾ ಶ್ರುತೇನ |
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ
ವಿವೃಣುತೇ ತನೂಂ ಸ್ವಾಮ್ ||

### ಪ್ರತಿಪದಾರ್ಥ

ಅಯಮ್–ಈ, ಆತ್ಮಾ–ಪರಮಾತ್ಮನು, ಪ್ರವಚನೇನ–ಮನನದಿಂದ, ನ ಲಭ್ಯಃ–ಹೊಂದಲ್ಪಡುವವನಲ್ಲ. ಮೇಧಯಾ–ಗ್ರಹಣಧಾರಣ ಶಕ್ತಿಯಿಂದಲೂ, ನ ಲಭ್ಯಃ–ಹೊಂದಲ್ಪಡುವವನಲ್ಲ. ಬಹುನಾ ಶ್ರುತೇನ–ಅಧಿಕವಾದ ಶಾಸ್ತ್ರಜ್ಞಾನದಿಂದಲೂ, ನ ಲಭ್ಯಃ–ಹೊಂದಲ್ಪಡುವವನಲ್ಲ. ಯಮೇವ–ಯಾವ ಉಪಾಸಕನನ್ನೇ ಏಷಃ- ಈ ಪರಮಾತ್ಮನು, ವೃಣುತೇ-(ನನ್ನವನೆಂದು) ಸ್ವೀಕರಿಸುತ್ತಾನೋ, ತೇನ-ಅವನಿಂದ (ಭಗವದನುಗ್ರಹಕ್ಕೆ ಪಾತ್ರನಾದ ಉಪಾಸಕನಿಂದ), ಲಭ್ಯಃ–ಹೊಂದಲ್ಪಡತಕ್ಕವನು, ತಸ್ಯ–ಆ ಉಪಾಸಕನಿಗೆ, ಏಷಃ–ಈ ಪರಮಾತ್ಮನು, ಸ್ವಾಂ ತನೂಮ್–ತನ್ನ ದಿವ್ಯಮಂಗಳ ವಿಶಿಷ್ಟವಾದ ಸ್ವರೂಪವನ್ನು, ವಿವೃಣುತೇ–ಕೊಟ್ಟು ಕೊಳ್ಳುವನು.

### ತಾತ್ಪರ್ಯ

ಈ ಪರಮಾತ್ಮನನ್ನು ಕೇವಲ ಶ್ರವಣ-ಮನನ-ನಿಧಿಧ್ಯಾಸನಗಳಿಂದ ಪಡೆಯಲು ಸಾಧ್ಯವಿಲ್ಲ. ಯಾವ ಉಪಾಸಕನನ್ನು ಪರಮಾತ್ಮನು ಅನುಗ್ರಹಿಸುತ್ತಾನೋ ಅಂತಹವನು ಪರಮಾತ್ಮನನ್ನು ಕಾಣಬಲ್ಲನು. ಆದ್ದರಿಂದ ಈ ಪರಮಾತ್ಮನನ್ನು ಹೊಂದಲು ಉಪಾಯವು ಪರಮಾತ್ಮನೇ. ಮತ್ತಾವುದೂ ಅಲ್ಲ.

### ರಂಗರಾಮಾನುಜಭಾಷ್ಯಮ್

ಈದೃಶಾತ್ಮಪ್ರಾಪ್ತ್ಯುಪಾಯಂ ದರ್ಶಯತಿ-ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಅತ್ರ ಪ್ರವಚನಶಬ್ದೇನ, ಪ್ರವಚನಸಾಧನಂ ಮನನಂ ಲಕ್ಷ್ಯತೇ । ಉತ್ತರತ್ರ, 'ನ ಮೇಧಯಾ ನ ಬಹುನಾ ಶ್ರುತೇನ' ಇತಿ ವಕ್ಷ್ಯಮಾಣ ಧ್ಯಾನ-ಶ್ರವಣ-ಸಮಭಿವ್ಯಾಹಾರಬಲೇನ, ಪ್ರವಚನಶಬ್ದೇನ ಮನನಸ್ಯೈವ ಗ್ರಹೀತುಮ್ ಉಚಿತತ್ವಾತ್ ; ಅಧ್ಯಾಪನರೂಪಸ್ಯ ಪ್ರವಚನಸ್ಯ ಹೇತುತ್ವಾಪ್ರಸಕ್ತೇಶ್ಚ;ತಥೈವ ವ್ಯಾಸಾರ್ಯೈರ್ವಿವೃತತ್ವಾಚ್ಚ (ಪ್ರವಚನಂ-ಮನನಮ್) । ಯಮೇವೈಷ ವೃಣುತೇ ತೇನ ಲಭ್ಯಃ । ಏಷಃ–ಪರಮಾತ್ಮಾ, ಯಮ್–ಸಾಧಕಂ ಪ್ರಾರ್ಥಯತೇ, ತೇನ ಲಭ್ಯಃ–ಪ್ರಾರ್ಥನೀಯಪುಂಸಾ ಲಭ್ಯಃ ಇತ್ಯರ್ಥಃ । ತತ್ಪ್ರಾರ್ಥನೀಯತ್ವಂ ಚ ತತ್ಪ್ರಿಯತಮಸ್ಯೈವ ಪುಂಸಃ । ತತ್ಪ್ರಿಯತಮತ್ವಂ ಚ, ತತ್ಪ್ರೀತಿಮತ ಏವ । ತತಶ್ಚ ಭಗವದ್ವಿಷಯಿಣೀ ಉಪಾಸಕಸ್ಯ ಪ್ರೀತಿಃ, ಭಗವತ ಉಪಾಸಕೇ ಪ್ರೀತಿಮುತ್ಪಾದ್ಯ ತತ್ಪ್ರಾಪ್ತಿಹೇತುಃ ಭವತೀತ್ಯರ್ಥಃ। ತಸ್ಯೈಷ ಆತ್ಮಾ, ವಿವೃಣುತೇ

ತನೂಂ ಸ್ವಾಮ್। ತಸ್ಯ ಉಪಾಸಕಸ್ಯ, ಏಷ ಆತ್ಮಾ-ಪರಮಾತ್ಮಾ, ಸ್ವಸ್ವರೂಪಂ ಪ್ರಕಾಶಯತಿ, ಸ್ವಾತ್ಮಾನಂ ಪ್ರಯಚ್ಛತೀತ್ಯರ್ಥಃ । ವೃಣುತೇ-ಇತಿ ಪಾಠೇಽಪಿ ಸ ಏವಾರ್ಥಃ ॥

## ಅನುವಾದ

ಇಂತಹ ಪರಮಾತ್ಮನ ಪ್ರಾಪ್ತಿಗೆ ಉಪಾಯವನ್ನು ವಿವರಿಸುತ್ತಾರೆ-'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ' ಇಲ್ಲಿ ಪ್ರವಚನಶಬ್ದದಿಂದ ಅಧ್ಯಾಪನಕ್ಕೆ ಸಾಧನವಾದ ಮನನವು ಸೂಚಿಸಲ್ಪಡುತ್ತದೆ. ಮುಂದೆ 'ನ ಮೇಧಯಾ ನ ಬಹುನಾ ಶ್ರುತೇನ' ಎಂದು ಹೇಳಲಿರುವ ಧ್ಯಾನ, ಶ್ರವಣಗಳ ಜೊತೆಯಲ್ಲಿ ಹೇಳಿರುವ ಪ್ರವಚನ ಶಬ್ದಕ್ಕೆ ಮನನ ಎಂಬರ್ಥವನ್ನು ಗ್ರಹಿಸುವುದೇ ಸೂಕ್ತವಾಗಿದೆ. ಅಧ್ಯಾಪನರೂಪವಾದ ಪ್ರವಚನ ಅಂದರೆ, ತತ್ತ್ವಾರ್ಥವನ್ನು ಮತ್ತೊಬ್ಬರಿಗೆ ಬೋಧಿಸುವುದು. ಇದು ಪರಮಾತ್ಮ ಪ್ರಾಪ್ತಿಗೆ ಉಪಾಯವಾಗಬಹುದೆಂಬ ವಿಚಾರ ಅಪ್ರಸಕ್ತ. ಶ್ರುತಪ್ರಕಾಶಿಕಾಚಾರ್ಯರೂ (ಪ್ರವಚನಮ್-ಮನನಮ್) ಎಂದೇ ಅರ್ಥವನ್ನು ವಿವರಿಸಿರುವರು

ಯಮೇವೈಷ ವೃಣುತೇ ತೇನ ಲಭ್ಯಃ। ಏಷಃ-ಪರಮಾತ್ಮನು, ಯಮ್-ಯಾವ ಉಪಾಸಕನನ್ನು ಬಯಸುತ್ತಾನೋ, ಆ ಪರಮಾತ್ಮ ಬಯಸಿದ ಮನುಷ್ಯನಿಂದ ಹೊಂದಲ್ಪಡುತ್ತಾನೆ. ಪರಮಾತ್ಮನು ತನ್ನ ಪ್ರೀತಿಗೆ ಪಾತ್ರನಾದವನನ್ನೇ ಬಯಸುತ್ತಾನೆ. ಪರಮಾತ್ಮನಲ್ಲಿ ಪ್ರೀತಿಯುಳ್ಳವನೇ ಪರಮಾತ್ಮನಿಗೆ ಪ್ರಿಯತಮನಾಗುತ್ತಾನೆ, ಹೀಗೆ ಉಪಾಸಕನಿಗೆ ಪರಮಾತ್ಮನಲ್ಲಿರುವ ಪ್ರೀತಿಯೇ ಪರಮಾತ್ಮನಿಗೆ ಉಪಾಸಕನಲ್ಲಿ ಪ್ರೀತಿಯನ್ನುಂಟುಮಾಡಿ, ಪರಮಾತ್ಮನ ಪ್ರಾಪ್ತಿಗೆ ಕಾರಣವಾಗುತ್ತದೆ. ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್- ತಸ್ಯ-ಉಪಾಸಕನಿಗೆ, ಏಷ ಆತ್ಮಾ-ಪರಮಾತ್ಮನು ತನ್ನ ಸ್ವರೂಪವನ್ನು ತೋರಿಸುತ್ತಾನೆ. ತನ್ನನ್ನೇ ಕೊಡುತ್ತಾನೆ ಎಂದರ್ಥ. 'ವೃಣುತೇ' ಎಂಬ ಪಾಠದಲ್ಲೂ ಇದೇ ಅರ್ಥ.

## ಭಾಷ್ಯಸಾರ

ಹಿಂದಿನ ಮಂತ್ರದಲ್ಲಿ 'ಮತ್ವಾಧೀರೋ ನ ಶೋಚತಿ' (ಕಠ. ಉ. 1-2-22) ಎಂಬಲ್ಲಿ 'ಮತ್ವಾ' ಎಂಬುದರಿಂದ, ಪರಮಾತ್ಮನನ್ನು ಹೊಂದುವ ಉಪಾಯವನ್ನು ಸಾಮಾನ್ಯವಾದ ಜ್ಞಾನವೆಂಬ ರೂಪದಲ್ಲಿ ತಿಳಿಸಿದೆಯಷ್ಟೇ. ಮೇಧಾವಿಗಳಿಗೆ ಈ ಉಪಾಯವು ಸುಲಭ ಸಾಧನವಾಗಿ ತಿಳಿಯಬಲ್ಲರು. ಪರಮಾತ್ಮಜ್ಞಾನವೂ ಸಹ ಶಾಸ್ತ್ರದಿಂದ ಸುಜ್ಞೇಯ. ಹೀಗಿರುವಲ್ಲಿ ಮಂತ್ರ 21ರಲ್ಲಿ ಈ ಪರಮಾತ್ಮನನ್ನು ನನ್ನ ಹೊರತು ಮತ್ತಾರೂ ಅರಿಯಲಾರರೂ ಎಂಬ ಯಮನ ಮಾತಿಗೆ ಅರ್ಥವೇನಿರಬಹುದೆಂದು ಯೋಚಿಸಿದರೆ ಅದಕ್ಕೆ ಉತ್ತರವಾಗಿದೆ ಈ ಮಂತ್ರ. ಬೇರೆ ಬೇರೆ ಕಡೆಗಳಲ್ಲಿ ಶ್ರವಣ-ಮನನ-ನಿದಿಧ್ಯಾಸನಗಳು ಭಗವದ್ದರ್ಶನ-ಪ್ರಾಪ್ತಿಗಳಿಗೆ ಸಾಧನವೆಂದು ಕಂಡುಬಂದಿದ್ದರೆ, ಅವು ಮುಖ್ಯೋಪಾಯವಲ್ಲವೆಂದೂ, ಭಗವಂತನ ಭಕ್ತಿಯೇ ಅಂಥಹದೆಂದೂ, ಈ ಮಂತ್ರವು ಹೇಳಹೊರಟಿದೆ. ಪರಮಾತ್ಮನು-ವೇದಾರ್ಥದ ವ್ಯಾಖ್ಯಾನದಿಂದಾಗಲೀ ಅಥವಾ ಅದಕ್ಕೆ ಸಾಧನವಾದ ಕೇವಲ ಶಾಸ್ತ್ರಾರ್ಥ ಚಿಂತನದಿಂದಾಗಲೀ ಮತ್ತು ಅದರ ಮುಂದಿನ ನಿದಿಧ್ಯಾಸನರೂಪವಾದ ಪ್ರಜ್ಞೆಯಿಂದಾಗಲೀ, ವೇದಶಾಸ್ತ್ರಾರ್ಥದ ಬಹುಶ್ರುತತೆಯಿಂದಾಗಲೀ, ಹೊಂದಲು ಸಾಧ್ಯನಲ್ಲ. ಈ ಪರಮಾತ್ಮನು

ಯಾವ ಉಪಾಸಕನನ್ನು ತನ್ನೊಡನೆ ಸೇರಿಸಿಕೊಳ್ಳಲು ಬಯಸುವನೋ, ಅಂತಹ ಸಾಧಕನಿಂದ ಮಾತ್ರವೇ ಅವನು (ಪರಮಾತ್ಮನು) ಸಾಕ್ಷಾತ್ಕರಣೀಯನೂ, ಪ್ರಾಪ್ಯನೂ ಆಗುವನು. ಅವನ ಅಪೇಕ್ಷೆಗೆ ವಿಷಯನಾದ ಸಾಧಕನಿಗಾಗಿಯೇ ಅವನು ತನ್ನ ದಿವ್ಯಮಂಗಳ ವಿಗ್ರಹ ವನ್ನು ತೋರಗೊಡುವನು. ಯಾವ ಸಾಧಕನ ಬಗ್ಗೆ ಅವನಿಗೆ ಅಪೇಕ್ಷೆ ಹುಟ್ಟಿತೆಂದರೆ, ಯಾವನ ಬಗ್ಗೆ ತನ್ನ ಪ್ರಸನ್ನತೆ ದೊರಕುವುದೋ ಅವನ ವಿಷಯದಲ್ಲಿ ಮಾತ್ರ ಪ್ರಸನ್ನತೆಯು ಯಾರ ಬಗ್ಗೆ ಉಂಟಾದೀತು ? ಅಂದರೆ ಯಾವನು ಪರಮಾತ್ಮನಲ್ಲಿ ಸರ್ವೋತ್ಕೃಷ್ಟ ಪ್ರೀತಿ ರೂಪವಾದ ಭಕ್ತಿಯನ್ನು ಮಾಡುವನೋ, ಅವನಲ್ಲಿ ಮಾತ್ರ. ಅಂದರೆ ಸಾಧಕನ ನಿರತಿಶಯ ಭಕ್ತಿ, ಪರಮಾತ್ಮನ ನಿರತಿಶಯವಾದ ಅನುಗ್ರಹ, ಅದರಿಂದ ಸಾಕ್ಷಾತ್ಕಾರ ಮತ್ತು ಮುಕ್ತಿ. ಇದರಿಂದ ನಿರತಿಶಯಭಕ್ತಿಯೇ ಮುಖ್ಯೋಪಾಯವೆಂದೂ, ಉಳಿದುದೆಲ್ಲಾ ಅದಕ್ಕೆ ಪರಂಪರೆಯಾ ಸಾಧಕವೆಂದೂ, ಹೇಳಿದಂತಾಯಿತು. ಈ ಭಕ್ತಿಯೂ ಸಹ ಅವನ ಪ್ರಸನ್ನತೆಯ ಮೂಲಕವಾಗಿಯೇ, ಉಪಾಯವಾಗಬಹುದೇ ಹೊರತು ಸ್ವತಂತ್ರವಾಗಿ ಅಲ್ಲ.

ಇದಕ್ಕೇನು ಕಾರಣ ? ಎಂಬುದನ್ನು ವಿವರಿಸುತ್ತಾನೆ. ಲಾಭ ಅಂದರೆ ಸಾಕ್ಷಾತ್ಕಾರ ಪರಮಾತ್ಮನು ಯಾವನನ್ನು ಅನುಗ್ರಹಿಸುವನೋ ಅವನು ಮಾತ್ರ ಪರಮಾತ್ಮನನ್ನು ಸಾಕ್ಷಾತ್ಕರಿಸಬಲ್ಲನು. ಪರಮಾತ್ಮನು ಯಾವನನ್ನು ಪ್ರೀತಿಸುವನೋ ಅವನಿಗೆ ಮಾತ್ರ ತನ್ನ ದಿವ್ಯವೂ, ಮಂಗಳಕರವೂ ಆದ ರೂಪವನ್ನು ತೋರಿಸುತ್ತಾನೆ. ಅಂದರೆ ತನ್ನ ರೂಪ ವನ್ನು ನೋಡಲು ಅನುಕೂಲವನ್ನು ಕಲ್ಪಿಸುತ್ತಾನೆ. ಪರಮಾತ್ಮನಿಗೆ ಪ್ರಿಯತಮನಾದವನೇ ಅವನನ್ನು ನೋಡಲು ಬಯಸುತ್ತಾನೆ. ಅಂದರೆ ಪರಮಾತ್ಮನಲ್ಲಿ ಅತ್ಯಧಿಕವಾದ ಪ್ರೀತಿ ರೂಪವಾದ ಭಕ್ತಿಯುಳ್ಳ ಉಪಾಸಕನು ಮಾತ್ರ ಪರಮಾತ್ಮನಿಗೆ ಪ್ರಿಯತಮನಾಗುತ್ತಾನೆ. ಇದನ್ನೇ 'ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್' (ಭ. ಗೀ. 4-11) ಎಂಬಲ್ಲೂ ಹೇಳಿದೆ. ಪರಮಾತ್ಮನ ದಯೆಯೇ ಅವನ ನಿಜ-ಸ್ವರೂಪವನ್ನರಿಯುವಲ್ಲಿ ಮುಖ್ಯಕಾರಣವಾಗಿದೆ. ಆದುದರಿಂದ 'ಮೇಧಾ' ಮೊದಲಾದವುಗಳು ಪರಮಾತ್ಮ ಸಾಕ್ಷಾತ್ಕಾರದಲ್ಲಿ ಸುಲಭೋಪಾಯವಾಗಲಾರದು ಎಂದು ತಾತ್ಪರ್ಯ.

ಪರಮಾತ್ಮನ ಅನುಗ್ರಹದಿಂದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು ಈ ಸಂಸಾರ ಬಂಧನದಿಂದ ಬಿಡುಗಡೆ ಹೊಂದಿ ಮುಕ್ತನಾಗುತ್ತಾನೆ. 'ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ' (ಕ. ಉ. 2-22) ಎಂಬಲ್ಲಿ ಉಪಾಯವೆಂದು ಹೇಳಿದ ಬುದ್ಧಿಯು ಸಾಕ್ಷಾತ್ಕಾರರೂಪವಾದುದು ಎಂದು ತಾತ್ಪರ್ಯ. ಇದನ್ನೇ 'ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ' ಎಂಬಲ್ಲಿಯೂ ಹೇಳಿದೆ.



# ಮಂತ್ರ ೨೪

**नाविरतो दुश्चरितान्नाशान्तो नासमाहितः ।**
**नाशान्तमानसो वाऽपि प्रज्ञानेनैनमाप्नुयात् ॥**

ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।
ನಾಶಾಂತಮಾನಸೋ ವಾಽಪಿ ಪ್ರಜ್ಞಾನೇನೈನಮಾಪ್ನುಯಾತ್ ॥

## ಪ್ರತಿಪದಾರ್ಥ

ದುಶ್ಚರಿತಾತ್–ದುರಾಚಾರದಿಂದ, ನಾವಿರತಃ—ನಿವೃತ್ತನಾದವನೂ, ನಾಽಶಾಂತಃ—ಕಾಮಕ್ರೋಧಾದಿಗಳನ್ನು ಜಯಿಸದವನೂ, ನಾಸಮಾಹಿತಃ–ಏಕಾಗ್ರತೆಯಿಲ್ಲದವನೂ, ಅಶಾಂತಮಾನಸೋ ವಾಽಪಿ—ಚಂಚಲವಾದ ಮನಸುಳ್ಳವನೂ, ಪ್ರಜ್ಞಾನೇನಾಽಪಿ—ಭಕ್ತಿರೂಪವಾದ ಜ್ಞಾನದಿಂದಲೂ, ಏನಮ್—ಈ ಪರಮಾತ್ಮನನ್ನು ನಾಪ್ನುಯಾತ್—ಪಡೆಯಲಾರನು.

## ತಾತ್ಪರ್ಯ

ಪರದಾರ–ಪರದ್ರವ್ಯಾಪಹಾರ ಮುಂತಾದ ದುರಾಚಾರದಿಂದ ನಿವೃತ್ತನಾಗದವನೂ, ಕಾಮಕ್ರೋಧಾದಿಗಳನ್ನು ಬಿಡದವನೂ, ಆಸಕ್ತಿರಹಿತನೂ, ಚಂಚಲಚಿತ್ತನೂ ಆದವನು ಉಪಾಸನ ಮಾಡಿದರೂ ಪರಮಾತ್ಮನನ್ನು ಪಡೆಯಲಾರನು.

## ರಂಗರಾಮಾನುಜಭಾಷ್ಯಮ್

ಪರಮಾತ್ಮಪ್ರಾಪ್ತಿಹೇತುಭೂತೋಪಾಸನಾಂಗತಯಾ ಕಾಂಶ್ಚಿದ್ಧರ್ಮಾನ್ ಉಪದಿಶತಿ–ನಾವಿರತೋ ದುಶ್ಚರಿತಾನ್ನಾಶಾಂತೋ........ಪ್ರಜ್ಞಾನೇನೈನಮಾಪ್ನುಯಾತ್ । ಪರದಾರ–ಪರದ್ರವ್ಯಾಪಹಾರಾದನಿವೃತ್ತಃ, ಅನುಪಶಾಂತಕಾಮಕ್ರೋಧವೇಗಃ, ನಾನಾವಿಧವ್ಯಾಪಾರ ವಿಕ್ಷಿಪ್ತತಯಾಽನವಹಿತಚಿತ್ತಃ, ಅನಿಗೃಹೀತಮನಾಶ್ಚ, ಏನಮ್–ಪರಮಾತ್ಮಾನಮ್, ಪ್ರಜ್ಞಾನೇನ ನಾಪ್ನುಯಾದಿತ್ಯರ್ಥಃ । ಪುರುಷಾರ್ಥಸ್ಯೈವಾನೃತವದನನಿಷೇಧಸ್ಯ, ದರ್ಶಪೂರ್ಣಮಾಸಪ್ರಕರಣೇ ಕ್ರತ್ವಂಗತಯಾ, 'ನಾನೃತಂ ವದೇತ್' ಇತಿ ನಿಷೇಧವತ್, ಪುರುಷಾರ್ಥಸ್ಯಾಪಿ ದುಶ್ಚರಿತವಿರತ್ಯಾದೇರುಪಾಸನಾಂಗತಯಾ ವಿಧಾನಮುಪಪದ್ಯತೇ । ತತಶ್ಚ, ಯಸ್ತು ಪುರುಷಾರ್ಥಮಪಿ ದುಶ್ಚರಿತನಿಷೇಧಮತಿಲಂಘ್ಯ ಪರಮಾತ್ಮೋಪಾಸನಮವಿಗುಣಂ ಚಿಕೀರ್ಷತಿ, ತಸ್ಯ, ದುಶ್ಚರಿತನಿಷೇಧರೂಪಾಂಗವೈಗುಣ್ಯಾದುಪಾಸನಸಾದ್ಗುಣ್ಯಂ ನ ಸಿದ್ಧ್ಯತೀತಿ ಭಾವಃ ॥

## ಅನುವಾದ

ಪರಮಾತ್ಮನ ಪ್ರಾಪ್ತಿಗೆ ಕಾರಣ ಉಪಾಸನೆ, ಈ ಉಪಾಸನೆಗೆ ಕೆಲವು ಧರ್ಮಗಳು ಅಂಗವಾಗಿವೆ. ಇವುಗಳನ್ನು ಉಪದೇಶಿಸುತ್ತಾನೆ. 'ನಾವಿರತೋ ದುಶ್ಚರಿತಾನ್ನಾ....... ಶಾಂತೋಽಪ್ರಜ್ಞಾನೇನೈನಮಾಪ್ನುಯಾತ್'–ಪರಸ್ತ್ರೀ ಪರದ್ರವ್ಯಗಳನ್ನು ಅಪಹರಿಸುವವನೂ, ಕಾಮಕ್ರೋಧಾದಿಗಳನ್ನು ಬಿಡದವನೂ, ಅನೇಕ ವ್ಯವಹಾರಗಳಲ್ಲಿ ತೊಡಗಿರುವುದರಿಂದ

ಸಮಾಧಾನವಿಲ್ಲದ ಮನಸುಳ್ಳವನೂ ಚಂಚಲವಾದ ಮನಸುಳ್ಳವನೂ ಆದವನು ಏನಮ್– ಈ ಪರಮಾತ್ಮನನ್ನು ಪ್ರಜ್ಞಾನೇನ–ಬ್ರಹ್ಮಜ್ಞಾನದಿಂದ ಹೊಂದುವುದಿಲ್ಲ ಎಂದರ್ಥ. ದರ್ಶಪೂರ್ಣಮಾಸಪ್ರಕರಣದಲ್ಲಿ ಪುರುಷೋಪಕಾರರೂಪವಾದ ಸುಳ್ಳಾಡದಿರುವುದನ್ನು, 'ನಾನೃತಂ ವದೇತ್' ಎಂಬ ವಾಕ್ಯದಿಂದ ಯಾಗಾಂಗವಾಗಿ ನಿಷೇಧಿಸಿರುವಂತೆ, ಪುರುಷೋಪಕಾರಕವಾದ ಪಾಪಕಾರ್ಯಗಳ ಬಿಡುವಿಕೆಯನ್ನು ಉಪಾಸನೆಗೆ ಅಂಗವಾಗಿ ಹೇಳಿರುವುದು ಸರಿಹೊಂದುತ್ತದೆ. ಆದುದರಿಂದ ಯಾವನು ಪುರುಷಾರ್ಥವೆನಿಸಿದ ಪಾಪಕಾರ್ಯನಿಷೇಧವನ್ನು ಲಕ್ಷಿಸದೇ ಪರಮಾತ್ಮನ ಉಪಾಸನೆಯನ್ನು ಮಾಡುತ್ತಾನೋ ಅವನಿಗೆ ಪಾಪಕಾರ್ಯಬಿಡಬೇಕೆಂಬ ಅಂಗದ ಸಹಕಾರವಿಲ್ಲದುದರಿಂದ ಉಪಾಸನೆಯು ಫಲಿಸುವುದಿಲ್ಲ ಎಂದು ತಾತ್ಪರ್ಯ.

## ಭಾಷ್ಯಸಾರ

ನಿದಿಧ್ಯಾಸನ–ಧ್ಯಾನ ಮುಂತಾದ ಶಬ್ದಗಳಿಂದ ಹೇಳಲ್ಪಡುವ ಭಕ್ತಿರೂಪಜ್ಞಾನವು ಪರಮಾತ್ಮನ ಅನುಗ್ರಹವನ್ನು ದೊರಕಿಸಿಕೊಡುವುದರ ಮೂಲಕ ಸಾಕ್ಷಾತ್ಕಾರಕ್ಕೆ ಉಪಾಯ ಎಂಬುದನ್ನು ಹೇಳಿತು. ಇಲ್ಲಿ ಪ್ರತಿಬಂಧಕವಾದ ಕೆಲವು ಧರ್ಮಗಳನ್ನು ಬಿಡುವುದಕ್ಕಾಗಿ 'ನಾವಿರತಃ' ಎಂಬುದರಿಂದ ವಿವರಿಸುತ್ತಾನೆ.

ಅನುಭವಿಸಿದ ವಿಷಯವು ಸ್ಮರಣ ಮತ್ತು ಅಭ್ಯಾಸದಿಂದ ಪ್ರತ್ಯಕ್ಷರೂಪವಾದ ಜ್ಞಾನವೆನಿಸುತ್ತದೆ. ಇದೇ ಭಕ್ತಿರೂಪಜ್ಞಾನ. ಇದು ಪ್ರತಿಬಂಧಕವಿರುವಾಗ ಸಂಭವಿಸುವುದಿಲ್ಲ. ಏತಕ್ಕೆಂದರೆ ಅನೇಕರು ಶಾಸ್ತ್ರತತ್ತ್ವವನ್ನು ತಿಳಿದರೂ ಕರ್ಮವಾಸನೆಯಿಂದ ದೂಷಿತವಾದ ಮನಸ್ಸುಳ್ಳವರಾಗಿ, ಪರಸ್ತ್ರೀ–ಪರದ್ರವ್ಯಗಳಿಂದ ವಿಮುಖರಾಗುವುದಿಲ್ಲ. ಮತ್ತೆ ಕೆಲವು ಗೃಹಸ್ಥರು ಸ್ತ್ರೀಸಂಗದಿಂದ ಬಾಹ್ಯೇಂದ್ರಿಯ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಮತ್ತೆ ಕೆಲವರು ಭೋಗದ ಆಸೆಯಿಂದಾಗಲಿ, ಕೋಪದಿಂದಾಗಲೀ, ಪ್ರತಿಕ್ಷಣದಲ್ಲೂ ಹೊಸ ಹೊಸ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಈ ರೀತಿಯಾದ ಕಾಮದೋಷದ ಚಿಂತನೆಯಿಂದ ಏನು ಲಾಭ ? 'ಚಂಚಲಂ ಹಿ ಮನಃ' ಎಂಬ ಗೀತಾವಾಕ್ಯದಂತೆ ಎಲ್ಲರ ಮನಸ್ಸು ಚಂಚಲವಾಗಿಯೇ ಇರುವುದು.

ಆದುದರಿಂದ ಯಾವನು ದುರಾಚಾರಗಳಿಂದ ದೂರವಿರುವುದಿಲ್ಲವೋ, ಯಾರಿಗೆ ಶಾಂತಿಯಿಲ್ಲವೋ ಯಾವನ ಮನಸ್ಸು ಶಾಂತವಾಗಿರುವುದಿಲ್ಲವೋ, ಯಾರಿಗೆ ಏಕಾಗ್ರತೆಯಿರುವುದಿಲ್ಲವೋ ಅವನು ಶಾಸ್ತ್ರಜ್ಞಾನಮಾತ್ರದಿಂದ ಸ್ಮರಣ ಮತ್ತು ಅಭ್ಯಾಸಗಳಲ್ಲಿ ಕೌಶಲ್ಯವನ್ನು ಪಡೆಯಲಾರನು. ಅಷ್ಟೇ ಅಲ್ಲ ಅವನಿಗಿರುವ ವಿಶೇಷಜ್ಞಾನವೂ ನಾಶವಾಗುವುದು. ಹೀಗಿರುವಲ್ಲಿ ಪರಮಾತ್ಮನ ಪ್ರತ್ಯಕ್ಷರೂಪವಾದ ಜ್ಞಾನ ಹೇಗೆ ಬರಬೇಕು ? ಪರಮಾತ್ಮನ ಅನುಗ್ರಹವಿಲ್ಲದೇ ಎಷ್ಟೇ ಪ್ರಯತ್ನಪಟ್ಟರೂ ಕರ್ಮವಾಸನೆಯಿಂದ ಕಲುಷಿತವಾದ ಮನಸುಳ್ಳವರಿಗೆ ಚಿತ್ತ ಸಮಾಧಾನವುಂಟಾಗಲಾರದು. ಏಕಾಗ್ರತೆಯಿಲ್ಲದವರಿಗೆ ಸ್ಮರಣವೂ–ಅಭ್ಯಾಸವೂ, ಅವುಗಳಿಂದುಂಟಾಗಬಹುದಾದ ಪರಮಾತ್ಮಸಾಕ್ಷಾತ್ಕಾರವೂ ಕಷ್ಟವೇ. ಆದುದರಿಂದ ಪರಮಾತ್ಮನಿಗೆ ಯಾವನು ಪ್ರಿಯತಮನೋ ಅವನಿಗೆ ಪರಮಾತ್ಮಸಾಕ್ಷಾತ್ಕಾರವುಂಟಾಗುತ್ತದೆ ಎಂದು ತಾತ್ಪರ್ಯ. ಇದರಿಂದ ಪರಮಾತ್ಮಸಾಕ್ಷಾತ್ಕಾರದಲ್ಲಿ ಪರಮಾತ್ಮನೇ ಮುಖ್ಯ ಸಾಧನ ಎಂದು ಹೇಳಿದಂತಾಗುತ್ತದೆ. ಇದನ್ನೇ 'ಪುರುಷಾನ್ನಪರಂ

ೖ ಸಾ ಪರಾಗತಿಃ'[1] (ಕ.ಉ. 3-11) ಎಂಬಲ್ಲೂ ಹೇಳಿದೆ. ಇಲ್ಲಿ ಪುರುಷ
ನನ್ನೇ ತಿಳಿಸುತ್ತದೆ.

ಯೇ ಪ್ರಪದ್ಯಂತೇ, ಮಾಯಾ ಮೇತಾಂ ತರಂತಿ ತೇ'[2] (ಭ.ಗೀ.7-14)
ರೇ ಮುಖ್ಯ ಸಾಧನವೆಂದು ತಿಳಿದುಬರುತ್ತದೆ ಎಂಬ ಶಂಕೆ ಸಲ್ಲದು.
ಉಪಾಯದ ಅನುಷ್ಠಾನವನ್ನು ವಿಧಿಸುತ್ತಿಲ್ಲ. ತಾಪತ್ರಯ[3]ಗಳಿಂದ ಬಹಳ
ಪರಮಾತ್ಮನ ಗುಣರೂಪವಾದ ಮಾಯೆಯಿಂದ ಪಾರಾಗಲು ಅಸಮರ್ಥ
ರ್ವಾಸನೆಯಿಂದ ಕಲುಷಿತವಾದ ಮನಸ್ಸಿನಿಂದ ಶಾಸ್ತ್ರಗಳಲ್ಲಿ ಹೇಳಿರುವ
ತಿಳಿಯಲು ಅಸಾಧ್ಯವೆಂದು ನಿಶ್ಚಯಿಸಿ ಪರಮಾತ್ಮನ ದಯೆಯನ್ನು
ೇಕು. ಆಗ ಆತನಿಗೆ ಪರಮಾತ್ಮ ಸಾಕ್ಷಾತ್ಕಾರವಾಗುತ್ತದೆ.

ದಯೆಯನ್ನು ಬಯಸುತ್ತಿರಬೇಕೆಂಬುದರಿಂದ ಬಯಕೆಯೇ ಸಾಧನ
ು ಉಚಿತವೆಂದು ಹೇಳಲಾಗದು. ಇಲ್ಲಿ ಕೃಪಾವಿಶಿಷ್ಟನಾದ ಪರಮಾತ್ಮನ
ರ್. ಈ ಅರ್ಥವು ಬಹಳ ರಹಸ್ಯವಾದುದು. ಆದುದರಿಂದ ಅದನ್ನು

ಮುಮುಕ್ಷುವು 'ಬಾಯಾರಿದ ಚಾತಕಪಕ್ಷಿಯು ಆಕಾಶದತ್ತ ಮುಖ
ಪರಮಾತ್ಮನತ್ತ ನೋಡುತ್ತಿರಬೇಕು. ಇಲ್ಲಿ ಫಲ ನಿಶ್ಚಿತವಾಗಿಲ್ಲ.
ಾತ್ಮನೂ ಸ್ವತಂತ್ರನು. ಕೆಲವೊಂದು ಸಲ ವಿಮುಖನೂ ಆಗಬಹುದು
ದು. ತನ್ನತ್ತ ಪ್ರೀತಿಯಿಂದಿರುವವರ ಬಗ್ಗೆ ಪರಮಾತ್ಮ ವಿಮುಖ
ದೇ ಪರಮಾತ್ಮನಲ್ಲಿರುವ ವಿಶೇಷ. ಪರಮಾತ್ಮನು ಈ ವಿಷಯವನ್ನೇ
ೖಯ. ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ
ು ಮಮ' ॥ (ರಾ.ಯು.ಕಾಂ. 18-83) ಅಹಂ ತ್ವಾ ಸರ್ವಪಾಪೇಭ್ಯಃ
ಮಾಶುಚಃ'[4] (ಭ.ಗೀ. 18-66) ಎಂದು ಹೇಳಿರುತ್ತಾನೆ. ಅಥವಾ-
ಕ.ಉ. 1-2-12) ಎಂಬಲ್ಲಿ ಹೇಳಿದ ಉಪಾಯಸ್ವರೂಪವನ್ನು 'ನಾಯ
1-2-23) ಎಂಬುದರಿಂದ ವಿವರಿಸುತ್ತಾನೆ. 'ಅನೇನಪ್ರೋಚ್ಯತೇ' ಎಂದು
ವಚನ ಅಂದರೆ ಮನನ ಎಂದರ್ಥ 'ಮೇಧಾ' ಅಂದರೆ ಧ್ಯಾನ. ಈ ಅರ್ಥವು
ಬಂದದು, 'ಶ್ರುತಂ' ಅಂದರೆ ಶ್ರವಣ-ಮನನ-ಧ್ಯಾನ ಇವುಗಳಲ್ಲಿ
ಾತ್ರ ಈ ಪರಮಾತ್ಮನು ಲಭಿಸುವುದಿಲ್ಲ. ಪ್ರೀತನಾದ ಪರಮಾತ್ಮನಿಂದ
ಕ್ಷಾತ್ಕಾರ ಎಂಬುದನ್ನು 'ಯಮೇವೈಷ' ಎಂಬುದರಿಂದ ವಿವರಿಸುತ್ತಾನೆ.

ನಿಗಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ-ವಶೀಕರಣದಲ್ಲಿ ಅವನೇ ಅತ್ಯಂತ
ಕ್ಕೆ ಉತ್ತಮ ಉಪಾಯ.
ಯಾರು ಪ್ರಪತ್ತಿ ಮಾಡುತ್ತಾರೋ, ಅವರು ಈ ಮಾಯೆಯಿಂದ ಪಾರಾಗುತ್ತಾರೆ.
-ಆದಿಭೌತಿಕ-ಆದಿದೈವಿಕ ಎಂಬ ಮೂರು ತಾಪಗಳು ತಾಪತ್ರಯವೆನಿಸುತ್ತವೆ.
ನಗಾಗಿ ಇರುವೆನು' ಎಂದು ಯಾವನು-ಪರಮಾತ್ಮನಲ್ಲಿ ಶರಣಾಗತಿ ಮಾಡುತ್ತಾನೋ
ಗೂ ನಾನು ಅಭಯಕೊಡುತ್ತೇನೆ. ಇದು ನಾನು ಕೈಗೊಂಡ ವ್ರತ. ಪ್ರಸನ್ನನಾದ
ದಲೂ ನಾನು ಪಾರುಮಾಡುತ್ತೇನೆ. ನೀನು ದುಃಖಿಸಬೇಡ.

ಪ್ರೀತಿಗೆ ಪಾತ್ರನಾದವನೇ ವರಿಸಲು ಯೋಗ್ಯನಾದವನು. ಆದುದರಿಂದ ಪರಮಾತ್ಮನಿಗೆ ಪ್ರಿಯತಮನಾದವನಿಗೇ ಪರಮಾತ್ಮನು ಲಭ್ಯನು ಎಂದು ಸಿದ್ಧವಾಗುತ್ತದೆ. ಪರಮಾತ್ಮನಲ್ಲಿ ಯಾವನು ವಿಶೇಷವಾದ ಭಕ್ತಿಯನ್ನು ಮಾಡುತ್ತಾನೋ! ಅವನೇ ಪರಮಾತ್ಮನಿಗೆ ಪ್ರಿಯತಮನಾಗುತ್ತಾನೆ. ಈ ವಿಷಯವನ್ನು ಗೀತೆಯಲ್ಲಿ 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ'[1] (ಭ.ಗೀ. 7–17) ಎಂದು ಪರಮಾತ್ಮನು ಹೇಳಿದ್ದಾನೆ. ಅದುದರಿಂದ ಭಕ್ತಿರಹಿತವಾದ ಕೇವಲ ಧ್ಯಾನದಿಂದ ಪರಮಾತ್ಮನು ಸಾಕ್ಷಾತ್ಕಾರವಾಗುವುದಿಲ್ಲ ಭಕ್ತಿರೂಪವಾದ ಧ್ಯಾನದಿಂದ ಮಾತ್ರ ಸಾಕ್ಷಾತ್ಕಾರವಾಗುತ್ತಾನೆ. 'ನಿದಿಧ್ಯಾಸಿತವ್ಯಃ' ಎಂದು ಸಾಮಾನ್ಯವಾಗಿ ಹೇಳಿದ ಧ್ಯಾನವನ್ನು ಭಕ್ತಿರೂಪವಾದಧ್ಯಾನವೆಂದು ವಿಶೇಷಕವಾಗಿ ಹೇಳಿದಂತಾಯಿತು. ಹೀಗೆ ವಿಶೇಷರೂಪವಾಗಿ ಹೇಳಿದ ಉಪಾಯದಲ್ಲಿ ಅಂಗರೂಪವಾದ ಕೆಲವು ಧರ್ಮಗಳಿರಬೇಕು ಎಂಬುದನ್ನು 'ನಾವಿರತಃ' ಎಂಬುದರಿಂದ ವಿವರಿಸುತ್ತಾನೆ. ದುರಾಚಾರವು ಕೊನೆಗೊಳ್ಳದಿದ್ದಲ್ಲಿ ಪ್ರಕರ್ಷಜ್ಞಾನವುಂಟಾಗಲಾರದು ಪ್ರಕರ್ಷಜ್ಞಾನವಿಲ್ಲದೆ ಪರಮಾತ್ಮಸಾಕ್ಷಾತ್ಕಾರವೂ ಇಲ್ಲ. ಆದುದರಿಂದ ದುರಾಚಾರಗಳನ್ನು ದೂರಮಾಡುವುದು ಮುಂತಾದವು ಪ್ರಕರ್ಷಜ್ಞಾನಕ್ಕೆ ಅಂಗವೆಂದು ತಿಳಿದುಬರುತ್ತದೆ' ಎಂದು ಗೋಪಾಲಾನಂದರು 23–24ನೇ ಮಂತ್ರಗಳಿಗೆ ಅಥವಾ ಎಂಬುದರಿಂದ ವಿವರಿಸಿರುತ್ತಾರೆ.



1. ಜ್ಞಾನಿಗಳಿಗೆ ನಾನು ಹೇಗೆ ಬಹಳ ಪ್ರೀತಿಪಾತ್ರನೋ ಹಾಗೆ ಜ್ಞಾನಿಗಳೂ ನನಗೆ ಪ್ರೀತಿಪಾತ್ರರು.

## ಮಂತ್ರ ೨೫

**यस्य ब्रह्म च क्षत्रं च उभे भवत ओदनः ।**
**मृत्युर्यस्योपसेचनं क इत्था वेद यत्र सः ॥**

ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।
ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ||

### ಪ್ರತಿಪದಾರ್ಥ

ಯಸ್ಯ—ಯಾವ ಪರಮಾತ್ಮನಿಗೆ, ಬ್ರಹ್ಮ ಚ—ಬ್ರಾಹ್ಮಣರೂ, ಕ್ಷತ್ರಂ ಚ—ಕ್ಷತ್ರಿಯರೂ ಮತ್ತು ವೈಶ್ಯಶೂದ್ರರೂ, ಉಭೇ—ಬ್ರಹ್ಮಕ್ಷತ್ರಕುಲ ಮತ್ತು ವೈಶ್ಯಶೂದ್ರಕುಲ ಈ ಎರಡೂ. ಓದನಃ ಭವತಃ—ಅನ್ನವಾಗಿರುವುದೋ, ಯಸ್ಯ—ಯಾವ ಪರಬ್ರಹ್ಮನಿಗೆ, ಮೃತ್ಯುಃ—ಯಮನೆ ಮೊದಲಾದದ್ದು. ಉಪಸೇಚನಮ್—ವ್ಯಂಜನವೋ, ಸಃ—ಆ ಪರಮಾತ್ಮನು, ಯತ್ರ—ಯಾವ ರೀತಿಯಿಂದ ಇರುವನೋ (ಅದನ್ನು), ಇತ್ಥಾ—ಈ ರೀತಿ ಇರುವನು ಎಂಬುದಾಗಿ, ಕಃ ವೇದ—ಯಾವನು ತಾನೇ ಅರಿಯುವನು ?

### ತಾತ್ಪರ್ಯ

ಯಾವ ಪರಮಾತ್ಮನಿಗೆ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರು (ಅಂದರೆ ಚರಾಚರ ಪ್ರಪಂಚವೇ) ಅನ್ನವಾಗಿರುವರೋ ಮತ್ತು ಯಾವ ಪರಮಾತ್ಮನಿಗೆ ಯಮನು, ಅಂದರೆ ಪ್ರಳಯಕಾರಣರಾದ ರುದ್ರ-ಕಾಲ-ಅಂತಕರು ವ್ಯಂಜನವಾಗಿರುವರೋ, ಅಂತಹ ಪರಮಾತ್ಮನು ಯಾವ ಪ್ರಕಾರದಿಂದ ಇರುವನು ಎಂಬುದನ್ನು ಯಾರೂ ಅರಿಯಲಾರರು.

### ರಂಗರಾಮಾನುಜಭಾಷ್ಯಮ್

ಯಸ್ಯ ಬ್ರಹ್ಮ ಚ ಕ್ಷತ್ರಂ ಚ.......ಕ ಇತ್ಥಾ ವೇದ ಯತ್ರ ಸಃ । ಬ್ರಹ್ಮ ಚ ಕ್ಷತ್ರಂ ಚ ಬ್ರಹ್ಮಕ್ಷತ್ರಾಖ್ಯವರ್ಣದ್ವಯೋಪಲಕ್ಷಿತಕೃತ್ಸ್ನಚರಾಚರಾತ್ಮಕಮಿದಂ ಜಗತ್। ಯಸ್ಯ ಓದನೋ ಭವತಿ ಯಸ್ಯ ವಿನಾಶ್ಯೋಭವತೀತ್ಯರ್ಥಃ । ಯಸ್ಯ ಮೃತ್ಯುಃ [ಉಪಸೇಚನಮ್-] ಸ್ವಯಮಾದ್ಯಮಾನತ್ವೇಸತಿ ಅನ್ಯಸ್ವಾದನಹೇತುರ್ಭವತಿ, ಸಃ-ನಿಖಿಲಚರಾಚರಸಂಹರ್ತಾ ಪರಮಾತ್ಮಾ, ಯತ್ರ-ಯಸ್ಮಿನ್ ಪ್ರಕಾರೇಸ್ಥಿತಃ, ಯತ್ಪ್ರಕಾರವಿಶಿಷ್ಟಃ, ತಂ ಪ್ರಕಾರಮ್ ಇತ್ಥಮಿತಿ ಕೋವೇದೇತ್ಯರ್ಥಃ ।

ನನು-ಬ್ರಹ್ಮಕ್ಷತ್ರಪದೇನ ಕೃತ್ಸ್ನಚರಾಚರಗ್ರಹಣೇ ಕಿಂ ಬೀಜಮಿತಿ ಚೇತ್-ಉಚ್ಯತೇ-ಬ್ರಹ್ಮ ಚಕ್ಷತ್ರಂ ಚ ಓದನ ಇತ್ಯುಕ್ತೇ, ಬ್ರಾಹ್ಮಣ-ಕ್ಷತ್ರಿಯವರ್ಣಯೋಃ ಕಿಂಚಿತ್(ಕಂಚಿತ್?) ಪ್ರತಿ ಓದನಶಬ್ದಮುಖ್ಯಾರ್ಥಾನ್ನತ್ವಾಸಂಭವಾತ್, ಓದನಶಬ್ದೇನ ಭೋಜ್ಯತ್ವಂ ವಾ ಭೋಗ್ಯತ್ವಂ ವಾ ವಿನಾಶ್ಯತ್ವಂ ವಾ ಲಕ್ಷಣೀಯಮ್ । ನ ಹಿ ಬ್ರಹ್ಮಕ್ಷತ್ರಮಾತ್ರಭೋಕ್ತಾ ತನ್ಮಾತ್ರಸಂಹರ್ತಾ ವಾ ಕಶ್ಚಿಜ್ಜೀವೋ ವಾ ಪರಮಾತ್ಮಾ ವಾಽಸ್ತಿ । ನ ಚ ಅಂತರಾದಿತ್ಯವಿದ್ಯಾಯಾಂ'ಯೇ ಚಾಮುಷ್ಮಾತ್ಪರಾಂಚೋ ಲೋಕಸ್ತೇಷಾಂ ಚೇಷ್ಟೇ'(ಛಾಂ.ಉ. 1–6–8) ಇತಿ ಸರ್ವಲೋಕೇಶ್ವರೇ ಪರಮಾತ್ಮನಿ ಉಪಾಸನಾರ್ಥಂ ಲೋಕವಿಶೇಷೇಶಿತೃತ್ವಶ್ರವಣವತ್

ಸರ್ವಸಂಹರ್ತರ್ಯಪಿ ಪರಮಾತ್ಮನಿ ಬ್ರಹ್ಮಕ್ಷತ್ರಸಂಹರಣಮುಪಾಸನಾರ್ಥಮುಪದಿಶ್ಯತಾಮಿತಿ ವಾಚ್ಯಮ್; ತದ್ವದಸ್ಯೋಪಾಸನಾಪ್ರಕರಣತ್ವಾಸಂಭವಾತ್ (ತ್ವಾಭಾವಾತ್)। ಅತಃ ಬ್ರಹ್ಮಕ್ಷತ್ರಗ್ರಹಣಸ್ಯ ಚರಾಚರಮಾತ್ರೋಪಲಕ್ಷಣತ್ವಂ ಯುಕ್ತಮ್। ಉಕ್ತಂ ಚ ಸೂತ್ರಕೃತಾ, 'ಅತ್ತಾ ಚರಾಚರಗ್ರಹಣಾತ್', ಇತಿ।

## ಜೀವಪರತ್ವಶಂಕಾ

ನನ್ವೇವಮಪಿ-'ಓದನ'ಶಬ್ದೇನ ಕಿಮಿತಿ ವಿನಾಶ್ಯತ್ವಂ ಲಕ್ಷ್ಯತೇ? ಗೌಣತ್ವಮಪಿ ಶಬ್ದಸ್ಯ ಸಾಧಾರಣಗುಣಮುಪಹಾಯ ಅಸಾಧಾರಣಗುಣೇನೈವ ನಿರ್ವಾಹ್ಯಮ್। ನ ಹಿ। 'ಅಗ್ನಿರ್ಮಾಣವಕಃ' ಇತ್ಯತ್ರ ಅಗ್ನಿಶಬ್ದೇನ, ಪೈಂಗಲ್ಯಾದೇರಿವ ದ್ರವ್ಯತ್ವಾದೇಃ ಉಪಸ್ಥಿತಿರಸ್ತಿ। ಅತ ಏವ 'ಪ್ರೈತು ಹೋತುಶ್ಚಮಸಃ ಪ್ರ ಬ್ರಹ್ಮಣಃ ಪ್ರೋದ್ಗಾತೃಣಾಂ ಪ್ರಯಜಮಾನಸ್ಯ' ಇತಿ ಅಧ್ವರ್ಯುಪ್ರೈಷೇ ಉದ್ಗಾತೃಶಬ್ದಸ್ಯ ಬಹುವಚನಾನುರೋಧೇನ ಬಹುಷು ವೃತ್ತೌ ಪಕ್ತವ್ಯಾಯಾಂ, ಷೋಡಶರ್ತ್ವಿಕ್ಸಾಧಾರಣಾಕಾರಂ ವಿಹಾಯ, ವಿಶೇಷಾಕಾರೇಣ ಉದ್ಗಾತೃಗಣಮಾತ್ರಲಕ್ಷಣಾ, ಪೂರ್ವತಂತ್ರೇ (3-5-7) ವರ್ಣಿತಾ। ತದ್ವದಿಹಾಪಿ ಬ್ರಹ್ಮಕ್ಷತ್ರಯೋಃ ಓದನಶಬ್ದಮುಖ್ಯಾರ್ಥತ್ವಾಸಂಭವೇऽಪಿ, ಭೋಜ್ಯತ್ವಭೋಗ್ಯತ್ವರೂಪಾಂತರಂಗಾಕಾರಸ್ಯೈವ ಲಕ್ಷಣಯಾಪಿ ಗ್ರಹಣಂ ಯುಕ್ತಮ್। ನ ತು ಅತ್ಯಂತಬಹಿರಂಗಸ್ಯ ವಿನಾಶ್ಯತ್ವಾಕಾರಸ್ಯ; ಯೇನ ನಿಖಿಲಚರಾಚರಸಂಹರ್ತಾ ಪರಮಾತ್ಮಾऽತ್ರ ವಾಕ್ಯೇ ಪ್ರತೀಯೇತೇತಿ ಚೇತ್।

## ತತ್ಪರಿಹಾರಃ

ಉಚ್ಯತೇ। ಯದ್ಯಪಿ-ವಿನಾಶ್ಯತ್ವಂ ಸಾಧಾರಣಾಕಾರಃ; ತಥಾऽಪಿ-'ಮೃತ್ಯುರ್ಯಸ್ಯೋಪಸೇಚನಮ್' ಇತಿ ವಾಕ್ಯಶೇಷಾನುರೋಧಾತ್, ಸಾಧಾರಣೋऽಪಿ, ಗೌಣ್ಯಾ ವೃತ್ತ್ಯಾ ಲಕ್ಷಯಿತುಮುಚಿತಃ। ನನು-ಉಪಸೇಚನಶಬ್ದಾಪೇಕ್ಷಯಾ ಓದನಶಬ್ದಸ್ಯ ಮುಖ್ಯತ್ವಾತ್, ಓದನಶಬ್ದಸ್ವಾರಸ್ಯಾನುರೋಧೇನ, ಅಸಾಧಾರಣಾಕಾರರೂಪಭೋಗ್ಯತ್ವೇ ಲಕ್ಷಿತೇ, ಜಘನ್ಯಮುಪಸೇಚನಪದಬಾಧಕತ್ವಾಭಿಪ್ರಾಯೇಣ ಕಥಂಚಿನ್ನೀಯತಾಮ್। ಅತಃ(ತಶ್ಚ)ಬ್ರಹ್ಮಕ್ಷತ್ರಭೋಕ್ತಾ ಯಃ, ಯಸ್ಯ ಚ ಮೃತ್ಯುರಬಾಧಕಃ, ಸೋऽಸ್ಮಿನ್ ಮಂತ್ರೇ ಪ್ರತಿಪಾದ್ಯಃ। ಭೋಕ್ತೃತ್ವಂ ಚ ಜೀವಸ್ಯೈವೇತಿ, ಸ ಏವಾಸ್ಮಿನ್ ಮಂತ್ರೇ ಪ್ರತಿಪಾದ್ಯತಾಮಿತಿ, ಚೇತ್-ಉಚ್ಯತೇ। ಉಪಸೇಚನತ್ವೇನ ರೂಪಿತಸ್ಯ ಮೃತ್ಯೋಃ, ಓದನತ್ವರೂಪಿತೇನ ಬ್ರಹ್ಮಕ್ಷತ್ರಶಬ್ದಿತೇನ, ದಧ್ಯನ್ನವತ್ ಪ್ರತೀತ[ಸ್ಯ]ಸಂಬಂಧಸ್ಯ, ಸರ್ವಾತ್ಮನಾ ಬಾಧಪ್ರಸಂಗಾತ್। ನ ಹಿ ಯಸ್ಯ ಬ್ರಹ್ಮಕ್ಷತ್ರಂ ಚ ಭೋಗ್ಯಮ್, ಯಸ್ಯ ಚ ಮೃತ್ಯುರಬಾಧಕಃ ಬ್ರಹ್ಮಕ್ಷತ್ರಸ್ಯ ಚ ಸಂಬಂಧಃ ಪ್ರತೀಯತೇ। ಅತಃ ಉಪಸೇಚನಶಬ್ದಸ್ಯ ಓದನಶಬ್ದಾಪೇಕ್ಷಯಾ ಜಘನ್ಯತ್ವೇऽಪಿ ಅಬಾಧಕತ್ವರೂಪಸಾಧಾರಣಗುಣಂ ವಿಹಾಯ, ಸ್ವಯಮದ್ಯಮಾನತ್ವೇ ಸತಿ ಅನ್ನಾದನಹೇತುತ್ವರೂಪಾಸಾಧಾರಣಾಕಾರ ಏವ ಗ್ರಾಹ್ಯಃ। ತತಶ್ಚ ಏಕವಾಕ್ಯಾಂತರ್ಗತಚರಮಶ್ರುತೋಪಸೇಚನಪದಾನುಸಾರೇಣ, ಓದನಶಬ್ದೇನಾऽಪಿ ವಿನಾಶ್ಯತ್ವಮೇವ ಲಕ್ಷಣೀಯಮ್। ಸ್ವಬುದ್ಧ್ಯುಪಸ್ಥಾಪನೀಯ ವಿಶೇಷಾಕಾರ ರೂಪಗುಣಗ್ರಹಣಾದಪಿ, ಏಕವಾಕ್ಯತಾಪನ್ನಪದಾಂತರೋಪಸ್ಥಾಪಿತಗುಣಗ್ರಹಣಸ್ಯೈವ, ಬುದ್ಧಿಲಾಘವೇನ ಏಕವಾಕ್ಯತಾಸಾಮರ್ಥ್ಯಾನುರೋಧೇನ ಚ ನ್ಯಾಯ್ಯತ್ವಾದಿತ್ಯಸ್ಯಾರ್ಥಸ್ಯ ಅತ್ರಾಧಿಕರಣೇ ನಿರ್ಣೀತತ್ವಾತ್ ಇತ್ಯಲಂ ಪಲ್ಲವಿತೇನ (ಪರಿಪ್ಲವೇನ)॥

ಅನುವಾದ

ಯಸ್ಯ ಬ್ರಹ್ಮ ಚ ಕ್ಷತ್ರಂ ಚ........ಕ ಇತ್ಥಾ ವೇದ ಯತ್ರ ಸಃ–ಬ್ರಹ್ಮ ಚ ಕ್ಷತ್ರಂ ಚ–ಬ್ರಾಹ್ಮಣ–ಕ್ಷತ್ರಿಯ ಎಂಬ ಎರಡು ಜಾತಿಯಿಂದ ಸಂಗೃಹೀತವಾದ ಸಮಸ್ತಸ್ಥಾವರಜಂಗಮ ರೂಪವಾದ ಜಗತ್ತು. ಯಸ್ಯ ಓದನೋ ಭವತಿ–ಯಾವನಿಂದ ನಾಶಹೊಂದುವುದೋ ಎಂದರ್ಥ. ಯಾವನಿಗೆ ಮೃತ್ಯುವು [ಉಪಸೇಚನಮ್] ತಾನೂ ತಿನ್ನಲ್ಪಟ್ಟು ಇತರ ವಸ್ತುಗಳನ್ನು ತಿನ್ನಲು ಕಾರಣವಾಗುತ್ತದೋ (ನೆಂಜಿಕೆ) ಸಃ–ಅವನು ಸಮಸ್ತವಾದ ಸ್ಥಾವರ–ಜಂಗಮಗಳನ್ನೂ ಸಂಹರಿಸುವ ಪರಮಾತ್ಮನು ಯತ್ರ–ಯಾವ ರೀತಿಯಿರುವನೋ ಅವನ ರೀತಿಯನ್ನು ಹೀಗೆಂದು ಯಾವನು ಅರಿಯಬಲ್ಲನು ಎಂದರ್ಥ.

ಬ್ರಹ್ಮಕ್ಷತ್ರಪದದಿಂದ ಸಮಸ್ತಸ್ಥಾವರ–ಜಂಗಮರೂಪವಾದ ಪ್ರಪಂಚವನ್ನು ಸ್ವೀಕರಿಸುವಲ್ಲಿ ಕಾರಣವೇನು ? ಎಂದಲ್ಲಿ ಹೇಳುತ್ತೇವೆ. 'ಬ್ರಹ್ಮ ಚ ಕ್ಷತ್ರಂ ಚ ಓದನಃ' ಎಂದು ಹೇಳಿದಲ್ಲಿ ಬ್ರಾಹ್ಮಣ–ಕ್ಷತ್ರಿಯ ಜಾತಿಗಳು ಯಾರಿಗೂ ಓದನಶಬ್ದದ ಮುಖ್ಯಾರ್ಥವಾದ 'ಅನ್ನ' ಎಂದಾಗಲಾರದು. ಆದ್ದರಿಂದ ಓದನಶಬ್ದದಿಂದ ಭೋಜ್ಯತ್ವ ಅಥವಾ ಭೋಗ್ಯತ್ವ ಅಥವಾ ವಿನಾಶ್ಯತ್ವವನ್ನು ಲಕ್ಷಣೆಯಿಂದ ಹೇಳಬೇಕು. ಬ್ರಾಹ್ಮಣ ಕ್ಷತ್ರಿಯರನ್ನು ಮಾತ್ರ ಅನುಭವಿಸುವ ಅಥವಾ ಅವರನ್ನು ಮಾತ್ರ ಸಂಹರಿಸುವ ಜೀವನಾಗಲೀ, ಪರಮಾತ್ಮನಾಗಲೀ ಇರುವುದಿಲ್ಲ. ಅಂತರಾದಿತ್ಯ ವಿದ್ಯೆಯಲ್ಲಿ 'ಯೇ ಚ ಅಮುಷ್ಮಾತ್ಪರಾಂಚೋ ಲೋಕಾಸ್ತೇಷಾಂಚೇಷ್ಟೇ' (ಛಾಂ.ಉ. 1–6–8) ಎಂದು ಸರ್ವಲೋಕಗಳಿಗೂ ಒಡೆಯನಾದ ಪರಮಾತ್ಮನಲ್ಲಿ ಉಪಾಸನೆಗಾಗಿ ಲೋಕವಿಶೇಷದೊಡೆಯ ಎಂಬುದನ್ನು ಹೇಳಿದೆ. ಅದರಂತೆ ಎಲ್ಲವನ್ನೂ ಸಂಹಾರಮಾಡಬಲ್ಲ ಪರಮಾತ್ಮನಲ್ಲಿ ಬ್ರಾಹ್ಮಣ–ಕ್ಷತ್ರಿಯರನ್ನು ಸಂಹರಿಸುವವನು ಎಂದು ಉಪಾಸನೆಗಾಗಿ ಉಪದೇಶಿಸಬಹುದಲ್ಲವೇ ಎಂದು ಹೇಳಲಾಗದು. ಅಂತರಾದಿತ್ಯ ವಿದ್ಯೆಯಂತೆ ಇದು ಉಪಾಸನಾ ಪ್ರಕರಣವಲ್ಲ. ಆದುದರಿಂದ ಬ್ರಹ್ಮ–ಕ್ಷತ್ರ ಎಂಬ ಪದಗಳು ಸ್ಥಾವರ ಜಂಗಮರೂಪಪ್ರಪಂಚವೆಲ್ಲವನ್ನೂ ತಿಳಿಸುತ್ತದೆ ಎಂದು ಹೇಳುವುದೇ ಉಚಿತ. ಸೂತ್ರಕಾರರಾದ ಬಾದರಾಯಣರೂ 'ಅತ್ತಾಚರಾಚರಗ್ರಹಣಾತ್' ಎಂದು ಹೇಳಿರುವರು.

ಓದನ ಶಬ್ದದಿಂದ ವಿನಾಶ್ಯತ್ವವನ್ನು ಲಕ್ಷಣೆಯಿಂದ ಏಕೆ ಗ್ರಹಿಸಬೇಕು ? ಎಂಬ ಶಬ್ದಕ್ಕೆ ಗೌಣವಾದ ಅರ್ಥವನ್ನು ಹೇಳುವಾಗಲೂ ಸಾಧಾರಣ ಗುಣವನ್ನು ಬಿಟ್ಟು ಅಸಾಧಾರಣವಾದ ಗುಣವನ್ನೇ ಹೇಳಬೇಕು. 'ಅಗ್ನಿರ್ಮಾಣವಕಃ' ಎಂಬಲ್ಲಿ ಅಗ್ನಿಶಬ್ದದಿಂದ ಪಿಂಗಲ ವರ್ಣವನ್ನು ಹೇಳುವಂತೆ ಸಾಮಾನ್ಯವಾದ 'ದ್ರವ್ಯತ್ವ' ಎಂಬ ಧರ್ಮವು ಭಾಸವಾಗುವುದಿಲ್ಲ. ಆದುದರಿಂದ 'ಪ್ರೈತು ಹೋತುಶ್ಚಮಸಃ ಪ್ರ ಬ್ರಹ್ಮಣಃ ಪ್ರೋದ್ಗಾತೃಣಾಂ ಪ್ರ ಯಜಮಾನಸ್ಯ' ಎಂದು ಅಧ್ವರ್ಯುವನ್ನು ಕಳುಹಿಸುವಲ್ಲಿ 'ಉದ್ಗಾತೃ' ಶಬ್ದದ ಬಹುವಚನಕ್ಕೆ ಅನುಗುಣವಾಗಿ ಅನೇಕರನ್ನು ಕಳುಹಿಸಬೇಕೆಂದು ಹೇಳಬೇಕಾದಲ್ಲಿ ಹದಿನಾರು ಋತ್ವಿಕ್ಕುಗಳಿಗೂ ಅನ್ವಯಿಸುವುದನ್ನು ಬಿಟ್ಟು ವಿಶೇಷರೂಪದಲ್ಲಿ ಉದ್ಗಾತೃ ಸಮೂಹವನ್ನು ಲಕ್ಷಣೆಯಿಂದ ಸ್ವೀಕರಿಸಬೇಕೆಂದು ಮೀಮಾಂಸಾ ಶಾಸ್ತ್ರದಲ್ಲಿ (3–5–7) ವಿವರಿಸಿದೆ. ಅದರಂತೆ ಇಲ್ಲೂ ಬ್ರಾಹ್ಮಣ–ಕ್ಷತ್ರಿಯರಲ್ಲಿ ಓದನಶಬ್ದದ ಮುಖ್ಯಾರ್ಥ ಸರಿಹೊಂದದಿದ್ದರೂ, ಭೋಜ್ಯತ್ವ–ಭೋಗ್ಯತ್ವರೂಪವಾದ ಅಂತರಂಗರೂಪವನ್ನೇ ಲಕ್ಷಣೆಯಿಂದ ಸ್ವೀಕರಿಸುವುದು ಉಚಿತ. ಸಮಸ್ತವಾದ ಸ್ಥಾವರ–ಜಂಗಮರೂಪ ಜಗತ್ತನ್ನು ಸಂಹರಿಸುವ ಪರಮಾತ್ಮನು ಈ ವಾಕ್ಯದಲ್ಲಿ ಪ್ರತಿಪಾದಿಸಲ್ಪಡುತ್ತಾನೆ ಎಂದು ಹೇಳಲು ಕಾರಣವಾದ ಅತ್ಯಂತ ಬಹಿರಂಗವಾದ

ವಿನಾಶ್ಯತ್ವಸ್ವರೂಪವನ್ನು ಗ್ರಹಿಸುವುದು ಉಚಿತವಲ್ಲ ಎಂಬ ಆಶಂಕೆ ಬಂದಲ್ಲಿ ಪರಿಹಾರ ಹೇಳಲ್ಪಡುತ್ತದೆ—'ವಿನಾಶ್ಯತ್ವಮ್'–ಎಂಬುದು ಸಾಧಾರಣರೂಪವಾದರೂ 'ಮೃತ್ಯುರ್ಯಸ್ಯೋಪಸೇಚನಮ್' ಎಂಬ ವಾಕ್ಯಾಂಶಕ್ಕೆ ಅನುಗುಣವಾಗಿ ಸಾಧಾರಣವಾದ ಅರ್ಥವನ್ನೇ ಲಕ್ಷಣೆಯಿಂದ ಗ್ರಹಿಸುವುದು ಉಚಿತ.

ಉಪಸೇಚನಶಬ್ದಕ್ಕಿಂತಲೂ ಓದನಶಬ್ದವು ಪ್ರಧಾನವಾದುದರಿಂದ ಮಂತ್ರದಲ್ಲಿ ಉಪಯೋಗಿಸಿರುವ ಓದನ ಶಬ್ದದ ಸ್ವಾರಸ್ಯಕ್ಕೆ ಅನುಗುಣವಾಗಿ ಅಸಾಧಾರಣರೂಪವಾದ ಭೋಗ್ಯತ್ವವನ್ನು ಲಕ್ಷಣೆಯಿಂದ ಸ್ವೀಕರಿಸಿದಲ್ಲಿ ಮುಖ್ಯವಲ್ಲದ ಉಪಸೇಚನಪದವು ಬಾಧಕವಾಗಲಾರದು ಎಂಬ ಅಭಿಪ್ರಾಯದಿಂದ ಹೇಗಾದರೂ ಅನ್ವಯಿಸಿರಿ. ಆದುದರಿಂದ ಬ್ರಹ್ಮ-ಕ್ಷತ್ರಗಳನ್ನು ಭುಂಜಿಸುವವನು ಯಾರೋ, ಯಾರಿಗೆ ಮೃತ್ಯು ಬಾಧಕವಲ್ಲವೋ ಅವನು ಈ ಮಂತ್ರದಲ್ಲಿ ಹೇಳಲ್ಪಡುತ್ತಾನೆ ಎಂದಲ್ಲಿ ಭೋಕ್ತೃತ್ವವು ಜೀವನಿಗೆ ಇರುವುದರಿಂದ ಅವನೇ ಈ ಮಂತ್ರದಲ್ಲಿ ಹೇಳಲ್ಪಡಲಿ ಎಂದಲ್ಲಿ ಹೀಗೆ ಹೇಳುತ್ತೇವೆ. ಯಮನನ್ನು ಉಪಸೇಚನವೆಂದು ರೂಪಿಸಲಾಗಿದೆ. 'ಬ್ರಹ್ಮ-ಕ್ಷತ್ರ' ಶಬ್ದದಿಂದ ಹೇಳಿದ ಬ್ರಾಹ್ಮಣ-ಕ್ಷತ್ರಿಯರನ್ನು ಓದನವೆಂದು ರೂಪಿಸಲಾಗಿದೆ. ಮೊಸರಿನೊಡನೆ ಅನ್ನಕ್ಕೆ ಇರುವ ಸಂಬಂಧದಂತೆ ಈ ಎರಡರಲ್ಲಿನ ಸಂಬಂಧ ಎಲ್ಲ ರೀತಿಯಲ್ಲಿಯೂ ಅಡ್ಡಿಯುಂಟಾಗುವುದು. ಯಾವನಿಗೆ ಬ್ರಹ್ಮ-ಕ್ಷತ್ರಗಳು ಭೋಗ್ಯವೆಂದೂ ಯಾವುದಕ್ಕೆ ಮೃತ್ಯುಬಾಧಕವಲ್ಲವೋ ಎಂದೂ ಹೇಳಿದಲ್ಲಿ-ಮೃತ್ಯು-ಬ್ರಹ್ಮ-ಕ್ಷತ್ರಗಳಿಗೆ ಸಂಬಂಧವು ಕಾಣುವುದಿಲ್ಲ. ಆದುದರಿಂದ ಉಪಸೇಚನಶಬ್ದವು 'ಓದನ' ಶಬ್ದಕ್ಕಿಂತ ಮುಖ್ಯವಲ್ಲದಿದ್ದರೂ ಬಾಧಕವಲ್ಲದಸಾಧಾರಣವಾದ ಗುಣವನ್ನು ಬಿಟ್ಟು, ತಾನು ತಿನ್ನಲ್ಪಡುತ್ತಾ ಇತರ ವಸ್ತುಗಳನ್ನು ತಿನ್ನುವಲ್ಲಿ ಕಾರಣವಾಗಿದೆ ಎಂಬ ಅಸಾಧಾರಣವಾದ ಅರ್ಥವನ್ನೇ ಗ್ರಹಿಸಬೇಕು. ಇದರಿಂದ ಒಂದೇ ವಾಕ್ಯದಲ್ಲಿ ಸೇರಿರುವ ಕೊನೆಯಲ್ಲಿ ಕೇಳಿಬರುವ ಉಪಸೇಚನಪದಕ್ಕೆ ಅನುಸಾರವಾಗಿ 'ಓದನ' ಎಂಬ ಶಬ್ದದಿಂದ ವಿನಾಶ್ಯತ್ವವೆಂಬ ಅರ್ಥವನ್ನೇ ಲಕ್ಷಣೆಯಿಂದ ಹೇಳಬೇಕು. ತಮ್ಮ ಬುದ್ಧಿಗೆ ನಿಲುಕುವ ವಿಶೇಷರೂಪವಾದ ಅರ್ಥವನ್ನು ಗ್ರಹಿಸುವುದಕ್ಕಿಂತಲೂ, ಒಂದೇ ವಾಕ್ಯದಲ್ಲಿರುವ ಬೇರೊಂದು ಪದದಿಂದ ತಿಳಿಯುವ ಅರ್ಥವನ್ನು ಸ್ವೀಕರಿಸುವುದು—ಬುದ್ಧಿಗೆ ಸುಲಭವಾದುದರಿಂದಲೂ, ಒಂದೇ ವಾಕ್ಯದಲ್ಲಿ ಸೇರಿರುವುದರಿಂದಲೂ ನ್ಯಾಯವಾಗಿದೆ ಎಂಬ ಅರ್ಥವನ್ನು ಅತ್ತ್ರಧಿಕರಣದಲ್ಲಿ ನಿರ್ಣಯಿಸಿದೆ. ಆದುದರಿಂದ ಇದರ ಬಗ್ಗೆ ಇನ್ನು ವಿವಾದ ಸಾಕು.

## ಭಾಷ್ಯಸಾರ

ಪರಮಾತ್ಮನ ಮಹಿಮೆಯು ಅಪರಿಚ್ಛಿನ್ನವಾದುದು ಎಂದು 'ಯಸ್ಯಬ್ರಹ್ಮಚ' ಎಂಬ ಮಂತ್ರದಿಂದ ವಿವರಿಸುತ್ತಾನೆ. 'ಬ್ರಹ್ಮಚ' ಎಂಬ ಪದಗಳು ಚರಾಚರ ಪ್ರಪಂಚಸೂಚಕಗಳು ಈ ಚರಾಚರ ಪ್ರಪಂಚವು ಪರಮಾತ್ಮನಿಂದ ಸಂಹರಿಸಲ್ಪಡುವುದರಿಂದ ಪರಮಾತ್ಮನಿಗೆ ಆಹಾರವೆನಿಸಿವೆ. ಅಂದರೆ ಸಮಸ್ತವಾದ ಜಗತ್ತೂ ಪರಮಾತ್ಮನಿಂದ ಸಂಹರಿಸಲ್ಪಡುತ್ತದೆ ಎಂದರ್ಥ. ಪ್ರಾಣಿಗಳ ಸಂಹಾರಕ್ಕೆ ಕಾರಣನಾದ ಯಮನೂ ಪರಮಾತ್ಮನಿಂದ ಸಂಹರಿಸಲ್ಪಡುತ್ತಾನೆ. ಆಹಾರ ತಿನ್ನಲು ಸಹಾಯಕವಾಗಿ ತಿನ್ನಲ್ಪಡುವುದು ನೆಂಜಿಕೊಳ್ಳುವವಸ್ತು ಜಗತ್ಸಂಹಾರದಲ್ಲಿ ಸಹಾಯಕನಾಗಿ ತಾನೂ ಸಂಹರಿಸಲ್ಪಡುವುದರಿಂದ ಯಮನು (ಉಪಸೇಚನ) ನೆಂಜಿಕೊಳ್ಳದ

ವಸ್ತುವೆನಿಸುತ್ತಾನೆ. ಮೃತ್ಯುವಿನೊಡಗೂಡಿದ ಪ್ರಪಂಚವನ್ನು ಪರಮಾತ್ಮನು ಸಂಹರಿಸುತ್ತಾನೆ ಎಂದು ತಾತ್ಪರ್ಯ.

ಪರಮಾತ್ಮನ ಮಹಿಮೆಯನ್ನು ಇಷ್ಟೆಂದು ತಿಳಿಯಲು ಯಾರೂ ಸಮರ್ಥರಲ್ಲ ಅಂದರೆ ಪರಮಾತ್ಮನು ಅಪರಿಚ್ಛಿನ್ನವಾದ ಮಹಿಮೆಯುಳ್ಳವನೆಂದು ತಾತ್ಪರ್ಯ.

ಅಥವಾ ಪರಮಾತ್ಮನ ದಯೆಯಿಲ್ಲದೆ ಪರಮಾತ್ಮನನ್ನು ತಾತ್ವಿಕವಾಗಿ ಯಾರೂ ಅರಿಯಲಾರರು ಎಂದು 'ಯಸ್ಯ' ಎಂಬುದರಿಂದ ವಿವರಿಸುತ್ತಾನೆ. ಪರಮಾತ್ಮನು ಯಾವ ರೀತಿಯಿರುವನು ಎಂಬುದನ್ನು ಪರಮಾತ್ಮನ ಅನುಗ್ರಹವಿಲ್ಲದೆ ಯಾವನೂ ಅರಿಯಲಾರನು ಅಥವಾ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾದ ನನ್ನನ್ನುಳಿದು ಬೇರೆ ಯಾವನು ತಾನೆ ನಾನು ಅರಿತಂತೆ ಅರಿಯಬಲ್ಲನು ? ಎಂದು ತಾತ್ಪರ್ಯ.

ಎರಡನೆಯ ವಲ್ಲಿ ಮುಗಿದುದು.



# ಮೂರನೆಯ ವಲ್ಲಿ ಪ್ರಾರಂಭ

## ಮಂತ್ರ ೧

**ऋतं पिबन्तौ सुकृतस्य लोके गुहां प्रविष्टौ परमे परार्द्धे ।**
**छायातपौ ब्रह्मविदो वदन्ति पञ्चाग्नयो ये च त्रिणाचिकेताः ॥**

ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ
ಪ್ರವಿಷ್ಟೌ ಪರಮೇ ಪರಾರ್ಧ್ಯೇ ।
ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ
ಯೇ ಚ ತ್ರಿಣಾಚಿಕೇತಾಃ ॥

### ಪ್ರತಿಪದಾರ್ಥ

ಪಂಚಾಗ್ನಯಃ[1] — ಪಂಚಾಗ್ನಿನಿಷ್ಠರೂ, ತ್ರಿಣಾಚಿಕೇತಾಃ[2] — 'ಅಯಂ ವಾವ ಯಃ ಪವತೇ' ಎಂಬುದರಿಂದ ಆರಂಭಿಸಿ ಮೂರು ಅನುವಾಕಗಳನ್ನು ಅಧ್ಯಯನಮಾಡಿದವರೂ ಆದ, ಯೇ ಬ್ರಹ್ಮ ವಿದಃ — ಬ್ರಹ್ಮಜ್ಞಾನಿಗಳು ಯಾರೋ (ತೇ-ಅವರು) ಸುಕೃತಸ್ಯ — ಪುಣ್ಯಸಾಧ್ಯವಾದ, ಲೋಕೇ — ಈ ಲೋಕದಲ್ಲಿ, ಋತಮ್ — ಕರ್ಮ ಫಲವನ್ನು, ಪಿಬಂತೌ — ಅನುಭವಿಸುತ್ತಾ, ಗುಹಾಮ್ — (ಜೀವಸಂಬಂಧಿಯಾದ) ಹೃದಯಗುಹೆಯನ್ನು, ಪ್ರವಿಷ್ಟೌ — ಪ್ರವೇಶಿಸಿ, ಪರಮೇ — ಉತ್ಕೃಷ್ಟವಾದ, ಪರಾರ್ಧ್ಯೇ — ಹೃದಯಾಕಾಶದಲ್ಲಿ, ಛಾಯಾತಪೌ[3] — ನೆರಳು ಬಿಸಿಲುಗಳಂತೆ ಇರುವ ಜೀವಪರಮಾತ್ಮರು ಇರುವರು ಎಂಬುದಾಗಿ, ವದಂತಿ — ಹೇಳುತ್ತಾರೆ.

### ತಾತ್ಪರ್ಯ

ಈ ಲೋಕ ಸುಕೃತಸಾಧ್ಯವಾದುದು. ಇದರಲ್ಲಿ ಜೀವಾತ್ಮನ ಶರೀರದಲ್ಲಿರುವ ಹೃದಯಗುಹೆಯೆಂಬ ಉತ್ಕೃಷ್ಟವಾದ ಪ್ರದೇಶದಲ್ಲಿ ಜೀವ ಮತ್ತು ಪರಮಾತ್ಮರಿಬ್ಬರೂ ಕರ್ಮಫಲವನ್ನು ಅನುಭವಿಸುತ್ತಿರುವರು. ಈ ಜೀವ-ಬ್ರಹ್ಮರು ನೆರಳು-ಬಿಸಿಲಿನಂತೆ ಒಟ್ಟಿಗೆ ಇರುವರು ಎಂದು ಪಂಚಾಗ್ನಿನಿಷ್ಠರೂ, ಮೂರು ಅನುವಾಕಗಳನ್ನು ಅಧ್ಯಯನಮಾಡಿದವರೂ ಆದ ಬ್ರಹ್ಮಜ್ಞಾನಿಗಳು ಹೇಳುತ್ತಾರೆ.

### ರಂಗರಾಮಾನುಜಭಾಷ್ಯಮ್

'ಕ ಇತ್ಥಾ ವೇದ ಯತ್ರ ಸಃ, ಇತಿ ಅಸ್ಯ ದುರ್ಜ್ಞಾನತ್ವೇ, 'ಅತ್ರ ಇತ್ಥಮಾಸ್ತೇ' ಇತಿ ಅಸ್ಯಾರ್ಥಸ್ಯ ದುರ್ಬೋಧತ್ವೇನ, 'ನ ವಯಂ ತದುಪಾಸನೇ ಶಕ್ತಾಃ' ಇತಿ ಮನ್ಯಮಾನಂ ಪ್ರತಿ, ಉಪಾಸ್ಯೋಪಾಸಕಯೋಃ ಏಕಗುಹಾನುಪ್ರವೇಶೇನ ಪರಮಾತ್ಮನಃ ಸೂಪಾ

---

1. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ ಎಂದು ಐದು ಅಗ್ನಿಗಳು.
2. 'ಅಯಂ ವಾವ ಯಃ ಪವತೇ' ಎಂಬ ಮೂರು ಅನುವಾಕಗಳನ್ನು ಅಧ್ಯಯನ ಮಾಡಿದವರು.
3. ಪರಮಾತ್ಮನನ್ನು ಬಿಸಿಲೆಂದೂ, ಜೀವನನ್ನು ನೆರಳೆಂದೂ ಹೇಳುವರು.

ಸತ್ವಾತ್ ವಯಮಪ್ಯುಪಾಸಿತುಂ ಶಕ್ತಾಃ ಇತಿ ದ್ವಾಭ್ಯಾಂ ಮಂತ್ರಾಭ್ಯಾಂ ದರ್ಶಯತಿ ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧ್ಯೇ । ಸತ್ಯವತ್ ಅವಶ್ಯಂಭಾವಿ (ಸತ್ಯಪದವಾಚ್ಯಾವಶ್ಯಂಭಾವಿ) ಕರ್ಮಫಲಮನುಭವಂತೌ ಸುಕೃತಸಾಧ್ಯೇ ಲೋಕೇ–ಅಸ್ಮಿನ್ನೇವ ಲೋಕೇ, ವರ್ತಮಾನೌ ಹೃದಯಕುಹರಂ ಪ್ರವಿಷ್ಟೌ, ತತ್ರಾಪಿ ಪರಮಾಕಾಶೇ ಪರಾರ್ಧ್ಯೇ–ಪರಾರ್ಧಮ್–ಸಂಖ್ಯಾಯಾ ಉತ್ತರಾವಧಿಃ ; ತದರ್ಹತೀತಿ ಪರಾರ್ಧ್ಯಮ್ । ಉತ್ಕೃಷ್ಟ(ಷ್ಟಮ್) ಇತ್ಯರ್ಥಃ–ತಾದೃಶೇ ಹಾರ್ದಾಕಾಶೇ ವರ್ತಮಾನೌ । ಛಾಯಾತಪೌ ಬ್ರಹ್ಮವಿದೋ ವದಂತಿ । ಛಾಯಾತಪಶಬ್ದಾಭ್ಯಾಂ ಜ್ಞಾಜ್ಞೌ ಲಕ್ಷ್ಯೇತೇ । ಅಜ್ಞಶಬ್ದೇನ ಜೀವನಿರ್ದೇಶಸ್ಯ ಚ ಅಯಮಭಿಪ್ರಾಯಃ–'ಉಪಾಸ್ಯೋಪಾಸಕಯೋರೇಕ ಗುಹಾವರ್ತಿತ್ವೇ, ತಯೋರೇವ ಪ್ರಾಪ್ಯಪ್ರಾಪ್ತೃತಾಯಾ ವಕ್ತವ್ಯತಯಾ, ಪ್ರಾಪ್ಯಸ್ಯ ಚ ತತ್ಪ್ರಾಪ್ತಿಸಾಧನರಥತ್ವೇನ ರೂಪಿತೇ ಶರೀರೇಽವಸ್ಥಾನಮಯುಕ್ತಮ್ । ನ ಹಿ ರಥೇನ ಪ್ರಾಪ್ತವ್ಯೋಽರ್ಥಃ ರಥಸ್ಥೋ ಭವತೀತಿ ಶಂಕಾ ನ ಕಾರ್ಯಾ । ಪ್ರಾಪ್ಯಸ್ಯ ಪರಮಾತ್ಮನಃ ತತ್ರಾವಸ್ಥಿತತ್ವೇಽಪಿ,ಜೀವಸ್ಯ, ಪರಾಭಿಧ್ಯಾನಾತ್ತು ತಿರೋಹಿತಮ್ (ಬ್ರ.ಸೂ.3–2–4) ಇತ್ಯುಕ್ತರೀತ್ಯಾ ಪರಮಾತ್ಮಸಂಕಲ್ಪಮೂಲಕರ್ಮರೂಪಾವಿದ್ಯಾವೇಷ್ಟಿತತಯಾ ತದನುಭವಲಕ್ಷಣತತ್ಪ್ರಾಪ್ತೇರಭಾವೇನ ಪ್ರಾಪ್ತೃಪ್ರಾಪ್ಯಯೋಃ ಜೀವಪರಯೋಃ ರಥತ್ವರೂಪಿತಶರೀರಾಂತರ್ವರ್ತ್ಯೇಕಗುಹಾವರ್ತಿತ್ವಕಥನೇ ನಾನುಪಪತ್ತಿಃ–ಇತಿ । ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾಃ। ಪಂಚಾಗ್ನಯಃ ಪಂಚಾಗ್ನಿಶುಶ್ರೂಷಾಪರಿಶುದ್ಧಾಂತಃಕರಣಾಃ। ತ್ರಿಣಾಚಿಕೇತಾಃ-ಉಕ್ತೋಽರ್ಥಃ। ಏವಂಭೂತಾ ಬ್ರಹ್ಮವಿದೋ ವದಂತೀತ್ಯರ್ಥಃ । ಕೇವಲಪಂಚಾಗ್ನಿತ್ರಿಣಾಚಿಕೇತಾನಾಮ್ ಈದೃಶಪರಮಾತ್ಮಪ್ರತಿಪಾದನಾಸಾಮರ್ಥ್ಯಾತ್ ಬ್ರಹ್ಮವಿದಾಮೇವ ಪಂಚಾಗ್ನಿತ್ವ–ತ್ರಿಣಾಚಿಕೇತತ್ವೇ ವಿಶೇಷಣೇ ।

ಅಸ್ಯ ಮಂತ್ರಸ್ಯ ಜೀವಪರಮಾತ್ಮಪರತ್ವಂ ಸೂತ್ರಿತಮ್ 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' (ಬ್ರ.ಸೂ. 1–2–11) ಇತಿ । ನನು ಕರ್ಮಫಲಭೋಗಶೂನ್ಯೇ ಪರಮಾತ್ಮನಿ 'ಋತಂ ಪಿಬಂತೌ' ಇತಿ ನಿರ್ದಿಷ್ಟಕರ್ಮಫಲಭೋಕ್ತೃತ್ವಾಸಂಭವಾತ್, ಸುಕೃತಸಾಧ್ಯಲೋಕವರ್ತಿತ್ವಗುಹಾವಚ್ಛಿನ್ನತ್ವಯೋಃ ಸರ್ವಗತೇ ಪರಸ್ಮಿನ್ ಬ್ರಹ್ಮಣಿ ಅಸಂಭವಾತ್, ಛಾಯಾತಪನಿರ್ದಿಷ್ಟಾಪ್ರಕಾಶತ್ವಪ್ರಕಾಶತ್ವಯೋರಪಿ ಜೀವಪರಮಾತ್ಮಪರತ್ವೇ ಅಸಂಭವಾತ್, ಬುದ್ಧಿ–ಜೀವಪರತ್ವೇ ತು, ತಸ್ಯ ಸರ್ವಸ್ಯಾಪ್ಯುಪಪತ್ತೇಃ ಕರ್ಮಫಲಭೋಗಕರಣೇ ಕರ್ತೃತ್ವೋಪಚಾರೇಣ ಪಿಬಂತಾವಿತಿ ನಿರ್ದೇಶಸ್ಯಾಪ್ಯುಪಪತ್ತೇಃ ಬುದ್ಧಿಜೀವಪರತ್ವಮೇವಾಸ್ಯ ಮಂತ್ರಸ್ಯ ಯುಜ್ಯತೇ–ಇತಿ ಚೇತ್-ಏವಮೇವ ಹಿ 'ಗುಹಾಂ ಪ್ರವಿಷ್ಟೌ' (ಬ್ರ.ಸೂ. 1–2–11) ಇತಿ ಸೂತ್ರೇ ಆಶಂಕ್ಯ, 'ಸಂಖ್ಯಾಶ್ರವಣೇ ಸತಿ, ಏಕಸ್ಮಿನ್ ಸಂಪ್ರತಿಪನ್ನೇ ದ್ವಿತೀಯಾಕಾಂಕ್ಷಾಯಾಂ ಪ್ರತಿಪನ್ನಜಾತಿಮುಪಜೀವ್ಯ ವ್ಯಕ್ತಿವಿಶೇಷಪರಿಗ್ರಹೇ ಬುದ್ಧಿಲಾಘವಾತ್' ವಿಜಾತೀಯಪರಿಗ್ರಹೇ ಜಾತಿವ್ಯಕ್ತಿಬುದ್ಧಿದ್ವಯಾಪೇಕ್ಷಯಾ ಗೌರವಾತ್ ಸಂಪ್ರತಿಪನ್ನಜಾತೀಯಪರಿಗ್ರಹೋ ಯುಕ್ತಃ । ಲೋಕೇಽಪಿ 'ಅಸ್ಯ ಗೋರ್ದ್ವಿತೀಯೋಽನ್ವೇಷ್ಟವ್ಯಃ' ಇತ್ಯಾದೌ ತಥಾ ದರ್ಶನಾತ್ ; ತಥಾ ಚ ಋತಪಾನಲಿಂಗಾವಗತಸ್ಯ ಜೀವಸ್ಯ ದ್ವಿತೀಯಃ, ಚೇತನತ್ವೇನ ತತ್ಸಜಾತೀಯಃ ಪರಮಾತ್ಮೈವ ಗ್ರಾಹ್ಯಃ; ಪರಮಾತ್ಮನಃ ಪ್ರಯೋಜಕಕರ್ತೃತಯಾ, ಪಿಬಂತಾವಿತಿ ನಿರ್ದೇಶಸ್ಯಾಪಿ ಸಂಭವಾತ್ । ಅಂತಃಕರಣೇ ಸ್ವತಂತ್ರಕರ್ತೃತ್ವಪ್ರಯೋಜಕಕರ್ತೃತ್ವಯೋರಭಾವೇನ ಪಿಬಂತಾವಿತಿ ನಿರ್ದೇಶಸ್ಯ, ಸರ್ವಥಾಪ್ಯಸಂಭವಾತ್,

ಸರ್ವಗತೇ ಬ್ರಹ್ಮಣಿ, ಸುಕೃತಸಾಧ್ಯಲೋಕವರ್ತಿತ್ವಸ್ಯಾಪಿ ಸಂಭವಾತ್, ಅಸ್ಮಿನ್ನೇವ ಪ್ರಕರಣೇ 'ಗುಹಾಹಿತಂ ಗಹ್ವರೇಷ್ಠಮ್' (ಕ.ಉ, 2–12) ಇತಿ ಪರಮಾತ್ಮನೋ ಗುಹಾ ಪ್ರವೇಶಶ್ರವಣೇನ ಗುಹಾಪ್ರವಿಷ್ಟತ್ವಸ್ಯಾಪ್ಯುಪಪತ್ತೇಃ. (ಬ್ರ. ಸೂ. 1-2-11) ಛಾಯಾತಪಶಬ್ದಾಭ್ಯಾಂ ಕಿಂಚಿದಜ್ಞಸರ್ವಜ್ಞಯೋಃ ಪ್ರತಿಪಾದನಸಂಭವಾತ್, ಜೀವ–ಪರಮಾತ್ಮಪರ ಏವಾಯಂ ಮಂತ್ರಃ ಇತಿ ಸಮರ್ಥಿತತ್ವಾತ್, ನ ತ್ವದುಕ್ತಶಂಕಾವಕಾಶಃ।

'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತೀತಿ ಸತ್ತ್ವಮ್' ಇತಿ ಪೈಂಗಿರಹಸ್ಯಬ್ರಾಹ್ಮಣಾನುಸಾರೇಣ 'ದ್ವಾಸುಪರ್ಣಾ' (ಮುಂ.ಉ. 3-1) ಇತಿ ಮಂತ್ರಸ್ಯ ಬುದ್ಧಿಜೀವಪರತ್ವಾತ್, 'ಇಯದಾಮನನಾತ್' (ಬ್ರ.ಸೂ. 3–3–34) ಇತ್ಯಧಿಕರಣೇ, 'ಋತಂ ಪಿಬಂತೌ' ಇತಿ ಮಂತ್ರಸ್ಯ 'ದ್ವಾಸುಪರ್ಣಾ' (ಮುಂ.ಉ. 3–1) ಇತಿ ಮಂತ್ರೈಕಾರ್ಥ್ಯಸ್ಯ ಪ್ರತಿಪಾದಿತತ್ವಾತ್ ಅಯಮಪಿ ಮಂತ್ರಃ ಬುದ್ಧಿಜೀವಪರಃ' ಇತ್ಯಸ್ಯಾಃ ಶಂಕಾಯಾಃ 'ಗುಹಾಂ ಪ್ರವಿಷ್ಟಾವಾತ್ಮಾನೌ' (ಬ್ರ. ಸೂ. 1–2–11) ಇತಿ ಸೂತ್ರಕೃತೈವ ನಿರಾಕೃತತ್ವಾತ್ ನಾಸ್ಮಾಭಿಸ್ಸನ್ನಹ್ಯತೇ।

ಕಿಂಚ–ಜೀವೇ ಗುಹಾಪ್ರವೇಶಸ್ಯ ಬುದ್ಧ್ಯುಪಾಧಿಕತಯಾ, ಸ್ವತಃಪ್ರವೇಶವತ್ಯಾ ಬುದ್ಧ್ಯಾ ಸಹ ಜೀವಸ್ಯ, 'ಗುಹಾಂ ಪ್ರವಿಷ್ಟೌ' ಇತಿ ಗುಹಾಪ್ರವೇಶವರ್ಣನಂ ನ ಸಂಗಚ್ಛತೇ; ಉಪಷ್ಟಂಭಕಾಧೀನಗುರುತ್ವಶಾಲಿನಿ ಸುವರ್ಣೇ., ಗುರುಸುವರ್ಣಮಿತಿ ವ್ಯವಹಾರಸಂಭವೇಽಪಿ, 'ಉಪಷ್ಟಂಭಕ-ಸುವರ್ಣೇ ಗುರುಣೀ' ಇತಿ ವ್ಯವಹಾರಸ್ಯಾದರ್ಶನಾತ್। ಅತ ಏವ ಪರಪಕ್ಷೇ ಸೂತ್ರಾನುಸಾರೇಣ ಅಸ್ಯ ಮಂತ್ರಸ್ಯ ಜೀವಪರಮಾತ್ಮಪರತಯಾ ಕೃತಂ ಯೋಜನಾಂತರಮಪಿ ಅನುಪಪನ್ನಮ್। 'ಅನೇನ ಜೀವೇನಾತ್ಮನಾಽನುಪ್ರವಿಶ್ಯ'(ಛಾಂ.ಉ. 6–3–2) ಇತಿ ಶ್ರುತ್ಯನುಸಾರೇಣ ಪರಮಾತ್ಮನೋ ಜೀವಭಾವೇನಾನುಪ್ರವೇಶೇಽಪಿ ಪರಮಾತ್ಮರೂಪೇಣಾನುಪ್ರವೇಶಾಭಾವಾತ್ 'ಜೀವಪರಮಾತ್ಮಾನೌ' ಗುಹಾಂ ಪ್ರವಿಷ್ಟೌ ಇತಿ ನಿರ್ದೇಶಾನುಪಪತ್ತೇಃ। ಜೀವಭಾವೇನ ಬ್ರಹ್ಮಣಃ ಸಂಸಾರಮಭಿಪ್ರೇತ್ಯ, 'ಬ್ರಹ್ಮ ಸಂಸರತಿ' ಇತಿ ವ್ಯವಹಾರಸತ್ತ್ವೇಽಪಿ, 'ಜೀವಬ್ರಹ್ಮಣೀ ಸಂಸರತಃ' ಇತಿ ವ್ಯವಹಾರಾಸಂಭವಾತ್। ಜೀವೇಶಾವಾಭಾಸೇನ ಕರೋತಿ ಮಾಯಾ ಚಾವಿದ್ಯಾ ಚ ಸ್ವಯಮೇವ ಭವತಿ। ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ' (ನೃ.ತಾ. 9) ಇತಿ ವಚನಾನುಸಾರೇಣ ಪರಿಗೃಹೀತೇ, ಅವಿದ್ಯಾಯಾ ವಾ ಅಂತಃಕರಣಸ್ಯ ವಾ ಜೀವೋಪಾಧಿತ್ವಮಿತಿ ಪಕ್ಷದ್ವಯೇಽಪಿ, ನಾವಿದ್ಯಾಂತಃಕರಣಯೋಃ ಪ್ರತಿಬಿಂಬೋಪಾಧಿತ್ವಂ ಯುಜ್ಯತೇ। ಸ್ವಚ್ಛದ್ರವ್ಯಪ್ರತಿಹತಿಪರಾವೃತ್ತನಾಯನರಶ್ಮಿಗೃಹ್ಯಮಾಣಸ್ಯೈವ ಪ್ರತಿಬಿಂಬಶಬ್ದಾರ್ಥತಯಾ, ಅಚಾಕ್ಷುಷಸ್ಯ ಚೈತನ್ಯಸ್ಯ ಪ್ರತಿಬಿಂಬತ್ವಾಸಂಭವೇನ, ಅವಿದ್ಯಾಪ್ರತಿಬಿಂಬೋಽಂತಃಕರಣಪ್ರತಿಬಿಂಬೋ ವಾ ಜೀವಃ ಇತಿ ಆಶ್ರಯಣಾಯೋಗಾತ್। ಅತೋಽವಿದ್ಯಾವಚ್ಛಿನ್ನಃ ಅಂತಃಕರಣಾವಚ್ಛಿನ್ನೋ ವಾ ಜೀವ ಇತಿ ಪಕ್ಷದ್ವಯಮೇವ ಪರಿಶಿಷ್ಯತೇ। ತತ್ರ ಚ ಹೃದಯಗುಹಾಯಾಮವಿದ್ಯಾಂತಃಕರಣಾಭ್ಯಾಮವಚ್ಛಿನ್ನತ್ವೇನ, ಅನವಚ್ಛಿನ್ನಪರಮಾತ್ಮನೋ ಗುಹಾಪ್ರವೇಶವರ್ಣನಶ್ರುತೇರ್ವಾ ಅಂತರ್ಯಾಮಿಬ್ರಾಹ್ಮಣಸ್ಯ ವಾ ನಾಂಜಸ್ಯಮಿತ್ಯಲಮ್ ಅತಿಚರ್ಚಯಾ। ಪ್ರಕೃತಮನುಸರಾಮಃ॥

## ಅನುವಾದ

'ಕ ಇತ್ಥಾ ವೇದ ಯತ್ರ ಸಃ' ಎಂದು ಪರಮಾತ್ಮನನ್ನು ಅರಿಯುವುದು ಕಷ್ಟವೆಂದಲ್ಲಿ ಅತ್ರ ಇತ್ಥಮಾಸ್ತೇ' ಎಂಬುದರ ಅರ್ಥವನ್ನ ಅರಿಯುವುದು ಕಷ್ಟವಾಗುವುದು. ಇದರಿಂದ ಾವು ಪರಮಾತ್ಮನ ಉಪಾಸನೆಯಲ್ಲಿ ಶಕ್ತರಾಗಲಾರೆವು ಎಂದು ತಿಳಿಯುವ ಉಪಾಸಕನನ್ನು ುರಿತು ಉಪಾಸ್ಯ–ಉಪಾಸಕರಿಬ್ಬರೂ ಒಂದೇ ಹೃದಯಗುಹೆಯಲ್ಲಿ ಪ್ರವೇಶಿಸಿರುವುದರಿಂದ ರಮಾತ್ಮನನ್ನು ಉಪಾಸಿಸುವುದು ಸುಲಭ. ಆದುದರಿಂದ ನಾವು ಪರಮಾತ್ಮನನ್ನು ಉಪಾಸಿಸಲು ಶಕ್ತರು ಎಂದು ಮುಂದಿನ ಎರಡು ಮಂತ್ರಗಳಿಂದ ವಿವರಿಸುತ್ತಾನೆ. ಋತಂ ಪಿಬಂತೌ...............ಪರಾರ್ಧ್ಯೇ'. ಸತ್ಯದಂತೆ ಖಂಡಿತ ಅನುಭವಿಸಬೇಕಾದ ರ್ಮಫಲವನ್ನು ಅನುಭವಿಸುತ್ತಾ ಪುಣ್ಯಸಾಧ್ಯವಾದ ಲೋಕೇ–ಈ ಲೋಕದಲ್ಲಿರುವ ೃದಯಗುಹೆಯನ್ನು ಪ್ರವೇಶಿಸಿ, ಅಲ್ಲೂ ಉತ್ಕೃಷ್ಟವಾದ ಹೃದಯಾಕಾಶದಲ್ಲಿ ಜೀವ–ರಮಾತ್ಮರು ನೆರಳು ಬಿಸಿಲಿನಂತೆ ನೆಲೆಸಿರುವರೆಂದು ಹೇಳುತ್ತಾರೆ. 'ಛಾಯಾತಪ'ಶಬ್ದ ಿಂದ ಅಜ್ಞ–ಸರ್ವಜ್ಞರು ನಿರ್ದೇಶಿಸಲ್ಪಡುತ್ತಾರೆ.

ಅಜ್ಞಶಬ್ದದಿಂದ ಜೀವನನ್ನು ಸೂಚಿಸುವುದಕ್ಕೆ ತಾತ್ಪರ್ಯ ಹೀಗಿದೆ. ಉಪಾಸ್ಯ–ಪಾಸಕರು ಒಂದೇ ಹೃದಯಗುಹೆಯಲ್ಲಿರುವರು ಎಂದು ಹೇಳಿದರೆ, ಅವರನ್ನೇ ಪ್ರಾಪ್ಯ, ್ರಾಪ್ತ ಎಂದು ಹೇಳಬೇಕಾಗಿರುವುದರಿಂದ ಪ್ರಾಪ್ಯನಾದ ಪರಮಾತ್ಮನು, ಅವನನ್ನು ೊಂದಲು ಸಾಧನವಾದ ರಥವೆಂದು ಹೇಳಿದ ಶರೀರದಲ್ಲಿರುವನು ಎಂದು ಹೇಳುವುದು ಚಿತವಾಗಲಾರದು. ರಥದಿಂದ ಹೊಂದಬೇಕಾದ ವಸ್ತುವು ರಥದಲ್ಲಿ ಇರಲಾರದು ಬ ಸಂದೇಹಸಲ್ಲದು. ಪ್ರಾಪ್ಯನಾದ ಪರಮಾತ್ಮನು ಹೃದಯಗುಹೆಯಲ್ಲಿದ್ದರೂ, ರಾಭಿಧ್ಯಾನಾತ್ತು ತಿರೋಹಿತಮ್' (ಬ್ರ.ಸೂ.3–2–4) ಎಂಬಲ್ಲಿ ಹೇಳಿರುವಂತೆ ಜೀವನು ಮಾತ್ಮನ ಸಂಕಲ್ಪರೂಪವಾದ ಕರ್ಮವೆಂಬ ಅವಿದ್ಯೆಯಿಂದ ಮರೆಸಲ್ಪಟ್ಟಿರುವುದರಿಂದ ಮಾತ್ಮನ ಅನುಭವರೂಪವಾದ ಅವನ ಸಾಕ್ಷಾತ್ಕಾರವಿಲ್ಲದಿರುವುದರಿಂದ ಪ್ರಾಪ್ತಾ-ಪ್ರಾಪ್ಯ ಬ ಜೀವ–ಪರಮಾತ್ಮರು, ರಥವೆಂದು ಹೇಳಿದ ಶರೀರದೊಳಗಿನ ಒಂದೇ ಹೃದಯಗುಹೆ ್ಲಿ ಇರುವರೆಂದು ಹೇಳಿರುವುದರಲ್ಲಿ ಯಾವುದೇ ದೋಷವಿಲ್ಲ ಎಂದು ಅಭಿಪ್ರಾಯ. ಚಾಗ್ನಯೋ ಯೇ ಚ ತ್ರಿಣಾಚಿಕೇತಾಃ। ಪಂಚಾಗ್ನಯಃ–ಪಂಚಾಗ್ನಿಯ ಶುಶ್ರೂಷೆಯಿಂದ ಶುದ್ಧವಾದ ಮನಸ್ಸುಳ್ಳವರು. ತ್ರಿಣಾಚಿಕೇತಾಃ–ಅರ್ಥವನ್ನು ಹಿಂದೆ ಹೇಳಿದೆ. ತಹ ಬ್ರಹ್ಮಜ್ಞಾನಿಗಳು ಹೇಳುತ್ತಾರೆ ಎಂದರ್ಥ. ಪಂಚಾಗ್ನಿಮಾತ್ರೋಪಾಸಕರಿಗೂ ಮತ್ತು ಣಾಚಿಕೇತಾಧ್ಯಯನಮಾತ್ರಸಾಧಕರಿಗೂ ಮೇಲೆ ಹೇಳಿದ ಪರಮಾತ್ಮನನ್ನು ಕುರಿತು ಳುವ ಸಾಮರ್ಥ್ಯವಿಲ್ಲದಿರುವುದರಿಂದ ಬ್ರಹ್ಮವಿದರಿಗೆ ಪಂಚಾಗ್ನಿನಿಷ್ಠರೂ, ತ್ರಿಣಾಚಿಕೇತ ನಕರೂ ಎಂದು ಎರಡು ವಿಶೇಷಣಗಳನ್ನು ಹೇಳಿದೆ.

'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' (ಬ್ರ, ಸೂ.1–2–11) ಎಂಬ ತ್ರದಲ್ಲಿ ಈ ಮಂತ್ರಕ್ಕೆ ಜೀವ ಮತ್ತು ಪರಮಾತ್ಮಪರವಾಗಿ ಅರ್ಥ ಹೇಳಿದೆ. ಕರ್ಮಫಲಾನು ವಿಲ್ಲದ ಪರಮಾತ್ಮನಲ್ಲಿ 'ಋತಂ ಪಿಬಂತೌ' ಎಂದು ಹೇಳಿದ ಕರ್ಮಫಲಾನುಭವವು ಸಂಭವಿ

ಪರಾರ್ಧ್ಯಮ್ :– . ಉತ್ಕೃಷ್ಟ ಅಥವಾ ಅತಿಸುಂದರವಾಗಿರುವ ಎಂದರ್ಥ.

ಸುವುದಿಲ್ಲ. ಪುಣ್ಯದಿಂದ ಲಭಿಸಬಹುದಾದ ಲೋಕದಲ್ಲಿರುವಿಕೆಯೂ, ಹೃದಯಗುಹೆಯಲ್ಲಿರುವಿಕೆಯೂ ಎಲ್ಲಾ ಕಡೆಯಲ್ಲಿಯೂ ಇರುವ ಪರಬ್ರಹ್ಮನಲ್ಲಿ ಸಂಭವಿಸುವುದಿಲ್ಲ. 'ಛಾಯಾತಪೌ' ಎಂದು ಹೇಳಿದ ಅಪ್ರಕಾಶ ಮತ್ತು ಪ್ರಕಾಶಗಳೂ, ಜೀವ-ಪರಮಾತ್ಮರಲ್ಲಿ ಸಂಭವಿಸುವುದಿಲ್ಲ. ಆದುದರಿಂದ ಬುದ್ಧಿಜೀವಪರವಾದುದು ಈ ಮಂತ್ರ ಎಂದು ಹೇಳಿದರೆ ಎಲ್ಲವೂ ಸಮಂಜಸವಾಗುವುದು. ಕರ್ಮಫಲಭೋಗಕ್ಕೆ ಸಾಧನವಾದ ಬುದ್ಧಿಯಲ್ಲಿ ಕರ್ತೃತ್ವವನ್ನು ಉಪಚಾರರೂಪದಲ್ಲಿ ಹೇಳಿದರೆ 'ಪಿಬಂತೌ' ದ್ವಿವಚನವೂ ಸರಿಹೊಂದುತ್ತದೆ. ಆದುದರಿಂದ ಈ ಮಂತ್ರವು ಬುದ್ಧಿಜೀವಪರವಾದುದು ಎಂಬುದೇ ಸೂಕ್ತ ಎಂದು ಹೇಳುತ್ತಾರೆ; 'ಗುಹಾಂ ಪ್ರವಿಷ್ಟೌ' (ಬ್ರ.ಸೂ. 1-2-11) ಎಂಬ ಸೂತ್ರದಲ್ಲಿ ಹೀಗೆ ಆಶಂಕೆಮಾಡಿ, ಸಂಖ್ಯೆಸೂಚಿತವಾಗಿರುವೆಡೆಗಳಲ್ಲಿ ಒಂದರಲ್ಲಿ ವಿಷಯವು ಸರಿಹೊಂದಿದರೆ ಎರಡನೆಯದಾವುದು ? ಎಂಬ ಆಕಾಂಕ್ಷೆ ಬಂದಾಗ ಸರಿಹೊಂದಿರುವ ಜಾತಿಗನುಗುಣವಾದ ಮತ್ತೊಂದು ವ್ಯಕ್ತಿಯನ್ನು ಗ್ರಹಿಸುವುದು ಸುಲಭ. ಭಿನ್ನಜಾತಿಯವನ್ನು ಗ್ರಹಿಸಿದಲ್ಲಿ ಜಾತಿ ವ್ಯಕ್ತಿ ಎರಡನ್ನೂ ಗ್ರಹಿಸಬೇಕಾದುದರಿಂದ ಸುಲಭವಲ್ಲ. ಆದುದರಿಂದ ಗ್ರಹಿಸಿದ ವಸ್ತುವಿನ ಜಾತಿಗೆ ಸಮಾನವಾದ ಜಾತಿಯ ವಸ್ತುವನ್ನು ಗ್ರಹಿಸುವುದು ಸೂಕ್ತ, ಲೌಕಿಕವ್ಯವಹಾರದಲ್ಲೂ 'ಅಸ್ಯ ಗೋಃ ದ್ವಿತೀಯೋಽನ್ವೇಷ್ಟವ್ಯಃ' ಎಂದು ಪ್ರಯೋಗ ಮಾಡಿದಾಗ ಗೋವಿಗೆ ಸಮಾನವಾದ ಮತ್ತೊಂದು ಹಸುವನ್ನು ಹುಡುಕುವುದನ್ನು ಕಾಣುತ್ತೇವೆ. ಅದರಂತೆ ಕರ್ಮಫಲವನ್ನು ಅನುಭವಿಸುವ ಜೀವನಿಗೆ ಎರಡನೆಯದು ಅಂದರೆ ಚೇತನತ್ವಸಾಜಾತ್ಯದಿಂದ ಪರಮಾತ್ಮನನ್ನೇ ಗ್ರಹಿಸಬೇಕು. ಪರಮಾತ್ಮನು ಪ್ರೇರಕ ಕರ್ತೃವಾಗಿರುವುದರಿಂದ 'ಪಿಬಂತೌ' ಎಂದು ಹೇಳಿರುವುದೂ ಹೊಂದುತ್ತದೆ. ಅಂತಃಕರಣದಲ್ಲಿ ಸ್ವತಂತ್ರಕರ್ತೃತ್ವವಾಗಲೀ, ಪ್ರೇರಕಕರ್ತೃತ್ವವಾಗಲೀ ಇಲ್ಲದಿರುವುದರಿಂದ 'ಪಿಬಂತೌ' ಎಂಬ ದ್ವಿವಚನಪ್ರಯೋಗವು ಸರಿಹೊಂದಲಾರದು. ಎಲ್ಲ ಕಡೆಯಲ್ಲೂ ಇರುವ ಪರಮಾತ್ಮನಲ್ಲಿ ಕರ್ಮಸಾಧ್ಯವಾದ ಲೋಕದಲ್ಲಿರುವಿಕೆಯೂ ಸರಿಹೊಂದುತ್ತದೆ. ಈ ಪ್ರಕರಣದಲ್ಲಿಯೇ 'ಗುಹಾಹಿತಂ ಗಹ್ವರೇಷ್ಠಮ್' ಎಂದು ಪರಮಾತ್ಮನು ಹೃದಯಗುಹೆಯಲ್ಲಿ ಪ್ರವೇಶಿಸಿರುವನು ಎಂದು ಹೇಳಿರುವುದರಿಂದ 'ಗುಹಾಂ ಪ್ರವಿಷ್ಟೌ' ಎಂಬುದೂ ಸರಿಹೊಂದುತ್ತದೆ. 'ಛಾಯಾತಪ' ಶಬ್ದಗಳಿಂದ ಸ್ವಲ್ಪ ತಿಳಿದವನು, ಎಲ್ಲವನ್ನೂ ತಿಳಿದವನು ಎಂದು ತಿಳಿಸಬಹುದಾದುದರಿಂದ ಈ ಮಂತ್ರವು ಜೀವ-ಪರಮಾತ್ಮಪರವಾದುದೇ ಎಂದು ಸಮರ್ಥಿಸಿರುವುದರಿಂದ ನೀನು ಹೇಳಿದ ಆಕ್ಷೇಪಕ್ಕೆ ಅವಕಾಶವಿಲ್ಲ.

'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತೀತಿ ಸತ್ತ್ವಮ್' (ಮುಂ.ಉ. 3-1) ಎಂದು ಪೈಂಗಿರಹಸ್ಯಬ್ರಾಹ್ಮಣದಲ್ಲಿ ಹೇಳಿರುವಂತೆ 'ದ್ವಾಸುಪರ್ಣಾ' (ಮುಂ.ಉ. 3-1) ಎಂಬ ಮಂತ್ರವು ಬುದ್ಧಿಜೀವಪರವಾಗಿದೆ. 'ಇಯದಾಮನನಾತ್' (ಬ್ರ. ಸೂ. 3-3-34) ಎಂಬ ಅಧಿಕರಣದಲ್ಲಿ 'ಋತಂ ಪಿಬಂತೌ' ಎಂಬ ಮಂತ್ರವು 'ದ್ವಾಸುಪರ್ಣಾ' (ಮುಂ. ಉ. 3-1) ಎಂಬ ಮಂತ್ರದ ಅರ್ಥದೊಡನೆ ಐಕಾರ್ಥ್ಯವುಳ್ಳದ್ದಾಗಿದೆ ಎಂದು ಹೇಳಿರುವುದರಿಂದ ಈ ಮಂತ್ರವೂ ಬುದ್ಧಿಜೀವಪರವಾಗಲಿ' ಎಂಬ ಆಶಂಕೆಯನ್ನು 'ಗುಹಾಂ ಪ್ರವಿಷ್ಟಾವಾತ್ಮಾನೌ' (ಬ್ರ.ಸೂ. 1-2-11) ಎಂಬುದರಿಂದ ಸೂತ್ರಕಾರರೇ ಪರಿಹರಿಸಿರುವುದರಿಂದ ನಾವು ಸಮಾಧಾನಹೇಳುವುದಕ್ಕೆ ಯತ್ನಿಸುವುದಿಲ್ಲ.

ಮತ್ತು-ಜೀವನಿಗೆ ಗುಹಾಪ್ರವೇಶವು ಬುದ್ಧ್ಯುಪಾಧಿಕವಾದುದರಿಂದ ಸ್ವತಃ ಪ್ರವೇಶಿಸುವ ಬುದ್ಧಿಯೊಡನೆ ಜೀವನಿಗೆ 'ಗುಹಾಂ ಪ್ರವಿಷ್ಟೌ' (ಬ್ರ.ಸೂ. 1-2-11) ಎಂದು

ಗುಹಾಪ್ರವೇಶವನ್ನು ಹೇಳುವುದು ಸರಿಹೊಂದುವುದಿಲ್ಲ. ಆಶ್ರಯಾಧೀನವಾದ ಭಾರವುಳ್ಳ ಚಿನ್ನದಲ್ಲಿ 'ಚಿನ್ನವು ಭಾರ' ಎಂಬ ವ್ಯವಹಾರವಿದ್ದರೂ ಆಶ್ರಯವಸ್ತು ಮತ್ತು ಚಿನ್ನಗಳು ಭಾರವಾಗಿವೆ ಎಂಬ ವ್ಯವಹಾರ ಕಂಡುಬರುವುದಿಲ್ಲ. ಆದುದರಿಂದಲೇ ಬೇರೆಯವರು ಸೂತ್ರಕ್ಕೆ ಅನುಗುಣವಾಗಿ ಈ ಮಂತ್ರಕ್ಕೆ ಜೀವ–ಪರಮಾತ್ಮಪರವಾಗಿ ಮಾಡಿದ ಬೇರೊಂದು ಯೋಜನೆಯೂ ಸರಿ ಹೊಂದುವುದಿಲ್ಲ. 'ಅನೇನ ಜೀವೇನಾತ್ಮನಾನುಪ್ರವಿಶ್ಯ' (ಛಾಂ.ಉ. 6–3–2) ಎಂಬ ಶ್ರುತಿಗನುಗುಣವಾಗಿ ಪರಮಾತ್ಮನಿಗೆ ಜೀವಭಾವದಿಂದ ಪ್ರವೇಶವಿದ್ದರೂ ಪರಮಾತ್ಮರೂಪದಲ್ಲಿ ಒಳಪ್ರವೇಶವಿಲ್ಲದಿರುವುದರಿಂದ 'ಜೀವಪರಮಾತ್ಮಾನೌ ಗುಹಾಂ ಪ್ರವಿಷ್ಟೌ' ಎಂದು ಹೇಳಲು ಬರುವುದಿಲ್ಲ. ಬ್ರಹ್ಮವು ಜೀವಭಾವದಿಂದ ಪ್ರಪಂಚದಲ್ಲಿ 'ಬ್ರಹ್ಮ ಸಂಸರತಿ' (ಬ್ರಹ್ಮವು ತಿರುಗಾಡುತ್ತದೆ) ಎಂಬ ವ್ಯವಹಾರವಿದ್ದರೂ 'ಜೀವಬ್ರಹ್ಮಣೀ ಸಂಸರತಃ' ಎಂಬ ವ್ಯವಹಾರಬರಲಾರದು. 'ಜೀವೇಶಾವಾಭಾಸೇನ ಕರೋತಿ ಮಾಯಾ ಚ ಅವಿದ್ಯಾ ಚ ಸ್ವಯಮೇವ ಭವತಿ' (ನೃ.ತಾ. 9–5) ಕಾರ್ಯೋಪಾಧಿರಯಂ ಜೀವಃ, ಕಾರಣೋಪಾಧಿರೀಶ್ವರಃ' (ತ್ರಿ.ಮಹಾ.ನಾ) ಎಂಬ ಶ್ರುತಿಗನುಗುಣವಾಗಿ ಅವಿದ್ಯೆ ಅಥವಾ ಅಂತಃಕರಣಕ್ಕೆ ಜೀವೋಪಾಧಿತ್ವವು ಗ್ರಹಿಸಲ್ಪಟ್ಟಿದೆ ಎಂಬ ಎರಡುಪಕ್ಷಗಳಲ್ಲೂ ಅವಿದ್ಯಾ–ಅಂತಃಕರಣಗಳಿಗೆ ಪ್ರತಿಬಿಂಬೋಪಾಧಿತ್ವವನ್ನು ಹೇಳುವುದು ಉಚಿತವಲ್ಲ. ಸ್ವಚ್ಛದ್ರವ್ಯದಲ್ಲಿ ತಡೆಯಲ್ಪಟ್ಟ ಹಿಮ್ಮುಖನಾದ ಕಣ್ಣಿನ ಕಾಂತಿಯಿಂದ ಗ್ರಹಿಸಲ್ಪಡುವುದೇ ಪ್ರತಿಬಿಂಬವೆನಿಸುತ್ತದೆ. ಆದುದರಿಂದ ಚಾಕ್ಷುಷವಲ್ಲದ ಚೈತನ್ಯರೂಪವಾದ ಜೀವನಿಗೆ ಪ್ರತಿಬಿಂಬತ್ವವನ್ನು ಹೇಳಲಾಗುವುದಿಲ್ಲ. ಆದುದರಿಂದ ಜೀವನು ಅವಿದ್ಯಾಪ್ರತಿಬಿಂಬವೆಂದಾಗಲೀ, ಅಂತಃಕರಣಪ್ರತಿಬಿಂಬವೆಂದಾಗಲೀ ಹೇಳಲಾಗುವುದಿಲ್ಲ. ಆದುದರಿಂದ ಅವಿದ್ಯೆ ಅಥವಾ ಅಂತಃಕರಣವೆಂಬ ಉಪಾಧಿಗಳಿಂದ ಗುರುತಿಸಲ್ಪಡುವ ಜೀವನು ಎಂದು ಎರಡು ಪಕ್ಷಗಳು ಮಾತ್ರ ಉಳಿಯುತ್ತವೆ. ಅಲ್ಲೂ ಹೃದಯಗುಹೆಯಲ್ಲಿ ಅವಿದ್ಯೆ ಅಥವಾ ಅಂತಃಕರಣಗಳಿಂದ ಅವಚ್ಛಿನ್ನವಾದ (ಗುರುತಿಸಲ್ಪಡುವ) ಜೀವನ ಜೊತೆ, ಅನವಚ್ಛಿನ್ನನಾದ ಪರಮಾತ್ಮನಿಗೆ ಗುಹಾಪ್ರವೇಶವನ್ನು ಸೂಚಿಸುವ ಶ್ರುತಿಗಾಗಲೀ, ಅಂತರ್ಯಾಮಿಬ್ರಾಹ್ಮಣಕ್ಕಾಗಲೀ ಔಚಿತ್ಯ ಕಂಡುಬರುವುದಿಲ್ಲ. ಈ ವಿಷಯದಲ್ಲಿ ಸಾಕಷ್ಟು ಚರ್ಚಿಸಿರುವುದರಿಂದ ಮುಂದಿನ ವಿಷಯವನ್ನು ಪರಿಶೀಲಿಸೋಣ.

### ಭಾಷ್ಯಸಾರ

ಸಂಸಾರದುಃಖದಿಂದ ಪಾರಾಗಲು ಪರಮಾತ್ಮಜ್ಞಾನ ಉಪಾಯವೆಂದು 'ದೇವಂಮತ್ವಾ ರ್ಷಶೋಕೌ ಜಹಾತಿ' (ಕ.ಉ.2–12) ಎಂಬ ಮಂತ್ರದಲ್ಲಿ ಹೇಳಿದೆ. ಈ ಪರಮಾತ್ಮಜ್ಞಾನವು ರಮಾತ್ಮನ ಅನುಗ್ರಹದಿಂದ ಉಂಟಾಗುತ್ತದೆ. ಜಿತೇಂದ್ರಿಯರಲ್ಲದವರಿಗೆ ಪರಮಾತ್ಮನ ನುಗ್ರಹವುಂಟಾಗುದಿಲ್ಲ ಎಂದು ಕ. ಉ. 2–25ರಲ್ಲಿ ಹೇಳಿದೆ. ಇದರಿಂದ ಮುಮುಕ್ಷು ಳು ನಿರಾಶರಾಗಬೇಕಾಗಿಲ್ಲ. ಇಂದ್ರಿಯಗಳನ್ನು ಜಯಿಸುವುದರಿಂದ ಪರಮಾತ್ಮನ ಅನುಗ್ರಹ

---

ಪ್ಪಣಿ :

1 ಜಡಶಕ್ತಿಯೇ ಮಾಯೆ ಮತ್ತು ಅವಿದ್ಯೆಗಳಾಗುತ್ತವೆ. ಇವು ಜೀವ ಮತ್ತು ಈಶ್ವರ ಎಂಬುದನ್ನು ಭಾಸವಾಗಿರೂಪಿಸುತ್ತವೆ, ಕಾರ್ಯವನ್ನವಲಂಬಿಸಿ ಜೀವವೆಂದೂ, ಕಾರಣವನ್ನು ಅವಲಂಬಿಸಿ ಈಶ್ವರನೆಂದೂ ಳಲ್ಪಡುತ್ತವೆ.

ವನ್ನು ಗಳಿಸಬಹುದು. ಪರಮಾತ್ಮನ ಅನುಗ್ರಹದಿಂದ ಬ್ರಹ್ಮಜ್ಞಾನವನ್ನು ಪಡೆಯಬಹುದು ಈ ಇಂದ್ರಿಯಗಳನ್ನು ಜಯಿಸುವ ಉಪಾಯವನ್ನು ಈ ವಲ್ಲಿಯಲ್ಲಿ ಹೇಳಿದೆ. ಇಲ್ಲ ಪರಮಾತ್ಮನ ಅನುಗ್ರಹಕ್ಕಾಗಿ ಆತನನ್ನು ಉಪಾಸಿಸುವುದು ನಮಗೆ ಸುಲಭ. ತಿಳಿಯು ಜೀವ ಮತ್ತು ತಿಳಿಯಬೇಕಾದ ಪರಮಾತ್ಮನೂ ನಮ್ಮ ಶರೀರದಲ್ಲಿಯೇ ಇರುವರು. ಅಂದ ಪರಮಾತ್ಮನು ನಮ್ಮ ಒಳಿಯೇ ಇರುವುದರಿಂದ ಆತನನ್ನು ಉಪಾಸಿಸುವುದು ಸುಲಭ. ಆದ ದರಿಂದ ಇಲ್ಲಿ ಹೇಳುವ ಉಪಾಯದಲ್ಲಿ ಯತ್ನಶೀಲರಾಗಿ ಎಂದು 'ಋತಂ ಪಿಬಂತೌ' ಎಂ ಮಂತ್ರದಿಂದ ವಿವರಿಸುತ್ತಾನೆ.

'ಋತಮ್'ಅಂದರೆ ಸತ್ಯ. ಇದು ಇಲ್ಲಿ ಫಲವನ್ನು ತಿಳಿಸುತ್ತದೆ. ಕರ್ಮಫಲವನ ಅನುಭವಿಸಿಯೇ ತೀರಬೇಕಾಗಿರುವುದರಿಂದ 'ಸತ್ಯ'ಶಬ್ದದ ಅರ್ಥವನ್ನುಳ್ಳ 'ಋತ'ಶಬ್ದ ಕರ್ಮಫಲವನ್ನು ತಿಳಿಸುತ್ತದೆ. ಈ ಕರ್ಮಫಲವನ್ನು ಅನುಭವಿಸುವವರು ಇಬ್ಬರು. ವಸ್ತುತ ಕರ್ಮವಶ್ಯನಾದ ಜೀವನಿಗೆ ಕರ್ಮಫಲಾನುಭವ. ಪರಮಾತ್ಮನು ಕರ್ಮವಶ್ಯನಲ್ಲ. ಅವನಿ ಕರ್ಮಫಲಾನುಭವವೂ ಇಲ್ಲ. ಹೀಗಿರುವಾಗ 'ಪಿಬಂತೌ' ಎಂಬ ದ್ವಿವಚನ ಸಾಧುವಲ್ಲ. ಎಂದ ಭಾಸವಾಗುತ್ತದೆ. ಆದರೆ 'ಪಿಬಂತೌ' ಎಂಬುದನ್ನು ಹೀಗೆ ಅನ್ವಯಿಸಬಹುದು. ಜೀವನಿ ಕರ್ಮಫಲ, ಪರಮಾತ್ಮನಿಗೆ ಸಂಕಲ್ಪಫಲ. ಜೀವನು ಕರ್ಮವಶ್ಯ. ಪರಮಾತ್ಮ ಸತ್ಯಸಂಕ ವುಳ್ಳವನು. ಜೀವನು ಕರ್ಮಫಲವನ್ನು ಅನುಭವಿಸಲು ಶರೀರವನ್ನು ಪ್ರವೇಶಿಸುತ್ತಾನೆ ಪರಮಾತ್ಮನು 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬಲ್ಲಿ ಹೇಳಿರುವಂತೆ ಸೃಷ್ಟ್ಯಾದಿಗಳಿಂ ಕ್ರೀಡಿಸೋಣವೆಂದು ಆಯಾಯಾ ಕಾಲಾನುಗುಣವಾಗಿ ಸಂಕಲ್ಪಮಾಡಿ ಲೀಲಾರಸವನ್ನು ಅನ ಭವಿಸಲು ಶರೀರವನ್ನು ಪ್ರವೇಶಿಸುತ್ತಾನೆ. ಹೀಗೆ ಹೃದಯಗುಹೆಯಲ್ಲಿ ಇಬ್ಬರೂ ಪ್ರವೇಶಿಸಿರ ವುದರಿಂದ 'ಪಿಬಂತೌ' ಎಂಬ ದ್ವಿವಚನವು ಸಾಧುವೆನಿಸುತ್ತದೆ. ಅಥವಾ ಗುಂಪಿನಲ್ಲಿ ಕೆಲವರ ಛತ್ರಿ ಹಿಡಿದು ಮತ್ತೆ ಕೆಲವರು ಛತ್ರಿಹಿಡಿಯದಿದ್ದರೂ 'ಛತ್ರಿಣೋ ಯಾಂತಿ' ಎಂಬ ವ್ಯವಹಾ ವಿರುವಂತೆ ಒಬ್ಬನು ಕರ್ಮಫಲವನ್ನು ಅನುಭವಿಸುತ್ತಿದ್ದು ಮತ್ತೊಬ್ಬನು ಅಂತರ್ಯಾಮಿ ಯಾಗಿದ್ದರೂ 'ಪಿಬಂತೌ' ಎಂಬ ದ್ವಿವಚನ ಹೇಳಬಹುದು ಎಂದು ತಾತ್ಪರ್ಯ.

ಸುಕೃತ ಅಂದರೆ ಕರ್ಮ. ಕರ್ಮಸಂಬಂಧವುಳ್ಳದ್ದು ಶರೀರ. ಈ ಶರೀರದಲ್ಲಿ ಎಂದ ಜೀವಪರವಾಗಿಯೂ, ಸುಕೃತ ಅಂದರೆ ಪರಮಾತ್ಮನ ಸಂಕಲ್ಪ. ಈ ಸಂಕಲ್ಪದಿಂದಾದುದ ಆ ಮನುಷ್ಯ ಶರೀರ. ಈ ಶರೀರದಲ್ಲಿ ಎಂದು, ಪರಮಾತ್ಮ ಪರವಾಗಿಯೂ ಅರ್ಥವಾಗುವುದ ಇದರಿಂದ ಸುಕೃತಸಾಧ್ಯಶರೀರ ಎಂದು ಸುಕೃತ–ಶರೀರಗಳಲ್ಲಿ ಸಾಧ್ಯ–ಸಾಧಕಭಾವ ತೋರ ವುದು. ಈ ಸುಕೃತಸಾಧ್ಯವಾದ ಶರೀರದಲ್ಲಿ ಜೀವ–ಪರಮಾತ್ಮರಿದ್ದಾರೆ ಎಂದರ್ಥವಾ ತ್ತದೆ. 'ಗುಹಾಂ ಪ್ರವಿಷ್ಟೌ' ಹೃದಯಗುಹೆಯಲ್ಲಿ ಪ್ರವೇಶಿಸಿರುವವರು ಎಂದರ್ಥ ಈ ಹೃದಯಗುಹೆಯ ಹಿರಿಮೆಯನ್ನು 'ಪರಮೇ ಪರಾರ್ಧ್ಯೇ' ಎಂಬುದರಿಂದ ತಿಳಿಸುತ್ತಾ 'ಪರಾರ್ಧ್ಯ' ಶಬ್ದವು ಸಂಖ್ಯೆಯಲ್ಲಿ ಕೊನೆಯ ಸಂಖ್ಯೆಯನ್ನು ಸೂಚಿಸುತ್ತದೆ. ಇದರಿಂ ಉತ್ಕೃಷ್ಟತೆ ಭಾಸವಾಗುತ್ತದೆ. ಇಲ್ಲಿ ಹೃದಯಗುಹೆಯ ಉತ್ಕೃಷ್ಟತೆಯನ್ನು 'ಪರಾರ್ಧ ಶಬ್ದವು ತಿಳಿಸುತ್ತದೆ. 'ಪರಮೇ ಪರಾರ್ಧ್ಯೇ' ಎಂಬುದರಿಂದ ಅತ್ಯಂತ ಉತ್ಕೃಷ್ಟವಾ ಹೃದಯಾಕಾಶವೆಂದು ಅರ್ಥವಾಗುತ್ತದೆ. ಈ ಅತ್ಯಂತ ಉತ್ಕೃಷ್ಟವಾದ ಹೃದಯಾಕಾಶವ ಪರಮಾತ್ಮನ ಪ್ರಾಪ್ತಿಸ್ಥಾನ, ಪರಮಾತ್ಮನು ಇಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವವ

ಆದುದರಿಂದ ಈತನನ್ನು ಉಪಾಸಿಸುವುದು ಮಾನವರ ಕರ್ತವ್ಯವೆಂದು ತಿಳಿಯುತ್ತದೆ. ಒಟ್ಟಿನಲ್ಲಿ ಈ ಮನುಷ್ಯಶರೀರ ಸಂಕೃತಸಾಧ್ಯವಾದುದು. ಈ ಶರೀರದಲ್ಲಿ ಹೃದಯಾಕಾಶವಿದೆ. ಈ ಹೃದಯಾಕಾಶದಲ್ಲಿ ಜೀವ–ಪರಮಾತ್ಮರಿದ್ದಾರೆ. ಹೀಗೆ ಉಪಾಸ್ಯನಾದ ಪರಮಾತ್ಮನು ನಮಗೆ ಅತಿ ಸಮೀಪದಲ್ಲಿರುವುದರಿಂದ ಉಪಾಸನೆ ಮಾಡುವುದು ಬಹಳ ಸುಲಭ ಎಂದು ಹೇಳಿದಂತಾಗುತ್ತದೆ.

ಈ ಜೀವ–ಪರಮಾತ್ಮರು ನೆರಳು–ಬಿಸಿಲುಗಳಂತೆ ಇದ್ದಾರೆ ಎಂಬುದನ್ನು ‘ಛಾಯಾತಪೌ’ ಎಂಬುದರಿಂದ ವಿವರಿಸುತ್ತಾನೆ. ಜೀವ ಅಲ್ಪಜ್ಞಾನಿ, ಪರಮಾತ್ಮ ಸರ್ವಜ್ಞ, ಜೀವನು ಸಂಸಾರಿಯಾದುದರಿಂದ ನೆರಳಿಗೆ ಸಮನು ಎಂದು ‘ಛಾಯಾ’ ಶಬ್ದದಿಂದ ತಿಳಿಯುತ್ತದೆ. ಪರಮಾತ್ಮ ಸಂಸಾರಿಯಲ್ಲ, ಆದುದರಿಂದ ಆತನು ಬಿಸಿಲಿಗೆ ಸಮ ಎಂದು ‘ಆತಪ’ ಶಬ್ದದಿಂದ ತಿಳಿಯುತ್ತದೆ. ಜೀವ–ಪರಮಾತ್ಮರಿಬ್ಬರೂ ಹೃದಯಗುಹೆಯಲ್ಲಿರುವರು. ಒಬ್ಬ ಪ್ರಾಪ್ಯ ಮತ್ತೊಬ್ಬ ಪ್ರಾಪ್ತಾ.

ಈ ವಿಷಯವನ್ನು ‘ಬ್ರಹ್ಮವಿದೋ ವದಂತಿ’ ಎಂಬುದರಿಂದ ದೃಢಪಡಿಸುತ್ತಾನೆ. ಮೂರು ಸಲ ನಾಚಿಕೇತಾಗ್ನಿ ಚಯನ ಮಾಡಿದವರೂ, ಪಂಚಾಗ್ನಿ ಉಪಾಸಕರೂ, ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡವರೂ ಆದ ಬ್ರಹ್ಮಜ್ಞಾನಿಗಳು ‘ಜೀವಪರಮಾತ್ಮರು ಹೃದಯಗುಹೆಯಲ್ಲಿರುವರು’ ಎಂದು ಹೇಳುತ್ತಾರೆ ಎಂದು ವಿಷಯವನ್ನು ದೃಢಪಡಿಸುತ್ತಾನೆ.



## ಮಂತ್ರ ೨

**यस्सेतुरीजानानामक्षरं ब्रह्म यत् परम् ।**
**अभयं तितीर्षतां पारं नाचिकेतं शकेमहि(सि) ॥**

ಯಸ್ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ ಪರಮ್ ।
ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ(ಸಿ)॥

### ಪ್ರತಿಪದಾರ್ಥ

**ಈಜಾನಾನಾಮ್**—ಬ್ರಹ್ಮಜ್ಞಾನಕ್ಕೆ ಅಂಗವಾಗಿ ಯಜ್ಞಮಾಡುವವರಿಗೆ, **ಯಃ**—ಯಾವುದು **ಸೇತುಃ**—ಸೇತುವೆಯಂತೆ ಇರುವುದೋ, **ತಿತೀರ್ಷತಾಮ್**—ಸಂಸಾರ ಸಾಗರವನ್ನು ದಾಟಲು ಇಚ್ಛಿಸುವವರಿಗೆ **ಅಭಯಮ್**—ಭಯರಹಿತವಾದ, **ಪಾರಮ್**—ದಡವಾಗಿರುವುದೋ, **ತಮ್**—ಅಂತಹ, **ನಾಚಿಕೇತಮ್**—ನಾಚಿಕೇತಾಗ್ನಿಯಿಂದ ಪಡೆಯಬಹುದಾದ, **ಯತ್ ಅಕ್ಷರಮ್**—ನಾಶರಹಿತವಾದ ಯಾವ ಬ್ರಹ್ಮವುಂಟೋ (**ತತ್**-ಆ) **ಪರಂ ಬ್ರಹ್ಮ**—ಪರಬ್ರಹ್ಮವನ್ನು **ಶಕೇಮಹಿ**—ತಿಳಿಯಲು ಶಕ್ತರಾಗಿರುವೆವು.

### ತಾತ್ಪರ್ಯ

ಬ್ರಹ್ಮಜ್ಞಾನಕ್ಕೆ ಅಂಗವಾಗಿ ಯಜ್ಞಮಾಡುವವರಿಗೆ ಪರಬ್ರಹ್ಮವು ಸೇತುವೆಯಂತೆ ಇದೆ. ಅಂದರೆ ಕರ್ಮಫಲವನ್ನು ಕೊಡುವುದು ಎಂದರ್ಥ. ಸಂಸಾರಸಾಗರವನ್ನು ದಾಟಲು ಇಚ್ಛಿಸುವವರಿಗೆ ಪರಬ್ರಹ್ಮವು ಅಭಯವನ್ನು ಕೊಡುವ ದಡವಾಗಿರುವುದು. ಅಂತಹ ನಾಚಿಕೇತಾಗ್ನಿಯಿಂದ ಪ್ರಾಪ್ಯವೂ ನಾಶರಹಿತವೂ ಆದ ಪರಬ್ರಹ್ಮವನ್ನು ನಾವು ತಿಳಿಯಲು ಶಕ್ತರಾಗಿರುವೆವು.

### ರಂಗರಾಮಾನುಜಭಾಷ್ಯಮ್

ಯಸ್ಸೇತುರೀಜಾನಾನಾಮ್ । ಯಜ್ವನಾಂ ಯಃ ಸೇತುಃ–ಆಧಾರಭೂತಃ ; ಕರ್ಮಫಲಪ್ರದ ಇತ್ಯರ್ಥಃ। ಈಜಾನಾನಾಮಿತಿ ಕಾನಜಂತಃಶಬ್ದಃ। ಅಕ್ಷರಂ ಬ್ರಹ್ಮ ಯತ್ಪರಮ್–ಯನ್ನಿರ್ವಿಕಾರಂ ಪರಂ ಬ್ರಹ್ಮ । ಅಭಯಂ ತಿತೀರ್ಷತಾಂ ಪಾರಮ್–ಸಂಸಾರಸಾಗರಂ ತಿತೀರ್ಷತಾಂ, ನಿರ್ಭಯಂ ದೃಢಂ ತೀರಮ್। ನಾಚಿಕೇತಂ ಶಕೇಮಹಿ–(ಇದಂತೋಮಸಿಃ (ಪಾ.7–1–46) ನಾಚಿಕೇತಂ ಶಕೇಮಸೀತಿ)[1] ನಾಚಿಕೇತಾಗ್ನಿಪ್ರಾಪ್ಯಮ್ ಉಪಾಸಿತುಂ ಶಕ್ತಾಸ್ಸ್ಮಃ ಇತ್ಯರ್ಥಃ। ಶಕೇರ್ವ್ಯತ್ಯಯೇನ ಶಪ್। ನಾಚಿಕೇತಂ ಶಕೇಮಹೀತ್ಯಸ್ಯ ಮಂತ್ರಖಂಡಸ್ಯ ತಥೈವ ಭಾಷ್ಯಕೃತಾ ವ್ಯಾಖ್ಯಾತತ್ವಾತ್। ಅತಃ ದುರುಪಾಸತ್ವಬುದ್ಧ್ಯಾ ನ ಭೇತವ್ಯಮಿತಿ ಭಾವಃ ॥

### ಅನುವಾದ

ಯಸ್ಸೇತುರೀಜಾನಾನಾಮ್–ಯಾಗಮಾಡುವವರಿಗೆ ಯಾವನು, ಸೇತುಃ–ಆಧಾರಭೂತನೂ, ಕರ್ಮಫಲಗಳನ್ನು ಕೊಡುವವನು ಎಂದರ್ಥ. 'ಈಜಾನಾನಾಮ್, ಎಂಬುದು ಕಾನಜಂತವಾದ ಶಬ್ದ. ಅಕ್ಷರಂ ಬ್ರಹ್ಮಯತ್ ಪರಮ್–ವಿಕಾರರಹಿತವಾದ ಪರಬ್ರಹ್ಮನು ಅಭಯಂ ತಿತೀರ್ಷತಾಂ ಪಾರಮ್–ಸಂಸಾರಸಾಗರವನ್ನು ದಾಟಬಯಸುವವರಿಗೆ ಭಯರಹಿತವಾದ

1. ಶಕೇಮಹಿ ಎಂಬಲ್ಲಿ ಶಕೇಮಸಿ ಎಂಬ ರೂಪವೂ ಉಂಟು.

ದೃಢವಾದ ದಡವೂ ಆಗಿದೆಯೋ ಅಂತಹ ನಾಚಿಕೇತಂ ಶಕೇಮಹಿ–ನಾಚಿಕೇತಾಗ್ನಿಯಿಂದ ಪ್ರಾಪ್ಯ ವಾದುದನ್ನು ಉಪಾಸನೆ ಮಾಡಲು ಸಮರ್ಥರಾಗಿರುವೆವು ಎಂದರ್ಥ. 'ಶಕ್'ಧಾತುವಿಗೆಪರವಾಗಿ ವ್ಯತ್ಯಯದಿಂದ 'ಶಪ್' ಪ್ರತ್ಯಯ ಬಂದಿದೆ. 'ನಾಚಿಕೇತಂ ಶಕೇಮಹಿ' ಎಂಬ ಮಂತ್ರಭಾಗಕ್ಕೆ ಭಾಷ್ಯಕಾರರು ಹಾಗೇ ವ್ಯಾಖ್ಯಾನ ಮಾಡಿರುವರು. ಅದುದರಿಂದ ಪರಮಾತ್ಮನನ್ನು ಉಪಾಸಿಸುವುದು ಕಷ್ಟ ಎಂಬ ಬುದ್ಧಿಯಿಂದ ಹೆದರಬೇಕಾಗಿಲ್ಲ ಎಂದು ತಾತ್ಪರ್ಯ.

## ಭಾಷ್ಯಸಾರ

ಪರಮಾತ್ಮನು ಅಂತರ್ಯಾಮಿರೂಪದಲ್ಲಿ ಎಲ್ಲರ ಸಮೀಪದಲ್ಲಿರುವನು. ಎಲ್ಲ ಕರ್ಮಗಳಿಗೂ ಫಲಕೊಡುವನು. ಅಕ್ಷರಕ್ಕಿಂತ ಅಂದರೆ ಉತ್ತಮವಾದುದಕ್ಕಿಂತಲೂ ಉತ್ತಮನು. ಸಂಸಾರಸಾಗರವನ್ನು ದಾಟುವವರಿಗೆ ಉಪಾಯಭೂತನೂ ಆದ ಈ ಪರಮಾತ್ಮನನ್ನು ಉಪಾಸನೆಮಾಡಲು ನಾವು ಶಕ್ತರಾಗಿರುವೆವು. ಆದರೆ ಮುಂದೆ ಹೇಳುವ ರೀತಿಯಲ್ಲಿ ಇಂದ್ರಿಯಗಳನ್ನು ಜಯಿಸುವಲ್ಲಿ ನೀವು ಯತ್ನಶೀಲರಾಗಬೇಕು ಎಂದು 'ಯಃಸೇತುಃ' ಎಂಬುದರಿಂದ ತಿಳಿಸುತ್ತಾನೆ.

ಒಬ್ಬನೇ ಪರಮಾತ್ಮನು ಎಲ್ಲರ ಹೃದಯದಲ್ಲಿಯೂ ಅಂತರ್ಯಾಮಿಯಾಗಿರುವನು. ಇದನ್ನು ಅರಿಯದೆ ಕೆಲವರು 'ಇಂದ್ರಂ ಯಜಾಮಹೇ' 'ವರುಣಂ ಯಜಾಮಹೇ' ಎಂದು ಯಾಗ ಮಾಡುತ್ತಾರೆ. ಇಂದ್ರಾದಿಗಳಲ್ಲೂ ಅಂತರ್ಯಾಮಿಯಾಗಿದ್ದು ಅವರಿಗೂ ಇಷ್ಟಾರ್ಥಗಳನ್ನು ಪರಮಾತ್ಮನೇ ಕೊಡುತ್ತಾನೆ. 'ಯಃ ಸೇತುರೀಜಾನಾನಾಮ್' ಅಂದರೆ ಸೇತುವೆಯು ಒಂದು ದಡದಿಂದ ಮತ್ತೊಂದು ದಡವನ್ನು ಸೇರಿಸುತ್ತದೆ. ಅದರಂತೆ ಪರಮಾತ್ಮನು ಎಲ್ಲರಲ್ಲೂ ಅಂತರ್ಯಾಮಿಯಾಗಿದ್ದು ಕರ್ಮಫಲಗಳನ್ನು ಕೊಡುತ್ತಾನೆ ಎಂದು ತಾತ್ಪರ್ಯ.

ಪರಮಾತ್ಮನು ಅಕ್ಷರಬ್ರಹ್ಮನಿಗಿಂತಲೂ ಉತ್ತಮ ಎಂದರ್ಥ. ಅಥವಾ 'ಅಕ್ಷರಂ ಬ್ರಹ್ಮ ಯತ್ಪರಮ್'[2] ಎಂಬಲ್ಲಿ ಯತ್–ಪರಂ ಎಂಬುದು ಭಿನ್ನ–ಭಿನ್ನ ಪದಗಳು, ಇದರಿಂದ ಪರಬ್ರಹ್ಮನು ವಿಕಾರರಹಿತನು ಎಂದರ್ಥ. 'ಪಾರಂ ತಿತೀರ್ಷತಾಮ್' ಅಂದರೆ ಸಂಸಾರಸಾಗರದಲ್ಲಿ ಬಿದ್ದು ದುಃಖಿಸುತ್ತಾ ಪಾರಾಗಬೇಕೆಂದು ಬಯಸುವವರಿಗೆ ಭಯವಿಲ್ಲದ ಸಾಧನ ಪರಮಾತ್ಮ. ಇದರಿಂದ ಬೇರೆ ಉಪಾಯವನ್ನು ಆಶ್ರಯಿಸಿದವರಿಗೆ ಯಾವಾಗಲಾದರೂ ಭಯ ಉಂಟಾಗಬಹುದು. ಪರಮಾತ್ಮನನ್ನೇ ನಂಬಿದವರಿಗೆ ಯಾವಾಗಲೂ ಭಯವಿಲ್ಲ ಎಂದು ಸೂಚಿತವಾಗುತ್ತದೆ. ಅಥವಾ ಸಂಸಾರಸಾಗರವನ್ನು ದಾಟಬಯಸುವವರಿಗೆ ಇವನು ನಿರ್ಭಯವಾದ ತೀರದಂತಿದ್ದಾನೆ ಎಂದು ಹೇಳಬಹುದು. ಮುಮುಕ್ಷುಗಳು ಈ ಪರಮಾತ್ಮನನ್ನು ಹೊಂದಿ ಅಭಯವನ್ನು ಹೊಂದುತ್ತಾರೆ ಎಂದು ತಾತ್ಪರ್ಯ. ಸಂಸಾರವನ್ನು ದಾಟಿಸುವಂತಹ ನಾಚಿಕೇತಾಗ್ನಿಯನ್ನು ಚಯನಮಾಡಿ ಜ್ಞಾನದ ಮೂಲಕ ಪರಮಾತ್ಮತತ್ತ್ವವನ್ನು ತಿಳಿಯಲು

---

1. ವ್ಯತ್ಯಯವಾಗಿ—'ಸ್ವಾದಿಭ್ಯಃ ಶ್ನುಃ' ಎಂಬುದಕ್ಕೆ ಬದಲಾಗಿ 'ಭ್ವಾದಿ' ವಿಕರಣ ಪ್ರತ್ಯಯವು ಬಂದಿದೆ.
2. ಅಕ್ಷರಂಬ್ರಹ್ಮಯತ್ಪರಮ್ಃ—'ಯಃ ಸೇತುಃ' ಎಂಬಲ್ಲಿ ಸೇತು ಶಬ್ದವು ಪುಲ್ಲಿಂಗ, ಸೇತುವೆಯೆಂದು ರೂಪಿಸಲ್ಪಟ್ಟಿರುವ ಪರಮಾತ್ಮನನ್ನು 'ಯತ್' ಎಂಬ ನಪುಂಸಕಲಿಂಗಶಬ್ದದಿಂದ ಸೂಚಿಸಿದೆ. ಸರ್ವನಾಮಶಬ್ದಗಳಿಗೆ ಉದ್ದೇಶ್ಯಪ್ರತಿನಿರ್ದೇಶಗಳಲ್ಲಿ ಲಿಂಗವ್ಯತ್ಯಾಸದೋಷವಿಲ್ಲ ಅಥವಾ ವೇದದಲ್ಲಿ ಹೇಳಿರುವುದರಿಂದ ದೋಷವಿಲ್ಲ ಎಂದಾಗಲಿ ತಿಳಿಯಬೇಕು.

ನಾವು ಶಕ್ತರಾಗಿದ್ದೇವೆ. ಆದುದರಿಂದ 'ಕ ಇತ್ಥಾ ವೇದ ಯತ್ರ ಸಃ' ಎಂದು ಹೇಳಿದ 'ಪರಮಾತ್ಮನ ಉಪಾಸನೆ, ಅವನನ್ನು ತಿಳಿಯುವಿಕೆ ಮತ್ತು ಹೊಂದುವಿಕೆ ಸಾಧ್ಯವಿಲ್ಲ' ಎಂದು ನಿರಾಶೆ ಹೊಂದಬೇಕಾಗಿಲ್ಲ ಎಂದು ತಾತ್ಪರ್ಯ.

ಅಥವಾ ಮುಂದೆ ತಿಳಿಸುವ ಇಂದ್ರಿಯನಿಗ್ರಹ ಮಾಡುವ ರೀತಿ ಕಷ್ಟ ಎಂದು ಕೆಲವರು ಅದಕ್ಕೆ ಪ್ರವರ್ತಿಸದೆ ಇರಬಹುದು. ಅಂತಹ ತಿಳುವಳಿಕೆಯಿಲ್ಲದವರನ್ನೂ ಅದರಲ್ಲಿ ಪ್ರವರ್ತಿಸುವಂತೆ ಮಾಡಲು 'ಋತಂ' ಎಂದು ಹೇಳುತ್ತಾನೆ. ತನ್ನ ಹೊಲದಲ್ಲಿ 'ನಿಧಿಯಿದೆ' ಎಂಬುದನ್ನು ಅರಿತ ಹೊಲದೊಡೆಯನು ತಡಮಾಡದೆ ಆ ನಿಧಿಯನ್ನು ಪಡೆಯಲು ಯತ್ನಶೀಲನಾಗುತ್ತಾನೆ. ಮತ್ತು ಅಧಿಕಶ್ರಮವನ್ನು ಸಹಿಸುತ್ತಾನೆ. ಅಂತೆಯೇ ತನ್ನ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು ತನ್ನ ಹೃದಯದಲ್ಲಿಯೇ ಇರುವ ಬ್ರಹ್ಮವೆಂಬ ನಿಧಿಯನ್ನು, ಪಡೆಯಲು ಯಾವ ಜೀವನು ತಾನೆ ಆತುರಪಡಲಾರ ? ಇದರಿಂದ 'ಪರಮಾತ್ಮನು ಪ್ರತಿ ಜೀವಾತ್ಮನಲ್ಲೂ ಇದ್ದಾನೆ' ಎಂಬುದನ್ನು ಜ್ಞಾಪಿಸಿದರೆ ಎಲ್ಲ ಜೀವಾತ್ಮರೂ ಕೂಡಲೇ ಯತ್ನಶೀಲರಾಗುತ್ತಾರೆ. ಅದಕ್ಕಾಗಿ ಮೊದಲು ಶರೀರದಲ್ಲಿರುವ ಹೃದಯಗುಹೆಯಲ್ಲಿಯೇ 'ಬ್ರಹ್ಮನಿಧಿಯಿದೆ' ಎಂದು ಜ್ಞಾಪಿಸುತ್ತೇನೆ ಎಂಬ ಅಭಿಪ್ರಾಯದಿಂದ 'ಋತಮ್' ಎಂದು ಹೇಳುತ್ತಾನೆ ಎಂದು ಹೇಳಿದಂತಾಗುತ್ತದೆ.

ಇಂತಹ ನಿಧಿಯನ್ನು ಪಡೆಯಲು ಜೀವರಾದ ನಾವೆಲ್ಲರೂ ಅರ್ಹರಾಗಿದ್ದೇವೆ ಎಂದು ಎರಡನೇ ಮಂತ್ರದಲ್ಲಿ ಹೇಳಿ, ಅದನ್ನು ಪಡೆಯಲು ಮುಂದೆ ಹೇಳುವ ಉಪಾಯದಲ್ಲಿ ಯತ್ನಶೀಲರಾಗಿ ಎಂದು ತಿಳಿಸುತ್ತಾನೆ ಎಂದು ಸುಬೋಧಿನೀಕಾರರು ವಿವರಿಸಿದ್ದಾರೆ.



## ಮಂತ್ರ ೩

**आत्मानं रथिनं विद्धि शरीरं रथमेव च (तु) ।**
**बुद्धिं तु सारथिं विद्धि मनः प्रग्रहमेव च ॥**

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ (ತು) ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥

### ಪ್ರತಿಪದಾರ್ಥ

ಆತ್ಮಾನಮ್—ಜೀವಾತ್ಮನನ್ನು, ರಥಿನಮ್—ರಥಿಕನೆಂದು, ವಿದ್ಧಿ—ತಿಳಿ, ಶರೀರಂ—ಶರೀರವನ್ನು, ಚ–ಮತ್ತು, ರಥಮೇವ—ರಥವೆಂದೇ, ವಿದ್ಧಿ—ತಿಳಿ, ಬುದ್ಧಿಂ ತು—(ನಿಶ್ಚಯರೂಪವಾದ) ಜ್ಞಾನವನ್ನು, ಸಾರಥಿಮ್—ಸಾರಥಿ ಎಂದು, ವಿದ್ಧಿ—ತಿಳಿ, ಚ—ಮತ್ತು, ಮನಃ—ಮನಸ್ಸನ್ನು, ಪ್ರಗ್ರಹಮೇವ—ಕಡಿವಾಣವೆಂದೇ, ವಿದ್ಧಿ—ತಿಳಿ.

### ತಾತ್ಪರ್ಯ

ಇಲ್ಲಿಂದ ಆರು ಮಂತ್ರಗಳಲ್ಲಿ ವಿಷ್ಣುವಿನ ಪರಮಪದಪ್ರಾಪ್ತಿಸಾಧನವನ್ನು ಉಪದೇಶಿಸುತ್ತಾನೆ. (ಮೋಕ್ಷದತ್ತಹೋಗುವಲ್ಲಿ) ಜೀವಾತ್ಮನೇ ರಥಿಕ, ಶರೀರವೇ ರಥ, ಜ್ಞಾನವೇ ಸಾರಥಿ, ಮನಸ್ಸೇ ಕಡಿವಾಣವೆಂದು ತಿಳಿಯಬೇಕು.

### ರಂಗರಾಮಾನುಜಭಾಷ್ಯಮ್

'ಆತ್ಮಾನಂ ರಥಿನಂ ವಿದ್ಧಿ' ಇತ್ಯಾದಿನಾ, 'ಸೋಽಧ್ವನಃ ಪಾರಮಾಪ್ನೋತಿ' ಇತ್ಯಂತೇನ, ಸಂಸಾರಾಧ್ವಪಾರಭೂತವೈಷ್ಣವಪರಮಪದಪ್ರಾಪ್ತಿ ಪರಿಕರಮುಪದಿಶನ್ ಪ್ರಾಪ್ತೃರೂಪಮುಪದಿಶತಿ—ಆತ್ಮಾನಂ ರಥಿನಂ ವಿದ್ಧಿ । ಶರೀರಾಧಿಷ್ಠಾತಾರಂ ರಥಿನಂ ವಿದ್ಧಿ । ಶರೀರಂ ರಥಮೇವ ಚ । ಶರೀರಮೇವ ಚ ರಥಂ ವಿದ್ಧೀತ್ಯರ್ಥಃ । ಬುದ್ಧಿಂ ತು ಸಾರಥಿಂ ವಿದ್ಧಿ । ಬುದ್ಧಿಶಬ್ದಿತಾಧ್ಯವಸಾಯಾಧೀನತ್ವಾತ್ ದೇಹಪ್ರವೃತ್ತೇಃ ತಸ್ಯಾಃ ಸಾರಥಿತ್ವಮಿತಿ ಭಾವಃ । ಮನಃ ಪ್ರಗ್ರಹಮೇವ ಚ । ಪ್ರಗ್ರಹಃ–ರಶನಾ ॥

### ಅನುವಾದ

'ಆತ್ಮಾನಂ ರಥಿನಂ ವಿದ್ಧಿ' ಎಂದು ಆರಂಭಿಸಿ 'ಸೋಽಧ್ವನಃ ಪಾರಮಾಪ್ನೋತಿ' ಎಂಬ ಮಂತ್ರಪೂರ್ತಿ ಸಂಸಾರಮಾರ್ಗಕ್ಕೆ ಪಾರಭೂತನಾದ ವಿಷ್ಣುವಿನ ಪರಮಪದವನ್ನು ಹೊಂದುವವರೆಗೂ ಇರುವ ಪರಿಕರಗಳನ್ನು ಉಪದೇಶಿಸುತ್ತಾ ಜೀವಾತ್ಮಸ್ವರೂಪವನ್ನು ಉಪದೇಶಿಸುತ್ತಾನೆ. 'ಆತ್ಮಾನಂ ರಥಿನಂ ವಿದ್ಧಿ' । ಶರೀರದಲ್ಲಿ ನೆಲೆಸಿರುವ ಜೀವನನ್ನು ರಥಿಕನೆಂದು ತಿಳಿ. 'ಶರೀರಂ ರಥಮೇವ ಚ' ಈ ಶರೀರವನ್ನೇ ರಥವೆಂದು ತಿಳಿ. 'ಬುದ್ಧಿಂ ತು ಸಾರಥಿಂ ವಿದ್ಧಿ'–ಬುದ್ಧಿಶಬ್ದದಿಂದ ಹೇಳುವ ನಿಶ್ಚಯಾತ್ಮಕವಾದ ಜ್ಞಾನವೇ ಶರೀರದ ಪ್ರವೃತ್ತಿಗೆ ಕಾರಣವಾಗಿರುವುದರಿಂದ ಅದನ್ನು 'ಸಾರಥಿ' ಎಂದೂ ಮನಸ್ಸೇ ಕಡಿವಾಣ ಎಂದು ಹೇಳಿದೆ ಎಂದು ತಾತ್ಪರ್ಯ. ಪ್ರಗ್ರಹಃ–ಹಗ್ಗ.

## ಭಾಷ್ಯಸಾರ

ಈ ಮಂತ್ರದಿಂದ 'ದುರ್ಗಂ ಪಥಸ್ತತ್ಕವಯೋ ವದಂತಿ' ಎಂಬ ಹದಿನಾಲ್ಕನೆಯ ಮಂತ್ರದವರೆಗೂ ರಥ ಮುಂತಾದ ರೂಪದಲ್ಲಿ ಕಲ್ಪಿಸಿದ ಉಪಾಸನಾ ರೀತಿಯನ್ನು ವಿವರಿಸುತ್ತಾ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳದಿದ್ದಲ್ಲಿ ಅನರ್ಥವುಂಟಾಗುವುದು. ಆದುದರಿಂದ ಮುಂದೆ ಹೇಳುವ ರೀತಿಯಲ್ಲಿ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಬೇಕೆಂದು 'ಆತ್ಮಾನಮ್' ಎಂಬುದರಿಂದ ದೃಢಪಡಿಸುತ್ತಾನೆ.

ರಥಿಕನಿಗೆ ರಥ ಬೇರೊಂದು ಊರಿಗೆ ಹೋಗಲು ಸಾಧನ. ಅದರಂತೆ ಶರೀರವು ಭೋಗ-ಮೋಕ್ಷಗಳನ್ನು ಪಡೆಯಲು ಸಾಧನವಾಗಿರುವುದರಿಂದ ಶರೀರವನ್ನು ರಥವೆಂದು ಹೇಳಿದ್ದಾರೆ. ಈ ಶರೀರಕ್ಕೆ ಆತ್ಮನೇ ಒಡೆಯನು. ಈತನು ತನ್ನ ಕರ್ಮಗಳಿಂದ ಈ ಶರೀರವನ್ನು ಪಡೆದಿರುವನು. ಈ ಶರೀರವೆಂಬ ರಥವನ್ನು ಹತ್ತಿ ಆತ್ಮನು ಭೋಗವನ್ನಾಗಲಿ, ಮೋಕ್ಷವನ್ನಾಗಲೀ ಪಡೆಯುತ್ತಾನೆ. ಆದ್ದರಿಂದ ಈ ಆತ್ಮನೇ ರಥಿಕ ಎಂದು ತಿಳಿ. ಮುಂದೆ ಮಾಡಬೇಕಾದುದನ್ನು ನಿಶ್ಚಯಿಸುವುದು ಬುದ್ಧಿ. ಈ ನಿಶ್ಚಯಾತ್ಮಕಬುದ್ಧಿಯನ್ನು 'ಅಧ್ಯವಸಾಯ ಬುದ್ಧಿ' ಎಂದು ಹೇಳುತ್ತಾರೆ. ಈ ಬುದ್ಧಿಯಿಂದ ಪ್ರೇರೇಪಿಸಲ್ಪಟ್ಟು ಇಂದ್ರಿಯಗಳು ವಿಷಯಗಳತ್ತ ಧಾವಿಸುತ್ತವೆ. ಇಂದ್ರಿಯಗಳಿಗೆ ಮನಸ್ಸೇ ಪ್ರೇರಕ. ಈ ನಿಶ್ಚಯಾತ್ಮಕಬುದ್ಧಿಯು ಮನಸ್ಸಿನ ಮೂಲಕ ಪ್ರೇರಕವಾಗುತ್ತದೆ. ಆದುದರಿಂದ ಬುದ್ಧಿಯನ್ನು ಸಾರಥಿ ಎಂದು ಹೇಳುತ್ತಾರೆ. ಮನಸ್ಸೇ ಲಗಾಮು ಅಂದರೆ ಹಗ್ಗ. ಹಗ್ಗದಿಂದ ಕಟ್ಟಲ್ಪಟ್ಟ ಕುದುರೆಗಳನ್ನು ಮಾತ್ರ ಸಾರಥಿ ನಿಯಂತ್ರಿಸಬಲ್ಲನು. ಅದರಂತೆ ಮನಸ್ಸೆಂಬ ಲಗಾಮಿನ ಮೂಲಕ ಇಂದ್ರಿಯಗಳೆಂಬ ಕುದುರೆಗಳನ್ನು ಬುದ್ಧಿಯೆಂಬ ಸಾರಥಿಯು ತನ್ನ ಅಧೀನದಲ್ಲಿಟ್ಟುಕೊಳ್ಳಬಲ್ಲದು. ಆದುದರಿಂದ ಮನಸ್ಸನ್ನು ಲಗಾಮು ಎಂದು ತಿಳಿ ಎಂದು ರೂಪಿಸಿದೆ.



# ಮಂತ್ರ ೪

**इन्द्रियाणि हयानाहुः विषयांस्तेषु गोचरान् ।**
**आत्मेन्द्रियमनोयुक्तं भोक्तेत्याहुर्मनीषिणः ॥**

ಇಂದ್ರಿಯಾಣಿ ಹಯಾನಾಹುಃ ವಿಷಯಾಂಸ್ತೇಷು
ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇ
ತ್ಯಾಹುರ್ಮನೀಷಿಣಃ ॥

## ಪ್ರತಿಪದಾರ್ಥ

ಇಂದ್ರಿಯಾಣಿ—ಕಣ್ಣುಮೊದಲಾದ ಇಂದ್ರಿಯಗಳನ್ನು, ಹಯಾನಾಹುಃ—ಕುದುರೆಗಳೆಂದು ಹೇಳುತ್ತಾರೆ. ತೇಷು—ಅವುಗಳಲ್ಲಿ, ವಿಷಯಾನ್-ಶಬ್ದಾದಿವಿಷಯಗಳನ್ನು, ಗೋಚರಾನ್—ಮಾರ್ಗಗಳೆಂದು ಹೇಳುತ್ತಾರೆ. ಆತ್ಮೇಂದ್ರಿಯಮನೋಯುಕ್ತಮ್-ದೇಹ, ಇಂದ್ರಿಯ, ಮನಸ್ಸುಗಳಿಂದ ಕೂಡಿದ (ಜೀವಮ್—ಜೀವನನ್ನು). ಮನೀಷಿಣಃ-ಬ್ರಹ್ಮಜ್ಞಾನಿಗಳು ಭೋಕ್ತಾ ಇತಿ-ಸುಖ-ದುಃಖಗಳನ್ನು ಅನುಭವಿಸುವವನು ಎಂದು ಆಹುಃ—ಹೇಳುತ್ತಾರೆ.

## ತಾತ್ಪರ್ಯ

ಕಣ್ಣು ಕಿವಿ ಮೊದಲಾದ ಇಂದ್ರಿಯಗಳೇ ಕುದುರೆಗಳು, ಶಬ್ದಾದಿವಿಷಯಗಳೇ ಮಾರ್ಗವು, ದೇಹ, ಇಂದ್ರಿಯ ಮನಸ್ಸುಗಳಿಂದ ಕೂಡಿದ ಜೀವಾತ್ಮನೇ ಸುಖ-ದುಃಖಾದಿಗಳನ್ನು ಅನುಭವಿಸುವ ಸಂಸಾರಿ ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ.

## ರಂಗರಾಮಾನುಜಭಾಷ್ಯಮ್

ಇಂದ್ರಿಯಾಣಿ ಹಯಾನಾಹುಃ—ಸ್ಪಷ್ಟೋಽರ್ಥಃ। ವಿಷಯಾಂಸ್ತೇಷು ಗೋಚರಾನ್—ತೇಷು ಇಂದ್ರಿಯೇಷು ಹಯತ್ವೇನ ರೂಪಿತೇಷು ಗೋಚರಾನ್—ಮಾರ್ಗಾನ್ ಶಬ್ದಾದಿವಿಷಯಾನ್ ವಿದ್ಧಿ (ಆಹುರಿ)ತ್ಯರ್ಥಃ। ರಥಸಾರಥಿಹಯಪ್ರಗ್ರಹತ್ವೇನ (ರಥಹಯಪ್ರಗ್ರಹಸಾರಥಿತ್ವೇನ?) ರೂಪಿತಾನಾಂ ಶರೀರೇಂದ್ರಿಯಮನೋಬುದ್ಧೀನಾಮಭಾವೇ, ರಥಿತ್ವೇನ ರೂಪಿತಸ್ಯ, ಉದಾಸೀನಸ್ಯ ಆತ್ಮನೋ ಗಮನರೂಪಲೌಕಿಕ-ವೈದಿಕಕ್ರಿಯಾಕರ್ತೃತ್ವಮೇವ ನಾಸ್ತೀತ್ಯೇತತ್, ಸುಪ್ರಸಿದ್ಧತ್ವೇನ ದರ್ಶಯತಿ ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ। ಆತ್ಮಶಬ್ದೋ ದೇಹಪರಃ। ಮನಃಶಬ್ದಸ್ತತ್ಕಾರ್ಯಬುದ್ಧೇರಪ್ಯುಪಲಕ್ಷಕಃ; ಪೂರ್ವಮಂತ್ರೇ ಬುದ್ಧೇರಪಿ ಸಾರಥಿತ್ವೇನ ನಿರ್ದಿಷ್ಟತ್ವಾತ್। ಭೋಕ್ತಾ—ಕರ್ತೃತ್ವ-ಭೋಕ್ತೃತ್ವಾದಿಮಾನ್ ಇತ್ಯರ್ಥಃ। ನ ಹಿ ಕೇವಲಸ್ಯಾತ್ಮನಃ ಕರ್ತೃತ್ವಂ ಭೋಕ್ತೃತ್ವಂ ವಾಽಸ್ತೀತಿ ಭಾವಃ॥

## ಅನುವಾದ

ಇಂದ್ರಿಯಾಣಿ ಹಯಾನಾಹುಃ- (ಇಂದ್ರಿಯಗಳನ್ನು ಕುದುರೆಗಳೆಂದು ಹೇಳುವರು) ಅರ್ಥ ಸ್ಪಷ್ಟವಾಗಿದೆ. ವಿಷಯಾಂಸ್ತೇಷು ಗೋಚರಾನ್—ಕುದುರೆಗಳೆಂದು ಹೇಳಿದ ಇಂದ್ರಿಯಗಳಿಗೆ ಗೋಚರಾನ್—ಮಾರ್ಗಗಳನ್ನು ಶಬ್ದಾದಿವಿಷಯಗಳೆಂದು ತಿಳಿ. ರಥ, ಸಾರಥಿ

ಕುದುರೆ, (ಲಗಾಮು) ಹಗ್ಗಗಳೆಂದು ಹೇಳಿದ ಶರೀರ–ಇಂದ್ರಿಯ–ಮನಸ್ಸು–ಬುದ್ಧಿಗಳು ಇಲ್ಲದಿದ್ದಲ್ಲಿ ರಥಿಕನೆಂದು ಹೇಳಿದ ಉದಾಸೀನನಾದ ಆತ್ಮನಿಗೆ ಗಮನರೂಪವಾದ ಲೌಕಿಕ–ವೈದಿಕಕರ್ಮಗಳ ಕರ್ತೃತ್ವವೇ ಇಲ್ಲವೆಂದು ಪ್ರಸಿದ್ಧವಾಗಿದೆ ಎಂಬುದನ್ನು ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ಎಂಬುದರಿಂದ ವಿವರಿಸುತ್ತಾನೆ. 'ಆತ್ಮ' ಶಬ್ದವು ಶರೀರಪರವಾದುದು. ಮನಃ ಎಂಬ ಶಬ್ದವು ಅದರ ಕಾರ್ಯವಾದ ಬುದ್ಧಿಗೂ ಸೂಚಕ. ಹಿಂದಿನ ಮಂತ್ರದಲ್ಲಿ ಬುದ್ಧಿಯನ್ನು ಸಾರಥಿ ಎಂದು ಹೇಳಲಾಗಿದೆ. ಭೋಕ್ತಾ–ಕರ್ತೃತ್ವ ಭೋಕ್ತೃತ್ವವುಳ್ಳವನು ಎಂದರ್ಥ. ಕೇವಲ ಜೀವಾತ್ಮನಿಗೆ ಕರ್ತೃತ್ವ–ಭೋಕ್ತೃತ್ವಗಳು ಇರುವುದಿಲ್ಲ ಎಂದು ತಾತ್ಪರ್ಯ.

### ಭಾಷ್ಯಸಾರ

ಚಲಿಸುವ ಕುದುರೆಗಳಿಂದ ರಥ ಮತ್ತೊಂದೆಡೆಗೆ ಹೋಗಬಲ್ಲದು. ಹಾಗೇ ತಮ್ಮ ತಮ್ಮ ವ್ಯಾಪಾರಗಳಲ್ಲಿ ಆಸಕ್ತವಾಗಿರುವ ಇಂದ್ರಿಯಗಳಿಂದ ಈ ಶರೀರವು ಭೋಗ–ಮೋಕ್ಷಗಳತ್ತ ಹೋಗಬಲ್ಲದು. ರಥವನ್ನು ಸಾರಥಿ ಒಯ್ಯುವಂತೆ ಅಧ್ಯವಸಾಯರೂಪವಾದ ಬುದ್ಧಿಯು ಶರೀರವೆಂಬ ರಥವನ್ನು ಒಯ್ಯುತ್ತದೆ. ಆದುದರಿಂದ ಇಂದ್ರಿಯಗಳನ್ನು ಕುದುರೆಗಳೆಂದು ರೂಪಿಸಿದ್ದಾರೆ. ಕುದುರೆಗಳು ಹೋಗಲು ಮಾರ್ಗ ಬೇಕು. ಮಾರ್ಗದ ಮೂಲಕ ಕುದುರೆಗಳು ರಥವನ್ನು ಒಯ್ಯುವಂತೆ ವಿಷಯಗಳತ್ತ ಜ್ಞಾನ ಮತ್ತು ಕರ್ಮೇಂದ್ರಿಯಗಳು ಶರೀರವನ್ನು, ಬೇರೊಂದೆಡೆಗೆ ಒಯ್ಯುವುದರಿಂದ ಶಬ್ದಾದಿವಿಷಯಗಳನ್ನು ಮಾರ್ಗಗಳೆಂದು ಹೇಳುತ್ತಾರೆ. ಶಬ್ದಾದಿವಿಷಯಗಳೇ ಶರೀರವೆಂಬ ರಥದ ಸಂಚಾರಪ್ರದೇಶಗಳು ಎಂದು ತಾತ್ಪರ್ಯ. ಶರೀರ–ಇಂದ್ರಿಯ ಮುಂತಾದ ಪರಿಕರಗಳಿಂದ ಕೂಡಿದ ಆತ್ಮನಿಗೆ ಭೋಕ್ತೃತ್ವವುಂಟು ಇಲ್ಲದಿದ್ದರೆ ಇಲ್ಲ. ಆದುದರಿಂದ ದೇಹವನ್ನು ರಥವೆಂದು ಆತ್ಮವನ್ನು ರಥಿಕನೆಂದು ರೂಪಿಸಿರುವುದು ಉಚಿತವಾಗಿದೆ ಎಂದು 'ಆತ್ಮಾ' ಎಂಬುದರಿಂದ ಸೂಚಿಸುತ್ತಾನೆ. ಶರೀರ-ಜ್ಞಾನ ಮತ್ತು ಕರ್ಮೇಂದ್ರಿಯಗಳಾದ ಕಣ್ಣು ಮತ್ತು ಮಾತು ಮುಂತಾದ ಇಂದ್ರಿಯಗಳು ಸಂಕಲ್ಪ–ವಿಕಲ್ಪ ರೂಪವಾದ ಮನಸ್ಸು, ಮನಸ್ಸಿನಿಂದ ಅಧ್ಯವಸಾಯವು ಲಕ್ಷಿಸಲ್ಪಡುತ್ತದೆ. ಅಧ್ಯವಸಾಯವಿಲ್ಲದೇ ಸಂಕಲ್ಪ ಮಾತ್ರದಿಂದ ಪ್ರಯತ್ನ ಉಂಟಾಗುವುದಿಲ್ಲ. ಈ ಶರೀರ–ಇಂದ್ರಿಯ–ಮನಸ್ಸು–ಅಧ್ಯವಸಾಯಗಳೊಡನೆ ಕೂಡಿದ ಆತ್ಮವನ್ನೇ 'ಭೋಕ್ತಾ' ಎಂದು ವಿವೇಕಿಗಳು ಹೇಳುತ್ತಾರೆ.ಶರೀರ–ಇಂದ್ರಿಯ ಮುಂತಾದ ಪರಿಕರಗಳ ಸಂಬಂಧವಿಲ್ಲದ ಕೇವಲ ಆತ್ಮನಿಗೆ ಜ್ಞಾತೃತ್ವವಿದ್ದರೂ, ಕರ್ತೃತ್ವ–ಭೋಕ್ತೃತ್ವಗಳು ಇರುವುದಿಲ್ಲ ಎಂದು ತಾತ್ಪರ್ಯ.



## ಮಂತ್ರ ೫

**यस्त्वविज्ञानवान् भवत्ययुक्तेन मनसा सदा (ह) ।**
**तस्येन्द्रियाण्यवश्यानि दुष्टाश्वा इव सारथेः ॥**

ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ (ಹ)।
ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ||

### ಪ್ರತಿಪದಾರ್ಥ

ಯಸ್ತು-ಯಾವನು, ಸದಾ-ಯಾವಾಗಲೂ, ಅಯುಕ್ತೇನ-ದೃಢವಲ್ಲದ, ಮನಸಾ-ಮನಸ್ಸಿನಿಂದ (ಕೂಡಿಕೊಂಡಿರುವನೋ, ಅವನು), ಅವಿಜ್ಞಾನವಾನ್-ವಿವೇಕವಿಲ್ಲದವನಾಗಿ, ಭವತಿ-ಆಗುವನು, ಸಾರಥೇಃ-ಸಾರಥಿಗೆ, ದುಷ್ಟಾಶ್ವಾ ಇವ-ತುಂಟಕುದುರೆಗಳು ಹೇಗೆ ವಶವಾಗುವುದಿಲ್ಲವೋ ಹಾಗೆ, ತಸ್ಯ-ಅವನಿಗೆ ಇಂದ್ರಿಯಾಣಿ-ಇಂದ್ರಿಯಗಳು, ಅವಶ್ಯಾನಿ-ವಶವಾಗುವುದಿಲ್ಲ.

### ತಾತ್ಪರ್ಯ

ಯಾವನ ಮನಸ್ಸು ವಶದಲ್ಲಿರುವುದಿಲ್ಲವೋ ಅವನು ದೇಹಾತ್ಮಜ್ಞಾನವಿವೇಕಶೂನ್ಯನಾಗಿ ಆಗುವನು. ಸಾರಥಿಗೆ ದುಷ್ಟಕುದುರೆಗಳು ಹೇಗೆ ವಶದಲ್ಲಿರುವುದಿಲ್ಲವೋ ಹಾಗೆ ಅವನ ಇಂದ್ರಿಯಗಳು ವಶದಲ್ಲಿರುವುದಿಲ್ಲ.

ರಂಗರಾಮಾನುಜಭಾಷ್ಯ ಮುಂದಿನ ಮಂತ್ರದ ಭಾಷ್ಯದೊಡನೆ ಇದೆ.

### ಭಾಷ್ಯಸಾರ

ಈ ಶರೀರವೆಂಬ ರಥದಲ್ಲಿರುವ ರಥಿಕನು ಅಂದರೆ ಜೀವನು ವಿವೇಕಿಯಾಗಿರಬೇಕು. ನಿಶ್ಚಯವುಳ್ಳವನಾಗಬೇಕು. ಅಧ್ಯವಸಾಯವಿಲ್ಲದೆ ಅವಿವೇಕಿಯಾದರೆ ಅವನ ಮನಸ್ಸು ಯಾವಾಗಲೂ ಹತೋಟಿಯಲ್ಲಿರುವುದಿಲ್ಲ. ದುಷ್ಟಕುದುರೆಗಳು ಸಾರಥಿಗೆ ಹೇಗೆ ವಶವಾಗುವುದಿಲ್ಲವೋ ಹಾಗೆ ಇವನ ಇಂದ್ರಿಯಗಳೆಂಬ ಕುದುರೆಗಳು ಇವನ ವಶವಾಗುವುದಿಲ್ಲ. ಅಂದರೆ ಇಂದ್ರಿಯಗಳೆಂಬ ಕುದುರೆಗಳು ಯಾವಾಗಲೂ ಕೆಟ್ಟಮಾರ್ಗದಂತಿರುವ ಶಬ್ದಾದಿವಿಷಯಗಳನ್ನೇ ಗ್ರಹಿಸುತ್ತವೆ. ದುಷ್ಟಕುದುರೆಗಳಿಗೆ ಸರಿಯಾದ ಲಗಾಮು ಇಲ್ಲದಿದ್ದಲ್ಲಿ ಅವು ಸಾರಥಿಗೆ ವಶವಾಗದೆ ತಮ್ಮ ಇಚ್ಛೆ ಬಂದಂತೆ ಓಡಿ ರಥವನ್ನು ರಥಿಕನನ್ನೂ ಹೇಗೆ ಹಳ್ಳದಲ್ಲಿ ಬೀಳಿಸುವುದೋ ಹಾಗೆ ಮನಸ್ಸು ಹತೋಟಿಯಿಲ್ಲದವನ ಇಂದ್ರಿಯಗಳು ವಶವಾಗದೆ ಶಬ್ದಾದಿವಿಷಯಗಳಲ್ಲೇ ಆಸಕ್ತವಾಗಿ ಈ ಜೀವನನ್ನು ಸಂಸಾರವೆಂಬ ಹಳ್ಳದಲ್ಲಿ ಬೀಳಿಸುತ್ತವೆ ಎಂದು ತಾತ್ಪರ್ಯ.



# ಮಂತ್ರ ೬

**यस्तु विज्ञानवान् भवति युक्तेन मनसा सह(दा) ।**
**तस्येन्द्रियाणि वश्यानि सदश्वा इव सारथेः ॥**

ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸಹ (ದಾ)।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ||

### ಪ್ರತಿಪದಾರ್ಥ

ಯಸ್ತು — ಯಾವನು, ಸದಾ — ಯಾವಾಗಲೂ, ಯುಕ್ತೇನ — ದೃಢವಾದ, ಮನಸಾ — ಮನಸ್ಸಿನಿಂದ ಕೂಡಿದವನಾಗಿರುವನೋ (ಅವನು), ವಿಜ್ಞಾನವಾನ್ — ದೇಹಾತ್ಮಜ್ಞಾನವಿವೇಕಿಯಾಗಿ, ಭವತಿ–ಆಗುತ್ತಾನೆ, ಸಾರಥೇಃ–ಸಾರಥಿಗೆ, ಸದಶ್ವಾ ಇವ — ಒಳ್ಳೆಯ ಕುದುರೆಗಳು ವಶದಲ್ಲಿರುವಂತೆ, ತಸ್ಯ — ಅವನಿಗೆ, ಇಂದ್ರಿಯಾಣಿ — ಇಂದ್ರಿಯಗಳು. ವಶ್ಯಾನಿ (ಭವಂತಿ) — ವಶವಾಗುತ್ತವೆ.

### ತಾತ್ಪರ್ಯ

ಯಾವನು ಅನವರತ ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವನೋ ಅವನು ವಿವೇಕಿ ಎನಿಸಿಕೊಳ್ಳುತ್ತಾನೆ. ಸಾರಥಿಗೆ ಒಳ್ಳೆಯ ಕುದುರೆಗಳು ವಶವಾಗುವಂತೆ ವಿವೇಕಿಗೆ ಇಂದ್ರಿಯಗಳು ವಶದಲ್ಲಿ ಇರುತ್ತವೆ.

### ರಂಗರಾಮಾನುಜಭಾಷ್ಯಮ್

ಶರೀರಾದೇಃ ರಥತ್ವಾದಿರೂಪಣಸ್ಯ ಪ್ರಯೋಜನಮಾಹ—[ಯಸ್ತ್ವವಿಜ್ಞಾನವಾನ್ ಇತ್ಯಾದಿನಾ ಮಂತ್ರದ್ವಯೇನ ।] ಯಸ್ತ್ವವಿಜ್ಞಾನವಾನ್.... ಸದಶ್ವಾ ಇವ ಸಾರಥೇಃ ॥ ಲೋಕೇ ಹಿ ಸಮೀಚೀನಸಾರಥಿಪ್ರಗ್ರಹವತಃ ಅಶ್ವಾಃ ವಶೀಕೃತಾ ಭವಂತಿ ; ಏವಂ ಸಾರಥಿ ಪ್ರಗ್ರಹತ್ವೇನ ರೂಪಿತಯೋರ್ವಿಜ್ಞಾನಮನಸೋಃ ಸಾಮೀಚೀನ್ಯೇ, ಅಶ್ವತ್ವೇನ ರೂಪಿತಾನಿ ಇಂದ್ರಿಯಾಣಿ ವಶ್ಯಾನಿ ಭವಂತಿ ; ನ ಅನ್ಯಥಾ ಇತ್ಯರ್ಥಃ ॥

### ಅನುವಾದ

ಶರೀರ ಮುಂತಾದವುಗಳನ್ನು ರಥ ಮುಂತಾದ ರೀತಿಯಲ್ಲಿ ಹೇಳಿರುವುದಕ್ಕೆ ಪ್ರಯೋಜನವನ್ನು 'ಯಸ್ತ್ವವಿಜ್ಞಾನವಾನ್........' ಮೊದಲಾದ ಎರಡು (5 ಮತ್ತು 6ನೇ) ಮಂತ್ರಗಳಿಂದ ಹೇಳುತ್ತಾನೆ.

ಯಸ್ತ್ವವಿಜ್ಞಾನವಾನ್........ಸದಶ್ವಾ ಇವ ಸಾರಥೇಃ—ಲೋಕದಲ್ಲಿ ಸಮರ್ಥನಾದ ಸಾರಥಿ, ಮತ್ತು ಲಗಾಮುಗಳ ವಶದಲ್ಲಿರುವ ಕುದುರೆಗಳು ಹತೋಟಿಯಲ್ಲಿರುವುದನ್ನು ನೋಡಿರುವೆವು. ಅದರಂತೆಯೇ ಸಾರಥಿ–ಲಗಾಮುಗಳೆಂದು ಹೇಳಿದ ವಿಜ್ಞಾನ–ಮನಸ್ಸು ಗಳು ಸರಿಯಾಗಿದ್ದಲ್ಲಿ ಕುದುರೆಗಳೆಂದು ಹೇಳಿದ ಇಂದ್ರಿಯಗಳು ಹತೋಟಿಯಲ್ಲಿರುವುವು. ಹಾಗಿಲ್ಲದಿದ್ದಲ್ಲಿ ಇಲ್ಲ ಎಂದರ್ಥ.

## ಭಾಷ್ಯಸಾರ

ಕುಶಲನಾದ ಸಾರಥಿಯು ಲಗಾಮನ್ನು ಹಿಡಿದು ಕುದುರೆಗಳನ್ನು ಓಡಿಸುವಾಗ ಆ ಕುದುರೆಗಳು ಸಾರಥಿಯ ವಶದಲ್ಲಿದ್ದು ಸರಿಯಾದ ಮಾರ್ಗದಲ್ಲಿಯೇ ಹೋಗುತ್ತವೆ. ವಿವೇಕಿಯಾದ ರಥಿಕನೆನಿಸಿದ ಜೀವಾತ್ಮನು ತನ್ನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರುತ್ತಾನೆ. ಇದರಿಂದ ಅವನ ಬುದ್ಧಿಯೆಂಬ ಸಾರಥಿಗೆ ಇಂದ್ರಿಯಗಳೆಂಬ ಕುದುರೆಗಳು ವಶದಲ್ಲಿರುತ್ತವೆ. ಅವು ಸನ್ಮಾರ್ಗದಲ್ಲಿ ಹೋಗುತ್ತವೆ. ಆಗ ಅವನು ಈ ಸಂಸಾರಸಾಗರದಲ್ಲಿ ಬೀಳುವುದಿಲ್ಲ ಎಂದು ತಾತ್ಪರ್ಯ.



## ಮಂತ್ರ ೭

**यस्त्वविज्ञानवान् भवत्यमनस्कः सदाऽशुचिः ।**
**न स तत्पदमाप्नोति संसारं चाधिगच्छति ॥**

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ ।
ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥

### ಪ್ರತಿಪದಾರ್ಥ

ಯಸ್ತು—ಯಾವನು, ಅವಿಜ್ಞಾನವಾನ್—ತತ್ತ್ವಜ್ಞಾನವಿಲ್ಲದವನೂ, ಅಮನಸ್ಕಃ—ಮನಸ್ಸಮಾಧಾನವಿಲ್ಲದವನೂ, ಸದಾ—ಯಾವಾಗಲೂ, ಅಶುಚಿಃ—ಅಶುಚಿಯೂ, ಭವತಿ—ಆಗುತ್ತಾನೋ, ಸಃ—ಅವನು ತತ್ಪದಮ್—ಆ ಪರಬ್ರಹ್ಮದ ಸ್ಥಾನವನ್ನು (ಪರಮಪದವನ್ನು), ನಾಪ್ನೋತಿ—ಹೊಂದುವುದಿಲ್ಲ, ಚ—ಮತ್ತು, ಸಂಸಾರಂ—ಜನ್ಮಜರಾಮರಣವೆಂಬ ದುಃಖವನ್ನು, ಅಧಿಗಚ್ಛತಿ—ಹೊಂದುತ್ತಾನೆ.

### ತಾತ್ಪರ್ಯ

ಯಾವನು ಚಿದಚಿದೀಶ್ವರರೆಂಬ ತತ್ತ್ವಜ್ಞಾನವಿಲ್ಲದವನಾಗಿ, ಚಿತ್ತಸ್ವಾಧೀನವಿಲ್ಲದವನೂ ಯಾವಾಗಲೂ ಅಶುಚಿಯೂ ಆಗಿರುವನೋ, ಅವನು ಪರಮಾತ್ಮನ ನೆಲೆಯಾದ ವೈಕುಂಠ ಲೋಕವನ್ನು ಹೊಂದುವುದಿಲ್ಲ. ಮತ್ತು ಜನ್ಮಜರಾಮರಣರೂಪವಾದ ಸಂಸಾರವನ್ನು ಹೊಂದುತ್ತಾನೆ.

### ರಂಗರಾಮಾನುಜಭಾಷ್ಯಮ್

ಹಯತ್ವೇನ ರೂಪಿತಾನಾಮಿಂದ್ರಿಯಾಣಾಂ ವಶಿ ಕರಣತದಭಾವಯೋಃ ಪ್ರಯೋಜನಂ ದರ್ಶಯತಿ ಮಂತ್ರದ್ವಯೇನ—ಯಸ್ತ್ವವಿಜ್ಞಾನವಾನ್.... ಯಸ್ಮಾದ್ಭೂಯೋ ನ ಜಾಯತೇ॥ ಅಮನಸ್ಕಃ—ಅನಿಗೃಹೀತಮನಾಃ । ಅತ ಏವ ಅಶುಚಿಃ; ಸರ್ವದಾ ವಿಪರೀತಚಿಂತಾ ಪ್ರವಣತ್ವಾದಿತ್ಯರ್ಥಃ । ನ ಕೇವಲಂ ಜಿಗಮಿಷಿತಪ್ರಾಪ್ತ್ಯಭಾವಮಾತ್ರಮ್, ಪ್ರತ್ಯುತ ಗಹನಂ ಸಂಸಾರಕಾಂತಾರಮೇವ ಪ್ರಾಪಯತಿ(ಪ್ರಾಪ್ನೋತಿ ?) ಇತ್ಯರ್ಥಃ ॥

### ಅನುವಾದ

ಕುದುರೆಗಳೆಂದು ಹೇಳಿದ ಇಂದ್ರಿಯಗಳ ವಶದಲ್ಲಿರುವಿಕೆ, ಮತ್ತು ವಶದಲ್ಲಿಲ್ಲದಿರುವಿಕೆಗಳ ಪ್ರಯೋಜನವನ್ನು ಇದೇ ವಲ್ಲಿಯ ಏಳು ಮತ್ತು ಎಂಟನೇ ಮಂತ್ರಗಳಲ್ಲಿ ಹೇಳುತ್ತಾರೆ. ಯಸ್ತ್ವವಿಜ್ಞಾನವಾನ್........ಯಸ್ಮಾದ್ಭೂಯೋ ನ ಜಾಯತೇ. ಅಮನಸ್ಕಃ—ವಶವಾಗದ ಮನಸ್ಸುಳ್ಳವನು. ಅದರಿಂದಲೇ ಅಶುಚಿಃ—ಯಾವಾಗಲೂ ವಿರೋಧವಾದ ಭಾವನೆಗಳಲ್ಲಿಯೇ ಆಸಕ್ತನಾಗಿರುವ ಕಾರಣ ಅಶುಚಿಯು. ಈತನು ಹೊಂದಬೇಕಾದುದನ್ನು ಹೊಂದದೇ ಇರುವುದು ಮಾತ್ರವಲ್ಲ. ಗಹನವಾದ ಸಂಸಾರವೆಂಬ ಕಾಡನ್ನೇ ಸೇರುತ್ತಾನೆ ಎಂದರ್ಥ.

## ಭಾಷ್ಯಸಾರ

ಇಂದ್ರಿಯಗಳನ್ನು ವಶಗೊಳಿಸಿದವರಿಗೆ ಆಗುವ ಪ್ರಯೋಜನವನ್ನೂ; ವಶಗೊಳಿಸದವರಿಗೆ ಆಗುವ ಅನರ್ಥವನ್ನೂ 'ಯಸ್ತು....' ಎಂಬ ಏಳು ಮತ್ತು ಎಂಟನೇ ಮಂತ್ರಗಳಲ್ಲಿ ವಿವರಿಸುತ್ತಾನೆ.

ಅವಿವೇಕಿಯಾದ ರಥಿಕನು ಹತೋಟಿಯಿಲ್ಲದ ಮನಸ್ಸುಳ್ಳವನಾಗುವನು. ಮನಸ್ಸು ಹತೋಟಿಯಲ್ಲಿ ಇಲ್ಲದಿರುವುದರಿಂದಲೇ ಯಾವಾಗಲೂ ಇವನ ಮಾತು–ಮನಸ್ಸು–ಶರೀರಗಳೂ ಅಶುಚಿಯಾಗಿರುತ್ತವೆ. ಅಂದರೆ ಯಾವಾಗಲೂ ಶಬ್ದಾದಿವಿಷಯಗಳನ್ನೇ ಚಿಂತಿಸುತ್ತಿರುವನು. ಇದರಿಂದ ಈತನು ಹೊಂದಬೇಕಾದ ಪರಮಾತ್ಮತತ್ತ್ವವನ್ನಾಗಲೀ, ವೈಕುಂಠಲೋಕವನ್ನಾಗಲೀ ಹೊಂದುವುದಿಲ್ಲ. ಇಷ್ಟೇ ಅಲ್ಲ ಈ ಸಂಸಾರವನ್ನೂ ಹೊಂದುತ್ತಾನೆ, ಅಂದರೆ ಜನನ–ಮರಣ ಚಕ್ರದಲ್ಲಿ ಸಿಲುಕುತ್ತಾನೆ ಎಂದು ತಾತ್ಪರ್ಯ.



## ಮಂತ್ರ ೮

**यस्तु विज्ञानवान् भवति समनस्कः सदा शुचिः ।**
**स तु तत्पदमाप्नोति यस्माद्भूयो न जायते ॥**

ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥

### ಪ್ರತಿಪದಾರ್ಥ

ಯಸ್ತು ವಿಜ್ಞಾನವಾನ್–ಯಾವನು ತತ್ತ್ವತ್ರಯಸ್ವರೂಪಜ್ಞಾನವುಳ್ಳವನೂ, ಸಮನಸ್ಕಃ–ಮನಸ್ಸನ್ನು ನಿಗ್ರಹಿಸಿದವನೂ, ಸದಾ ಶುಚಿಃ—ಯಾವಾಗಲೂ ಪರಿಶುದ್ಧಾಂತಃಕರಣವುಳ್ಳವನೂ, ಭವತಿ—ಆಗುವನೋ, ಸ ತು—ಅವನು, ತತ್ಪದಮ್—ವೈಕುಂಠಲೋಕವನ್ನು, ಆಪ್ನೋತಿ—ಹೊಂದುತ್ತಾನೆ; ಯಸ್ಮಾತ್—ಯಾವ ಬ್ರಹ್ಮಪದದಿಂದ, ಭೂಯಃ–ಪುನಃ, ನ ಜಾಯತೇ—ಹುಟ್ಟುವುದಿಲ್ಲ ಅಂದರೆ ಮೋಕ್ಷದಿಂದ ಹಿಂತಿರುಗುವುದಿಲ್ಲ.

### ತಾತ್ಪರ್ಯ

ಯಾವ ಉಪಾಸಕನು ತತ್ತ್ವತ್ರಯಸ್ವರೂಪಜ್ಞಾನವನ್ನು ಅರಿತು, ನಿಗ್ರಹಿಸಿದ ಮನಸ್ಸುಳ್ಳವನೂ, ಪರಿಶುದ್ಧಾಂತಃಕರಣಯುಕ್ತನೂ ಆಗುವನೋ ಅವನು ಅಪುನರಾವೃತ್ತಿ ರೂಪವಾದ ವೈಕುಂಠಲೋಕವನ್ನು ಹೊಂದುತ್ತಾನೆ. ಇವನಿಗೆ ಪುನರ್ಜನ್ಮವಿರುವುದಿಲ್ಲ.

### ರಂಗರಾಮಾನುಜಭಾಷ್ಯ ಇಲ್ಲ

### ಭಾಷ್ಯಸಾರ

ವಿವೇಕಿಯಾದ ರಥಿಕನೆನಿಸಿದ ಜೀವನು ದೃಢನಿಶ್ಚಯವುಳ್ಳವನಾಗುತ್ತಾನೆ. ಅವನ ಮನಸ್ಸು ವಶವಾಗಿರುತ್ತದೆ. ಇದರಿಂದಲೇ ಅವನ ಮಾತು–ಮನಸ್ಸು–ಶರೀರ ಇವುಗಳು ಶುಚಿಯಾಗಿರುತ್ತವೆ. ಈತನ ಇಂದ್ರಿಯಗಳು ಒಳ್ಳೆಯ ಕುದುರೆಗಳಂತೆ ವಶದಲ್ಲಿದ್ದು ಸನ್ಮಾರ್ಗದಲ್ಲಿ ಹೋಗುತ್ತವೆ. ಇದರಿಂದ ಪಡೆಯಬೇಕಾದ ಪರಮಾತ್ಮನ ಸ್ಥಾನವನ್ನು ಅಂದರೆ ಮೋಕ್ಷವನ್ನು ಪಡೆಯುತ್ತಾನೆ. ಇದರಿಂದ ಪುನಃ ಈ ಸಂಸಾರಕ್ಕೆ ಬರುವುದಿಲ್ಲ.



## ಮಂತ್ರ ೯

**विज्ञानसारथिर्यस्तु मनःप्रग्रहवान्नरः ।**
**सोऽध्वनः पारमाप्नोति तद्विष्णोः परमं पदम् ॥**

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥

### ಪ್ರತಿಪದಾರ್ಥ

ಯಸ್ತು—ಯಾವ ಮನುಷ್ಯನು, ವಿಜ್ಞಾನಸಾರಥಿಃ—ತತ್ತ್ವತ್ರಯವಿಲಕ್ಷಣಜ್ಞಾನವೆಂಬ ಸಾರಥಿಯುಳ್ಳವನೋ, ಮನಃ ಪ್ರಗ್ರಹವಾನ್-ಮನಸ್ಸೆಂಬ ಲಗಾಮನ್ನು ಹಿಡಿದಿರುವನೋ, ಸ ನರಃ—ಆ ಮನುಷ್ಯನು, ಅಧ್ವನಃ—ಸಂಸಾರಗತಿಯ, ಪರಮಂ ಪಾರಮ್—ಕೊನೆಯೆನಿಸಿದ, ತತ್—ಆ ಪ್ರಸಿದ್ಧವಾದ, ವಿಷ್ಣೋಃ ಪದಮ್—ವೈಕುಂಠಲೋಕವನ್ನು, ಆಪ್ನೋತಿ—ಹೊಂದುತ್ತಾನೆ.

### ತಾತ್ಪರ್ಯ

ಚಿದಚಿದೀಶ್ವರ ಎಂಬ ತತ್ತ್ವತ್ರಯಗಳ ವಿಲಕ್ಷಣಜ್ಞಾನವೇ ಸಾರಥಿ, ಮನಸ್ಸೇ ಲಗಾಮು ಇಂತಹ ಬುದ್ಧಿ-ಮನಸ್ಸುಳ್ಳ ಮನುಷ್ಯನು ಸಂಸಾರವೆಂಬ ಕಾಡಿನಮಾರ್ಗದಿಂದ ಪಾರಾಗಿ ವಿಷ್ಣುವಿನ ಲೋಕವೆನಿಸಿದ ವೈಕುಂಠಲೋಕವನ್ನು ಹೊಂದುತ್ತಾನೆ.

### ರಂಗರಾಮಾನುಜಭಾಷ್ಯಮ್

ಕಿಂ ತತ್ ಪದಮಿತ್ಯಾಕಾಂಕ್ಷಾಯಾಂ, ತತ್ ಪದಂ ದರ್ಶಯನ್ನುಪಸಂಹರತಿ—ವಿಜ್ಞಾನಸಾರಥಿರ್ಯಸ್ತು........ತದ್ವಿಷ್ಣೋಃ ಪರಮಂ ಪದಮ್ । ಸಮೀಚೀನವಿಜ್ಞಾನಮನಶ್ಶಾಲೀ ಸಂಸಾರಾಧ್ವಪಾರಭೂತಂ ಪರಮಾತ್ಮಸ್ವರೂಪಂ ಪ್ರಾಪ್ನೋತೀತ್ಯರ್ಥಃ ॥

### ಅನುವಾದ

ಸೇರಬೇಕಾದ ಸ್ಥಾನವಾವುದು ? ಎಂಬ ಆಕಾಂಕ್ಷೆ ಬಂದಲ್ಲಿ ಆ ಸ್ಥಾನವನ್ನು ಹೇಳುತ್ತಾ ಮುಕ್ತಾಯಗೊಳಿಸುತ್ತಾನೆ 'ವಿಜ್ಞಾನಸಾರಥಿರ್ಯಸ್ತು.......ತದ್ವಿಷ್ಣೋಃ ಪರಮಂ ಪದಮ್. ವಿವೇಕವಿಶಿಷ್ಟವಾದ ಬುದ್ಧಿ ಮತ್ತು ಮನಸ್ಸುಳ್ಳವನು ಈ ಸಂಸಾರಸಾಗರವನ್ನು ದಾಟಿ, ಮತ್ತೊಂದು ದಡವೆನಿಸಿದ ಪರಮಾತ್ಮನ ಸ್ವರೂಪವನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆ ಎಂದರ್ಥ.

### ಭಾಷ್ಯಸಾರ

ಪಡೆಯುವ ಸ್ಥಾನ ಪರಮಪದವೆಂದು 'ವಿಜ್ಞಾನಸಾರಥಿಃ' ಎಂಬ ಈ ಮಂತ್ರದಿಂದ ತಿಳಿಸುತ್ತಾನೆ. ಬುದ್ಧಿಯೆಂಬ ಸಾರಥಿಯು ಯಾವ ಉಪಾಸಕನಿಗೆ ಅನುಕೂಲವಾಗಿರುವುದೋ, ಮನಸ್ಸೆಂಬ ಲಗಾಮನ್ನು ಸರಿಯಾಗಿ ಹಿಡಿದಿರುವನೋ ಅಂದರೆ ಯಾವನು ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಂಡು ಮನಸ್ಸನ್ನು ಜಯಿಸಿರುವನೋ ಅವನು ಈ ಸಂಸಾರಸಾಗರದಲ್ಲಿ ಬೀಳದೆ, ಮತ್ತೊಂದು ತೀರವಾದ ವಿಷ್ಣುವಿನ ಸ್ಥಾನವನ್ನು ಸೇರುತ್ತಾನೆ. ಅಂದರೆ ಅಪ್ರಾಕೃತಸ್ಥಾನವೆನಿಸಿದ ಮೋಕ್ಷವನ್ನು ಹೊಂದುತ್ತಾನೆ.



# ಮಂತ್ರ ೧೦

**इन्द्रियेभ्यः परा ह्यर्था अर्थेभ्यश्च परं मनः ।**
**मनसस्तु परा बुद्धिर्बुद्धेरात्मा महान् परः ॥**

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥

## ಪ್ರತಿಪದಾರ್ಥ

ಇಂದ್ರಿಯೇಭ್ಯಃ—ಇಂದ್ರಿಯಗಳಿಗಿಂತ, ಅರ್ಥಾಃ—ವಿಷಯಗಳು, ಪರಾಃ—ಶ್ರೇಷ್ಠವಾದುವು, ಅರ್ಥೇಭ್ಯಶ್ಚ—ವಿಷಯಗಳಿಗಿಂತಲೂ, ಮನಃ—ಮನಸ್ಸು, ಪರಮ್—ಶ್ರೇಷ್ಠವಾದುದು. ಮನಸಸ್ತು—ಮನಸ್ಸಿಗಿಂತಲೂ, ಬುದ್ಧಿಃ—ಬುದ್ಧಿಯು, ಪರಾ—ಶ್ರೇಷ್ಠವಾದುದು. ಬುದ್ಧೇಃ—ಬುದ್ಧಿಗಿಂತ, ಮಹಾನ್ ಆತ್ಮಾ—ಉತ್ಕೃಷ್ಟನಾದ ಜೀವನು. ಪರಃ—ಶ್ರೇಷ್ಠನು.

## ತಾತ್ಪರ್ಯ

ವಶೀಕರಣದಲ್ಲಿ ಚಕ್ಷುರಾದಿ ಇಂದ್ರಿಯಗಳಿಗಿಂತ ಶಬ್ದಾದಿ ವಿಷಯಗಳು ಶ್ರೇಷ್ಠವಾದವು. ವಿಷಯಗಳಿಗಿಂತ ಮನಸ್ಸು ಹಿರಿದಾದುದು, ಮನಸ್ಸಿಗಿಂತ ಬುದ್ಧಿಯು ಹಿರಿದಾದ್ದು, ಬುದ್ಧಿಗಿಂತ ಜೀವಾತ್ಮನು ಹಿರಿಯನು.

## ರಂಗರಾಮಾನುಜಭಾಷ್ಯಮ್

ವಶೀಕಾರ್ಯತ್ವಾಯ ರಥಾದಿರೂಪಿತೇಷು ಶರೀರಾದಿಷು ಯಾನಿ ಯೇಭ್ಯೋ ವಶೀಕಾರ್ಯತಾಯಾಂ ಪ್ರಧಾನಾನಿ, ತಾನಿ ಉಚ್ಯಂತೇ—ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥ ಅಸ್ಯ ಮಂತ್ರಸ್ಯಾರ್ಥೋ ಭಗವತಾ ಭಾಷ್ಯಕೃತಾ ಆನುಮಾನಿಕಾಧಿಕರಣೇ (ಬ್ರ. ಸೂ. 1-4-1) ಉಕ್ತಃ। ಇತ್ಥಂ ಹಿ ತತ್ರ ಭಾಷ್ಯಕೃತಾ-'ತೇಷು ರಥಾದಿರೂಪಿತಶರೀರಾದಿಷು, ಯಾನಿ ಯೇಭ್ಯೋ ವಶೀಕಾರ್ಯತಾಯಾಂ ಪ್ರಧಾನಾನಿ, ತಾನ್ಯುಚ್ಯಂತೇ – 'ಇಂದ್ರಿಯೇಭ್ಯಃ ಪರಾಃ' ಇತ್ಯಾದಿನಾ। ತತ್ರ ಹಯತ್ವೇನ ರೂಪಿತೇಭ್ಯಃ ಇಂದ್ರಿಯೇಭ್ಯೋ ಗೋಚರತ್ವೇನ ರೂಪಿತಾ ವಿಷಯಾಃ, ವಶೀಕಾರ್ಯತ್ವೇ ಪರಾಃ ; ವಶ್ಯೇಂದ್ರಿಯಸ್ಯಾಪಿ ವಿಷಯಸನ್ನಿಧಾವಿಂದ್ರಿಯಾಣಾಂ ದುರ್ನಿಗ್ರಹತ್ವಾತ್ । ತೇಭ್ಯೋಽಪಿ ಪರಂ ಪ್ರಗ್ರಹರೂಪಿತಂ ಮನಃ ; ಮನಸಿ ವಿಷಯಪ್ರವಣೇ ವಿಷಯಾಸನ್ನಿಧಾನಸ್ಯಾಪ್ಯಕಿಂಚಿತ್ಕರತ್ವಾತ್ । ತಸ್ಮಾದಪಿ, ಸಾರಥಿತ್ವರೂಪಿತಾ ಬುದ್ಧಿಃ ಪರಾ ; ಅಧ್ಯವಸಾಯಾಭಾವೇ ಮನಸೋಽಪಿ ಅಕಿಂಚಿತ್ಕರತ್ವಾತ್ । ತಸ್ಯಾ ಅಪಿ, ರಥಿತ್ವೇನ ರೂಪಿತ ಆತ್ಮಾ, ಕರ್ತೃತ್ವೇನ ಪ್ರಾಧಾನ್ಯಾತ್ ಪರಃ । ಸರ್ವಸ್ಯಾತ್ಮೇಚ್ಛಾಯತ್ತತ್ವಾತ್, ಆತ್ಮೈವ ಮಹಾನಿತಿ ಚ ವಿಶೇಷ್ಯತೇ ॥

## ಅನುವಾದ

ರಥ ಮುಂತಾದವುಗಳಾಗಿ ರೂಪಿಸಿ ಹೇಳಿದ ಶರೀರ ಮುಂತಾದವುಗಳನ್ನು ವಶದಲ್ಲಿಟ್ಟುಕೊಳ್ಳಲು ಯಾವುದು ಯಾವುದಕ್ಕಿಂತ ಮುಖ್ಯ ಎಂಬುದನ್ನು ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ

.......ಮಹಾನ್ ಪರಃ, ಎಂಬುದರಿಂದ ಹೇಳುತ್ತಾನೆ. ಈ ಮಂತ್ರದ ಅರ್ಥವನ್ನು ಭಗವದ್ರಾಮಾನುಜರು ಆನುಮಾನಿಕಾಧಿಕರಣದಲ್ಲಿ (ಬ್ರ. ಸೂ. 1-4-1) ಹೇಳಿರುವರು. ಅಲ್ಲಿ ಭಾಷ್ಯಕಾರರು ರಥ ಮುಂತಾದವುಗಳ ರೂಪವನ್ನಾರೋಪಿಸಿ (ರೂಪಿಸಿ) ಹೇಳಿದ ಶರೀರ ಮುಂತಾದವುಗಳಲ್ಲಿ ಯಾವುದು ಯಾವುದಕ್ಕಿಂತ ವಶೀಕರಣದಲ್ಲಿ ಮುಖ್ಯ ಎಂಬುದು 'ಇಂದ್ರಿಯೇಭ್ಯಃ ಪರಾಃ' ಎಂಬುದರಿಂದ ಹೇಳಲ್ಪಡುತ್ತದೆ. ಕುದುರೆಗಳೆಂದು ಹೇಳಿದ ಇಂದ್ರಿಯಗಳಿಗಿಂತ, ಮಾರ್ಗಗಳೆಂದು ಹೇಳಿದ ಶಬ್ದಾದಿ ವಿಷಯಗಳು ವಶೀಕರಣದಲ್ಲಿ ಮುಖ್ಯವು. ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿದ್ದರೂ ಶಬ್ದಾದಿವಿಷಯಗಳಿದ್ದಲ್ಲಿ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು ಕಷ್ಟ. ಇವುಗಳಿಗಿಂತಲೂ ಹಗ್ಗವೆಂದು ಹೇಳಿದ ಮನಸ್ಸು ಮುಖ್ಯ. ಮನಸ್ಸಿನಲ್ಲಿ ಶಬ್ದಾದಿವಿಷಯಗಳು ಮೂಡಿದಲ್ಲಿ ವಿಷಯಗಳಿಲ್ಲದಿರುವಿಕೆಯೂ ಅಪ್ರಯೋಜಕ, ಮನಸ್ಸಿಗಿಂತಲೂ ಸಾರಥಿ ಎಂದು ಹೇಳಿದ ಬುದ್ಧಿಯು ಮುಖ್ಯ. ನಿಶ್ಚಯಜ್ಞಾನವಿಲ್ಲದಿದ್ದರೆ ಮನಸ್ಸೂ ಅಪ್ರಯೋಜಕ. ಈ ಬುದ್ಧಿಗಿಂತಲೂ ರಥಿಕನೆಂದು ಹೇಳಿದ ಜೀವಾತ್ಮನು ಕರ್ತೃವಾಗಿರುವುದರಿಂದ ಮುಖ್ಯ, ಎಲ್ಲವೂ ಆತ್ಮನ ಇಚ್ಛಾಧೀನವಾದುದರಿಂದ ಮಹಾನ್ ಎಂಬ ವಿಶೇಷಣವನ್ನು ಕೊಟ್ಟಿದೆ ಎಂದು ಹೇಳಿರುತ್ತಾರೆ.

## ಭಾಷ್ಯಸಾರ

ಇಂದ್ರಿಯ ಮನಸ್ಸು ಬುದ್ಧಿಗಳನ್ನು ವಶದಲ್ಲಿಟ್ಟುಕೊಳ್ಳುವವರು ಸಂಸಾರದಿಂದ ಪಾರಾಗಿ ಮೋಕ್ಷಕ್ಕೆ ಹೋಗುತ್ತಾರೆ ಎಂದು ಹೇಳಿದ ಈ ವಶೀಕರಣಕಾರ್ಯದಲ್ಲಿ ರಥ ಸಾರಥಿ ಮುಂತಾಗಿ ರೂಪಿಸಿದುದರಲ್ಲಿ ಯಾವುದಕ್ಕಿಂತ ಯಾವುದು ಮುಖ್ಯ ಎಂಬುದನ್ನೂ, ಎಲ್ಲಿಯವರೆಗೆ ವಶೀಕರಿಸಬೇಕು ಎಂಬುದನ್ನೂ 'ಇಂದ್ರಿಯೇಭ್ಯಃ' ಎಂಬುದರಿಂದ ತಿಳಿಸುತ್ತಾನೆ.

ಕುದುರೆಗಳೆಂದು ರೂಪಿತವಾದ ಕಣ್ಣು ಮುಂತಾದ ಇಂದ್ರಿಯಗಳಿಗಿಂತ, ಮಾರ್ಗಗಳೆಂದು ರೂಪಿತವಾದ ಶಬ್ದಾದಿವಿಷಯಗಳು ಪ್ರಬಲವಾದುವು. ಶಬ್ದಾದಿವಿಷಯಗಳಿಂದ ಉಂಟಾಗುವ ಅನರ್ಥಗಳನ್ನು ತಿಳಿದು ಉಪಾಸಕನು ಯಾರೂ ಇಲ್ಲದಿರುವ ಮನೆಯ ಮಧ್ಯದಲ್ಲಿ ಏಕಾಂತವಾಗಿದ್ದು ಇಂದ್ರಿಯಗಳನ್ನು ನಿಗ್ರಹಿಸಲು ಯತ್ನಿಸಿದರೂ ಶಬ್ದಾದಿವಿಷಯಗಳ ಸಂಬಂಧದಿಂದ ಇಂದ್ರಿಯಗಳು ವಿಚಲಿತವಾಗಿಯೇ ಆಗುತ್ತವೆ. ಆದುದರಿಂದ ವಶೀಕರಣ ಕಾರ್ಯದಲ್ಲಿ ಇಂದ್ರಿಯಗಳಿಗಿಂತಲೂ ಶಬ್ದಾದಿವಿಷಯಗಳು ಮುಖ್ಯ.

ಮಾರ್ಗಗಳೆಂದು ರೂಪಿತವಾದ ಶಬ್ದಾದಿವಿಷಯಗಳಿಂದ ಹಗ್ಗವೆಂದು ರೂಪಿತವಾಗಿರುವ ಮನಸ್ಸು ಪ್ರಬಲವಾದುದು. ಶಬ್ದಾದಿವಿಷಯಗಳನ್ನು ದೂರಮಾಡಿ, ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡರೂ, ಸಂಕಲ್ಪವಿಕಲ್ಪರೂಪವಾದ ಮನಸ್ಸು ವಶದಲ್ಲಿಲ್ಲದಿದ್ದರೆ ವಿಷಯಗಳತ್ತ ಹರಿಯುತ್ತದೆ. ಆಗ ಇಂದ್ರಿಯಗಳ ಮೇಲೆ ಜಯ ಸಿಗಲಾರದು. ಇಂದ್ರಿಯ ಶಬ್ದಾದಿವಿಷಯಗಳ ವಶೀಕರಣಕ್ಕೆ ಮನಸ್ಸಿನ ವಶೀಕರಣ ಕಾರಣ. ಆದುದರಿಂದ ಶಬ್ದಾದಿ ವಿಷಯಗಳಿಗಿಂತ ಮನಸ್ಸು ಮುಖ್ಯ. ಈ ಮನಸ್ಸಿಗಿಂತ ಸಾರಥಿ ಎಂದು ರೂಪಿತವಾದ ಬುದ್ಧಿ ಪ್ರಬಲವಾದುದು. ದೃಢವಾದ ಬುದ್ಧಿಯಿಲ್ಲದಿದ್ದಲ್ಲಿ ಮನಸ್ಸು ವಶವಾಗುವುದಿಲ್ಲ. ಆದುದರಿಂದ ಮನಸ್ಸಿಗಿಂತ ದೃಢವಾದ ಬುದ್ಧಿಯು ಮುಖ್ಯ. ನಿಶ್ಚಯರೂಪವಾದ ಬುದ್ಧಿಗೂ

ರಥಿಕನೆಂದು ರೂಪಿತವಾದ ಆತ್ಮನೇ ಆಶ್ರಯ. ಆಧಾರವನ್ನು ಅವಲಂಬಿಸಿ ಆಧೇಯ ವಿರುತ್ತದೆ.

ಇಂದ್ರಿಯಗಳನ್ನು ಜಯಿಸಬೇಕು, ಮನಸ್ಸನ್ನು ವಶದಲ್ಲಿರಿಸಬೇಕು. ಬುದ್ಧಿಯನ್ನು ಆತ್ಮನಲ್ಲಿಯೇ ನೆಲೆಗೊಳಿಸಬೇಕು. ಈ ಅಭಿರುಚಿ ಯಾರಿಗಿದೆಯೋ ಅವರಿಗೆ ಮಾತ್ರ ಈ ನಿಯಮ. ಈ ಅಭಿರುಚಿ ಯಾರಿಗಿರುವುದಿಲ್ಲವೋ ಅವರಿಗೆ ನಿಶ್ಚಯವೂ ಇರುವುದಿಲ್ಲ. ಜೀವನು ಈ ಶರೀರದಲ್ಲಿದ್ದುಕೊಂಡು ಕರ್ತೃತ್ವಾದಿಗಳನ್ನು ಪಡೆದಿರುವನು. ಇಂದ್ರಿಯ ಮೊದಲ್ಗೊಂಡು ಅಧ್ಯವಸಾಯರೂಪವಾದ ಬುದ್ಧಿಯವರೆಗೂ ಎಲ್ಲವೂ ಆತ್ಮನ ಇಚ್ಛಾಧೀನ ವಾಗಿವೆ. ಆದುದರಿಂದಲೇ 'ಮಹಾನ್ ಆತ್ಮಾ' ಎಂಬಲ್ಲಿ 'ಮಹತ್' ಎಂಬ ವಿಶೇಷಣವನ್ನು ಹೇಳಿದೆ. ಹೀಗೆ ವಶೀಕರಣದಲ್ಲಿ ಅತ್ಯಂತ ಪ್ರಬಲವಾದುದರಿಂದ ಆತ್ಮನನ್ನು ರಥಿಕನೆಂದು ರೂಪಿಸಿದೆ.



# ಮಂತ್ರ ೧೧

**महतः परमव्यक्तमव्यक्तात् पुरुषः परः ।**
**पुरुषान्न परं किञ्चित् सा काष्ठा सा परा गतिः ॥**

ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ |
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ||

## ಪ್ರತಿಪದಾರ್ಥ

ಮಹತಃ—ಜೀವನಿಗಿಂತ, ಅವ್ಯಕ್ತಮ್—ಶರೀರವು, ಪರಮ್—ಮುಖ್ಯವು, ಅವ್ಯಕ್ತಾತ್—ಶರೀರಕ್ಕಿಂತ, ಪುರುಷಃ—ಪರಮಾತ್ಮನು, ಪರಃ—ಶ್ರೇಷ್ಠನು, ಪುರುಷಾತ್—ವಶನಾದ ಪರಮಾತ್ಮನಿಗಿಂತ, ಪರಮ್—ವಶೀಕಾರ್ಯವಾದುದು, ಕಿಂಚಿತ್ ನ—ಯಾವುದೂ ಇಲ್ಲ. ಸಾ—ಶರಣಾಗತಿಯೇ, ಕಾಷ್ಠಾ—ಕೊನೆ. ಸಾ—ಅದೇ, ಪರಾ—ಶ್ರೇಷ್ಠವಾದ, ಗತಿಃ—ಪ್ರಾಪ್ಯವು.

## ತಾತ್ಪರ್ಯ

ವಶೀಕರಣದಲ್ಲಿ ಜೀವನಿಗಿಂತ ಶರೀರವು ಮುಖ್ಯ, ಶರೀರಕ್ಕಿಂತ ಪರಮಾತ್ಮನು ಶ್ರೇಷ್ಠನು, ಅವನಿಗಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ವಶೀಕರಣಕಾರ್ಯದಲ್ಲಿ ಪರಮಾತ್ಮನನ್ನು ಬಿಟ್ಟು, ಅದಕ್ಕಿಂತ ಮುಖ್ಯವಾದುದು ಮತ್ತೊಂದು ಯಾವುದೂ ಇಲ್ಲ. ಇವನನ್ನು ಶರಣಾಗತಿಯಿಂದಲೇ ವಶಮಾಡಿಕೊಳ್ಳಬೇಕು. ಶರಣಾಗತಿಯೇ ಕೊನೆಯ ಹಂತ. ಅದಕ್ಕಿಂತ ಶ್ರೇಷ್ಠವಾದ ಮತ್ತೊಂದು ಪ್ರಾಪ್ಯವು ಇಲ್ಲ.

## ರಂಗರಾಮಾನುಜಭಾಷ್ಯಮ್

ವಶೀಕಾರ್ಯತ್ವಾಯ ರಥಾದಿರೂಪಿತೇಷು ಶರೀರಾದಿಷು ಯಾನಿ ಯೇಭ್ಯೋ ವಶೀಕಾರ್ಯತಾಯಾಂ ಪ್ರಧಾನಾನಿ ತಾನಿ ಉಚ್ಯಂತೇ—ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ। ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ। ಅಸ್ಯ ಮಂತ್ರಸ್ಯ ಅರ್ಥೋ ಭಗವತಾ ಭಾಷ್ಯಕೃತಾ ಆನುಮಾನಿಕಾಧಿಕರಣೇ (ಬ. ಸೂ. 4–1–1) ಉಕ್ತಃ। ತತ್ರ ಭಾಷ್ಯಕೃತಾ—'ತಸ್ಮಾದಪಿ ರಥರೂಪಿತಂ ಶರೀರಂ ಪರಮ್ ; ತದಾಯತ್ತತ್ವಾಜ್ಜೀವಸ್ಯ ಸಕಲಪುರುಷಾರ್ಥಸಾಧನಪ್ರವೃತ್ತೀನಾಮ್ । ತಸ್ಮಾದಪಿ ಪರಃ ಸರ್ವಾಂತರಾತ್ಮಭೂತೋಽಂತರ್ಯಾಮೀ ಅಧ್ವನಃ ಪಾರಭೂತಃ ಪರಮಪುರುಷಃ, ಯಥೋಕ್ತಸ್ಯ ಆತ್ಮಪರ್ಯಂತಸ್ಯ ತತ್ಸಂಕಲ್ಪಾಯತ್ತಪ್ರವೃತ್ತಿತ್ವಾತ್ । ಸ ಖಲ್ವಂತರ್ಯಾಮಿತಯಾ ಉಪಾಸನಸ್ಯಾಪಿ ನಿರ್ವರ್ತಕಃ। 'ಪರಾತ್ತು ತಚ್ಛ್ರುತೇಃ' (ಬ್ರ. ಸೂ. 2–4–21) ಇತಿ ಹಿ ಜೀವಾತ್ಮನಃ ಕರ್ತೃತ್ವಂ ಪರಮಪುರುಷಾಯತ್ತಮಿತಿ ವಕ್ಷ್ಯತೇ । ವಶೀಕಾರ್ಯೋಪಾಸನನಿರ್ವೃತ್ತ್ಯುಪಾಯಕಾಷ್ಠಾಭೂತಃ ಪರಮಪ್ರಾಪ್ಯಶ್ಚ ಸ ಏವ। ತದಿದಮುಚ್ಯತೇ, 'ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ, ಇತಿ। ತಥಾ ಅಂತರ್ಯಾಮಿಬ್ರಾಹ್ಮಣೇ, 'ಯ ಆತ್ಮನಿ ತಿಷ್ಠನ್' (ಬೃ.ಉ. ಮಾಧ್ಯಂ 3–7–30) ಇತ್ಯಾದಿಭಿಃ ಸರ್ವಂ ಸಾಕ್ಷಾತ್ಕುರ್ವನ್ ಸರ್ವಂ ನಿಯಮಯತೀತ್ಯುಕ್ತ್ವಾ, 'ನಾನ್ಯೋಽತೋಽಸ್ತಿ ದ್ರಷ್ಟಾ' (ಬೃ.ಉ. 5–7–27) ಇತಿ ನಿಯಂತ್ರಂತರಂ ನಿಷಿಧ್ಯತೇ। ಭಗವದ್ಗೀತಾಸು ಚ,

'ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾ ಚ ಪೃಥಕ್‌ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥
(ಭ. ಗೀ. 18–14)

ಇತಿ ದೈವಮ್ ಅತ್ರ ಪುರುಷೋತ್ತಮ ಏವ । 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ' (ಇತಿ ವಚನಾತ್ ।) ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ। ಯಥಾಽಽಹ,

'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
ತಮೇವ ಶರಣಂ ಗಚ್ಛ' (ಭ.ಗೀ. 18–61) ಇತಿ।

ತದೇವಮ್ 'ಆತ್ಮಾನಂ ರಥಿನಂ ವಿದ್ಧಿ' ಇತ್ಯಾದಿನಾ ರಥ್ಯಾದಿರೂಪಕವಿನ್ಯಸ್ತಾ ಇಂದ್ರಿಯಾದಯಃ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯತ್ರ ಸ್ವಶಬ್ದೈರೇವ ಪ್ರತ್ಯಭಿಜ್ಞಾಯಂತೇ ; ನ ರಥರೂಪಿತಂ ಶರೀರಮಿತಿ, ಪರಿಶೇಷಾತ್ ತತ್ ಅವ್ಯಕ್ತಶಬ್ದೇನ ಉಚ್ಯತೇ' ಇತಿ ಭಾಷಿತಮ್ ।

ಅನುವಾದ

ರಥ ಮುಂತಾದ ರೂಪಕಗಳಿಂದ ಹೇಳಿದ ಶರೀರ ಮುಂತಾದವುಗಳನ್ನು ವಶದಲ್ಲಿಟ್ಟುಕೊಳ್ಳಲು ಯಾವುದು ಯಾವುದಕ್ಕಿಂತ ಮುಖ್ಯ ಎಂಬುದನ್ನು ಹೇಳುತ್ತಾನೆ. 'ಮಹತಃ ಪರಮವ್ಯಕ್ತಮ್........ಸಾ ಪರಾ ಗತಿಃ' ಎಂಬ ಮಂತ್ರದ ಅರ್ಥವನ್ನು ಭಗದ್ರಾಮಾನುಜರು 'ಆನುಮಾನಿಕಾಧಿಕರಣದಲ್ಲಿ (ಬ್ರ. ಸೂ. 1–4–1) ಹೇಳಿರುವರು. ಶರೀರವು ಜೀವನ ಎಲ್ಲ ಆಕಾಂಕ್ಷೆಗಳನ್ನು ಪಡೆಯಲು ಸಾಧನವಾಗಿರುವುದರಿಂದ, ಈ ಜೀವಾತ್ಮನಿಗಿಂತ ರಥವೆಂದು ಹೇಳಿದ ಶರೀರವು ಮುಖ್ಯ. ಇದಕ್ಕಿಂತಲೂ ಎಲ್ಲ ಪ್ರಾಣಿಗಳ ಅಂತರ್ಯಾಮಿಯೂ, ಪ್ರಾಪ್ಯವೂ ಆದ ಪರಮಾತ್ಮನು ಮುಖ್ಯನು. ಈ ಮೊದಲು ಜೀವಾತ್ಮನವರೆಗೂ ಹೇಳಿದ ಎಲ್ಲದರ ಕಾರ್ಯಗಳೂ ಪರಮಾತ್ಮನ ಸಂಕಲ್ಪಾಧೀನವಾದುದು. ಆತನೇ ಅಂತರ್ಯಾಮಿಯಾಗಿದ್ದು ಉಪಾಸಕನು ಉಪಾಸನೆಮಾಡುವುದನ್ನು ನಿರ್ವಹಿಸುತ್ತಾನೆ. 'ಪರಾತ್ತು ತಚ್ಛ್ರುತೇಃ' (ಬ್ರ.ಸೂ. 2–4–21) ಎಂಬುದರಿಂದ ಜೀವಾತ್ಮನ ಕರ್ತೃತ್ವವೂ ಪರಮಾತ್ಮನ ಅಧೀನವಾದುದು ಎಂದು ಹೇಳಲಾಗುವುದು. ವಶೀಕರಿಸಲ್ಪಡಬೇಕಾದ ಪರಮಾತ್ಮನ ಉಪಾಸನಾನಿರ್ವಾಹೋಪಾಯದಲ್ಲಿ ಕೊನೆಯದೂ, ಶ್ರೇಷ್ಠವಾದ ಪ್ರಾಪ್ಯವೂ ಪರಮಾತ್ಮನೇ. ಇದನ್ನೇ 'ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ' ಎಂದು ಹೇಳಿದೆ. ಹಾಗೇ ಅಂತರ್ಯಾಮಿಬ್ರಾಹ್ಮಣದಲ್ಲಿ 'ಯ ಆತ್ಮನಿ ತಿಷ್ಠನ್' (ಬೃ. ಉ. ಮಾಧ್ಯಂ. 3–7–30) ಮುಂತಾದವುಗಳಿಂದ ಎಲ್ಲವನ್ನೂ ತಾನೇ ಮಾಡುತ್ತಾ ಎಲ್ಲವನ್ನೂ ನಿಯಮಿಸುತ್ತಾನೆ ಎಂದು ಹೇಳಿ 'ನಾನ್ಯೋಽತೋಽಸ್ತಿದ್ರಷ್ಟಾ' (ಬೃ. ಉ. 5–7–27) ಎಂಬುದರಿಂದ ಬೇರೆ ನಿಯಾಮಕನಿಲ್ಲ ಎಂದು ನಿಷೇಧವನ್ನೂ ಹೇಳಿದೆ. ಭಗವದ್ಗೀತೆಯಲ್ಲೂ

'ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾ ಚ ಪೃಥಕ್‌ಚೇಷ್ಟಾ ದೈವಂ ಚೈವಾತ್ರ ಪಂಚಮಮ್' ॥
(ಭ. ಗೀ. 18–14)

ಎಂದು ಹೇಳಿದೆ. 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ' ಎಂದು ಹೇಳಿರುವುದರಿಂದ 'ದೈವಮ್' ಅಂದರೆ ಇಲ್ಲಿ ಪರಮಾತ್ಮನೇ. ಪರಮಾತ್ಮನನ್ನು ವಶಪಡಿಸಿಕೊಳ್ಳಲು ಅವನಲ್ಲಿ ಶರಣಾಗತಿಮಾಡುವುದೇ ಉಪಾಯ. ಇದನ್ನೇ—

'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥
ತಮೇವ ಶರಣಂ ಗಚ್ಛ' (ಭ.ಗೀ. 18-61)

ಎಂದು ಗೀತೆಯಲ್ಲಿ ಹೇಳಿದೆ. ಹೀಗೆ 'ಆತ್ಮಾನಂ ರಥಿನಂ ವಿದ್ಧಿ' ಎಂದು ರಥ ಮುಂತಾದ ರೂಪಕಗಳಿಂದ ಹೇಳಿವೆ 'ಇಂದ್ರಿಯ' ಮುಂತಾದವುಗಳು 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬೆಡೆಗಳಲ್ಲಿ ಆಯಾಯಾ ಶಬ್ದಗಳಿಂದಲೇ ಹೇಳಲ್ಪಟ್ಟಿವೆ. ರಥಶಬ್ದದಿಂದ ಹೇಳಿದ ಶರೀರವನ್ನು ಮಾತ್ರ ಆ ಶಬ್ದದಿಂದ ಹೇಳಿಲ್ಲ (ಇತರ ಶಬ್ದಗಳನ್ನು ಬಿಟ್ಟು) ಉಳಿದ ಅವ್ಯಕ್ತಶಬ್ದದಿಂದ ಶರೀರವು ಹೇಳಲ್ಪಡುತ್ತದೆ' ಎಂದು ಭಾಷ್ಯದಲ್ಲಿ ಹೇಳಿರುವರು.

## ಭಾಷ್ಯಸಾರ

ಬುದ್ಧಿ ಮುಂತಾದವುಗಳಿಗಿಂತ ಮುಖ್ಯನೂ ಈ ಶರೀರದಲ್ಲಿ ನೆಲೆಸಿರುವವನೂ ಆದ ಈ ಆತ್ಮನಿಗಿಂತಲೂ ಪ್ರಕೃತಿಯ ಪರಿಣಾಮರೂಪವೂ, ರಥವೆಂದು ರೂಪಿತವೂ ಆದ ಶರೀರವು ವಶೀಕರಣದಲ್ಲಿ ಪ್ರಧಾನವಾದುದು. ಈ ಶರೀರವಿಲ್ಲದಿದ್ದರೆ ಅದರ ಅಧಿಷ್ಠಾತೃವಾದ ಆತ್ಮನಿಗೆ ಪುರುಷಾರ್ಥಗಳಲ್ಲಿ ಪ್ರವೃತ್ತಿಯೇ ಉಂಟಾಗಲಾರದು. ಧರ್ಮಸಾಧನೆಯಲ್ಲಿ ಶರೀರವೇ ಮುಖ್ಯವಾದುದು. ಈ ಆತ್ಮನಿಗೆ ಅನಾದಿಯಾದ ಪ್ರಕೃತಿಸಂಬಂಧದಿಂದ ಸತ್ವ-ರಜಸ್-ತಮೋಗುಣಗಳಲ್ಲಿ ಒಂದು ತಲೆಯೆತ್ತಿ ಮತ್ತೆರಡು ಗುಣಗಳು ತಿರೋಹಿತವಾಗುತ್ತವೆ. ತಲೆಯೆತ್ತಿದ ಗುಣಕ್ಕೆ ಅನುಗುಣವಾಗಿ ಜೀವನಿಗೆ ಅನೇಕ ವಿಧವಾದ ಅಭಿರುಚಿಯುಂಟಾಗುತ್ತದೆ. ತ್ರಿಗುಣಾತ್ಮಕವಾದ ಶರೀರವಿದ್ದಲ್ಲಿ ಆತ್ಮನು ವಶೀಕೃತವಾಗಿದ್ದರೂ, ಆಯಾಯಾ ಗುಣಗಳಿಗೆ ಅನುಗುಣವಾಗಿ ಪ್ರವೃತ್ತಿಯು ಅವಶ್ಯವುಂಟಾಗುತ್ತದೆ ಎಂದು ತಾತ್ಪರ್ಯ.

'ದೇವದತ್ತಾದ್ಯಜ್ಞದತ್ತಃ ಶೀಘ್ರಗತಿರ್ಯೋಽಯಮಶ್ವಾರೂಢಃ ಅಶ್ವಾರೂಢಾಚ್ಚ ವಿಷ್ಣುಮಿತ್ರಃ'-ದೇವದತ್ತನಿಗಿಂತಲೂ ಕುದುರೆ ಹತ್ತಿರುವ ಯಜ್ಞದತ್ತನು ವೇಗವಾಗಿ ಹೋಗಬಲ್ಲನು. ಈ ಕುದುರೆ ಹತ್ತಿದ ಯಜ್ಞದತ್ತನಿಗಿಂತಲೂ ವಿಷ್ಣುಮಿತ್ರನು ವೇಗಶಾಲಿ ಎಂಬಲ್ಲಿ ವಿಶೇಷವಾದ ಅಶ್ವಾರೂಢಶಬ್ದದಿಂದ ಯಜ್ಞದತ್ತನನ್ನು ಗ್ರಹಿಸುವಂತೆ, 'ಮಹತಃ ಪರಮವ್ಯಕ್ತಮ್' ಎಂಬಲ್ಲಿ 'ಮಹತಃ' ಎಂಬ ವಿಶೇಷಣದಿಂದ ವಿಶೇಷ್ಯವಾದ ಆತ್ಮವು ಗ್ರಹಿಸಲ್ಪಡುತ್ತದೆ.

'ಆತ್ಮಾನಂ ರಥಿನಂ ವಿದ್ಧಿ' ಎಂದು ರೂಪಕಮಾಡಿರುವಲ್ಲಿ ಹೇಳಿರುವ ಬುದ್ಧಿ ಮುಂತಾದ ಪದಗಳನ್ನು ವಶೀಕರಣಪ್ರಕರಣದಲ್ಲೂ ಹೇಳಿರುವರು. ಅದರಲ್ಲಿ ಶರೀರವಾಚಕ ಶಬ್ದವಿಲ್ಲ. ಆದುದರಿಂದ ವಶೀಕರಣದಲ್ಲಿ ಆತ್ಮನಿಗಿಂತಲೂ ಶರೀರ ಮುಖ್ಯ ಎಂದು ಹೇಗೆ ಹೇಳುವಿರಿ ? ಎಂಬ ಆಶಂಕೆ ಸಲ್ಲದು. ಇಲ್ಲಿ ಶರೀರವಾಚಕಶಬ್ದವಿಲ್ಲದಿದ್ದರೂ ಅವ್ಯಕ್ತ

ಶಬ್ದದಿಂದ ಪಂಚಭೂತಗಳ ಸೂಕ್ಷ್ಮರೂಪದ ಪರಿಣಾಮವೆನಿಸಿದ ಶರೀರವನ್ನು ಬಿಟ್ಟು ಬೇರೆಯದನ್ನು ಹೇಳಲು ಅವಕಾಶವಿಲ್ಲದಿರುವುದರಿಂದ ಶರೀರವನ್ನೇ ಸ್ವೀಕರಿಸಿದೆ. ಸಾಂಖ್ಯರು ಒಪ್ಪಿರುವ ಪ್ರಕೃತಿಯನ್ನು ಅವ್ಯಕ್ತಶಬ್ದದಿಂದ ತಿಳಿಯಲು ಯಾವ ಕಾರಣವೂ ಇಲ್ಲ.

ಅವ್ಯಕ್ತಶಬ್ದದಿಂದ ಹೇಳಿರುವ ಈ ಶರೀರಕ್ಕಿಂತಲೂ ಸರ್ವಾಂತರಾತ್ಮನಾದ ಪರಮಾತ್ಮನೇ ವಶೀಕಾರ್ಯಗಳ ಮುಖ್ಯನು. ಸತ್ವಗುಣ ತಲೆ ಎತ್ತಲು ಶಾಸ್ತ್ರಗಳಲ್ಲಿ ಹೇಳಿರುವ ಆಹಾರಾದಿಗಳನ್ನು ತೆಗೆದುಕೊಂಡರೂ, ಸರ್ವಾಂತರ್ಯಾಮಿಯಾದ ಪರಮಾತ್ಮನ ದಯೆಯಿಲ್ಲದೆ ಸತ್ವಗುಣ ತಲೆ ಎತ್ತುವುದಿಲ್ಲ. ಪರಮಾತ್ಮನು ಸರ್ವಾಂತರ್ಯಾಮಿಯಾಗಿ ತನ್ನ ಸಂಕಲ್ಪದ ಮೂಲಕ ಉಪಾಸಕನ ಸ್ಥಿತಿ ಪ್ರವೃತ್ತಿಗಳಿಗೆ ಕಾರಣನಾಗಿದ್ದಾನೆ. ಸಾಧಕನು ಬೇರೆ ಉಪಾಯಗಳನ್ನು ಆಶ್ರಯಿಸಿದರೂ ಪರಮಾತ್ಮನ ಅನುಗ್ರಹವಿಲ್ಲದೆ ಪುರುಷಾರ್ಥಗಳನ್ನು ಸಾಧಿಸಲು ಸಮರ್ಥನಾಗಲಾರನು. ಈ ಶರೀರವೂ ಪರಮಾತ್ಮನ ಸಂಕಲ್ಪಕ್ಕೆ ಅಧೀನವಾಗಿಯೇ ಇತರ ವಿಷಯಗಳಿಂದ ಪಾರಾಗಲು ಸಮರ್ಥವಾಗುತ್ತದೆ. ಪರಮಾತ್ಮನ ಸಂಕಲ್ಪವಿಲ್ಲದಿದ್ದರೆ ಸರ್ವವನ್ನೂ ದಹಿಸಲು ಸಮರ್ಥವಾದ ಅಗ್ನಿ ಮತ್ತು ಸರ್ವವನ್ನೂ ಧರಿಸಲು ಸಮರ್ಥನಾದ ವಾಯು ಇವರಿಬ್ಬರೂ ದಹನ-ಧಾರಣಗಳಲ್ಲಿ ಹೇಗೆ ಅಸಮರ್ಥರೋ ಹಾಗೆ ಹೀನವಾದ ಈ ಶರೀರವೂ ಅಸಮರ್ಥವು. ಆದುದರಿಂದ ವಶೀಕರಣದಲ್ಲಿ ಅವ್ಯಕ್ತಶಬ್ದವಾಚ್ಯವಾದ ಈ ಶರೀರಕ್ಕಿಂತಲೂ ಪರಮಾತ್ಮನೇ ಮುಖ್ಯವೆಂದು ಹೇಳಿರುವ ಹಿರಿಮೆಯು ಉಚಿತವೇ ಆಗಿದೆ.



# ಮಂತ್ರ ೧೨

## एष सर्वेषु भूतेषु गूढोत्मा न प्रकाशते ।
## दृश्यते त्वग्र्यया बुद्ध्या सूक्ष्मया सूक्ष्मदर्शिभिः ॥

## ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೇ ।
## ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥

### ಪ್ರತಿಪದಾರ್ಥ

ಏಷಃ—ಪರಮಪುರುಷನು, ಸರ್ವೇಷು—ಎಲ್ಲಾ, ಭೂತೇಷು—ಪ್ರಾಣಿಗಳಲ್ಲಿ, ಆತ್ಮಾ—ಅಂತರ್ಯಾಮಿಯಾಗಿ, ಗೂಢಃ—ಮರೆಯಾಗಿದ್ದು, ನ ಪ್ರಕಾಶತೇ—ಪ್ರಕಾಶಿಸುವುದಿಲ್ಲ, ಅಗ್ರ್ಯಯಾ—ಏಕಾಗ್ರವಾದ, ಸೂಕ್ಷ್ಮಯಾ—ಸೂಕ್ಷ್ಮವಾದ, ಬುದ್ಧ್ಯಾ—ಬುದ್ಧಿಯಿಂದ (ಕೂಡಿರುವ), ಸೂಕ್ಷ್ಮದರ್ಶಿಭಿಃ—ತತ್ತ್ವವನ್ನು ಸೂಕ್ಷ್ಮವಾಗಿ ಅರಿತವರಿಂದ, ದೃಶ್ಯತೇ—ನೋಡಲ್ಪಡುತ್ತಾನೆ,

### ತಾತ್ಪರ್ಯ

ಪರಮಾತ್ಮನು ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿದ್ದು ಗೂಢನಾಗಿರುವನು. ಆದುದರಿಂದ ಅವನು ಯಾರಿಗೂ ಪ್ರಕಾಶಿಸುವುದಿಲ್ಲ. ಆದರೆ ಏಕಾಗ್ರವೂ, ಸೂಕ್ಷ್ಮವೂ ಆದ ಬುದ್ಧಿಯುಳ್ಳ ಸೂಕ್ಷ್ಮದರ್ಶಿಗಳು ಅಂದರೆ ಜ್ಞಾನಿಗಳು ಇವನನ್ನು ನೋಡುತ್ತಾರೆ.

### ರಂಗರಾಮಾನುಜಭಾಷ್ಯಮ್

**ಏಷ ಸರ್ವೇಷು ಭೂತೇಷು ಗೂಢೋತ್ಮಾ** [1] **ನ ಪ್ರಕಾಶತೇ**—ಸರ್ವೇಷು ಭೂತೇಷು ಆತ್ಮತಯಾ ವರ್ತಮಾನೋಽಸೌ ಗುಣತ್ರಯ(ಮಯ ?) ಮಾಯಾತಿರೋಹಿತತ್ವೇನ, ಅಜಿತಬಾಹ್ಯಾಭ್ಯಂತರಕರಣಾನಾಂ, ನ ಯಾಥಾವತ್ ಪ್ರಕಾಶತೇ। **ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ** । ಅಗ್ರ್ಯಯಾ—ಐಕಾಗ್ರ್ಯಯುಕ್ತಯಾ, ಬಾಹ್ಯಾಭ್ಯಂತರವ್ಯಾಪಾರರಹಿತಯಾ ಸೂಕ್ಷ್ಮಾರ್ಥವಿವೇಚನಶಕ್ತಯಾ, ಸೂಕ್ಷ್ಮದರ್ಶನಶೀಲೈರ್ದೃಶ್ಯತ ಇತ್ಯರ್ಥಃ ॥

**ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೇ**—ಎಲ್ಲ ಪ್ರಾಣಿಗಳಲ್ಲೂ ಆತ್ಮವಾಗಿರುವ ಈ ಪರಮಾತ್ಮನು ಸತ್ತ್ವ-ರಜಸ್ಸು-ತಮೋಗುಣರೂಪವಾದ ಮಾಯೆಯಿಂದ ಮರೆಸಲ್ಪಟ್ಟಿರುವುದರಿಂದ ಇಂದ್ರಿಯಗಳನ್ನು ಜಯಿಸದೇ ಇರುವವರಿಗೆ ನೈಜವಾಗಿ ಪ್ರಕಾಶಿಸುವುದಿಲ್ಲ. **ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ**—ಅಗ್ರ್ಯಯಾ ಆತ್ಮ ಒಂದರಲ್ಲೇ ದೃಢನಾಗಿರುವುದರಿಂದಲೂ ಇಂದ್ರಿಯ ಮತ್ತು ಮನಸ್ಸುಗಳು ತಮ್ಮ ಕೆಲಸ

1. 'ಗೂಢೋತ್ಮಾ' ಎಂಬಲ್ಲಿ "ಪೃಷೋದರಾದೀನಿ" ಎಂಬ ವಾರ್ತಿಕದಿಂದ ಗೂಢ + ಆತ್ಮಾ ಎಂಬಲ್ಲಿ 'ಆ' ಕಾರಕ್ಕೆ 'ಉ'ಕಾರ ಬಂದು ಗುಣಸಂಧಿಯಾಗಿದೆ.

'ಭವೇದ್ವರ್ಣಾಗಮಾದ್ಧಂಸಃ ಸಿಂಹೋ ವರ್ಣವಿಪರ್ಯಯಾತ್ ।
ಗೂಢೋತ್ಮಾ ವರ್ಣವಿಕೃತೇಃ ವರ್ಣನಾಶಾತ್ ಪೃಷೋದರಮ್ ॥'

ಗಳನ್ನು ಬಿಟ್ಟು ಸೂಕ್ಷ್ಮವಾದ ಅರ್ಥವನ್ನು ವಿವೇಚಿಸುವಲ್ಲಿ ಶಕ್ತವಾಗಿರುವುದರಿಂದಲೂ, ಸೂಕ್ಷ್ಮವಸ್ತುಗಳನ್ನು ನೋಡುವುದೇ ಸ್ವಭಾವವಾಗಿ ಉಳ್ಳವರು ಪರಮಾತ್ಮನನ್ನು ಕಾಣುವರು ಎಂದರ್ಥ.

ಉಪಾಯಗಳಲ್ಲಿ ಯಾವುದು ಶ್ರೇಷ್ಠವೆಂದೂ, ಕೊನೆಯದೆಂದೂ ಉತ್ಕೃಷ್ಟವಾದ ಪ್ರಾಪ್ಯವೆಂದೂ ಹೇಳಿದೆಯೋ ಆ ಪರಮಾತ್ಮನು ದೂರದಲ್ಲಿಲ್ಲ. ಹತ್ತಿರದಲ್ಲೇ ಎಲ್ಲರಲ್ಲೂ ಅಂತರ್ಯಾಮಿಯಾಗಿರುವನು. ಆದರೂ ಪ್ರಕಾಶಿಸುವುದಿಲ್ಲ. ರಹಸ್ಯವಾಗಿಯೇ ಇರುವನು. ಈತನ ಯೋಗಮಾಯೆಯಿಂದ ಇತರರು ಮೋಹಗೊಳ್ಳುವರು. ಯೋಗಮಾಯೆಯು ದೇವಸಂಬಂಧಿಯೂ ತ್ರಿಗುಣಮಯವೂ ಆಗಿದೆ. ಆದುದರಿಂದ ಇಂದ್ರಿಯಗಳನ್ನು ಜಯಿಸದ ಮಂದಬುದ್ಧಿಯ ಜನರು ಈತನನ್ನು ತಿಳಿಯಲಾರರು. ಸೂಕ್ಷ್ಮವಾಗಿ ವಸ್ತುಗಳನ್ನು ನೋಡುವವರೂ, ಸೂಕ್ಷ್ಮವಾಗಿ ಅರ್ಥಗಳನ್ನು ತಿಳಿಯಬಲ್ಲ ಸಮರ್ಥರೂ ಆದ ವಿವೇಕಿಗಳು ಈತನನ್ನು ತಿಳಿಯಬಲ್ಲರು. ಇವರು ಜಿತೇಂದ್ರಿಯರಾದುದರಿಂದ ಇವರ ಬುದ್ಧಿ ಆತ್ಮವೊಂದರಲ್ಲೇ ನೆಲೆಗೊಂಡಿರುತ್ತದೆ. ಸೂಕ್ಷ್ಮವಾದ ವಸ್ತುಗಳನ್ನು ವಿವೇಚಿಸಲು ಸಮರ್ಥವಾಗಿದೆ. ಇವರ ಬುದ್ಧಿ ಬಾಹ್ಯವಾದ ಇಂದ್ರಿಯಗಳಿಗೆ ವಿಷಯವಾದ ವಸ್ತುಗಳಲ್ಲಿರುವುದಿಲ್ಲ. ಸೂಕ್ಷ್ಮವಾದ ಪರಮಾತ್ಮನಲ್ಲಿಯೇ ಸ್ಥಿರವಾಗಿರುತ್ತದೆ. ಇದರಿಂದ ಅವರು ಆತ್ಮತತ್ತ್ವವನ್ನು ಸಾಕ್ಷಾತ್ಕಾರಮಾಡಿಕೊಳ್ಳುವರು.



# ಮಂತ್ರ ೧೩

यच्छेद्वाङ्मनसी प्राज्ञस्तद्यच्छेत् ज्ञान आत्मनि ।
ज्ञानमात्मनि महति नियच्छेत् तद्यच्छेच्छान्त आत्मनि ॥

ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇತ್ ಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾಂತ ಆತ್ಮನಿ ॥

## ಪ್ರತಿಪದಾರ್ಥ

ಪ್ರಾಜ್ಞಃ—ವಿವೇಕಿಯು ವಾಕ್—ಮಾತನ್ನು ಮನಸೀ—ಮನಸ್ಸಿನಲ್ಲಿ ಯಚ್ಛೇತ್—ಲಯ ಮಾಡಿಕೊಳ್ಳಬೇಕು. ತತ್—ಆ ಮನಸ್ಸನ್ನು, ಜ್ಞಾನೇ ಆತ್ಮನಿ—ಆತ್ಮದಲ್ಲಿರುವ (ಪ್ರಕಾಶಸ್ವರೂಪವಾದ) ಬುದ್ಧಿಯಲ್ಲಿ, ಯಚ್ಛೇತ್—ಲಯಮಾಡಿಕೊಳ್ಳಬೇಕು, ಜ್ಞಾನಮ್—ಬುದ್ಧಿಯನ್ನು ಆತ್ಮನಿ ಮಹತಿ—ದೇಹದಿಂದ ವಿಲಕ್ಷಣನಾದ ಆತ್ಮನಲ್ಲಿ, ನಿಯಚ್ಛೇತ್—ಲಯಮಾಡಿಕೊಳ್ಳಬೇಕು, ತತ್—ಜೀವ ಸ್ವರೂಪವನ್ನು ಶಾಂತ ಆತ್ಮನಿ—ದೋಷರಹಿತನಾದ ಪರಬ್ರಹ್ಮದಲ್ಲಿ ಯಚ್ಛೇತ್-ನೆಲೆಗೊಳಿಸಬೇಕು.

## ತಾತ್ಪರ್ಯ

ವಿವೇಕಿಯಾದ ಬ್ರಹ್ಮಜ್ಞಾನಿಯು ಮಾತನ್ನು ಮನಸ್ಸಿನಲ್ಲಿ ನೆಲೆಗೊಳಿಸಬೇಕು. ಮನಸ್ಸನ್ನು ಆತ್ಮದಲ್ಲಿರುವ ಬುದ್ಧಿಯಲ್ಲಿ ನೆಲೆಗೊಳಿಸಬೇಕು, ಬುದ್ಧಿಯನ್ನು ದೇಹದಿಂದ ವಿಲಕ್ಷಣನಾದ ಜೀವಾತ್ಮನಲ್ಲಿ ನೆಲೆಗೊಳಿಸಬೇಕು, ಜೀವಸ್ವರೂಪವನ್ನು ದೋಷರಹಿತವಾದ ಪರಬ್ರಹ್ಮದಲ್ಲಿ ನೆಲೆಗೊಳಿಸಬೇಕು.

## ರಂಗರಾಮಾನುಜಭಾಷ್ಯಮ್

ಬಾಹ್ಯಾಭ್ಯಂತರಕರಣವ್ಯಾಪಾರರಾಹಿತ್ಯಪ್ರಕಾರಮ್, 'ಅಧ್ಯಾತ್ಮಯೋಗಾಧಿಗಮೇನ' ಇತಿ ನಿರ್ದಿಷ್ಟಜೀವಸ್ವರೂಪಜ್ಞಾನಪ್ರಕಾರಂ ಚ ದರ್ಶಯತಿ—ಯಚ್ಛೇದ್ವಾಙ್ಮನಸೀ ಇತ್ಯಾದಿನಾ । ಇಮಂ ಮಂತ್ರಂ ಪ್ರಸ್ತುತ್ಯ ಇತ್ಥಂ ಹಿ ಭಾಷ್ಯಕೃತಾ— 'ಹಯಾದಿರೂಪಿತಾನಾಮ್ ಇಂದ್ರಿಯಾದೀನಾಂ ವಶೀಕರಣಪ್ರಕಾರೋಽಯಮುಚ್ಯತೇ । ಯಚ್ಛೇದ್ವಾಙ್ಮನಸೀ—ವಾಚಂ ಮನಸಿ ನಿಯಚ್ಛೇತ್ । ವಾಕ್ಪೂರ್ವಕಾಣಿ ಕರ್ಮೇಂದ್ರಿಯಾಣಿ ಜ್ಞಾನೇಂದ್ರಿಯಾಣಿ ಚ, ಮನಸಿ ನಿಯಚ್ಛೇತ್ ಇತ್ಯರ್ಥಃ । ವಾಕ್ಛಬ್ದೇ ದ್ವಿತೀಯಾಯಾಃ, 'ಸುಪಾಂ ಸುಲುಕ್' ಇತ್ಯಾದಿನಾ ಲುಕ್ । ಮನಸೀ ಇತಿ, 'ಸಪ್ತಮ್ಯಾಶ್ಛಾಂದಸೋ ದೀರ್ಘಃ'। ತದ್ಯಚ್ಛೇತ್ ಜ್ಞಾನ ಆತ್ಮನಿ। ತತ್-ಮನಃ, ಬುದ್ಧೌ ನಿಯಚ್ಛೇತ್ । ಜ್ಞಾನಶಬ್ದೇನಾತ್ರ ಪೂರ್ವೋಕ್ತಾ ಬುದ್ಧಿರಭಿಧೀಯತೇ । ಜ್ಞಾನ ಆತ್ಮನಿ ಇತಿ, ವ್ಯಧಿಕರಣೇಸಪ್ತಮ್ಯೌ । ಆತ್ಮನಿ ವರ್ತಮಾನೇ ಜ್ಞಾನೇ ನಿಯಚ್ಛೇದಿತ್ಯರ್ಥಃ । ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್–ಬುದ್ಧಿಂ ಕರ್ತರಿ ಮಹತಿ ಆತ್ಮನಿ ನಿಯಚ್ಛೇತ್। ತದ್ಯಚ್ಛೇಚ್ಛಾಂತ ಆತ್ಮನಿ–ತಂ ಕರ್ತಾರಂ, ಪರಸ್ಮಿನ್ ಬ್ರಹ್ಮಣಿ ಸರ್ವಾಂತರ್ಯಾಮಿಣಿ ನಿಯಚ್ಛೇತ್ । ವ್ಯತ್ಯಯೇನ ತದಿತಿ ನಪುಂಸಕಲಿಂಗತಾ । ಏವಂ ಭೂತೇನ ರಥಿನಾ–ವೈಷ್ಣವಂ ಪದಂ ಗಂತವ್ಯಮಿತ್ಯರ್ಥಃ' ಇತಿ ಭಾಷಿತಮ್ । ವಿವೃತಂಚ

ಶ್ರುತಪ್ರಕಾಶಿಕಾಯಾಮ್–'ವಾಚೋ ಮನಸಿ ನಿಯಮನಂ ಮನೋಽನನುಗುಣಪ್ರವೃತ್ತಿವೈಮುಖ್ಯಾಪಾದನಮ್ । ಮನಸಃ ಬುದ್ಧೌ ನಿಯಮನಮ್–ಅಧ್ಯವಸಾಯಾನುಗುಣವೃತ್ತಿತಾಪಾದನಮ್ । ಬುದ್ಧಿಶ್ಚ ಅರ್ಥೇಷು ಹೇಯತ್ವಾಧ್ಯ(ತಾವ್ಯ)ವಸಾಯರೂಪಾ । ತಸ್ಯಾಃ ಬುದ್ಧೇರಾತ್ಮನಿ ನಿಯಮನಂ ನಾಮ-ಸ ಏವೋಪಾದೇಯತಯಾ ಸಾಕ್ಷಾತ್ಕಾರ್ಯ ಇತ್ಯೇತದರ್ಥವಿಷಯತ್ವಾಪಾದನಮ್। ಶಾಂತೇ—ಸ್ವತ ಊರ್ಮಿಷಟ್ಕಪ್ರತಿಭಟೇ । ಶಾಂತ ಆತ್ಮನಿ ಮಹತ ಆತ್ಮನೋ ಜೀವಸ್ಯ ನಿಯಮನಂ ನಾಮ ತಚ್ಛೇಷತಾಪ್ರತಿಪತ್ತಿಃ' ಇತಿ ಆತ್ಮಶಬ್ದಸ್ಯ ಪುಲ್ಲಿಂಗತ್ವಾತ್, ಪುಲ್ಲಿಂಗತಚ್ಛಬ್ದೇನ ನಿರ್ದೇಷ್ಟವ್ಯೇ ಛಾಂದಸತ್ವಾಲ್ಲಿಂಗವ್ಯತ್ಯಯಃ ।

ನನು ಭಾಷ್ಯೇ–'ಜ್ಞಾನ ಆತ್ಮನೀತಿ ವ್ಯಧಿಕರಣೇ ಸಪ್ತಮ್ಯೌ। ಆತ್ಮನಿ ವರ್ತಮಾನೇ ಜ್ಞಾನೇ ನಿಯಚ್ಛೇದಿತ್ಯರ್ಥಃ' ಇತ್ಯುಕ್ತಿರಯುಕ್ತಾ; ಅವ್ಯಾವರ್ತಕತ್ವಾದಾತ್ಮನಿ ವರ್ತಮಾನೇ ಇತಿ ವಿಶೇಷಣಸ್ಯ।ಆತ್ಮನ್ಯವರ್ತಮಾನಜ್ಞಾನಸ್ಯೈವಾಭಾವಾತ್। ನ ಚ–'ತದ್ಯಚ್ಛೇತ್ ಜ್ಞಾನೇ' ಇತ್ಯೇತಾವತ್ಯುಕ್ತೇ, ಆತ್ಮಸ್ವರೂಪಜ್ಞಾನಭ್ರಾಂತಿಃ ಸ್ಯಾತ್ । ಅತಃ ಜ್ಞಾನ ಆತ್ಮನೀತ್ಯುಕ್ತಮಿತಿ ವಕ್ತುಂ ಶಕ್ಯಮ್; ತಥಾ ಸತಿ ತಸ್ಯಾ ಏವ ಭ್ರಾಂತೇಃ ಸಾಮಾನಾಧಿಕರಣ್ಯಯೋಜನಯಾ ದೃಢೀಕರಣಪ್ರಸಂಗಾತ್ ನಹಿ ಆತ್ಮನೀತ್ಯನೇನ ಆತ್ಮಭ್ರಾಂತಿರ್ವ್ಯುದಸ್ಯತೇ । ನ ಚ–ಆತ್ಮನಿ ವರ್ತಮಾನ ಇತಿ ಭಾಷ್ಯಸ್ಯ ಆತ್ಮನಿ ವಿಷಯವಿಷಯಿಭಾವಲಕ್ಷಣಸಂಬಂಧೇನ ವರ್ತಮಾನ ಇತ್ಯರ್ಥಃ। ಆತ್ಮವಿಷಯಜ್ಞಾನ ಇತಿ ಯಾವತ್। ಅತೋ ವ್ಯಾವರ್ತಕತಯಾ, ನ ವೈಯರ್ಥ್ಯದೋಷಃ–ಇತಿ ವಾಚ್ಯಮ್; ತಥಾ ಸತಿ 'ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್' ಇತ್ಯಸ್ಯ ವೈಯರ್ಥ್ಯಾಪಾತಾತ್। ತದರ್ಥಸ್ಯ ಅನೇನೈವ ಸಿದ್ಧೇರಿತಿ ಚೇತ್–

ಉಚ್ಯತೇ। ಅಯಮ್ ಅಭಿಪ್ರಾಯೋ ಭಾಷ್ಯಕಾರಸ್ಯ–'ತದ್ಯಚ್ಛೇತ್ ಜ್ಞಾನ ಆತ್ಮನಿ' ಇತ್ಯತ್ರಆತ್ಮನೀತಿ ವಿಷಯಸಪ್ತಮೀ। ತಚ್ಚ ಆತ್ಮವಿಷಯಕಜ್ಞಾನಮ್–'ಆತ್ಮಾ ಉಪಾದೇಯಃ ತದತಿರಿಕ್ತಾ ಅರ್ಥಾ ಹೇಯಾಃ' ಇತ್ಯೇವಂರೂಪಮ್ । ತಚ್ಚ 'ಅರ್ಥೇಷು ಹೇಯತಾಧ್ಯವಸಾಯರೂಪಾ ಬುದ್ಧಿಃ' ಇತಿ ಶ್ರುತಪ್ರಕಾಶಿಕಾಯಾಂ ವ್ಯಕ್ತಮ್। ಅಸ್ಯ ಚ ಆತ್ಮಾನಾತ್ಮವಿಷಯಕಾಹೇಯಹೇಯತಾಧ್ಯವಸಾಯರೂಪಸ್ಯ ಜ್ಞಾನಸ್ಯ, ಮಹತ್ಯಾತ್ಮನಿ ನಿಯಮನಂ ನಾಮ-'ಸ ಏವೋಪಾದೇಯತಯಾ, ಸಾಕ್ಷಾತ್ಕಾರ್ಯಃ' ಇತ್ಯೇತದರ್ಥವಿಷಯತ್ವಾಪಾದನಮಿತಿ ತತ್ರೈವ ಶ್ರುತಪ್ರಕಾಶಿಕಾಯಾಮುಕ್ತತ್ವಾತ್, ವಾಕ್ಯದ್ವಯಸ್ಯಾಪಿ ಸಪ್ರಯೋಜನತಯಾ ತ್ವದುಕ್ತವೈಯರ್ಥ್ಯಶಂಕಾನವಕಾಶ ಇತಿ॥

## ಅನುವಾದ

ಇಂದ್ರಿಯ ಮತ್ತು ಮನಸ್ಸಿನ ವ್ಯಾಪಾರಗಳಿಲ್ಲದಿರುವ ರೀತಿಯನ್ನು 'ಅಧ್ಯಾತ್ಮಯೋಗಾಧಿಗಮೇನ' ಎಂದು ಹೇಳಿದ ಜೀವಸ್ವರೂಪಜ್ಞಾನದ ರೀತಿಯನ್ನು 'ಯಚ್ಛೇದ್ವಾಙ್ಮನಸೀ' ಮುಂತಾದವುಗಳಿಂದ ವಿವರಿಸುತ್ತಾನೆ. ಈ ಮಂತ್ರವನ್ನು ಉದಹರಿಸಿ ಭಗವದ್ರಾಮಾನುಜರು ಕುದುರೆ ಮುಂತಾದ ರೀತಿಯಲ್ಲಿ ರೂಪಿಸಿದ ಇಂದ್ರಿಯ ಮುಂತಾದುವುಗಳ ವಶೀಕರಣ ರೀತಿಯನ್ನು (ಈ ರೀತಿಯಲ್ಲಿ) ಹೀಗೆ ವಿವರಿಸುವರು. ಯಚ್ಛೇದ್ವಾಙ್ಮನಸೀ– ಮಾತನ್ನು ಮನಸ್ಸಿನಲ್ಲಿ ಲಯಗೊಳಿಸಬೇಕು. ಮಾತು ಮುಂತಾದ ಕರ್ಮೇಂದ್ರಿಯಜ್ಞಾನೇಂದ್ರಿಯಗಳನ್ನು ಮನಸ್ಸಿನಲ್ಲಿ ಲಯಗೊಳಿಸಬೇಕು ಎಂದರ್ಥ. ವಾಕ್‌ಶಬ್ದದಲ್ಲಿ ದ್ವಿತೀಯಾ

ವಿಭಕ್ತಿಗೆ 'ಸುಪಾಂ ಸುಲುಕ್' ಎಂಬುದರಿಂದ ಲೋಪಬಂದಿದೆ. 'ಮನಸೀ' ಎಂಬಲ್ಲಿ ಸಪ್ತಮೀವಿಭಕ್ತಿಗೆ ದೀರ್ಘವು ಛಾಂದಸ. ತದ್ಯಚ್ಛೇತ್ ಜ್ಞಾನ ಆತ್ಮನಿ–ಮನಸ್ಸನ್ನು ಬುದ್ಧಿಯಲ್ಲಿ ಲಯಗೊಳಿಸಬೇಕು. ಜ್ಞಾನಶಬ್ದದಿಂದ ಹಿಂದೆ ಹೇಳಿದ ಬುದ್ಧಿಯು ಹೇಳಲ್ಪಡುತ್ತದೆ, ಜ್ಞಾನ ಆತ್ಮನಿ ಎಂಬುದು ವ್ಯಧಿಕರಣಸಪ್ತಮ್ಯಂತಗಳು. ಆತ್ಮನಲ್ಲಿರುವ ಬುದ್ಧಿಯಲ್ಲಿ ಲಯಗೊಳಿಸಬೇಕು ಎಂದರ್ಥ. ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್–ಬುದ್ಧಿಯನ್ನು ಕರ್ತೃವೆನಿಸಿದ ಜೀವಾತ್ಮನಲ್ಲಿ ಲಯಗೊಳಿಸಬೇಕು. ತದ್ಯಚ್ಛೇತ್ ಶಾಂತ ಆತ್ಮನಿ–ಆ ಕರ್ತೃವಾದ ಜೀವಾತ್ಮನನ್ನು ಸರ್ವಾಂತರ್ಯಾಮಿಯಾದ ಪರಬ್ರಹ್ಮದಲ್ಲಿ ನೆಲೆಗೊಳಿಸಬೇಕು. 'ತತ್' ಎಂದು ಪುಲ್ಲಿಂಗಕ್ಕೆ ಬದಲಾಗಿ ನಪುಂಸಕಲಿಂಗ ಬಂದಿದೆ. ಈ ರೀತಿಯಾದ ರಥಿಕನೆನಿಸಿದ ಜೀವನು ವಿಷ್ಣುವಿನ ಸ್ಥಾನ(ಪರಮಪದ)ವನ್ನು ಸೇರಬೇಕು ಎಂದು ಶ್ರೀಭಾಷ್ಯದಲ್ಲಿ ವಿವರಿಸಿರುವರು.

ಶ್ರುತಪ್ರಕಾಶಿಕೆಯಲ್ಲಿ ಈ ರೀತಿ ವಿವರಿಸುತ್ತಾರೆ. ಮಾತನ್ನು ಮನಸ್ಸಿನಲ್ಲಿ ಲಯಗೊಳಿಸುವುದು ಅಂದರೆ ಮನಸ್ಸಿಗೆ ಅನುಗುಣವಲ್ಲದ ವ್ಯಾಪಾರದಿಂದ ವಿಮುಖಗೊಳಿಸುವುದು. ಮನಸ್ಸನ್ನು ಬುದ್ಧಿಯಲ್ಲಿ ಲಯಗೊಳಿಸುವುದು ಅಂದರೆ ನಿಶ್ಚಯಾತ್ಮಕಜ್ಞಾನಕ್ಕೆ ಅನುಗುಣವಾದ ವ್ಯಾಪಾರವನ್ನು ರೂಪಿಸುವುದು. ವಿಷಯಗಳಲ್ಲಿ ಹೇಯತ್ವನಿಶ್ಚಯರೂಪವಾದುದೇ ಬುದ್ಧಿ. ಬುದ್ಧಿಯನ್ನು ಆತ್ಮದಲ್ಲಿ ಲಯಗೊಳಿಸುವುದೆಂದರೆ ಆತ್ಮವೇ ಉಪಾದೇಯವೆಂದು ಸಾಕ್ಷಾತ್ಕರಿಸಬೇಕೆಂಬ ವಿಷಯವನ್ನು ರೂಪಿಸುವುದು.

ಕಾಮ–ಕ್ರೋಧ–ಲೋಭ–ಮೋಹ–ಮದ–ಮಾತ್ಸರ್ಯಗಳಿಗೆ ವಿರೋಧಿಯಾದ ಪರಮಾತ್ಮನಲ್ಲಿ ಜೀವಾತ್ಮನನ್ನು ನೆಲೆಗೊಳಿಸುವುದು ಅಂದರೆ 'ಪರಮಾತ್ಮನಿಗೆ ನಾನು ದಾಸನು' ಎಂಬ ಭಾವನೆಯನ್ನು ರೂಢಿಸಿಕೊಳ್ಳುವುದು. ಆತ್ಮಶಬ್ದ ಪುಲ್ಲಿಂಗವಾದರೂ ಪುಲ್ಲಿಂಗ 'ತಂ' ಶಬ್ದಕ್ಕೆ ಬದಲಾಗಿ 'ತತ್' ಎಂಬ ನಪುಂಸಕಲಿಂಗಶಬ್ದವು ಛಾಂದಸವಾದ್ದರಿಂದ ಸಾಧು.

ಶ್ರೀಭಾಷ್ಯದಲ್ಲಿ 'ಜ್ಞಾನ ಆತ್ಮನಿ' ಎಂಬ ಎರಡು ಪದಗಳು ವ್ಯಧಿಕರಣಸಪ್ತಮಿ. ಇದರಿಂದ ಆತ್ಮನಲ್ಲಿರುವ ಜ್ಞಾನದಲ್ಲಿ ಲಯಗೊಳಿಸಬೇಕು ಎಂದರ್ಥ ಎಂದು ಹೇಳಿರುವುದು ಉಚಿತವಲ್ಲ. ಆತ್ಮನಲ್ಲಿ ಇರದಿರುವ ಜ್ಞಾನವೇ ಇಲ್ಲದಿರುವುದರಿಂದ ಆತ್ಮನಲ್ಲಿರುವ ವಿಶೇಷಣಕ್ಕೆ ಪ್ರಯೋಜನವೇ ಇಲ್ಲ. 'ತದ್ಯಚ್ಛೇತ್ ಜ್ಞಾನೇ' ಎಂದಷ್ಟುಮಾತ್ರ ಹೇಳಿದರೆ ಆತ್ಮಸ್ವರೂಪಜ್ಞಾನ ಎಂಬ ಭ್ರಮೆ ಬರಬಹುದು. ಆದುದರಿಂದ 'ಜ್ಞಾನ ಆತ್ಮನಿ' ಎಂದು ಹೇಳಿದೆ ಎಂದು ಹೇಳಲಾಗದು. ಹಾಗಾದಲ್ಲಿ ಹಿಂದೆ ಹೇಳಿದ ಭ್ರಮೆಯನ್ನೇ ಸಾಮಾನಾಧಿಕರಣ್ಯದಿಂದ ದೃಢಪಡಿಸಿದಂತಾಗುತ್ತದೆ. 'ಆತ್ಮನಿ' ಎಂದು ಹೇಳುವುದರಿಂದ ಆತ್ಮಸ್ವರೂಪಭ್ರಾಂತಿ ದೂರವಾಗುವುದಿಲ್ಲ. 'ಆತ್ಮನಿ ವರ್ತಮಾನೇ' ಎಂಬ ಭಾಷ್ಯಕ್ಕೆ ಆತ್ಮದಲ್ಲಿ ವಿಷಯ–ವಿಷಯಿ ಎಂಬ ಸಂಬಂಧದಿಂದ ಇರುವ ಎಂದರ್ಥ. ಇದರಿಂದ ಆತ್ಮವಿಷಯಕಜ್ಞಾನ ಎಂದು ಹೇಳಿದಂತಾಗುತ್ತದೆ ಎಂದು ಹೇಳಲಾಗದು. ಹಾಗಾದಲ್ಲಿ 'ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್' ಎಂದು ಮುಂದೆ ಹೇಳಿರುವ ವಾಕ್ಯ ವ್ಯರ್ಥವಾಗುವುದು. ಅಲ್ಲಿನ ಅರ್ಥವು ಮೇಲೆ ಹೇಳಿದ ರೀತಿಯಿಂದಲೇ ಸಿದ್ಧವಾಗುತ್ತದೆ ಎಂದು ಪೂರ್ವಪಕ್ಷಬಂದಲ್ಲಿ ಹೇಳುತ್ತೇವೆ.

ಭಾಷ್ಯಕಾರರ ಅಭಿಪ್ರಾಯ ಹೀಗಿದೆ. 'ತದ್ಯಚ್ಛೇತ್ ಜ್ಞಾನಮಾತ್ಮನಿ' ಎಂಬಲ್ಲಿ 'ಆತ್ಮನಿ' ಎಂಬುದು ವಿಷಯಸಪ್ತಮಿ, ಈ ಆತ್ಮವಿಷಯಕಜ್ಞಾನವು ಉಪಾದೇಯವು.

ಅದಕ್ಕಿಂತ ಭಿನ್ನವಾದುವುಗಳೆಲ್ಲವೂ ನಿಕೃಷ್ಟವು ಎಂಬ ರೂಪವುಳ್ಳದ್ದು. ವಿಷಯಗಳಲ್ಲಿ ನಿಕೃಷ್ಟ ಎಂಬ ನಿಶ್ಚಯರೂಪವಾದ ಬುದ್ಧಿಯೇ ಆ ಜ್ಞಾನ ಎಂದು ಶ್ರುತಪ್ರಕಾಶಿಕೆಯಲ್ಲಿ ಸ್ಪಷ್ಟಪಟ್ಟಿದೆ. ಇದರಿಂದ ಎರಡು ವಾಕ್ಯಗಳಿಗೂ ಪ್ರಯೋಜನವಿರುವುದರಿಂದ ನೀನು ಹೇಳಿದಂತೆ ವ್ಯರ್ಥ ಎಂಬುದಕ್ಕೆ ಅವಕಾಶವಿಲ್ಲ.

## ಭಾಷ್ಯಸಾರ

ಇಂದ್ರಿಯ ಮುಂತಾದವುಗಳನ್ನು ವಶಪಡಿಸಿಕೊಳ್ಳದೆ ಪರಮಾತ್ಮನನ್ನು ಹೊಂದಲಾಗುವುದಿಲ್ಲ. ಜಿತೇಂದ್ರಿಯರಾದವರಿಗೆ ಪರಮಾತ್ಮ ಸುಲಭನೆಂದು ತಿಳಿಸಿ, ಇಂದ್ರಿಯ ಮುಂತಾದವುಗಳ ವಶೀಕರಣದಲ್ಲಿ ಪ್ರಧಾನವಾದುವುಗಳನ್ನು ತಿಳಿಸಿ ಈಗ ವಶೀಕರಣಮಾಡಿಕೊಳ್ಳುವ ರೀತಿಯನ್ನು ವಿವರಿಸುತ್ತಾನೆ.

ತ್ಯಾಜ್ಯವಾವುದು ? ಸ್ವೀಕರಿಸಬೇಕಾದುದು ಯಾವುದು ? ಎಂಬುದನ್ನು ಅರಿತ ವಿವೇಕಿಯು ವಾಕ್ ಮುಂತಾದ ಇಂದ್ರಿಯಗಳನ್ನು ಶಬ್ದಾದಿವಿಷಯಗಳತ್ತ ಬಿಡದೆ ಮನಸ್ಸಿನಲ್ಲಿ ನೆಲೆಗೊಳಿಸಬೇಕು. ಇಲ್ಲಿ 'ಯಚ್ಛೇದ್ವಾಕ್ ಮನಸೀ[1]' ಎಂಬಲ್ಲಿಯ ವಾಕ್ ಎಂಬ ಶಬ್ದವು ಇತರ ಇಂದ್ರಿಯಗಳನ್ನೂ ತಿಳಿಸುತ್ತದೆ.

'ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯಾಹರತಿ ಪ್ರಜ್ಞಾಮ್ ವಾಯುರ್ನಾವಮಿವಾಂಭಸಿ[2]'

ಎಂಬಲ್ಲಿ ತಿಳಿಸಿರುವಂತೆ ಪ್ರಜ್ಞೆಯನ್ನು ಉಳಿಸಿಕೊಳ್ಳಲು ವಿವೇಕಿಯಾದವನು ಐದು ಕರ್ಮೇಂದ್ರಿಯಗಳನ್ನು ಐದು ಜ್ಞಾನೇಂದ್ರಿಯಗಳನ್ನು ವಿಷಯಗಳಿಂದ ಹಿಂತಿರುಗಿಸಿ ಮನಸ್ಸಿನಲ್ಲಿ ನೆಲೆಗೊಳಿಸಬೇಕು. ಇಲ್ಲಿ ನೆಲೆಗೊಳಿಸುವುದು ಅಂದರೆ ಆತ್ಮದತ್ತ ತಿರುಗಿರುವ ಮನಸ್ಸಿಗೆ ಅನುಕೂಲವಾಗಿ ವರ್ತಿಸುವುದು, ಅಂದರೆ ಮನಸ್ಸು ನಾನಾವಿಷಯಗಳಲ್ಲಿ ಚಂಚಲವಾಗದಂತೆ ಮಾಡುವುದು. ವಿಷಯಗಳಲ್ಲಿ ಸಂಬಂಧಿಸಿದ ಇಂದ್ರಿಯಗಳು ಆತ್ಮನತ್ತ ತಿರುಗಿದ ಮನಸನ್ನು ಚಂಚಲವಾಗುವಂತೆ ಮಾಡುತ್ತದೆ. ಕುದುರೆಗಳನ್ನು ಲಗಾಮಿನಿಂದ ವಶಪಡಿಸಿಕೊಳ್ಳುವಂತೆ ಈ ಮನಸ್ಸೆಂಬ ಲಗಾಮಿನಿಂದ ಇಂದ್ರಿಯಗಳೆಂಬ ಕುದುರೆಗಳನ್ನು ವಶದಲ್ಲಿರಿಸಿಕೊಳ್ಳಬೇಕು ಎಂದು ತಿಳಿಸಿದಂತಾಗುತ್ತದೆ.

ಈ ಮನಸ್ಸನ್ನು ಆತ್ಮಜ್ಞಾನದಲ್ಲಿ ನೆಲೆಗೊಳಿಸಬೇಕು. ಇಲ್ಲಿ ಜ್ಞಾನ ಅಂದರೆ ಬುದ್ಧಿ. 'ಜ್ಞಾನ ಆತ್ಮನಿ' ಎಂಬಲ್ಲಿರುವ ಸಪ್ತಮಿಯು ಔಪಶ್ಲೇಷಿಕಾಧಾರ ಎಂಬರ್ಥದಲ್ಲಿದೆ. ಆತ್ಮ

---

1 'ವಾಕ್ ಮನಸೀ' ಎಂಬಲ್ಲಿ ವಾಕ್ ಎಂಬಲ್ಲಿರಬೇಕಾದ ದ್ವಿತೀಯಾವಿಭಕ್ತಿಗೆ ಲೋಪವೂ 'ಮನಸೀ ಎಂಬ ಸಪ್ತಮಿಯ 'ಇ'ಕಾರಕ್ಕೆ 'ಈ'ಕಾರವೂ ಛಾಂದಸವಾದುದರಿಂದ ಸಾಧುತ್ವವನ್ನು ಒಪ್ಪಬೇಕು.

2 ಸಮುದ್ರದಲ್ಲಿ ಹೋಗುವ ದೋಣಿಯನ್ನು ವಿಪರೀತವಾಗಿ ಬೀಸುವ ಗಾಳಿಯು ಬಲಾತ್ಕಾರವಾಗಿ ಮತ್ತೊಂದೆಡೆ ಒಯ್ಯುವಂತೆ ಶಬ್ದಾದಿವಿಷಯಗಳಲ್ಲಿ ಆಸಕ್ತವಾದ ಇಂದ್ರಿಯಗಳುಳ್ಳವನ ಮನಸ್ಸು ಆತ್ಮವನ್ನು ಬಿಟ್ಟು ಬೇರೆ ವಿಷಯಗಳಲ್ಲಿ ಆಸಕ್ತವಾಗುತ್ತದೆ.

3 ಸಪ್ತಮಿಗೆ ಆಧಾರ ಅರ್ಥ. ಇದು ವೈಷಯಿಕ, ಅಭಿವ್ಯಾಪಕ ಮತ್ತು ಔಪಶ್ಲೇಷಿಕ ಎಂದು ಮೂರು ವಿಧ. ಸಂಯೋಗಮುಂತಾದ ಸಂಬಂಧಾರ್ಥದಲ್ಲಿ ಬರುವ ಸಪ್ತಮಿಗೆ ಔಪಶ್ಲೇಷಿಕಸಪ್ತಮಿ ಎಂದು ಹೆಸರು.

ದಲ್ಲಿರುವ ಬುದ್ಧಿಶಬ್ದದಿಂದ ಹೇಳಲ್ಪಡುವ ಧರ್ಮಭೂತಜ್ಞಾನದಲ್ಲಿ ನೆಲೆಗೊಳಿಸಬೇಕು. ಎಂದರ್ಥ. ಮನಸ್ಸನ್ನು ಬುದ್ಧಿಯಲ್ಲಿ ನೆಲೆಗೊಳಿಸುವುದು ಅಂದರೆ ಜ್ಞಾನಶಬ್ದದಿಂದ ಹೇಳಿದ ಅಧ್ಯವಸಾಯರೂಪವಾದ ಬುದ್ಧಿಗೆ ಅನುಕೂಲವಾಗಿ ಮನಸ್ಸು ಪ್ರವರ್ತಿಸುವಂತೆ ಮಾಡುವುದು ಎಂದರ್ಥ. 'ಆತ್ಮನಿ ಜ್ಞಾನೇ' ಎಂದು ವ್ಯಧಿಕರಣವಾಗಿ ಹೇಳಿರುವುದರಿಂದ 'ಜ್ಞಾನವೇ ಆತ್ಮಾ' ಎಂದು ಹೇಳುವ ಪರಮತವು ಪರಿಹರಿಸಲ್ಪಟ್ಟಿತೆಂದು ತಿಳಿದುಬರುತ್ತವೆ. ಮನಸ್ಸು ಸ್ವತಂತ್ರವಾಗಿ ಸಂಕಲ್ಪ ಮಾಡಲಾರದು. ಆದುದರಿಂದ ಅಧ್ಯವಸಾಯರೂಪವಾದ ಬುದ್ಧಿಗನುಗುಣವಾಗಿ ಮನಸ್ಸನ್ನು ಪ್ರವರ್ತಿಸುವಂತೆ ಮಾಡಿದಲ್ಲಿ ವಿಷಯಗಳಲ್ಲಿ ಆಸಕ್ತಿ ಮೂಡುವುದಿಲ್ಲ. ಇದನ್ನೇ ಮನಸ್ಸಿನ ವಶೀಕರಣವೆಂದು ಹೇಳುತ್ತಾರೆ ಎಂದು ತಾತ್ಪರ್ಯ.

ಈ ನಿಶ್ಚಯರೂಪವಾದ ಬುದ್ಧಿಯನ್ನು ಜೀವಾತ್ಮಸ್ವರೂಪದಲ್ಲಿ ನೆಲೆಗೊಳಿಸಬೇಕು. ಬುದ್ಧಿಯನ್ನು ಜೀವನಲ್ಲಿ ನೆಲೆಗೊಳಿಸುವುದು ಅಂದರೆ ಜೀವಭಿನ್ನವಾದ ವಿಷಯಗಳಲ್ಲಿ ಪ್ರವರ್ತಿಸದಂತೆ ಮಾಡಿ ಜೀವಾತ್ಮ ಒಂದರಲ್ಲೇ ನೆಲೆಸುವಂತೆ ಮಾಡುವುದು. ಅಂದರೆ ಆತ್ಮಭಿನ್ನವಾದುವುಗಳು ಶ್ರೇಷ್ಠವಲ್ಲವೆಂದೂ ಆತ್ಮವೊಂದೇ ಶ್ರೇಷ್ಠವೆಂಬ ನಿಶ್ಚಯವನ್ನು ಪಡೆಯಬೇಕೆಂದು ತಾತ್ಪರ್ಯ.

'[1] ತದ್ಯಚ್ಛೇತ್ ಶಾಂತ ಆತ್ಮನಿ' ಅಂದರೆ ಈ ಮಹತ್ತಾದ ಆತ್ಮ ಅಂದರೆ ಜೀವನನ್ನು ಕಾಮ–ಕ್ರೋಧಾದಿಗಳಿಲ್ಲದ ಆತ್ಮನಲ್ಲಿ ಅಂದರೆ ಪರಮಾತ್ಮನಲ್ಲಿ ನೆಲೆಗೊಳಿಸಬೇಕು. ಪರಮಾತ್ಮನಲ್ಲಿ ಜೀವಾತ್ಮನನ್ನು ನೆಲೆಗೊಳಿಸುವುದು. ಅಂದರೆ ನಾನು ನಿನಗೆ ಶೇಷಭೂತ ಎಂಬ ಭಾವನೆಯಿಂದ ಪರಮಾತ್ಮನೊಬ್ಬನನ್ನೇ ಆಶ್ರಯಿಸುವುದು ಎಂದರ್ಥ. ಪರಮಾತ್ಮನಲ್ಲಿ ಶರಣಾಗತಿ ಮಾಡಬೇಕು ಎಂದು ತಾತ್ಪರ್ಯ. ಇದೇ ಜೀವನ ವಶೀಕರಣವು. ಪರಮಾತ್ಮನಲ್ಲಿ ಶರಣಾಗತಿ ಮಾಡಿದವನಿಗೆ ಬುದ್ಧಿ ಮುಂತಾದವುಗಳೆಲ್ಲವೂ ಅನುಕೂಲವಾಗುತ್ತವೆ. ಇವುಗಳು ಅನುಕೂಲವಾದರೆ ಪರಮಾತ್ಮನ ನೆಲೆಯನ್ನು ಸೇರುತ್ತಾನೆ ಎಂದು ತಾತ್ಪರ್ಯ.



1. 'ತಮ್' ಎಂದು ಪುಲ್ಲಿಂಗದಲ್ಲಿ ಹೇಳಬೇಕಾದಲ್ಲಿ 'ತತ್' ಎಂದು ನಪುಂಸಕಲಿಂಗ ಹೇಳಿರುವುದು ವೈದಿಕ ಶಬ್ದವಾಗಿರುವುದರಿಂದ ಸಾಧು.

## ಮಂತ್ರ ೧೪

**उत्तिष्ठत जाग्रत प्राप्य वरान् निबोधत ।**
**क्षुरस्य धारा निशिता दुरत्यया दुर्गं पथस्तत् कवयो वदन्ति ॥**

ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ ।
ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್
ಕವಯೋ ವದಂತಿ ॥

### ಪ್ರತಿಪದಾರ್ಥ

ಉತ್ತಿಷ್ಠತ—(ಅಜ್ಞಾನವೆಂಬ ನಿದ್ರೆಯಿಂದ) ಎದ್ದೇಳಿ, ಜಾಗ್ರತ—ಎಚ್ಚರಗೊಳ್ಳಿರಿ, ವರಾನ್—ಉತ್ತಮ ಆಚಾರ್ಯರನ್ನು, ಪ್ರಾಪ್ಯ—ಹೊಂದಿ, ನಿಬೋಧತ—(ತತ್ತ್ವತ್ರಯರಹಸ್ಯವನ್ನು) ತಿಳಿದುಕೊಳ್ಳಿರಿ, —ಕತ್ತಿಯ, ನಿಶಿತಾ—ಹರಿತವಾದ, ಧಾರಾ—ಅಲಗು, ದುರತ್ಯಯಾ—ಹೇಗೆ ದಾಟಲು ಕಷ್ಟ ಸ್ತ್ರೋ ಹಾಗೇ, ಕವಯಃ—ಬ್ರಹ್ಮಜ್ಞಾನಿಗಳು ತತ್—ಆ, ಪಥಃ—(ಬ್ರಹ್ಮಜ್ಞಾನ)ಮಾರ್ಗವನ್ನು ರ್ಗ್—ದುರ್ಗಮವೆಂದು, ವದಂತಿ—ಹೇಳುತ್ತಾರೆ.

### ತಾತ್ಪರ್ಯ

ಹರಿತವಾದ ಕತ್ತಿಯ ಅಲಗುಗಳನ್ನು ದಾಟುವುದು ಎಷ್ಟು ಕಷ್ಟವೋ ಅಂದರೆ ಕತ್ತಿಯ ಮೇಲೆ ನಡೆಯುವುದು ಹೇಗೆ ಕಷ್ಟವೋ ಹಾಗೆಯೇ ಮೋಕ್ಷಮಾರ್ಗವನ್ನು ತಿಳಿದು ವುದೂ ಕಷ್ಟ ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ. ಆದುದರಿಂದ ಎಲೈ ಮುಮುಕ್ಷು ಳಿರಿ, ಎಚ್ಚರಗೊಳ್ಳಿರಿ ಶ್ರೇಷ್ಠವಾದ ಆಚಾರ್ಯರ ಬಳಿ ಹೋಗಿ ಆ ಬ್ರಹ್ಮಜ್ಞಾನವನ್ನು ಕೊಳ್ಳಿರಿ ಎಂದು ಯಮನು ಮುಮುಕ್ಷುಗಳನ್ನು ಪ್ರೋತ್ಸಾಹಿಸುತ್ತಿದ್ದಾನೆ.

### ರಂಗರಾಮಾನುಜಭಾಷ್ಯಮ್

ಏವಂ ವಶೀಕರಣಪ್ರಕಾರಮುಪದಿಶ್ಯ ಅಧಿಕಾರಿಪುರುಷಾನ್ ಅಭಿಮುಖೀಕರೋತಿ ತ ಜಾಗ್ರತ—ಆತ್ಮಜ್ಞಾನಾಭಿಮುಖಾ ಭವತ; ಅಜ್ಞಾನನಿದ್ರಾಯಾಃ ಕ್ಷಯಂ ಕುರುತ। ವರಾನ್ ನಿಬೋಧತ । ವರಾನ್—ಶ್ರೇಷ್ಠಾನ್ ಆಚಾರ್ಯಾನ್ ಉಪಗಮ್ಯ ಆತ್ಮ ನಿಬೋಧತ । ಯದ್ವಾ-ಉಪಾಸಿತಾತ್ ಭಗವತೋ ವಾ ಬ್ರಹ್ಮವಿದ್ಭ್ಯೋ ವಾ, ತಾಪಾರಮಾರ್ಥ್ಯಂ ಚ ಯಥಾವತ್ ವೇತ್ಸ್ಯತೇ ಭವಾನ್' ಇತ್ಯೇವಂರೂಪಾನ್ ' ಪ್ರಾಪ್ಯ ಜ್ಞೇಯಮಾತ್ಮತತ್ತ್ವಂ ನಿಬೋಧತ । ನ ಉದಾಸಿತವ್ಯಮಿತಿ ಭಾವಃ । ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ । ಜ್ಞಾನಿನಃ ತ್ಮತತ್ತ್ವಂ ದುರ್ಗಮಮ್ ಪಂಥಾನಂ ವರ್ಣಯಂತಿ । ತತ್ ಕಸ್ಯ ಹೇತೋಃ ? ಆತ್ಮತತ್ತ್ವಂ, ಕ್ಷುರಸ್ಯ—ಆಯುಧವಿಶೇಷಸ್ಯ, ಧಾರಾ—ಅಗ್ರಮ್, ನಿಶಿತಾ—ತೀಕ್ಷ್ಣಾ, ಯಾ—ಅನತಿಕ್ರಮಣೀಯಾ । ತೀಕ್ಷ್ಣೇ ಕ್ಷುರಾಗ್ರೇ ಸಂಚರತಃ ಪುಂಸೋ ಯಥಾ ಪಿ ಅನವಧಾನೇ ಆತ್ಮನಾಶೋ ಭವತಿ ಏವಮಿಹ ಆತ್ಮಸ್ವರೂಪಾವಗತಿದಶಾಯಾಂ ಪ್ಯನವಧಾನಾಪರಾಧೇ ಆತ್ಮನಾಶೋ ಭವತಿ, ಇತಿ ಭಾವಃ ॥

## ಅನುವಾದ

ಹೀಗೆ ವಶಪಡಿಸಿಕೊಳ್ಳುವ ವಿಧಾನವನ್ನು ಉಪದೇಶಿಸಿ-ಉಪಾಸಕರನ್ನು ಆತ್ಮತತ್ತ್ವದತ್ತ ತಿರುಗಿಸುತ್ತಾನೆ. ಉತ್ತಿಷ್ಠತ ಜಾಗ್ರತ-ಆತ್ಮಜ್ಞಾನದತ್ತ ತಿರುಗಿರಿ, ಅಜ್ಞಾನವೆಂಬ ನಿದ್ರೆಯನ್ನು ನಾಶಗೊಳಿಸಿ ಪ್ರಾಪ್ಯ-ವರಾನ್ ನಿಬೋಧತ-ವರಾನ್-ಉತ್ತಮವಾದ ಆಚಾರ್ಯರ ಬಳಿ ಸಾರಿ (ಹೋಗಿ) ಆತ್ಮತತ್ತ್ವವನ್ನು ಕೇಳಿರಿ ಅಥವಾ ಉಪಾಸನೆಗೆ ಒಲಿದ ಭಗವಂತನಿಂದಾಗಲೀ ಅಥವಾ ಬ್ರಹ್ಮಜ್ಞಾನಿಗಳಿಂದಾಗಲೀ, ಪರಮಾತ್ಮನ ಹಿರಿತನವನ್ನು ಯಥಾವತ್ತಾಗಿ ನೀನು ತಿಳಿಯಬಲ್ಲೆ ಎಂದು ಹೇಳಿರುವವರನ್ನು ಪಡೆದು ತಿಳಿಯಬೇಕಾದ ಆತ್ಮತತ್ತ್ವವನ್ನು ತಿಳಿಯಿರಿ. ಉದಾಸೀನರಾಗಬಾರದು ಎಂದು ತಾತ್ಪರ್ಯ. ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ. ಜ್ಞಾನಿಗಳು, ತತ್-ಆತ್ಮತತ್ತ್ವವನ್ನು ಕಷ್ಟವಾದ ಮಾರ್ಗವೆಂದು ವರ್ಣಿಸುತ್ತಾರೆ. ಅದಕ್ಕೆ ಕಾರಣವೇನು ? ಆತ್ಮತತ್ತ್ವವು ಕ್ಷುರಸ್ಯ-ಆಯುಧ ವಿಶೇಷದ ಧಾರಾ-ಅಲಗಿನಂತೆ ನಿಶಿತಾ-ಹರಿತವಾಗಿದೆ ದುರತ್ಯಯಾ-ದಾಟಲಸಾಧ್ಯವಾದುದು. ಹರಿತವಾದ ಕತ್ತಿಯ ಅಲುಗಿನಲ್ಲಿ ನಡೆಯುವ ಮನುಷ್ಯನು ಸ್ವಲ್ಪ ಎಚ್ಚರ ತಪ್ಪಿದರೂ ಹೇಗೆ ಅಪಾಯಕ್ಕೊಳಗಾಗುವನೋ ಹಾಗೆ ಇಲ್ಲಿ ಆತ್ಮಸ್ವರೂಪವನ್ನು ತಿಳಿಯುವ ಸಮಯದಲ್ಲಿ ಸ್ವಲ್ಪ ಎಚ್ಚರ ತಪ್ಪಿದರೂ ಆತ್ಮನಾಶವುಂಟಾಗುತ್ತದೆ ಎಂದು ತಾತ್ಪರ್ಯ.

## ಭಾಷ್ಯಸಾರ

ವಶೀಕರಣರೀತಿಯನ್ನು ಉಪದೇಶಿಸಿದ ನಂತರ ಚಿನ್ನದಂತಹ ನಿಧಿಯ ರೂಪದಲ್ಲಿರುವ ಪರಮಾತ್ಮನು ಜೀವನ ಶರೀರದಲ್ಲೇ ಇದ್ದರೂ ಆತನನ್ನು ತಿಳಿಯದೇ ನಾಶವಾಗುತ್ತಿದ್ದಾರೆ ಎಂಬ ಅನುತಾಪದಿಂದ 'ಉತ್ತಿಷ್ಠತ' ಎಂದು ಅರ್ಹರಾದ ಜನರನ್ನು ಪ್ರೋತ್ಸಾಹಿಸುತ್ತಾನೆ.

ಎಲೈ ಉಪಾಸಕರೇ; ಅನಾದಿಕಾಲದಿಂದ ಅವಿದ್ಯೆಯಲ್ಲಿಯೇ ಮುಳುಗಿರುವಿರಿ. ಈಗಲಾದರೂ ಅಜ್ಞಾನವೆಂಬ ನಿದ್ರೆಯಿಂದ ಎಚ್ಚರಗೊಳ್ಳಿರಿ. ಶಬ್ದಾದಿವಿಷಯಗಳೆಂಬ ಹಾಸಿಗೆಯಿಂದ ಎದ್ದೇಳಿ ಆತ್ಮಜ್ಞಾನದತ್ತ ತಿರುಗಿರಿ. ಈಗಲಾದರೂ ಅಜ್ಞಾನವೆಂಬ ನಿದ್ರೆಯನ್ನು ನಾಶಗೊಳಿಸಿರಿ. ಆಗಲೇ ಬಹಳ ಕಾಲ ಕಳೆದಿದೆ. ಶ್ರೇಷ್ಠವಾದ ಆತ್ಮತತ್ತ್ವಜ್ಞಾನವನ್ನು (ಆತ್ಮಜ್ಞಾನಿಗಳಾದ ಆಚಾರ್ಯರ ಬಳಿ ಸಾರಿ) ತಿಳಿಯಿರಿ ಅಥವಾ 'ಯಮೇವೈಷ ವೃಣುತೇ' ಎಂಬಂತೆ ಶರಣಾಗತಿಯಿಂದ ಪ್ರಸನ್ನನಾಗುವ ಪರಮಾತ್ಮನ ಅನುಗ್ರಹ ಪಡೆದು ಆತ್ಮತತ್ತ್ವವನ್ನು ತಿಳಿಯಿರಿ. ಈ ವಿಷಯದಲ್ಲಿ ಉಪೇಕ್ಷಿಸಲ್ಲದು 'ಪ್ರಾಪ್ಯ ವರಾನ್ ನಿಬೋಧತ' ಎಂಬುವುದರಿಂದ ಆಚಾರ್ಯರ ಬಳಿ ಸಾರಿ ವರವನ್ನು ಪಡೆಯಿರಿ ಎಂದು ಹೇಳಲು ಕಾರಣವನ್ನು 'ದುರ್ಗಂ ಪಥಃ' ಎಂಬುವುದರಿಂದ ವಿವರಿಸುತ್ತಾನೆ. ಈ ಆತ್ಮತತ್ತ್ವವನ್ನು ತಿಳಿಯುವ ಮಾರ್ಗ ಕಷ್ಟಸಾಧ್ಯವಾದುದು ಅಂದರೆ ಆಚಾರ್ಯರ ಅನುಗ್ರಹವಿಲ್ಲದೆ ತಿಳಿಯುವುದು ಕಷ್ಟ. ಎಂದು ಆತ್ಮತತ್ತ್ವವನ್ನು ಅರಿತವರು ಹೇಳುತ್ತಾರೆ. ಇದನ್ನು 'ಕ್ಷುರಸ್ಯ ಧಾರಾ' ಎಂಬ ದೃಷ್ಟಾಂತದಿಂದ ವಿವರಿಸುತ್ತಾನೆ, ತತ್ತ್ವಜ್ಞಾನವು ಕತ್ತಿಯ ಅಲಗಿನಂತೆ ತೀಕ್ಷ್ಣವಾದುದು. ಅದರ ಮೇಲೆ ನಡೆಯುವುದು ಹೇಗೆ ಕಷ್ಟವೋ ಆತ್ಮತತ್ತ್ವವನ್ನು ತಿಳಿಯುವುದು

ಕಷ್ಟ. ಅದಕ್ಕಾಗಿ ಆಚಾರ್ಯರ ಬಳಿ ಹೋಗಬೇಕು. ಅಶಿಕ್ಷಿತನಿಗೂ, ಏಕಾಗ್ರತೆಯಿಲ್ಲದವನಿಗೂ, ಕತ್ತಿಯ ಅಲಗಿನ ಮೇಲೆ ನಡೆದಲ್ಲಿ ಹೇಗೆ ಅನರ್ಥಪರಂಪರೆ ಉಂಟಾಗುವುದೋ ಹಾಗೆ ಸ್ವತಂತ್ರವಾಗಿ ತಿಳಿಯಲು ಯತ್ನಿಸಿದಲ್ಲಿ ಅನರ್ಥಪರಂಪರೆಯೇ ಉಂಟಾಗುತ್ತದೆ ಎಂದು ತಾತ್ಪರ್ಯ.



## ಮಂತ್ರ ೧೫

अशब्दमस्पर्शमरूपमव्ययं तथाऽरसं नित्यमगन्धवच्च यत् ।
अनाद्यनन्तं महतः परं ध्रुवं निचाय्य तं मृत्युमुखात् प्रमुच्यते ॥

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾಽರಸಂ ನಿತ್ಯಮಗಂಧವಚ್ಚ ಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ॥

### ಪ್ರತಿಪದಾರ್ಥ

ಯತ್—ಯಾವ ಪರಮಾತ್ಮತತ್ತ್ವವು, ನಿತ್ಯಮ್—ಯಾವಾಗಲೂ, ಅಶಬ್ದಮ್—ಪ್ರಾಕೃತಶಬ್ದರಹಿತವೂ, ಸ್ಪರ್ಶಮ್—ಪ್ರಾಕೃತಸ್ಪರ್ಶರಹಿತವೂ, ಅರೂಪಮ್—ಪ್ರಾಕೃತರೂಪರಹಿತವೂ, ತಥಾ ಅರಸಮ್—ಗೆಯೇ ಪ್ರಾಕೃತರಸರಹಿತವೂ, ಚ—ಮತ್ತು, ಅಗಂಧಮ್—ಪ್ರಾಕೃತಗಂಧರಹಿತವೂ, ಅವ್ಯಯಮ್—ವೃದ್ಧಿ ್ರಸ ಇಲ್ಲದುದೂ, ಅನಾದ್ಯನಂತಮ್—ಆದಿಅಂತ್ಯವಿಲ್ಲದ್ದೂ, ಮಹತಃ—ಜೀವನಿಗಿಂತ, ಪರಮ್—ಕ್ಷಣವೂ, ಅಂದರೆ ಶ್ರೇಷ್ಠವಾದುದೋ, (ಅದು), ಧ್ರುವಮ್—ಸ್ಥಿರವಾಗಿರುವುದು, ತಮ್—ಇಂತಹ ಪರಾತ್ಮನನ್ನು, ನಿಚಾಯ್ಯ—ಸಾಕ್ಷಾತ್ಕಾರ ಮಾಡಿಕೊಂಡು, (ಅರಿತುಕೊಂಡು ಉಪಾಸಕನು) ಮೃತ್ಯುಮುಖಾತ್ ಮೃತ್ಯುವಿನಂತೆ ಭಯಂಕರವಾದ ಸಂಸಾರದಿಂದ, ಪ್ರಮುಚ್ಯತೇ—ವಿಮುಕ್ತನಾಗುತ್ತಾನೆ.

### ತಾತ್ಪರ್ಯ

ಪರಮಾತ್ಮನು ಪ್ರಾಕೃತವಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧವಿಲ್ಲದವನೂ, ವ್ಯಯನೂ ನಿತ್ಯನೂ, ಅನಂತನೂ ಜೀವನಿಗಿಂತ ವಿಲಕ್ಷಣನೂ, ಶ್ರೇಷ್ಠನೂ ಶಾಶ್ವತನೂ ವನು. ಇಂತಹ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡ ಉಪಾಸಕನು ್ರತ್ಯುವಿನಂತೆ ಭಯಂಕರವಾದ ಸಂಸಾರದಿಂದ ವಿಮುಕ್ತನಾಗುತ್ತಾನೆ.

### ರಂಗರಾಮಾನುಜಭಾಷ್ಯಮ್

ಉಪಸಂಹರತಿ ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ ನಿತ್ಯಮಗಂಧವಚ್ಚ ತ್—ಅತ್ರ 'ನಿತ್ಯಮ್' ಇತ್ಯೇತತ್ 'ಅಶಬ್ದಮ್' ಇತ್ಯಾದೌ ಪ್ರತ್ಯೇಕಮಭಿಸಂಬಧ್ಯತೇ । ಶಬ್ದತ್ವಾದಿವಶಾದೇವ ಕಾಲವತ್ ಅವ್ಯಯಮ್—ಅವಯವಾಪಚಯಶೂನ್ಯಮ್ ಇತ್ಯರ್ಥಃ। ನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ। ಮಹತಃ' ಇತ್ಯನೇನ, 'ಆತ್ಮನಿ ಮಹತಿ ನಿಯಚ್ಛೇತ್' ಇತಿ ಪೂರ್ವಮಂತ್ರನಿರ್ದಿಷ್ಟೋ ವೋ ಗೃಹ್ಯತೇ । ಧ್ರುವಮ್—ಸ್ಥಿರಮ್ ನಿಚಾಯ್ಯ—ದೃಷ್ಟ್ವಾ । ದರ್ಶನಸಮಾನಾಕಾರೋ ಸನೇನ ವಿಷಯೀಕೃತ್ಯ ಇತ್ಯರ್ಥಃ । ಮೃತ್ಯುಮುಖಾತ್ ಇತಿ। ಭೀಷಣಾತ್ ಸಂಸಾರಾತ್ ತ್ಯರ್ಥಃ ॥

## ಅನುವಾದ

ಉಪಸಂಹಾರ ಮಾಡುತ್ತಾನೆ. ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ ನಿತ್ಯಮಗಂಧವಚ್ಚ ಯತ್। ಇಲ್ಲಿ 'ನಿತ್ಯ' ಎಂಬುವುದು 'ಅಶಬ್ದ'ಮುಂತಾದವುಗಳಲ್ಲಿ ಪ್ರತ್ಯೇಕವಾಗಿ ಅನ್ವಯಿಸುತ್ತದೆ. ಶಬ್ದಾದಿವಶವಲ್ಲದುದರಿಂದಲೇ ಕಾಲದಂತೆ ಅವ್ಯಯಮ್—ಅವಯವಗಳ ಕ್ಷಯವಿಲ್ಲದವನೆಂದರ್ಥ. ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ। 'ಮಹತ್' ಎಂಬುವುದು 'ಆತ್ಮನಿ ಮಹತಿ ನಿಯಚ್ಛೇತ್' ಎಂದು ಹಿಂದಿನ ಮಂತ್ರದಲ್ಲಿ ಹೇಳಿದ ಜೀವಾತ್ಮನನ್ನು ತಿಳಿಸುತ್ತದೆ. ಧ್ರುವಮ್–ಸ್ಥಿರವಾದುದನ್ನು ನಿಚಾಯ್ಯ–ನೋಡಿ, ದರ್ಶನಸಮಾನಾಕಾರವಾದ ಉಪಾಸನದಿಂದ ಸಾಕ್ಷಾತ್ಕಾರ ಮಾಡಿಕೊಂಡು ಎಂದರ್ಥ. ಮೃತ್ಯುಮುಖಾತ್ ಭಯಂಕರವಾದ ಸಂಸಾರದಿಂದ ಎಂದರ್ಥ.

## ಭಾಷ್ಯಸಾರ

ಉಪಾಸಕನನ್ನು ಹಿಂದಿನ ಮಂತ್ರದಲ್ಲಿ ಪ್ರೋತ್ಸಾಹಿಸಿದನು. ಮುಂದೆ 'ಮತ್ವಾ ಧೀರೋ ನ ಶೋಚತಿ' ಎಂಬಲ್ಲಿ ಹೇಳಿದ ಜ್ಞಾನವನ್ನು 'ನಿಚಾಯ್ಯ' ಎಂಬುದರಿಂದ ತಿಳಿಸಿ, ಅದರ ಫಲವನ್ನೂ 'ಅಶಬ್ದಮಸ್ಪರ್ಶಮ್' ಎಂಬುದರಿಂದ ಉಪದೇಶಿಸುತ್ತಾನೆ.

ಪರಮಾತ್ಮನು ಭೌತಿಕಶಬ್ದ ಸ್ಪರ್ಶ ಮತ್ತು ಪ್ರಾಕೃತವಾದ ರೂಪ,ರಸ,ಗಂಧಶೂನ್ಯನು. ಪ್ರಾಕೃತವಾದ ಶಬ್ದ ಮುಂತಾದುವುಗಳಿಂದ ಕೂಡಿದ ಪೃಥಿವೀ ಮುಂತಾದವುಗಳು ಅನಿತ್ಯವಾದುವು. ಇವುಗಳಿಲ್ಲದ ಪರಮಾತ್ಮನು ಅವ್ಯಯನು ಅಂದರೆ ವೃದ್ಧಿ–ಹ್ರಾಸ ಮುಂತಾದ ವಿಕಾರಗಳಿಲ್ಲದವನು ಎಂದರ್ಥ. ಆದುದರಿಂದಲೇ ನಿತ್ಯನು ಅಂದರೆ ಉತ್ಪತ್ತಿ ವಿನಾಶರಹಿತನು. ಅಂದರೆ ಯಾವಾಗಲೂ ಒಂದೇ ರೀತಿ ಇರುವವನು. ಆದಿ ಎಂದರೆ ಉತ್ಪತ್ತಿ ಅದಿಲ್ಲದುದು. ಅನಾದಿ. ಅಂತ ಎಂದರೆ ನಾಶ. ಅದಿಲ್ಲದಿರುವುದು ಅನಂತ. ಆದ್ದರಿಂದ ಉತ್ಪತ್ತಿ ವಿನಾಶರಹಿತ ಎಂದರ್ಥ. ಶ್ರೇಷ್ಠವಾದ ಜೀವಾತ್ಮನಿಗಿಂತಲೂ ವಿಲಕ್ಷಣನು ಅಂದರೆ ಸೂಕ್ಷ್ಮನಾದ ಜೀವಾತ್ಮನಿಗಿಂತಲೂ ಸೂಕ್ಷ್ಮವಾದ ರೂಪವುಳ್ಳವನು ಅಥವಾ ಜೀವಾತ್ಮನಿಗಿಂತ ಭಿನ್ನನಾದವನು. ಹಿಂದೆ 'ಮಹತ್ಯಾತ್ಮನಿ' ಎಂಬಲ್ಲಿ ಜೀವನನ್ನೇ ಹೇಳಿರುವುದರಿಂದ ಇಲ್ಲೂ 'ಮಹತಃ' ಎಂಬುದು ಜೀವನನ್ನೇ ಬೋಧಿಸುತ್ತದೆ. ಸ್ವರೂಪ–ಸ್ವಭಾವಗಳಿಂದ ವಿಕಾರರಹಿತನು ಸ್ಥಿರನು ಎಂದು ತಾತ್ಪರ್ಯ. ಇಂತಹ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಮೃತ್ಯುವಿನಂತೆ ಭಯಂಕರವಾದ ಸಂಸಾರಕ್ಕೆ ಕಾರಣವಾದ ಕಾಮ್ಯಕರ್ಮರೂಪವಾದ ಅವಿದ್ಯೆಯಿಂದ ಪಾರಾಗುತ್ತಾನೆ. ಅಂದರೆ ಎಲ್ಲ ಬಂಧನಗಳಿಂದಲೂ ಬಿಡುಗಡೆ ಪಡೆಯುತ್ತಾನೆ ಎಂದು ತಾತ್ಪರ್ಯ.



# ಮಂತ್ರ ೧೬

**नाचिकेतमुपाख्यानं मृत्युप्रोक्तं सनातनम् ।**
**उक्त्वा श्रुत्वा च मेधावी ब्रह्मलोके महीयते ॥**

ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್ |
ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ||

### ಪ್ರತಿಪದಾರ್ಥ

ಸನಾತನಮ್—(ಅಪೌರುಷೇಯವಾದುದರಿಂದ) ನಿತ್ಯವಾದ, ಮೃತ್ಯುಪ್ರೋಕ್ತಮ್—ಯಮನೆಂಬ ಆಚಾರ್ಯನಿಂದ ಉಪದೇಶಿಸಲ್ಪಟ್ಟ, ನಾಚಿಕೇತಮ್—ನಚಿಕೇತನಿಂದ ಹೊಂದಲ್ಪಟ್ಟ, ಉಪಾಖ್ಯಾನಮ್—ಕಥೆಯನ್ನು, ಮೇಧಾವೀ—ಬ್ರಹ್ಮಜ್ಞಾನವುಳ್ಳ ಮೇಧಾವಿಯು, ಶ್ರುತ್ವಾ—ಆಚಾರ್ಯನಿಂದ ಕೇಳಿ, ಉಕ್ತ್ವಾ ಚ—ಶಿಷ್ಯರಿಗೆ ತಿಳಿಸಿ, ಬ್ರಹ್ಮಲೋಕೇ—ವೈಕುಂಠಲೋಕದಲ್ಲಿ, ಮಹೀಯತೇ—ಪೂಜ್ಯನಾಗುತ್ತಾನೆ.

### ತಾತ್ಪರ್ಯ

ಯಮನು ನಚಿಕೇತನಿಗೆ ಹೇಳಿದ ಈ ಉಪದೇಶವು ಅಪೌರುಷೇಯವಾದುದು. ಆದುದರಿಂದ ನಿತ್ಯವಾದುದು. ಇದನ್ನು ಸದಾಚಾರ್ಯನಿಂದ ಕೇಳಿ ತಿಳಿದು, ಸಚ್ಛಿಷ್ಯನಿಗೆ ಉಪದೇಶಿಸಿದ ಬ್ರಹ್ಮಜ್ಞಾನಿಯು ವೈಕುಂಠಲೋಕದಲ್ಲಿ ನೆಲೆಸಿ ಅಲ್ಲಿಯವರ ಗೌರವಕ್ಕೆ ಅರ್ಹನಾಗುತ್ತಾನೆ.

### ರಂಗರಾಮಾನುಜಭಾಷ್ಯಮ್

[ಉಪಸಂಹರತಿ]–ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂಸನಾತನಮ್। ನಚಿಕೇತಸಾ ಪ್ರಾಪ್ತಂ ನಾಚಿಕೇತಮ್ ; ಮೃತ್ಯುಪ್ರೋಕ್ತಮ್—ಮೃತ್ಯೋಃ ಪ್ರವಕ್ತೃತ್ವಮೇವ, ನ ಸ್ವತಂತ್ರವಕ್ತೃತ್ವಮ್ । ಅತಃ ಸನಾತನಮ್—ಅಪೌರುಷೇಯತ್ವಾತ್ ಪ್ರವಾಹರೂಪೇಣ ನಿತ್ಯಮ್ ಇತ್ಯರ್ಥಃ । ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ । ಸ್ಪಷ್ಟೋಽರ್ಥಃ ॥

### ಅನುವಾದ

[ಉಪಸಂಹರಿಸುತ್ತಾನೆ] ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್. ನಚಿಕೇತನಿಂದ ಹೊಂದಲ್ಪಟ್ಟಿದ್ದು ನಾಚಿಕೇತವು. ಮೃತ್ಯುಪ್ರೋಕ್ತಮ್–ಮೃತ್ಯುವಿನಿಂದ ಹೇಳಲ್ಪಟ್ಟಿದ್ದು ಮಾತ್ರ, ಅವನು ಸ್ವತಂತ್ರವಾಗಿ ಹೇಳಿದುದಲ್ಲ. ಆದುದರಿಂದ ಸನಾತನಮ್ ಪುರುಷನಿರ್ಮಿತವಲ್ಲದುದರಿಂದ ಪ್ರವಾಹರೂಪದಲ್ಲಿ ಯಾವಾಗಲೂ ಇರುವುದು ಎಂದರ್ಥ. ಉಕ್ತ್ವಾಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ (ಈ ಕಥೆಯನ್ನು ಹೇಳುವ ಮತ್ತು ಕೇಳುವ ಬುದ್ಧಿವಂತನು ಬ್ರಹ್ಮಲೋಕದಲ್ಲಿಪೂಜಿಸಲ್ಪಡುತ್ತಾನೆ ಎಂಬ) ಅರ್ಥ ಸ್ಪಷ್ಟವಾಗಿದೆ.

## ಭಾಷ್ಯಸಾರ

ಈ ಯಮ ಮತ್ತು ನಚಿಕೇತರ ಸಂವಾದರೂಪವಾದ ಈ ಉಪನಿಷತ್ತಿನ ಉಪದೇಶ ಮತ್ತು ಶ್ರವಣಗಳಿಗೆ ಆನುಷಂಗಿಕವಾಗಿ ಸಿಗುವ ಫಲವನ್ನು 'ನಾಚಿಕೇತಮ್' ಎಂಬುದರಿಂದ ತಿಳಿಸುತ್ತಾನೆ ಎಂದು ರಾಮಾನಂದರು ತಿಳಿಸುತ್ತಾರೆ.

ಸುಬೋಧಿನೀಕಾರರು 'ಯಮನು ನಚಿಕೇತನಿಗೆ' ಮಾಡಿದ ಉಪದೇಶವನ್ನು 'ನಾಚಿಕೇತಮ್' ಎಂಬುದರಿಂದ ವೇದವು ಪ್ರಶಂಸಿಸುತ್ತದೆ ಎಂದು ಹೇಳುತ್ತಾರೆ.

ಯಮನು ಉಪದೇಶಮಾಡಿದನು. ನಚಿಕೇತನು ಈ ಉಪದೇಶಗಳನ್ನು ಪಡೆದನು. ಈ ಉಪದೇಶವು ಅಪೌರುಷೇಯವಾದುದು ಇದನ್ನು ಯಾವುದಾದರೂ ಬ್ರಹ್ಮಜ್ಞಾನಿಯಿಂದ ಕೇಳಿ ತಿಳಿದು, ಶಿಷ್ಯನಿಗೆ ಉಪದೇಶಿಸಿದರೆ ಅವನು ಸತ್ಯಲೋಕದಲ್ಲಿ ಪೂಜಾರ್ಹನಾಗುತ್ತಾನೆ.



# ಮಂತ್ರ ೧೭

[1]य इदं परमं गुह्यं श्रावयेत् ब्रह्मसंसदि ।
प्रयतः श्राद्धकाले वा तदानन्त्याय कल्पते ।।
तदानन्त्याय कल्पत इति ।।

ಯ ಇದಂ ಪರಮಂ ಗುಹ್ಯಂ ಶ್ರಾವಯೇತ್ ಬ್ರಹ್ಮಸಂಸದಿ।
ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ।।
ತದಾನಂತ್ಯಾಯ ಕಲ್ಪತ ಇತಿ।।

## ಪ್ರತಿಪದಾರ್ಥ

ಯಃ—ಯಾವನು, ಪರಮಮ್—ಉತ್ಕೃಷ್ಟವಾದ, ಗುಹ್ಯಮ್—ರಹಸ್ಯವಾದ, ಇಮಮ್—ಈ ಗ್ರಂಥವನ್ನು ಪ್ರಯತಃ—ಶುಚಿರ್ಭೂತನಾಗಿ, ಬ್ರಹ್ಮಸಂಸದಿ—ಬ್ರಹ್ಮಜ್ಞಾನಿಗಳ ಸಮೂಹದಲ್ಲಿ, ಶ್ರಾದ್ಧಕಾಲೇ ವಾ—ಶ್ರಾದ್ಧಕಾಲದಲ್ಲಿ ಆಗಲಿ, ಶ್ರಾವಯೇತ್—ಶ್ರವಣಮಾಡಿಸುತ್ತಾನೋ, (ತತ್—ಅದು) ಆನಂತ್ಯಾಯ ಕಲ್ಪತೇ—ಅನಂತಫಲವನ್ನು ಕೊಡಲು ಸಮರ್ಥವಾಗುತ್ತದೆ.

## ತಾತ್ಪರ್ಯ

ಯಾವನು ಉತ್ಕೃಷ್ಟವಾದ ಹಾಗೂ ಪರಮ ರಹಸ್ಯವಾದ, ಈ ಉಪನಿಷತ್ತನ್ನು ಬ್ರಾಹ್ಮಣರ ಸಭೆಯಲ್ಲಿ ಅಥವಾ ಶ್ರಾದ್ಧಕಾಲದಲ್ಲಿ ಶುಚಿಯಾಗಿ ಶ್ರವಣಮಾಡಿಸುತ್ತಾನೋ ಅಥವಾ ಅರ್ಥವನ್ನು ತಿಳಿಸುತ್ತಾನೋ ಅವನಿಗೆ ಆ ಶ್ರಾದ್ಧವು ಅಥವಾ ಸಭೆಯು ಅನಂತಫಲವನ್ನು ಕೊಡಲು ಸಮರ್ಥವಾಗುತ್ತದೆ. ಅಧ್ಯಾಯವು ಮುಗಿಯಿತು ಎಂಬುದನ್ನು ಸೂಚಿಸಲು ' ಆನಂತ್ಯಾಯ ಕಲ್ಪತೇ ' ಎಂದು ಎರಡು ಸಲ ಹೇಳಿದೆ.

## ರಂಗರಾಮಾನುಜಭಾಷ್ಯಮ್

ಯ ಇದಂ ಪರಮಂ ಗುಹ್ಯಂ ಶ್ರಾವಯೇತ್ ಬ್ರಹ್ಮಸಂಸದಿ—ಬ್ರಾಹ್ಮಣಸಮಾಜೇ। ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ, ತದಾನಂತ್ಯಾಯ ಕಲ್ಪತೇ। ಪ್ರಯತಃ—ಶುದ್ಧಃ।

## ಅನುವಾದ

ಯ ಇದಂ ಪರಮಂ ಗುಹ್ಯಂ ಶ್ರಾವಯೇತ್ ಬ್ರಹ್ಮಸಂಸದಿ। ಬ್ರಹ್ಮಸಂಸದಿ-ಬ್ರಾಹ್ಮಣ ಸಮುದಾಯದಲ್ಲಿ. ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ ತದಾನಂತ್ಯಾಯ ಕಲ್ಪತೇ । ಪ್ರಯತಃ–ಶುದ್ಧನು.

---

1 'ಯ ಇದಂ' ಎಂಬಲ್ಲಿ 'ಯಃ ಇಮಂ' ಎಂಬುದಾಗಿ ಪ್ರತಿಪದಾರ್ಥಕಾರರು ಮತ್ತು ರಾಮಾನಂದರೂ ಪಾಠವನ್ನು ಅಂಗೀಕರಿಸಿದ್ದಾರೆ.

## ಭಾಷ್ಯಸಾರ

ಯಾವನು ಪರಿಶುದ್ಧನಾಗಿ, ಪರಮರಹಸ್ಯವಾದ, ನಚಿಕೇತನ ಉಪಾಖ್ಯಾನವನ್ನು ಸತ್ಪುರುಷರ ಸಭೆಯಲ್ಲಿ ಹೇಳುತ್ತಾನೋ ಅವನು ಅನಂತವಾದ ಫಲಕ್ಕೆ ಅರ್ಹನಾಗುತ್ತಾನೆ. ಪರಿಶುದ್ಧನಾಗಿ ಶ್ರಾದ್ಧಕಾಲದಲ್ಲಿ ಶ್ರದ್ಧೆಯಿಂದ ಬ್ರಾಹ್ಮಣರಿಗೆ ಭೋಜನಮಾಡಿಸುವಾಗ ಈ ಉಪಾಖ್ಯಾನವನ್ನು ಹೇಳಿದರೆ ಆ ಶ್ರಾದ್ಧವು ಅನಂತವಾದ ಫಲವನ್ನು ಕೊಡುತ್ತದೆ. ಈ ರೀತಿ ಶ್ರುತಿಯು ಈ ಕಥೆಯನ್ನು ಹೊಗಳಿತು ಎಂದು ತಾತ್ಪರ್ಯ.

ಮೂರನೆಯ ವಲ್ಲಿಯು ಮುಗಿದುದು.



# ನಾಲ್ಕನೆಯ ವಲ್ಲಿ ಪ್ರಾರಂಭ

## ಮಂತ್ರ ೧

**पराञ्चि खानि व्यतृणत् स्वयम्भूस्तस्मात्**
**पराङ् पश्यन्ति(ति) नान्तरात्मन् ।**
**कश्चित् धीरः प्रत्यगात्मानमैक्षत्**
**आवृत्तचक्षुरमृतत्वमिच्छन् ॥**

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ
ತಸ್ಮಾತ್ ಪರಾಙ್ ಪಶ್ಯಂತಿ (ತಿ) ನಾಂತರಾತ್ಮನ್ ।
ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್
ಆವೃತ್ತ ಚಕ್ಷುರಮೃತತ್ವಮಿಚ್ಛನ್॥

### ಪ್ರತಿಪದಾರ್ಥ

ಸ್ವಯಂಭೂಃ—ಸ್ವತಂತ್ರನಾದ ಪರಮಾತ್ಮನು, ಪರಾಂಚಿ—ವಿಷಯಾಸಕ್ತವಾದ ಖಾನಿ—ಇಂದ್ರಿಯಗಳನ್ನು, ವ್ಯತೃಣತ್—ಸೃಷ್ಟಿಸಿದನು, ತಸ್ಮಾತ್—ಆದುದರಿಂದ, [1]ಪರಾಂಙ್—ಪರಾಗ್ರೂಪಗಳಾದ ವಿಷಯಗಳನ್ನು, (ಇಂದ್ರಿಯಗಳು), ಪಶ್ಯಂತಿ—ನೋಡುತ್ತವೆ, [2]ನಾಂತರಾತ್ಮನ್—ಅಂತರಾತ್ಮವನ್ನು ನೋಡುವುದಿಲ್ಲ, ಕಶ್ಚಿದ್ಧೀರಃ—ಒಬ್ಬ ಧೀರನು, ಅಮೃತತ್ವಮಿಚ್ಛನ್—ಮೋಕ್ಷದಲ್ಲಿ ಬಯಕೆಯುಳ್ಳವನಾಗಿ, ಆವೃತ್ತಚಕ್ಷುಃ—ವಿಷಯಗಳಿಂದ ವಿಮುಖವಾದ ದೃಷ್ಟಿಯುಳ್ಳವನಾಗಿ ಪ್ರತ್ಯಗಾತ್ಮಾನಮ್—ಜೀವಾತ್ಮನನ್ನು, [3]ಐಕ್ಷತ್—ನೋಡುತ್ತಾನೆ.

### ತಾತ್ಪರ್ಯ

ಪರಮಾತ್ಮನು ಸ್ವತಂತ್ರನು. ನಮ್ಮ ಕಣ್ಣು, ಕಿವಿ, ಮುಂತಾದ ಇಂದ್ರಿಯಗಳು ಹೊರಗಿನ ವಸ್ತುಗಳಲ್ಲಿ ಆಸಕ್ತವಾಗಿರುವಂತೆ ಸೃಷ್ಟಿಸಿದನು. ಇದರಿಂದ ಇಂದ್ರಿಯಗಳು ಹೊರಗಿನ ವಿಷಯಗಳನ್ನು ನೋಡುವುದೇ ವಿನಃ ತನ್ನಲ್ಲಿರುವ ಜೀವಾತ್ಮನನ್ನು ನೋಡುವುದಿಲ್ಲ. ಇಂತಹ ಸಾವಿರಾರು ಜನರಲ್ಲಿ ಧೀರನಾದ ಒಬ್ಬನು ವಿಷಯಗಳಿಂದ ವಿಮುಖನಾಗಿ, ತನ್ನಲ್ಲಿರುವ ಜೀವಾತ್ಮನನ್ನು ಕಾಣುತ್ತಾನೆ. ಈತನು ಮೋಕ್ಷಾಭಿಲಾಷಿಯು.

### ರಂಗರಾಮಾನುಜಭಾಷ್ಯಮ್

**'ಉತ್ತಿಷ್ಠತ ಜಾಗ್ರತ' ಇತಿ ಪ್ರೋತ್ಸಾಹನೇ ಅಪಿ ಆತ್ಮಸ್ವರೂಪವಿಮುಖಾನ್ ಪಶ್ಯನ್ ಶೋಚತಿ– ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ। ಖಾನಿ–ಇಂದ್ರಿಯಾಣಿ। ಪರಾಂಚಿ–ಪರಾನ್ ಅಂಚತೀತಿ ಪರಾಂಚಿ, ಪರಪ್ರಕಾಶಕಾನಿ; ನ ತು ಆತ್ಮಪ್ರಕಾಶಕಾನಿ । ತತ್ರ**

---

೧. ಪರಾಙ್ ಎಂಬಲ್ಲಿ ದ್ವಿತೀಯಾ ಲೋಪವು ಛಾಂದಸ.

೨. 'ನಾಂತರಾತ್ಮನ್' ಎಂಬಲ್ಲಿ ವಿಭಕ್ತಿ ಪ್ರತ್ಯಯಕ್ಕೆ ಲೋಪವು ಛಾಂದಸ.

೩. ವೇದದಲ್ಲಿ ಕಾಲವಿವಕ್ಷೆಯಿಲ್ಲ ಎಂಬುವುದರಿಂದ 'ಐಕ್ಷತ್' ಎಂದು ಪರಸ್ಮೈಪದ ಪ್ರಯೋಗಿಸಲಾಗಿದೆ.

ಹೇತುಂ ವದನ್ ಶೋಚತಿ-ವ್ಯತೃಣತ್ ಸ್ವಯಂಭೂಃ-ಸ್ವತಂತ್ರ ಈಶ್ವರಃ, ಇಮಾನಿ ಖಾನಿ ಹಿಂಸಿತವಾನ್, 'ತೃದ್ ಹಿಂಸಾಯಾಮ್'(ಧಾ ಪಾ-1456) ಇತಿ ಧಾತುಃ।ಯದ್ವಾ ಧಾತೂನಾಮನೇಕಾರ್ಥತ್ವಾತ್ ಪರಾರ್ಥ(ಪರಾಗರ್ಥ?)ಪ್ರಕಾಶಕಾನಿ ಇಂದ್ರಿಯಾಣಿ ಸೃಷ್ಟವಾನ್ ಇತ್ಯರ್ಥಃ। ತಸ್ಮಾತ್ ಪರಾಙ್‌ಪಶ್ಯಂತಿ ನಾಂತರಾತ್ಮನ್। ಪರಾಙ್ ಪರಾಚ ಇತಿ ಯಾವತ್। ಪರಾಗ್ರೂಪಾನ್ ಅನಾತ್ಮಭೂತಾನ್ ಪಶ್ಯಂತಿ-ಉಪಲಭಂತೇ। ಅಂತರಾತ್ಮಾನಮ್ ನೇತ್ಯರ್ಥಃ। ಯದ್ವಾ ಪರಾಙ್-ಪರಾಙ್‌ಮುಖಾನಿ ಭೂತ್ವಾ, ವಿಷಯಾನೇವ ಪಶ್ಯಂತಿ ಇತ್ಯರ್ಥಃ। ಪರಾಙ್‌ಪಶ್ಯತಿ ಇತಿ ಪಾಠೇ ಲೋಕಾಭಿಪ್ರಾಯಮ್ ಏಕವಚನಮ್। ಈದೃಶೇಽಪಿ ಲೋಕಸ್ವಭಾವೇ , ನದ್ಯಾಃ ಪ್ರತಿಸ್ರೋತಃಪ್ರವೃತ್ತ ಇವ ಕಶ್ಚಿತ್ ಪುರುಷಧೌರೇಯಃ ಪ್ರತ್ಯಗಾತ್ಮಪ್ರವಣೋಽಪಿ ಅಸ್ತಿ ಇತಿ ಆಹ ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್। ಪ್ರತ್ಯಂಚಮಾತ್ಮಾನಂ ಪಶ್ಯತಿ ಇತ್ಯರ್ಥಃ। ಛಾಂದಸಂ ಪರಸ್ಮೈಪದಮ್। ಅತ ಏವ ವರ್ತಮಾನಾರ್ಥೇ ಲಙುಪಪತ್ತಿಶ್ಚ । ಆವೃತ್ತಚಕ್ಷುರಮೃತತ್ವಮಿಚ್ಛನ್-' ಚಕ್ಷುಃ'ಶಬ್ದ ಇಂದ್ರಿಯಮಾತ್ರಪರಃ। ಸ್ವಸ್ವವಿಷಯವ್ಯಾವೃತ್ತೇಂದ್ರಿಯೋ ಮುಮುಕ್ಷುಃ ಇತ್ಯರ್ಥಃ ॥

ಅನುವಾದ

ಎದ್ದೇಳಿ-ಎಚ್ಚರಗೊಳ್ಳಿ ಎಂದು ಪ್ರೋತ್ಸಾಹಿಸಿದರೂ ಆತ್ಮಸ್ವರೂಪವನ್ನು ಅರಿಯದೆ ವಿಮುಖರಾಗಿರುವವರನ್ನು ನೋಡಿ ದುಃಖಿಸುತ್ತಾನೆ. ಪರಾಂಚಿಖಾನಿ ವ್ಯತೃಣತ್ ಸ್ವಯಂಭೂಃ।ಖಾನಿ-ಇಂದ್ರಿಯಗಳು ಪರಾಂಚಿ-'ಪರಾನ್ ಅಂಚತಿ ಇತಿ ಪರಾಂಚಿ' ಬೇರೆ ವಸ್ತುಗಳನ್ನು ಪ್ರಕಾಶಪಡಿಸುತ್ತವೆ.ಆತ್ಮಪ್ರಕಾಶಕಗಳಲ್ಲ. ಈ ವಿಷಯದಲ್ಲಿ ಕಾರಣವನ್ನು ಹೇಳುತ್ತಾ ದುಃಖಿಸುತ್ತಾನೆ. ವ್ಯತೃಣತ್ ಸ್ವಯಂಭೂಃ-ಸ್ವತಂತ್ರನಾದ ಈಶ್ವರನು ಈ ಇಂದ್ರಿಯಗಳನ್ನು ಹಿಂಸಿಸಿದನು. ' ತೃದ್ ಹಿಂಸಾಯಾಂ ' (ಧಾ.ಪಾ 1456) ಎಂಬುದು ಧಾತು. ಅಥವಾ ಧಾತುಗಳಿಗೆ ಅನೇಕ ಅರ್ಥಗಳಿರುವುದರಿಂದ ಬೇರೆ ವಸ್ತುಗಳನ್ನು ಪ್ರಕಾಶಗೊಳಿಸುವ ಇಂದ್ರಿಯಗಳನ್ನು ಸೃಜಿಸಿದನು; ಎಂದರ್ಥ. ತಸ್ಮಾತ್ ಪರಾಙ್ ಪಶ್ಯಂತಿ ನಾಂತರಾತ್ಮನ್-ಪರಾಙ್ ಪರಾಚಃ ಎಂದರ್ಥ. ಆತ್ಮವಲ್ಲದ ಬೇರೆ ರೂಪಗಳನ್ನು ಪಶ್ಯಂತಿ -ಸೇರುತ್ತವೆ ಅಂತರಾತ್ಮವನ್ನು ಸೇರುವುದಿಲ್ಲ; ಎಂದರ್ಥ. ಅಥವಾ ಪರಾಙ್-ಆತ್ಮದಿಂದ ವಿಮುಖವಾಗಿ (ಶಬ್ದಾದಿ) ವಿಷಯಗಳನ್ನೇ ನೋಡುತ್ತವೆ, ಎಂದರ್ಥ .' ಪರಾಙ್ ಪಶ್ಯತಿ' ಎಂಬಲ್ಲಿ ಪಶ್ಯತಿ ಎಂಬ ಏಕವಚನ ಪ್ರಯೋಗವು ಲೋಕಸ್ವಭಾವವನ್ನು ಸೂಚಿಸುತ್ತದೆ. ಜನರ ಸ್ವಭಾವ ಹೀಗಿದ್ದರೂ ಪ್ರವಾಹದ ವಿರುದ್ಧ(ಈಜಲು) ಹೊರಟವನಂತೆ ಇರುವ ಒಬ್ಬ (ಧೀರನು) ಪುರುಷಶ್ರೇಷ್ಠನು ಪ್ರತ್ಯಗಾತ್ಮನಲ್ಲಿ ಆಸಕ್ತನಾಗಿದ್ದಾನೆಂದು ಹೇಳುತ್ತಾನೆ, ಕಶ್ಚಿದ್ಧೀರ: ಪ್ರತ್ಯಗಾತ್ಮಾನಮೈಕ್ಷತ್-ಒಬ್ಬ ಧೀರನು ಪ್ರತ್ಯಗಾತ್ಮನನ್ನು ನೋಡುತ್ತಾನೆ ಎಂದರ್ಥ. 'ಐಕ್ಷತ್ ' ಎಂದು ಪರಸ್ಮೈಪದವು ವೈದಿಕಪ್ರಯೋಗವು. ಆದುದರಿಂದಲೇ ವರ್ತಮಾನಕಾಲದಲ್ಲಿ ಲಙ್ ಪ್ರಯೋಗವೂ ಸಾಧುವೆನಿಸಿದೆ. ಆವೃತ್ತಚಕ್ಷುರಮೃತತ್ವಮಿಚ್ಛನ್-ಚಕ್ಷುಃ ಎಂಬ ಶಬ್ದವು ಎಲ್ಲ ಇಂದ್ರಿಯಗಳಿಗೂ ಸೂಚಕ. ತಮ್ಮ ತಮ್ಮ ವಿಷಯಗಳಿಂದ ವಿಮುಖವಾದ ಇಂದ್ರಿಯಗಳುಳ್ಳವನು (ಮುಮುಕ್ಷು) ಮೋಕ್ಷಾಭಿಲಾಷಿ ಎಂದರ್ಥ.

ಭಾಷ್ಯಸಾರ

ಹಿಂದೆ ಪ್ರಾಪ್ಯವೆಂದು ಹೇಳಿದ ವಿಷಯವನ್ನು ವಿಮರ್ಶಿಸುವ ರೀತಿಯಲ್ಲಿದೆ ಈ ವಲ್ಲಿ. ಈ ಶರೀರದಲ್ಲಿ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಜೊತೆಯಲ್ಲೇ ಪರಮಾತ್ಮನು

ಇದ್ದಾನೆ. ಹೀಗಿದ್ದರೂ ಅಂತರಾತ್ಮನನ್ನು ತಿಳಿಯದೇ ಜೀವರು ದುಃಖಿಸುತ್ತಾರೆ. ಹೀಗೆ ವಿಮುಖರಾದವರನ್ನು ನೋಡಿ ಪರಮಾತ್ಮ ದುಃಖಿಸುತ್ತಾನೆ.

ಇಂದ್ರಿಯ ಒಂದಲ್ಲ; ಹತ್ತು. ಇವು ಪರಮಾತ್ಮಭಿನ್ನವಾದ ಬಾಹ್ಯವಾದ ಶಬ್ದಾದಿವಿಷಯಗಳನ್ನು ಪ್ರಕಾಶಗೊಳಿಸುತ್ತವೆ. ಈ ಇಂದ್ರಿಯಗಳನ್ನು ಪರಮಾತ್ಮನು ಸೃಷ್ಟಿಸಿದನು. ಅವನು ಸ್ವತಂತ್ರನು. ಅವನು ಶಬ್ದಾದಿವಿಷಯಗಳನ್ನು ಪ್ರಕಾಶಪಡಿಸುವಂತಹ ಇಂದ್ರಿಯಗಳನ್ನು ಸೃಷ್ಟಿಸಿದನು. ಹೀಗೆ ಶಬ್ದಾದಿವಿಷಯಗಳನ್ನು ಸೃಷ್ಟಿಸಿ, ಇಂದ್ರಿಯಗಳನ್ನು ಶಬ್ದಾದಿವಿಷಯಗಳಲ್ಲಿ ಪ್ರವಣವಾಗುವಂತೆ ಹಿಂಸಿಸಿದನು. ಈ ಅಂತರಾತ್ಮನು ಇಂದ್ರಿಯಗಳ ಜೊತೆಯಲ್ಲಿ ಇದ್ದರೂ ಅದನ್ನು ತಿಳಿಯದಂತೆ ಮಾಡುವುದೇ ಹಿಂಸೆ. ಬಾಹ್ಯವಸ್ತುಪ್ರಕಾಶಕಗಳೆಂಬ ನೆಪದಿಂದ ಅನರ್ಥಗಳಿಗೆ ಕಾರಣವಾಗುವಂತೆ ಇಂದ್ರಿಯಗಳನ್ನು ಸೃಷ್ಟಿಸಿದನು ಎಂದರ್ಥ. ಇದರಿಂದ ಇಂದ್ರಿಯಗಳು ಸೃಷ್ಟಿಸಲ್ಪಟ್ಟರೂ ಸತ್ತಂತೆಯೇ ಎಂದು ತಾತ್ಪರ್ಯ. ಸ್ವಯಂಭೂಃ ಪರಮಾತ್ಮನು ಸ್ವತಂತ್ರನು. ಆದುದರಿಂದ ಹೀಗೇಕೆ ಸೃಷ್ಟಿಸಿದನು ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಅವನು ವಿಧಿನಿಷೇಧಬಾಹ್ಯನು. ಅವನು ಪ್ರಶ್ನೆಗೆ ಅರ್ಹನಲ್ಲ, ಎಂದು ವ್ಯಸನದಿಂದ ಹೇಳುವ ಮಾತು. ಇದರಿಂದ ಇಂದ್ರಿಯಗಳಿಗೆ ಬಾಹ್ಯವಸ್ತುಗಳನ್ನು ನೋಡುವುದೇ ಸ್ವಭಾವ. ಆದ್ದರಿಂದಲೇ ಜನರು ರೂಪಾದಿವಿಷಯಗಳನ್ನು ತಾವುಂದು ನಾವುಂದು ಎಂದು ಗ್ರಹಿಸುತ್ತಾರೆ. ಇದಕ್ಕೆ ಭಿನ್ನವಾದ ಅಂತರಾತ್ಮನನ್ನು ನೋಡುವುದಿಲ್ಲ, ಎಂದು ಸುಬೋಧಿನೀಕಾರರು ಹೇಳುತ್ತಾರೆ.

ಇಂದ್ರಿಯಗಳಿಗೆ ಬಾಹ್ಯವಸ್ತುಗಳನ್ನು ನೋಡುವುದೇ ಸ್ವಭಾವ. ಹಿಂದೆ ಮಾಡಿದ ಪುಣ್ಯದಿಂದ ಒಬ್ಬನು ಪರಮಾತ್ಮನ ದಯೆಗೆ ಪಾತ್ರನಾಗಿರುತ್ತಾನೆ. ಅವನು ಧೀರ. ಧೀರನೆಂದರೆ 'ಇದು ಆತ್ಮ–ಇದು ಆತ್ಮವಲ್ಲ' ಎಂಬ ವಿವೇಕವುಳ್ಳವನು. ಇದರಿಂದ ಅವನಿಗೆ ಮೋಕ್ಷದಲ್ಲಿ ಅಭಿಲಾಷೆ ಹುಟ್ಟುತ್ತದೆ. ಆಗ ಆತನು ತನ್ನ ಇಂದ್ರಿಯಗಳನ್ನು ಶಬ್ದಾದಿ ವಿಷಯಗಳತ್ತ ಹರಿಯಬಿಡದೆ ತಡೆಯುತ್ತಾನೆ, ಇಂದ್ರಿಯಗಳನ್ನು ನಿಗ್ರಹಿಸುತ್ತಾನೆ, ಅಂತರ್ಮುಖಿನಾಗುತ್ತಾನೆ. ಆಗ ಪ್ರತ್ಯಗಾತ್ಮವನ್ನು ನೋಡುತ್ತಾನೆ.

ಇಂದ್ರಿಯಗಳಿವೆ ಎಂಬುದರಿಂದ ಹೃದಯದಲ್ಲೇ ಇದ್ದರೂ, ಎಲ್ಲರಿಂದಲೂ ಪರಮಾತ್ಮನು ನೋಡಲ್ಪಡಲಾರನು. ಪರಮಾತ್ಮನ ಅನುಗ್ರಹವಿರುವವರು ಮಾತ್ರ ನೋಡಬಲ್ಲರು ಎಂದು ತಾತ್ಪರ್ಯ.



## ಮಂತ್ರ ೨

पराचः कामान् अनुयन्ति बालाः
ते मृत्योर्यन्ति विततस्य पाशम् ।
अथ धीरा अमृतत्वं विदित्वा
ध्रुवमध्रुवेष्विह न प्रार्थयन्ते ॥

ಪರಾಚಃ ಕಾಮಾನ್ ಅನುಯಂತಿ ಬಾಲಾಃ
ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ।
ಅಥ ಧೀರಾ ಅಮೃತತ್ವಂ ವಿದಿತ್ವಾ
ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥

### ಪ್ರತಿಪದಾರ್ಥ

**ಬಾಲಾಃ**—ಅಲ್ಪಬುದ್ಧಿಯುಳ್ಳವರು. **ಪರಾಚಃ**—ಬಾಹ್ಯವಿಷಯಕವಾದ, **ಕಾಮಾನ್**—ಬಯಕೆಗಳನ್ನೇ, **ಅನುಯಂತಿ**—ಅನುಸರಿಸುತ್ತಾರೆ, **ತೇ**—ಅವರು, **ವಿತತಸ್ಯ**—ವಿಸ್ತಾರವಾದ, **ಮೃತ್ಯೋಃ**—(ಮೃತ್ಯುವಿನಂತೆ ಭಯಂಕರವಾದ) ಸಂಸಾರದ, **ಪಾಶಮ್**— ಬಂಧನವನ್ನು, **ಯಂತಿ**—ಹೊಂದುತ್ತಾರೆ, **ಧೀರಾಃ**—ತಿಳಿದವರು, **ಅಥ**—(ಬಾಹ್ಯವಿಷಯಕ್ಕಿಂತ) ಭಿನ್ನವಾದ ಆತ್ಮಸ್ವರೂಪವನ್ನು ತಿಳಿಯುವಲ್ಲಿ, **ಧ್ರುವಮ್**—ಸ್ಥಿರವಾದ, **ಅಮೃತತ್ವಮ್**—(ಜನ್ಮಜರಾಮರಣಗಳಿಲ್ಲದಿರುವಿಕೆಯನ್ನು) ನಾಶವಿಲ್ಲದಿರುವಿಕೆಯನ್ನು, **ವಿದಿತ್ವಾ**—ತಿಳಿದು **ಇಹ**—ಇಲ್ಲಿರುವ, **ಅಧ್ರುವೇಷು**—ಸ್ಥಿರವಲ್ಲದ (ಸ್ವರ್ಗಾದಿ) ವಿಷಯಗಳಲ್ಲಿ, **ನ ಪ್ರಾರ್ಥಯಂತೇ**—(ಯಾವುದೇ ವಸ್ತುವನ್ನೂ) ಪ್ರಾರ್ಥಿಸುವುದಿಲ್ಲ.

### ತಾತ್ಪರ್ಯ

ಮಕ್ಕಳಂತೆ ತಮಗಾಗುವ ಕೇಡನ್ನೂ ಅರಿಯಲು ಆಗದ ಅಜ್ಞರು ಹೊರಗಿನ ವಿಷಯಗಳಲ್ಲಿ ಆಸೆಯುಳ್ಳವರಾಗಿ ಅವುಗಳಲ್ಲಿಯೇ ಆಸಕ್ತರಾಗುವರು. ಇದರಿಂದ ಅವರು ಮೃತ್ಯುಪಾಶದಲ್ಲಿ ಸಿಕ್ಕಿಕೊಳ್ಳುವರು. ಬುದ್ಧಿವಂತರು ಆತ್ಮಸ್ವರೂಪವನ್ನು ಅರಿತರೆ ಶಾಶ್ವತವಾದ ಮೋಕ್ಷ ಸಿಗುವುದೆಂದು ತಿಳಿಯುತ್ತಾರೆ. ಆದುದರಿಂದ ಅಸ್ಥಿರವಾದ ಈ ಪ್ರಪಂಚದ ಯಾವುದೊಂದು ವಸ್ತುವನ್ನೂ ಬಯಸುವುದಿಲ್ಲ.

### ರಂಗರಾಮಾನುಜಭಾಷ್ಯಮ್

**ಪರಾಚಃ ಕಾಮಾನ್ ಅನುಯಂತಿ ಬಾಲಾಃ** । ಅಲ್ಪಪ್ರಜ್ಞಾಃ ಬಾಹ್ಯಾನ್ ಕಾಮ್ಯಮಾನಾನ್ ವಿಷಯಾನೇವ ಅವಗಚ್ಛಂತಿ । **ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್** । ತೇ ವಿಸ್ತೀರ್ಣಸ್ಯ ಸಂಸಾರಸ್ಯ ಬಂಧನಂ ಯಾಂತಿ ಇತ್ಯರ್ಥಃ । ಯದ್ವಾ ವಿತತಸ್ಯ—ಸರ್ವತ್ರ ಅಪ್ರತಿಹತಾಜ್ಞಸ್ಯ, ಮೃತ್ಯೋಃ ಮಮ ಪಾಶಂ ಯಾಂತಿ ಇತ್ಯರ್ಥಃ । **ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ** । 'ಅಥ'ಶಬ್ದಃ ಪ್ರಕೃತವಿಷಯಾರ್ಥಾಂ(ಯಾದರ್ಥಾಂ ?)ತರಪರಿಗ್ರಹೇ । ಧೀಮಂತಃ ಪ್ರತ್ಯಗಾತ್ಮನ್ಯೇವ

ಧ್ರುವಮ್ ಅಮೃತತ್ವಂ ವಿದಿತ್ವಾ, ಇಹ–ಸಂಸಾರಮಂಡಲೇ, ಅಧ್ರುವೇಷು ಪದಾರ್ಥೇಷು, ಕಮಪಿ ನ ಪ್ರಾರ್ಥಯಂತೇ । ಪ್ರತ್ಯಕ್ತತ್ತ್ವಜ್ಞಸ್ಯ ಸರ್ವಂ ಜಿಹಾಸಿತಮ್ ಇತಿ ಭಾವಃ । ಪರಮಾತ್ಮನಃ ಸರ್ವಜೀವಗತಾಹಂತಾಸ್ಪದತ್ವೇನ ಮುಖ್ಯಾಹಮರ್ಥತ್ವಾತ್ ಪ್ರತ್ಯಕ್ತ್ವಮಸ್ತೀತಿ ದ್ರಷ್ಟವ್ಯಮ್ ॥

## ಅನುವಾದ

ಪರಾಚಃ ಕಾಮಾನ್ ಅನುಯಂತಿ ಬಾಲಾಃ ಅಲ್ಪಜ್ಞರು ಬಾಹ್ಯವಾದ, ಕಾಮ್ಯ (ಶಬ್ದಾದಿ)ವಿಷಯಗಳನ್ನೇ ಅನುಸರಿಸುತ್ತಾರೆ. ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್—ಅವರು ವಿಸ್ತಾರವಾದ ಸಂಸಾರಬಂಧನವನ್ನು ಹೊಂದುತ್ತಾರೆ ಎಂದರ್ಥ. ಅಥವಾ ವಿತತಸ್ಯ—ಎಲ್ಲ ಕಡೆಯಲ್ಲೂ ತಡೆಯಿಲ್ಲದ ಆಜ್ಞೆಯುಳ್ಳ ಮೃತ್ಯೋಃ—ನನ್ನ (ಯಮನ) ಪಾಶವನ್ನು ಹೊಂದುತ್ತಾರೆ ಎಂದರ್ಥ. ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ. 'ಅಥ'ಶಬ್ದವು ಪ್ರಕೃತವಾದ ವಿಷಯಕ್ಕಿಂತ ಭಿನ್ನವಾದ ಅರ್ಥವನ್ನು ಅಂಗೀಕರಿಸಬೇಕೆಂಬ ವಿಷಯಪರವಾಗಿದೆ. ಬುದ್ಧಿವಂತನಾದವನು ಜೀವಾತ್ಮನಲ್ಲಿಯೇ ಶಾಶ್ವತವಾದ ಅಮೃತತ್ವವಿದೆಯೆಂಬುದನ್ನು ಅರಿತು, ಇಹ—ಈ ಸಂಸಾರ ಚಕ್ರದಲ್ಲಿ ಶಾಶ್ವತವಲ್ಲದ ಯಾವ ವಸ್ತುಗಳನ್ನೂ ಬಯಸುವುದಿಲ್ಲ. ಪ್ರತ್ಯಗಾತ್ಮತತ್ತ್ವವನ್ನು ಬಲ್ಲವನಿಗೆ ಎಲ್ಲದರಲ್ಲೂ ಜಿಹಾಸೆ, ಔದಾಸೀನ್ಯವಿದೆ ಎಂದು ತಾತ್ಪರ್ಯ. ಅಹಂ ಎಂಬುದು ಜೀವನನ್ನು ಸೂಚಿಸುತ್ತದೆ. ಎಲ್ಲ ಜೀವಾತ್ಮರಲ್ಲೂ ಇರುವ ಈ ಅಹಂತ್ವವು ಪರಮಾತ್ಮನಲ್ಲಿರುವುದರಿಂದ 'ಅಹಂ' ಎಂಬುದು ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದಿದೆ. ಆದುದರಿಂದ ಪರಮಾತ್ಮನಲ್ಲಿ ಪ್ರತ್ಯಕ್ತ್ವವು ಇದೆ ಎಂದು ತಿಳಿಯಬೇಕು.

## ಭಾಷ್ಯಸಾರ

ಬಾಲರಿಗೂ ಮತ್ತು ಧೀರರಿಗೂ ಇರುವ ವ್ಯತ್ಯಾಸವನ್ನು ಈ ಮಂತ್ರದಲ್ಲಿ ತಿಳಿಸಲಾಗಿದೆ. ತಮಗಾಗುವ ಕೇಡನ್ನು ಅರಿಯದವರು ಬಾಲರು. ಇಂದ್ರಿಯಗಳು ಎಲ್ಲ ವಸ್ತುಗಳನ್ನು ಪ್ರಕಾಶಗೊಳಿಸುತ್ತವೆ. ಆದರೆ ಅಲ್ಪಜ್ಞಾನಿಗಳು ತಮಗೆ ಅಪೇಕ್ಷಿತವಾದ ಬಾಹ್ಯವಾದ ಶಬ್ದಾದಿವಿಷಯಗಳಲ್ಲೇ ಅಂದರೆ ಹೂ–ಗಂಧ–ಸ್ತ್ರೀ ಮುಂತಾದವು ತನಗೆ ಸುಖವುಂಟು ಮಾಡುತ್ತವೆ, ಇವು ಹಿತಕರ ಎಂದು ಅವುಗಳಲ್ಲೇ ಆಸಕ್ತರಾಗುತ್ತಾರೆ. ಆಗ ತಡೆಯಿಲ್ಲದ ಯಮನ ಪಾಶಕ್ಕೆ ಒಳಗಾಗಿ ಜನನ-ಮರಣರೂಪವಾದ ಈ ಸಂಸಾರಬಂಧನದಲ್ಲಿ ಸಿಕ್ಕಿ ತೊಳಲುತ್ತಾರೆ.

ಶಬ್ದಾದಿವಿಷಯಸುಖಗಳಿಗೆ ಆಸೆ ಪಡದವರು ಧೀರರು. ಶಬ್ದಾದಿವಿಷಯಗಳು ಬಂಧನಕ್ಕೆ ಕಾರಣ. ಇದಕ್ಕಿಂತ ವಿಲಕ್ಷಣವಾದ ಆತ್ಮಜ್ಞಾನ ಮುಕ್ತಿಗೆ ಕಾರಣ ಎಂಬ ವಿವೇಕವುಳ್ಳವರು ಈ ಸಂಸಾರಕ್ಕಿಂತ 'ಮುಕ್ತಿ' ವಿಲಕ್ಷಣ ಎಂದು ಅರಿಯುತ್ತಾರೆ. 'ಮುಕ್ತಿ' ಜರಾ-ಮರಣಶೂನ್ಯವಾದುದು. ಪುನರಾವೃತ್ತಿರಹಿತವಾದುದು ಶಾಶ್ವತವಾದುದು ಎಂದು ತಿಳಿದು ಪ್ರತ್ಯಗಾತ್ಮವಿಷಯದಲ್ಲಿಯೇ ಆಸಕ್ತರಾಗುತ್ತಾರೆ. ವಿಷಯಸುಖಗಳು ನಶ್ವರ ಎಂದು ಅರಿತು ಅದನ್ನು ಎಂದಿಗೂ ಬಯಸುವುದಿಲ್ಲ. ಅಂದರೆ ಪ್ರಾಕೃತವಾದ ಸ್ವರ್ಗಾದಿ ಸುಖಗಳನ್ನೂ ಬಯಸುವುದಿಲ್ಲ ಎಂದು ತಾತ್ಪರ್ಯ.



## ಮಂತ್ರ ೩

**येन रूपं रसं गन्धं शब्दान् स्पर्शांश्च मैथुनान् ।**
**एतेनैव विजानाति किमत्र परिशिष्यते ॥ एतद्वै तत् ॥**

ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ।
ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ । ಏತದ್ವೈ ತತ್ ॥

### ಪ್ರತಿಪದಾರ್ಥ

ಯೇನ—ಯಾವ, ಏತೇನೈವ—(ಸಾಧನರೂಪವಾದ) ಈ ಪರಮಾತ್ಮನಿಂದಲೇ ರೂಪಂ—(ಹಳದಿ ಮುಂತಾದ) ರೂಪವನ್ನೂ, ರಸಂ—ಮಧುರಾದಿ ರಸಗಳನ್ನೂ, ಗಂಧಂ—ಸುವಾಸನೆಗಳನ್ನೂ ಶಬ್ದಾನ್—ಶಬ್ದಗಳನ್ನೂ, ಸ್ಪರ್ಶಾನ್—(ಮೃದು ಮುಂತಾದ) ಸ್ಪರ್ಶಗಳನ್ನೂ, ಮೈಥುನಾನ್—ಸಂಭೋಗಜನ್ಯಸುಖಗಳನ್ನೂ, ವಿಜಾನಾತಿ—(ಮನುಷ್ಯನು) ನಿಶ್ಶೇಷವಾಗಿ ತಿಳಿಯುತ್ತಾನೋ, ಅತ್ರ—ಈ ವಿಷಯದಲ್ಲಿ ಕಿಂ ಪರಿಶಿಷ್ಯತೇ—ಉಳಿಯುವುದಾದರೂ ಏನು ? ಏತದ್ವೈ—ಈ ಮಂತ್ರದಲ್ಲಿ ಹೇಳಿದ ಆತ್ಮಸ್ವರೂಪವೇ, ತತ್—ಹಿಂದೆ ಪ್ರಾಪ್ಯವೆಂದು ಹೇಳಿದ ಆ ಪರಮಪದವು.

### ತಾತ್ಪರ್ಯ

ರೂಪ-ರಸ-ಗಂಧ-ಶಬ್ದ-ಸ್ಪರ್ಶ-ಮೈಥುನಜನ್ಯಸುಖ ಇವೆಲ್ಲವನ್ನೂ ಜನರು ಸಾಧನರೂಪವಾದ ಪರಮಾತ್ಮನಿಂದಲೇ ತಿಳಿಯುತ್ತಾರೆ. ಅಂದರೆ ಇವನ್ನು ಅರಿಯಲು ಸಾಧನವಾದ ಇಂದ್ರಿಯಗಳು ಪರಮಾತ್ಮನಿತ್ತ ಶಕ್ತಿಯಿಂದಲೇ ಕಾರ್ಯಮಾಡುತ್ತವೆ. ಆದ್ದರಿಂದ ಪರಮಾತ್ಮನಿಂದ ಪ್ರಕಾಶಗೊಳ್ಳದ ವಸ್ತು ಯಾವುದೂ ಇಲ್ಲ. ಈ ಮಂತ್ರದಲ್ಲಿ ಹೇಳಿದ ಪ್ರತ್ಯಗಾತ್ಮಸ್ವರೂಪವೇ ಹಿಂದೆ ಹೇಳಿದ ಪ್ರಾಪ್ಯಸ್ವರೂಪ.

### ರಂಗರಾಮಾನುಜಭಾಷ್ಯಮ್

ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ । ಮೈಥುನಾನ್—ಮಿಥುನನಿಮಿತ್ತಕಸುಖವಿಶೇಷಾನ್ ಇತ್ಯರ್ಥಃ । ಏತೇನೈವ ವಿಜಾನಾತಿ । ನಿಶ್ಶೇಷಂ ಯೇನ ಏತೇನೈವ ಸಾಧನೇನ ಜಾನಾತಿ ಇತ್ಯರ್ಥಃ । 'ತಂ ದೇವಾ ಜ್ಯೋತಿಷಾಂ ಜ್ಯೋತಿಃ' ಇತಿ ರೂಪಾದಿಪ್ರಕಾಶಕಾನಾಮ್ ಇಂದ್ರಿಯಾಣಾಂ ತದನುಗೃಹೀತಾನಾಮೇವ ಕಾರ್ಯಾರಂಭಕತ್ವಾತ್ ಇತಿ ಭಾವಃ । ಕಿಮತ್ರ ಪರಿಶಿಷ್ಯತೇ—ಕಿಂ ತತ್ ಅಪ್ರಕಾಶ್ಯಮಿತಿ ಭಾವಃ । ಏತದ್ವೈ ತತ್—ತತ್ ಪೂರ್ವಂ ಪ್ರಾಪ್ಯತಯಾ ನಿರ್ದಿಷ್ಟಂ, ವಿಷ್ಣೋಃ ಪರಮಂ ಪದಮ್, ಏತದ್ವೈ—ಏತದೇವ, ಏತನ್ಮಂತ್ರಪ್ರತಿಪಾದ್ಯಪ್ರತ್ಯಗಾತ್ಮಸ್ವರೂಪಮೇವ ಇತ್ಯರ್ಥಃ ।

### ಅನುವಾದ

ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ । ಮೈಥುನಾನ್—ಸಂಭೋಗದಿಂದ ಉಂಟಾಗುವ ಸುಖವಿಶೇಷಗಳನ್ನೂ, ಏತೇನೈವ ವಿಜಾನಾತಿ, ಎಲ್ಲವನ್ನೂ—ಪೂರ್ಣವಾಗಿ ಈ ಸಾಧನದಿಂದಲೇ ತಿಳಿಯುತ್ತಾನೆ ಎಂದರ್ಥ. 'ತಂ ದೇವಾ ಜ್ಯೋತಿಷಾಂ

ಜ್ಯೋತಿಃ' (ಬೃ. ಉ. 6-4-16) ಎಂಬಂತೆ ರೂಪ ಮುಂತಾದವುಗಳನ್ನು ಪ್ರಕಾಶಪಡಿಸುವ, ಇಂದ್ರಿಯಗಳಿಗೆ ಕಾರ್ಯಮಾಡುವ ಶಕ್ತಿಯು ಪರಮಾತ್ಮನ ಅನುಗ್ರಹದಿಂದಲೇ ಬಂದುದು ಎಂದು ತಾತ್ಪರ್ಯ. ಕಿಮತ್ರ ಪರಿಶಿಷ್ಯತೇ–ಪರಮಾತ್ಮನಿಂದ ಪ್ರಕಾಶಗೊಳ್ಳದ್ದು ಯಾವುದೂ ಇಲ್ಲ. ಏತದ್ವೈ ತತ್–ತತ್–ಹಿಂದೆ ಪ್ರಾಪ್ಯವೆಂದು ಹೇಳಿದ ವಿಷ್ಣುವಿನ ಶ್ರೇಷ್ಠವಾದ ಸ್ಥಾನವು ಏತದ್ವೈ–ಇದೇ. ಈ ಮಂತ್ರದಲ್ಲಿ ಹೇಳಿರುವ ಪ್ರತ್ಯಗಾತ್ಮಸ್ವರೂಪವೇ ಎಂದರ್ಥ.

## ಭಾಷ್ಯಸಾರ

ಹಿಂದೆ ಮೂರನೇ ವಲ್ಲಿಯ 'ಋತಂ ಪಿಬಂತೌ' ಎಂಬ ಮಂತ್ರದಲ್ಲಿ ಜೀವಾತ್ಮ-ಪರಮಾತ್ಮ ವಿಷಯಗಳನ್ನು ಪ್ರಸ್ತಾಪಿಸಿದೆ. ಪ್ರಾಪ್ತಾ ಎನಿಸಿದ ಜೀವನನ್ನು ರಥಿಕನೆಂದು ರೂಪಿಸಿದೆ. ಪ್ರಾಪ್ಯನು ಎನಿಸಿದ ಪರಮಾತ್ಮನನ್ನು ಸಂಸಾರಸಾಗರವನ್ನು ದಾಟಿಸುವವನು ಎಂದು ಹೇಳಿದೆ. ಸಂಸಾರಸಾಗರದ ಮತ್ತೊಂದು ತೀರವೇ ಪರಮಾತ್ಮ. ಅವನ ಸ್ವರೂಪವನ್ನು 'ಯೇನ ರೂಪಂ' ಎಂಬ ಈ ಮಂತ್ರದಲ್ಲಿ ವಿಶೇಷವಾಗಿ ವಿವರಿಸಲಾಗಿದೆ.

ಅಂತರಾತ್ಮನಾದ ಪರಮಾತ್ಮನು "[1]ಜ್ಯೋತಿಗಳಿಗೂ ಜ್ಯೋತಿ' ಎನಿಸಿರುವನು. ಈ ಪರಮಾತ್ಮನ ಅನುಗ್ರಹದಿಂದಲೇ ರೂಪ–ರಸ–ಗಂಧ–ಸ್ಪರ್ಶ–ಮೈಥುನಜನ್ಯವಾದ ಸುಖ ಮುಂತಾದವುಗಳೆಲ್ಲವನ್ನೂ ಅರಿಯುತ್ತಾನೆ. ಈ ಪರಮಾತ್ಮನಿಂದಲೇ ಎಲ್ಲ ವಸ್ತುಗಳೂ ಪ್ರಕಾಶಗೊಳ್ಳುತ್ತವೆ. ಪರಮಾತ್ಮನಿಂದ ಪ್ರಕಾಶಗೊಳ್ಳದ ವಸ್ತುಗಳೇ ಇಲ್ಲ.

ವಸ್ತುಪ್ರಕಾಶಕಗಳೆಂದು ಹೇಳುವ ಕಿವಿ–ಕಣ್ಣು ಮುಂತಾದವುಗಳು ಪರಮಾತ್ಮನಿತ್ತ ಬಲದಿಂದಲೇ ಇತರ ವಸ್ತುಗಳನ್ನು ಪ್ರಕಾಶಪಡಿಸುತ್ತವೆ. ತಿಳಿಯುವವನೂ, ಇವನಿತ್ತ ಶಕ್ತಿಯಿಂದಲೇ ಅರಿಯುತ್ತಾನೆ. ಈ ಪರಮಾತ್ಮನ ಅನುಗ್ರಹವಿಲ್ಲದೆ ವಸ್ತುಗಳನ್ನು ಪ್ರಕಾಶಪಡಿಸುವುದಾವುದೂ ಈ ಲೋಕದಲ್ಲಿಲ್ಲ. ಕಣ್ಣಿಗೆ ಕಣ್ಣು, ಮನಸ್ಸಿಗೆ ಮನಸ್ಸೂ [2]ಆಗಿರುವವನು ಎಂದು ಈ ವಿಷಯವನ್ನು ಮತ್ತೊಂದು ಕಡೆ ಹೇಳಿದೆ.

ನಚಿಕೇತನು ಎರಡನೇ ವಲ್ಲಿಯ ಹದಿನಾಲ್ಕನೇ ಮಂತ್ರದಲ್ಲಿ 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಎಂದು ಕೇಳಿದ ಪರಮಾತ್ಮಸ್ವರೂಪವನ್ನು ಯಮನು ಮೂರನೇ ವಲ್ಲಿಯ ಒಂಬತ್ತನೇ ಮಂತ್ರದಲ್ಲಿ 'ತದ್ವಿಷ್ಣೋಃ ಪರಮಂ ಪದಮ್' ಎಂದು ಹೇಳಿದೆ. ಇದನ್ನು ತಿಳಿಯುವುದು ಬಹಳ ಕಷ್ಟ, ಆದುದರಿಂದ ಅವನೇ ಪುನಃ 'ಏತದ್ವೈ ತತ್' ಎಂದು ವಿವರಿಸುತ್ತಾನೆ, ಅಂದರೆ ಈ ಮಂತ್ರದಲ್ಲಿ ಹೇಳಿರುವ ಪರಮಾತ್ಮಸ್ವರೂಪವೇ ಹಿಂದೆ ಪ್ರಾಪ್ಯವೆಂದು ಹೇಳಿದ ಪರಮಾತ್ಮಸ್ವರೂಪ ಎಂದರ್ಥ.

ಶಬ್ದ–ಸ್ಪರ್ಶ–ರೂಪ–ರಸ ಮುಂತಾದವುಗಳಿಂದುಂಟಾಗುವ ಆನಂದಗಳನ್ನೂ ಸೂಚಿಸುತ್ತವೆ. ಆನಂದಸ್ವರೂಪನಾದ ಪರಮಾತ್ಮನನ್ನು ಅನುಭವಿಸುವುದರಿಂದಲೇ ಈ ಎಲ್ಲ ಆನಂದಗಳನ್ನೂ ಅನುಭವಿಸಿದಂತಾಗುತ್ತದೆ. ಈ ಜೀವರಿಗೆ ಅನುಭಾವುಕರಾದ ಚತುರ್ಮುಖನ

1 ತಂ ದೇವಾ ಜ್ಯೋತಿಷಾಂ ಜ್ಯೋತಿಃ (ಬೃ.ಉ. 6-4-16)

2 ಚಕ್ಷುಷಃ ಚಕ್ಷುಃ.................ಮನಸೋ ಮನಃ (ಕೇನ–1–2)

ಆನಂದದವರೆಗಿನ ಎಲ್ಲ ಆನಂದಗಳೂ ಅಪರಿಚ್ಛಿನ್ನ ಆನಂದಸ್ವರೂಪನಾದ ಪರಮಾತ್ಮನ ಒಂದಂಶವಾಗಿದೆ ಎಂದು ಭಾಸವಾಗುತ್ತದೆ. ಆದುದರಿಂದ ಈ ಪರಮಾತ್ಮನನ್ನು ಅನುಭವಿಸುವಾಗ ಇತರ ಯಾವ ಆನಂದವೂ ಅನುಭವಾರ್ಹವಾಗಿ ಉಳಿಯಲಾರದು. ಏಕೆಂದರೆ ಇದಕ್ಕಿಂತಲೂ ಬೇರೆ ಪ್ರಾಪ್ಯ ಇದ್ದರಲ್ಲವೇ ಎಂಬರ್ಥವನ್ನು "ಏತದ್ವೈ ತತ್" ಎಂಬುದು ತಿಳಿಸುತ್ತದೆ ಎಂದು ಕೆಲವರು ಅರ್ಥ ಮಾಡುತ್ತಾರೆ. (ಸುಬೋಧಿನೀ)[1]



1 ಸುಬೋಧಿನೀಕಾರರು ಹೇಳಿರುವ ವಿಶೇಷಾರ್ಥವನ್ನು ರೂಪ-ರಸ ಎಂಬುದರಿಂದ ತಿಳಿಸಲಾಗಿದೆ.

## ಮಂತ್ರ ೪

**स्वप्नान्तं जागरितान्तं चोभौ येनानुपश्यति ।**
**महान्तं विभुमात्मानं मत्वा धीरो न शोचति ॥**

ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ।
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥

### ಪ್ರತಿಪದಾರ್ಥ

ಲೋಕಃ—ಜನರು, ಸ್ವಪ್ನಾಂತಮ್—(ಸಾಮಾನ್ಯ ಜನರು) ಸ್ವಪ್ನಪ್ರಪಂಚ ಮತ್ತು ಜಾಗರಿತಾಂತಮ್—ಜಾಗ್ರತ್ಪ್ರಪಂಚ, ಉಭೌ ಚ—ಈ ಎರಡನ್ನೂ, ಯೇನ—(ಮನಸ್ಸೇ ಮೊದಲಾದ ಇಂದ್ರಿಯರೂಪದಲ್ಲಿರುವ ಪರಮಾತ್ಮನಿಂದ, ಅನುಪಶ್ಯತಿ—ನೋಡುತ್ತಾನೆ. ಧೀರಃ—ಜ್ಞಾನಿಯಾದವನು, (ತಮ್—ಹಿಂದೆ ಹೇಳಿದ), ವಿಭುಮ್—ವ್ಯಾಪಕನಾದ, ಮಹಾಂತಮ್—ಉತ್ತಮನಾದ, ಆತ್ಮಾನಮ್—ಪರಮಾತ್ಮನನ್ನು, ಮತ್ವಾ—ತಿಳಿದು, ನ ಶೋಚತಿ—ದುಃಖಿಸುವುದಿಲ್ಲ (ಸಂಸಾರದುಃಖವನ್ನು ಹೊಂದುವುದಿಲ್ಲ).

### ತಾತ್ಪರ್ಯ

ನಾವು ಸ್ವಪ್ನಗಳಲ್ಲಿ ನೋಡುವ ವಸ್ತುಗಳನ್ನೂ ಮತ್ತು ಎಚ್ಚರಕಾಲದಲ್ಲಿ ನೋಡುವ ವಸ್ತುಗಳನ್ನೂ ಈ ಪರಮಾತ್ಮನ ಅನುಗ್ರಹದಿಂದಲೇ ನೋಡುತ್ತೇವೆ. ಜ್ಞಾನಿಯಾದವನು ಮತ್ತು ಸರ್ವವ್ಯಾಪಕನೂ ಉತ್ತಮನೂ ಆದ ಪರಮಾತ್ಮನನ್ನು ಅರಿಯುತ್ತಾನೆ. ಇದರಿಂದ ಅವನಿಗೆ ಈ ಸಂಸಾರಬಂಧನದ ದುಃಖವುಂಟಾಗುವುದಿಲ್ಲ.

### ರಂಗರಾಮಾನುಜಭಾಷ್ಯಮ್

ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ । ಸಕಲಂ ಸ್ವಾಪ್ನಪ್ರಪಂಚಂ ಜಾಗ್ರತ್ಪ್ರಪಂಚಂ ಚ, ಮನಆದಿ ಇಂದ್ರಿಯಭಾವಮಾಪನ್ನೇನ ಯೇನ ಪರಮಾತ್ಮನಾ, ಲೋಕಃ ಪಶ್ಯತಿ ಇತ್ಯರ್ಥಃ । ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ । ತಮ್ ಇತಿ ಶೇಷಃ । ಉಕ್ತೋಽರ್ಥಃ ॥

### ಅನುವಾದ

**ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ**–ಸಮಸ್ತವಾದ ಸ್ವಪ್ನಪ್ರಪಂಚವನ್ನೂ, ಜಾಗ್ರತ್ ಪ್ರಪಂಚವನ್ನೂ ಮನಸ್ಸು ಮುಂತಾದ ಇಂದ್ರಿಯಗಳ ರೂಪದಲ್ಲಿರುವ ಪರಮಾತ್ಮನಿಂದಲೇ ಜನರು ನೋಡುತ್ತಾರೆ ಎಂದರ್ಥ. **ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ.** ತಂ–ಆ ಪರಮಾತ್ಮನನ್ನು ಎಂದು ಸೇರಿಸಿಕೊಳ್ಳಬೇಕು. ಮಿಕ್ಕವುಗಳಿಗೆ ಅರ್ಥವನ್ನು ಹೇಳಿದೆ.

### ಭಾಷ್ಯಸಾರ

ಈ ಮಂತ್ರದಲ್ಲಿ ಪುನಃ ಆ ಪರಮಾತ್ಮನ ಸ್ವರೂಪವನ್ನೇ ವಿಶೇಷರೂಪದಲ್ಲಿ ವಿವರಿಸಲಾಗಿದೆ. ಪರಮಾತ್ಮನು ಬಲಕ್ಕೂ ಬಲರೂಪನು. ಸರ್ವಾಂತರ್ಯಾಮಿಯು, ಪರಮಾತ್ಮನು

ಎಲ್ಲ ವಸ್ತುಗಳನ್ನೂ ಪ್ರಕಾಶಪಡಿಸುತ್ತಾನೆ. ಅವನ ಒಂದು ಬಲದಿಂದಲೇ ಜನರು ಸ್ವಪ್ನ ಕಾಲದಲ್ಲೂ, ಎಚ್ಚರವಾಗಿರುವಾಗಲೂ ವಸ್ತುಗಳನ್ನು ನೋಡುತ್ತಾರೆ. ಸರ್ವಾಂತರ್ಯಾಮಿಯೂ ಎಲ್ಲ ವಸ್ತುವಿನಲ್ಲೂ ಎಲ್ಲ ಕಡೆಯಲ್ಲೂ ವ್ಯಾಪಿಸಿರುವವನೂ ಆದ ಪರಮಾತ್ಮನನ್ನು ವಿವೇಕಿಯು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಇದರಿಂದ ವಿವೇಕಿಯು ದುಃಖಕ್ಕೆ ಒಳಗಾಗುವುದಿಲ್ಲ. ಬಾಹ್ಯವಾದ ವಸ್ತುಗಳ ಜ್ಞಾನವು ಇಂದ್ರಿಯಗಳಿಂದ ಉಂಟಾದರೂ, ಈ ಸಮಸ್ತಕ್ಕೂ ಪರಮಾತ್ಮನೇ ಕಾರಣನೆಂದು ಈ ಮಾತುಗಳಿಂದ ಹೇಳಿದಂತಾಗುತ್ತದೆ.



## ಮಂತ್ರ ೫

**य इदं मध्वदं वेद आत्मानं जीवमन्तिकात् ।**
**ईशानं भूतभव्यस्य न ततो विजुगुप्सते ॥ एतद्वै तत् ॥**

ಯ ಇದಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥
ಏತದ್ವೈತತ್ ॥

### ಪ್ರತಿಪದಾರ್ಥ

ಯಃ — ಯಾವನು, ಇದಮ್ — ಈ, ಮಧ್ವದಮ್ — ಜೇನಿನಂತೆ ಭೋಗ್ಯವಾದ ಕರ್ಮಫಲವನ್ನು ಅನುಭವಿಸುವ, ತಮ್ — ಹಿಂದೆ ಹೇಳಲ್ಪಟ್ಟ ಆ ಜೀವಮ್ ಆತ್ಮಾನಮ್ — ಜೀವಾತ್ಮನನ್ನೂ, ಅಂತಿಕಾತ್ — (ಜೀವ) ಸಮೀಪದಲ್ಲಿರುವ, ಭೂತಭವ್ಯಸ್ಯ — ಮೂರು ಕಾಲದಲ್ಲೂ ಇರುವ ಪದಾರ್ಥಗಳಿಗೆ, ಈಶಾನಮ್ — ಒಡೆಯನಾದವ(ಪರಮಾತ್ಮ)ನನ್ನೂ, ವೇದ — ತಿಳಿಯುತ್ತಾನೋ, ಸಃ — ಅವನು, ತತಃ — ಆ ಕಾರಣದಿಂದ ನ ವಿಜುಗುಪ್ಸತೇ — (ಕೆಟ್ಟಕೆಲಸ ಮಾಡಿದರೂ) ಜೀವನನ್ನು ನಿಂದಿಸುವುದಿಲ್ಲ. ತತ್ — ಹಿಂದೆ ಹೇಳಲ್ಪಟ್ಟ, ಪರಮಪದವೇ ಏತದ್ವೈ — ಈ ಮಂತ್ರದಲ್ಲಿ ಹೇಳಿರುವ ಆತ್ಮಸ್ವರೂಪವೆಂದರ್ಥ.

### ತಾತ್ಪರ್ಯ

ಜೀವನು ಕರ್ಮಫಲವನ್ನು ಜೇನಿನಂತೆ ಬಹಳ ಹಿತವಾಗಿ ಅನುಭವಿಸುತ್ತಾನೆ. ಈ ಜೀವಾತ್ಮಸ್ವರೂಪವನ್ನೂ, ಮತ್ತು ಯಾವಾಗಲೂ ಅವನ ಸಮೀಪದಲ್ಲಿಯೇ ಇರುವ, ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿರುವ ಪದಾರ್ಥಗಳಿಗೆ ನಿಯಾಮಕನಾದ ಪರಮಾತ್ಮನನ್ನೂ ಅರಿತವನು ಯಾವ ದುಷ್ಕೃತ್ಯಗಳನ್ನೇ ಮಾಡಿದ್ದರೂ ಈ ಜೀವನನ್ನು ನಿಂದಿಸುವುದಿಲ್ಲ.

### ರಂಗರಾಮಾನುಜಭಾಷ್ಯಮ್

ಯಃ ಇದಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ । ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । ಇದಮ್ ಇತಿ ಲಿಂಗವ್ಯತ್ಯಯಃ ಛಾಂದಸಃ । ಇಮಮ್ ಮಧ್ವದಂ 'ಋತಂ ಪಿಬಂತೌ' ಇತಿ ನಿರ್ದಿಷ್ಟಂ, ಕರ್ಮಫಲಭೋಕ್ತಾರಂ ಜೀವಾತ್ಮಾನಂ, 'ಗುಹಾಂ ಪ್ರವಿಷ್ಟೌ' ಇತ್ಯುಕ್ತರೀತ್ಯಾ ತಸ್ಯಾಂತಿಕೇ ಕಾಲತ್ರಯವರ್ತಿಚಿದಚಿದೀಶ್ವರಂ ಚ ಯೋ ವೇದ ತಂ ದುಷ್ಕೃತಕಾರಿಣಮಪಿ ನ ನಿಂದೇದಿತ್ಯರ್ಥಃ । "ಗುಪ್ತಿಜ್‌ಕಿದ್ಭ್ಯಃಸನ್" (ಪಾ.ಸೂ. 3-1-5) ಇತ್ಯತ್ರ ಜುಗುಪ್ಸಾಶಬ್ದಃ ನಿಂದಾರ್ಥಕ ಉಕ್ತಃ । 'ಜುಗುಪ್ಸಾ ವಿರಾಮಪ್ರಮಾದಾರ್ಥಾನಾಮ್' (ವಾರ್ತಿಕ 1-4-24) ಇತಿ ಪಂಚಮೀ । ಏತದ್ವೈತತ್ ಇತಿ ಪೂರ್ವವತ್ ॥

### ಅನುವಾದ

ಯಃ ಇದಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ । ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ। ಇದಮ್-ಈ ನಪುಂಸಕಲಿಂಗವು ಆರ್ಷಪ್ರಯೋಗ. ಮಧ್ವದಂ-

'ಋತಂ ಪಿಬಂತೌ' ಎಂಬುದರಿಂದ ಹೇಳಿದ ಕರ್ಮಫಲವನ್ನು ಅನುಭವಿಸುವ ಜೀವಾತ್ಮನನ್ನೂ, 'ಗುಹಾಂ ಪ್ರವಿಷ್ಟೌ' ಎಂಬಲ್ಲಿ ಹೇಳಿದಂತೆ, ಜೀವನ ಸಮೀಪದಲ್ಲಿ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಚಿತ್-ಅಚಿತ್ತು ಮತ್ತು ಅವುಗಳಿಗೆ ಒಡೆಯನಾದವನನ್ನೂ ಯಾರು ತಿಳಿಯುತ್ತಾರೋ, (ಪಾಪಕಾರ್ಯಮಾಡಿದ್ದರೂ) ಅವನನ್ನು ನಿಂದಿಸಬಾರದು. 'ಗುಪ್ತಿಜ್‌ಕಿದ್ಭ್ಯಃ ಸನ್' (ಪಾ. ಸೂ. 3-1-5) ಎಂಬಲ್ಲಿ ಜುಗುಪ್ಸಾಶಬ್ದವು ನಿಂದಾರ್ಥಕವೆಂದು ಹೇಳಿದೆ. 'ಜುಗುಪ್ಸಾವಿರಾಮಪ್ರಮಾದಾರ್ಥಾನಾಂ' (ವಾರ್ತಿಕ 1-4-24) ಎಂಬ ವಾರ್ತಿಕದಿಂದ 'ತತಃ' ಎಂದು ಪಂಚಮಿ ಬಂದಿದೆ. ಏತದ್ವೈ ತತ್-ಎಂಬುದಕ್ಕೆ ಹಿಂದಿನಂತೆಯೇ ಅರ್ಥ. (ಈ ಮಂತ್ರದಲ್ಲಿ ಹೇಳಿರುವ ಎಲ್ಲರ ಹೃದಯದಲ್ಲಿ ನೆಲೆಸಿರುವ ಚಿದಚಿತ್ತುಗಳಿಗೆ ಒಡೆಯನು ಎಂಬ ಪರಮಾತ್ಮಸ್ವರೂಪವೇ ಹಿಂದೆ ಹೇಳಿದ ಪ್ರಾಪ್ಯಸ್ವರೂಪವು)

## ಭಾಷ್ಯಸಾರ

ಪರಮಾತ್ಮಸ್ವರೂಪದ ಮತ್ತಷ್ಟು ವಿವರಣೆಯನ್ನು ಈ ಮಂತ್ರದಲ್ಲಿ ಹೇಳಿದೆ. ಜೀವನು ಜೇನಿನಂತೆ ಸಿಹಿಯಾದ ಕರ್ಮಫಲವನ್ನು ಅನುಭವಿಸುತ್ತಾನೆ. ಇಂತಹ ಜೀವಾತ್ಮನನ್ನು ಯಾವ ಉಪಾಸಕನು ತಿಳಿಯುತ್ತಾನೋ, ಅಂತೆಯೇ ಜೀವನಿರುವ ಜಾಗದಲ್ಲಿಯೇ ಪರಮಾತ್ಮನು ನೆಲೆಸಿರುವನು, ಈತನು ಭೂತ-ಭವಿಷ್ಯತ್-ವರ್ತಮಾನಕಾಲಗಳಲ್ಲಿರುವ ಎಲ್ಲ ಚಿತ್-ಅಚಿತ್ ವಸ್ತುಗಳಿಗೂ ಒಡೆಯನು ಎಂದು ಪರಮಾತ್ಮನನ್ನು ಚೆನ್ನಾಗಿ ತಿಳಿಯುತ್ತಾನೋ ಅವನಿಗೆ ಯಾವುದೇ ಭಯವಿರುವುದಿಲ್ಲ. ಅಭಯವನ್ನು ಪಡೆದವನಾಗುತ್ತಾನೆ. ಆದ್ದರಿಂದ ಭಯವನ್ನು ಮರೆಸಿಕೊಳ್ಳಲು ಆತನು ಬಯಸುವುದಿಲ್ಲ ಎಂದು ಸುಬೋಧಿನೀಕಾರರು ಹೇಳುತ್ತಾರೆ.

ಮುಂದೆ ಅಥವಾ ಎಂಬುದರಿಂದ 'ಜುಗುಪ್ಸಾ'ಶಬ್ದಕ್ಕೆ ನಿಂದೆ ಎಂದು ಅರ್ಥ ಮಾಡುತ್ತಾರೆ. ಈ ಜೀವಾತ್ಮ ಮತ್ತು ಪರಮಾತ್ಮನನ್ನು ಅರಿತವನು ಜಾತಿಯಿಂದಾಗಲೀ, ಕೆಲಸದಿಂದಾಗಲೀ ಹೀನನಾಗಿದ್ದರೂ ಆತನನ್ನು ಯಾರೂ ನಿಂದಿಸುವುದಿಲ್ಲ.

ಅಥವಾ ಈ ಜೀವಾತ್ಮಪರಮಾತ್ಮಜ್ಞಾನ ಪಡೆದವನು ಯಾರನ್ನೂ ನಿಂದಿಸುವುದಿಲ್ಲ. ಆತನು ತನಗೂ ಇತರರಿಗೂ ಒಬ್ಬನೇ ಅಂತರ್ಯಾಮಿಯಾಗಿದ್ದಾನೆ ಎಂದು ತಿಳಿಯುತ್ತಾನೆ. ಇದರಿಂದ ಇತರರನ್ನು ನಿಂದಿಸುವ ಪ್ರಸಂಗವೇ ಬರುವುದಿಲ್ಲ.

ಈ ಮಂತ್ರದಲ್ಲಿ ಹೇಳಿದ 'ಪರಮಾತ್ಮನು ಜೀವಾತ್ಮನೊಡನೆ ಹೃದಯದಲ್ಲಿ ಪ್ರವೇಶಿಸಿ, ಕರ್ಮಾನುಗುಣವಾಗಿ ಜೀವರನ್ನು ನಿಯಂತ್ರಿಸುತ್ತಾನೆ' ಎಂಬ ಪರಮಾತ್ಮಸ್ವರೂಪವೇ ಹಿಂದೆ ಪ್ರಾಪ್ಯವೆಂದು ಹೇಳಿದ ಬ್ರಹ್ಮಸ್ವರೂಪ ಎಂದರ್ಥ.



# ಮಂತ್ರ ೬

**यः पूर्वं तपसो जातमद्भ्यः पूर्वमजायत ।**
**गुहां प्रविश्य तिष्ठन्तं यो(यद्)भूतेभिर्व्यपश्यत ।। एतद्वै तत् ।।**

ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ ।
ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ (ಯದ್)
ಭೂತೇಭಿರ್ವ್ಯಪಶ್ಯತ॥ ಏತದ್ವೈ ತತ್ ॥

### ಪ್ರತಿಪದಾರ್ಥ

ಯಃ—ಯಾವನು, ಪೂರ್ವಮ್—(ವ್ಯಷ್ಟಿಸೃಷ್ಟಿಗೆ) ಮೊದಲು, ಅದ್ಭ್ಯಃ—ನೀರಿನಿಂದ, ಅಜಾಯತ—ಹುಟ್ಟಿದನೋ, ಪೂರ್ವಮ್—(ರುದ್ರಾದಿಸೃಷ್ಟಿಗಿಂತಲೂ) ಮೊದಲು, ತಪಸಃ—(ಪರಬ್ರಹ್ಮ)ಸಂಕಲ್ಪದಿಂದ, ಜಾತಮ್—ಹುಟ್ಟಿದನೋ, ಗುಹಾಂ ಪ್ರವಿಶ್ಯ ತಿಷ್ಠಂತಂ—ಚತುರ್ಮುಖನ ಹೃದಯಗುಹೆಯಲ್ಲಿ ಪ್ರವೇಶಿಸಿ ನೆಲೆಸಿರುವ, ಭೂತೇಭಿಃ—ಇಂದ್ರಿಯಗಳಿಂದ (ಕೂಡಿದ ಚತುರ್ಮುಖನನ್ನು), ಯತ್ ವ್ಯಪಶ್ಯತ—ಯಾವ ಪರಬ್ರಹ್ಮನು (ಈತನು ಸಕಲ ಜಗತ್ತಿಗೂ ಸೃಷ್ಟಿಕರ್ತನಾಗಲಿ ಎಂದು ಅನುಗ್ರಹಬುದ್ಧಿಯಿಂದ) ನೋಡಿದನೋ, ತತ್—ಆ ಬ್ರಹ್ಮವು, ಏತದ್ವೈ—ಈ ಮಂತ್ರದಲ್ಲಿ ಹೇಳಿದ ಆತ್ಮರೂಪನೇ.

### ತಾತ್ಪರ್ಯ

ವ್ಯಷ್ಟಿಸೃಷ್ಟಿಗೆ ಮೊದಲು ಚತುರ್ಮುಖನು ನೀರಿನಿಂದ ಹುಟ್ಟಿದನು. ರುದ್ರ ಮುಂತಾದವರಿಗಿಂತ ಮೊದಲು ಪರಮಾತ್ಮನ ಸಂಕಲ್ಪದಿಂದ ಜನಿಸಿದನು. ಚತುರ್ಮುಖನ ಹೃದಯಗುಹೆಯಲ್ಲಿ ನೆಲಸಿ, ಪಂಚೇಂದ್ರಿಯಗಳಿಂದ ಕೂಡಿದ ಚತುರ್ಮುಖನನ್ನು ಈತನು ಎಲ್ಲ ಜಗತ್ಸೃಷ್ಟಿಯನ್ನೂ ಮಾಡಲಿ ಎಂದು ಕಟಾಕ್ಷಿಸಿದ ಪರಮಾತ್ಮ. ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವೇ ಹಿಂದೆ ಪ್ರಾಪ್ಯವೆಂದು ಹೇಳಿದ ಪರಮಾತ್ಮಸ್ವರೂಪ.

### ರಂಗರಾಮಾನುಜಭಾಷ್ಯಮ್

ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ । ಗುಹಾಂ ಪ್ರವಿಶ್ಯ ತಿಷ್ಠಂತಂ ಯದ್ ಭೂತೇಭಿರ್ವ್ಯಪಶ್ಯತ । 'ಅಪ ಏವ ಸಸರ್ಜಾದೌ ತಾಸು ವೀರ್ಯಮಪಾಸೃಜತ್ । ತದಂಡಮಭವದ್ಧೈಮಂ ಸಹಸ್ರಾಂಶುಸಮಪ್ರಭಮ್ ॥ ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥' ಇತಿ ಸ್ಮೃತ್ಯುಕ್ತರೀತ್ಯಾ ಅದ್ಭ್ಯಃ ಅಪಾದಾನೇಭ್ಯಃ (ಉಪಾದಾನೇಭ್ಯಃ) ವ್ಯಷ್ಟಿಸೃಷ್ಟೇಃ ಪೂರ್ವಂ ಯಃ ಅಜಾಯತ; ತಂ ತಪಸಃ–ಸಂಕಲ್ಪಮಾತ್ರಾದೇವ, ಪೂರ್ವಂ ಜಾತಮ್–'ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಪಶ್ಯತ ಜಾಯಮಾನಮ್' ಇತಿ ಶ್ರುತ್ಯುಕ್ತರೀತ್ಯಾ ಪ್ರಥಮಂ ಜಾತಮ್, ಗುಹಾಂ ಪ್ರವಿಶ್ಯ ತಿಷ್ಠಂತಮ್–ಹೃದಯಗುಹಾಂ ಪ್ರವಿಶ್ಯ ವರ್ತಮಾನಮ್, ಭೂತೇಭಿಃ–ಭೂತೈಃ ದೇಹೇಂದ್ರಿಯಾಂತಃಕರಣಾದಿಭಿಃ ಉಪೇತಂ ಚತುರ್ಮುಖಮ್, 'ಅಯಂ ಸಕಲಜಗತ್ಸ್ರಷ್ಟಾ ಸ್ಯಾತ್' ಇತಿ ಕಟಾಕ್ಷೇಣ ಈಕ್ಷತೇತ್ಯರ್ಥಃ । ಏತದ್ವೈ ತತ್–ಉಕ್ತೋಽರ್ಥಃ.

ಅನುವಾದ

ಯಃ ಪೂರ್ವಂ........................................ಭೂತೇಭಿರ್ವ್ಯಪಶ್ಯತ ।

'ಅಪ ಏವ ಸಸರ್ಜಾದೌ ತಾಸು ವೀರ್ಯಮಪಾಸೃಜತ್ । (ಮ.ಸ್ಮೃ. 1-8)

ತದಂಡಮಭವದ್ಧೈಮಂ ಸಹಸ್ರಾಂಶುಸಮಪ್ರಭಮ್ ॥

ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ। (ಮ.ಸ್ಮೃ. 1-9)

ಎಂದು ಸ್ಮೃತಿಯಲ್ಲಿ ಹೇಳಿರುವಂತೆ ಕಾರಣವಾದ ನೀರಿನಿಂದ ವ್ಯಷ್ಟಿಸೃಷ್ಟಿಗೂ ಮೊದಲು ಯಾವನು ಜನಿಸಿದನೋ, (ಯಾವನ) ತಪಸಃ-ಸಂಕಲ್ಪದಿಂದಲೇ ಪೂರ್ವಂ ಜಾತಮ್-ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಪಶ್ಯತ ಜಾಯಮಾನಂ । (ತೈ.ನಾ. 19) ಎಂದು ಶ್ರುತಿಯಲ್ಲಿ ಹೇಳಿರುವಂತೆ ಮೊದಲು ಜನಿಸಿದ, ಗುಹಾಂ ಪ್ರವಿಶ್ಯ ತಿಷ್ಠಂತಮ್-ಹೃದಯ ಗುಹೆಯಲ್ಲಿ ಪ್ರವೇಶಿಸಿರುವ ಭೂತೇಭಿಃ-ಭೂತೈಃ ಅಂದರೆ ದೇಹ, ಇಂದ್ರಿಯ, ಅಂತಃಕರಣ ಮುಂತಾದವುಗಳಿಂದ ಕೂಡಿದ ತಂ-ಆ ಚತುರ್ಮುಖನನ್ನು "ಈತನು ಸಕಲ ಜಗತ್ತನ್ನೂ ಸೃಷ್ಟಿಸಲಿ" ಎಂದು ತನ್ನ ಕಟಾಕ್ಷದಿಂದ ನೋಡಿದನು ಎಂದರ್ಥ. ಏತದ್ವೈ ತತ್-ಅರ್ಥವನ್ನು ಹೇಳಿದೆ.

ಭಾಷ್ಯಸಾರ

ಎಲ್ಲದಕ್ಕೂ ಯಾವುದು ಕಾರಣವೋ, ಆ ಪರಮಾತ್ಮನೇ ಹಿಂದೆ ಹೇಳಿದ ಪ್ರಾಪ್ಯಸ್ವರೂಪ ಎಂದು 'ಯಃ ಪೂರ್ವಂ' ಎಂಬ ಮಂತ್ರದಿಂದ ಹೇಳಲಾಗಿದೆ. ಮಂತ್ರದಲ್ಲಿ ಹೇಳಿರುವ "ಅದ್ಭ್ಯಃ" ಎಂಬ ಶಬ್ದವು ಪಂಚಭೂತಗಳಿಗೂ ಸೂಚಕ. ಪಂಚಭೂತಗಳಿಗೂ ಮೊದಲು ತನ್ನ ಸಂಕಲ್ಪದಿಂದ ಮಹತ್ ಮುಂತಾದವುಗಳನ್ನು ಸೃಷ್ಟಿಸಿದನು. ಇಲ್ಲಿ "ಜಾತಂ" ಎಂಬುದು ಪ್ರಥಮಾವಿಭಕ್ತ್ಯಂತ ಶಬ್ದ ಎಂದು ಗೋಪಾಲಾನಂದಭಾಷ್ಯ। 'ನಾನು ಅನೇಕವಾಗಿ ಆಗುತ್ತೇನೆ' ಎಂದು ಸಂಕಲ್ಪಮಾಡಿ, ಮಹತ್ ಮುಂತಾದ ರೂಪಗಳನ್ನು ತಳೆದನು. ಇದರಿಂದ ನಿಮಿತ್ತ ಕಾರಣವೂ ಉಪಾದಾನಕಾರಣವೂ ಒಂದೇ ಎಂಬ ವಿಷಯವೂ ಸೂಚಿಸಲ್ಪಡುತ್ತದೆ. ಸಮಸ್ತವ್ಯಷ್ಟಿಸೃಷ್ಟಿಗೂ ಕಾರಣನಾದ ಚತುರ್ಮುಖನೂ ಪರಮಾತ್ಮನ ಸಂಕಲ್ಪದಿಂದಲೇ ಹುಟ್ಟಿದನು ಎಂಬುದನ್ನು 'ಗುಹಾಂ' ಎಂಬುದರಿಂದ ಹೇಳುತ್ತಾನೆ.

'ಗುಹಾಂ ಪ್ರವಿಶ್ಯ ತಿಷ್ಠಂತಂ' ಎಂಬಲ್ಲಿ ಗುಹಾಶಬ್ದವು ಬ್ರಹ್ಮಾಂಡದ ಮಧ್ಯಭಾಗವನ್ನು ಸೂಚಿಸುತ್ತದೆ. 'ಭೂತೇಭಿಃ' ಎಂಬುದು ಛಾಂದಸಪ್ರಯೋಗ, ಉಪಲಕ್ಷಣಾರ್ಥದಲ್ಲಿ ತೃತೀಯಾ ವಿಭಕ್ತಿ ಬಂದಿವೆ. ಈ ಅಂಡದೊಳಗೆ ಕಾರ್ಯ-ಕಾರಣರೂಪದಲ್ಲಿರುವ ಚತುರ್ಮುಖನನ್ನು ತನ್ನ ಸಂಕಲ್ಪದಿಂದ ನೋಡಿದನು ಅಂದರೆ ಸಂಕಲ್ಪದಿಂದಲೇ ಸೃಷ್ಟಿಸಿದನು ಎಂದರ್ಥ. ಇದೇ ಹಿಂದೆ ಹೇಳಿದ ಬ್ರಹ್ಮಸ್ವರೂಪವು ಎಂದು ವ್ಯಾಸುಬೋಧಿನೀಕಾರರು ಹೇಳಿರುವರು.



## ಮಂತ್ರ ೭

**या प्राणेन संभवत्यदितिर्देवतामयी ।**
**गुहां प्रविश्य तिष्ठन्ती या भूतेभिर्व्यजायत ।। एतद्वै तत् ।।**

ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ।
ಗುಹಾಂ ಪ್ರವಿಶ್ಯ ತಿಷ್ಠಂತೀ ಯಾ ಭೂತೇಭಿರ್ವ್ಯಜಾಯತ ।।
ಏತದ್ವೈ ತತ್ ।।

### ಪ್ರತಿಪದಾರ್ಥ

ಯಾ—ಯಾವ, ಅದಿತಿಃ—ಜೀವನು, ಪ್ರಾಣೇನ ಸಂಭವತಿ—ಪ್ರಾಣದೊಡನೆ ಕೂಡಿದ್ದಾನೋ, ದೇವತಾಮಯೀ—ಇಂದ್ರಿಯಾಧೀನಭೋಗವುಳ್ಳವನೋ, ಗುಹಾಮ್—ಹೃದಯಗುಹೆಯನ್ನು, ಪ್ರವಿಶ್ಯ—ಪ್ರವೇಶಿಸಿ, ತಿಷ್ಠಂತೀ—ಇರುವ, ಯಾ—ಯಾವ ಜೀವನು, ಭೂತೇಭಿಃ—ಪಂಚಭೂತಗಳಿಂದ (ಕೂಡಿ), ವ್ಯಜಾಯತ—(ದೇವಾದಿರೂಪಗಳಲ್ಲಿ)ಜನಿಸಿದವನೋ, ತತ್—ಹಿಂದೆ ಹೇಳಿದ ಆ ಬ್ರಹ್ಮನು, ಏತದ್ವೈ—ಈ ಮಂತ್ರದಲ್ಲಿ ಹೇಳಿದ ಜೀವಶರೀರಕ ಪರಮಾತ್ಮನೇ.

### ತಾತ್ಪರ್ಯ

ಕರ್ಮಫಲವನ್ನು ಅನುಭವಿಸುವುದರಿಂದ ಜೀವನನ್ನು ಅದಿತಿ ಎನ್ನುವರು. ಇವನು ಪ್ರಾಣದೊಡನೆ ಕೂಡಿ, ಇಂದ್ರಿಯಗಳ ಸಹಕಾರದಿಂದ ಭೋಗ ಪಡೆಯುವವನು. ಹೃದಯ ಗುಹೆಯಲ್ಲಿದ್ದು ದೇವಾದಿರೂಪನಾಗಿ ಜನಿಸುವನು. ಈ ಜೀವನಿಗೆ ಪರಮಾತ್ಮನೇ ಆತ್ಮ. ಜೀವನಿಗೆ ಆತ್ಮವಾಗಿರುವ ಪರಮಾತ್ಮಸ್ವರೂಪವನ್ನೇ ಹಿಂದೆ ಪ್ರಾಪ್ಯವೆಂದು ಹೇಳಿದೆ.

### ರಂಗರಾಮಾನುಜಭಾಷ್ಯಮ್

ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ । ಗುಹಾಂ ಪ್ರವಿಶ್ಯ ತಿಷ್ಠಂತೀ ಯಾ ಭೂತೇಭಿರ್ವ್ಯಜಾಯತ॥ ಅಯಂ ಚ ಮಂತ್ರಃ. "ಗುಹಾಂ ಪ್ರವಿಷ್ಟೌ" (ಬ್ರ. ಸೂ. 1–2–11) ಇತಿ ಸೂತ್ರೇ, ಭಗವತಾ ಭಾಷ್ಯಕೃತಾ ವ್ಯಾಖ್ಯಾತಃ । ಇತ್ಥಂ ಹಿ ಭಾಷ್ಯಕೃತಾ–"ಕರ್ಮಫಲಾನಿ ಅತ್ತಿ ಇತಿ ಅದಿತಿಃ ಜೀವ ಉಚ್ಯತೇ । ಪ್ರಾಣೇನ ಸಂಭವತಿ–ಪ್ರಾಣೇನ ಸಹವರ್ತತೇ। ದೇವತಾಮಯೀ—ಇಂದ್ರಿಯಾಧೀನಭೋಗಾ । ಗುಹಾಂ ಪ್ರವಿಶ್ಯ ತಿಷ್ಠಂತೀ—ಹೃದಯಪುಂಡರೀಕಕುಹರವರ್ತಿನೀ ಭೂತೇಭಿರ್ವ್ಯಜಾಯತ–ಪೃಥಿವ್ಯಾದಿಭಿಃ ಭೂತೈಃ ಸಹಿತಾ ದೇವಾದಿರೂಪೇಣ ವಿವಿಧಾ ಜಾಯತೇ" ಇತಿ ಭಾಷಿತಮ್ । ಏತದ್ವೈ ತತ್–ತತ್ ತದಾತ್ಮಕಮ್ ಇತ್ಯರ್ಥಃ । ಅತ್ರೈವ ಪ್ರಕರಣೇ—'ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' ಇತ್ಯತ್ರ ದೇವಪದಸ್ಯ ಪರಮಾತ್ಮಾತ್ಮಕಮ್ ಇತಿ ವ್ಯಾಖ್ಯಾತತ್ವಾತ್, 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಇತಿ ಏತದುಪಬೃಂಹಣಗೀತಾವಚನೇಽಪಿ ಮಾಂ–ಮದಾತ್ಮಕಮ್ ಇತಿ ಭಾಷ್ಯಕೃತೈವ ವ್ಯಾಖ್ಯಾತತ್ವಾತ್, ಅಪೃಥಕ್ಸಿದ್ಧವಿಶೇಷಣವಾಚಿಶಬ್ದಸ್ಯ ವಿಶೇಷ್ಯೇ ಇವ,

ಅಪೃಥಕ್ಸಿದ್ಧವಿಶೇಷ್ಯವಾಚಿಶಬ್ದಸ್ಯಾಪಿ ವಿಶೇಷಣೇ ನಿರೂಢತ್ವಾತ್, ತತ್–ತದಾತ್ಮಕಮ್ ಇತ್ಯರ್ಥೋ ಯುಕ್ತ ಇತಿ ದ್ರಷ್ಟವ್ಯಮ್ ॥

ಅನುವಾದ

ಯೆ ಪ್ರಾಣೇನ.............................ಭೂತೇಭಿರ್ವ್ಯಜಾಯತ ಈ ಮಂತ್ರವನ್ನು 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ ಭಗವದ್ರಾಮಾನುಜರು ವ್ಯಾಖ್ಯಾನ ಮಾಡಿರುವರು. ಅದು ಹೀಗಿದೆ. "ಕರ್ಮಫಲವನ್ನು ಅನುಭವಿಸುವವನು ಅದಿತಿಃ–ಜೀವನು, ಪ್ರಾಣೇನ ಸಂಭವತಿ–ಪ್ರಾಣದೊಡನೆ ಕೂಡಿರುವವನು, ದೇವತಾಮಯೀ–ಇಂದ್ರಿಯಗಳಿಗೆ ಅಧೀನವಾದ ಭೋಗವುಳ್ಳವನು. ಗುಹಾಂ ಪ್ರವಿಶ್ಯ ತಿಷ್ಠಂತೀ–ಹೃದಯಗುಹೆಯಲ್ಲಿ ಇರುವವನು. ಭೂತೇಭಿರ್ವ್ಯಜಾಯತ–ಪೃಥಿವೀ ಮುಂತಾದ ಭೂತಗಳಿಂದ ಕೂಡಿ, ದೇವ, ಮನುಷ್ಯ ಮುಂತಾದ ನಾನಾ ರೂಪದಲ್ಲಿ ಹುಟ್ಟುತ್ತಾನೆ ಎಂದು ಭಾಷ್ಯಕಾರರು ಹೇಳಿರುವರು. ಏತದ್ವೈ ತತ್–ಅದನ್ನೇ ಆತ್ಮವಾಗಿ ಉಳ್ಳದ್ದು ಎಂದರ್ಥ."

ಇದೇ ಸಂದರ್ಭದಲ್ಲಿ 'ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' ಎಂಬಲ್ಲಿ 'ದೇವಮ್' ಎಂಬುದಕ್ಕೆ ಪರಮಾತ್ಮನನ್ನು ಆತ್ಮವಾಗಿ ಉಳ್ಳ ಎಂದು ಅರ್ಥಹೇಳಿರುವುದರಿಂದಲೂ, 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' (ಗೀ. 13–2) ಎಂಬ ಗೀತೆಯ ವಚನದಲ್ಲೂ 'ಮಾಂ' ಅಂದರೆ ನನ್ನನ್ನೇ ಆತ್ಮವಾಗಿ ಉಳ್ಳವನು ಎಂದು ಅರ್ಥ ಮಾಡಿರುವುದರಿಂದಲೂ, ಅಪೃಥಕ್ ಸಿದ್ಧವಾದ ವಿಶೇಷಣಸೂಚಕಶಬ್ದವು ವಿಶೇಷ್ಯವನ್ನು ಸೂಚಿಸುವಂತೆ ಅಪೃಥಕ್‌ಸಿದ್ಧ ವಿಶೇಷ್ಯಶಬ್ದವು ವಿಶೇಷಣವನ್ನು ಸೂಚಿಸುವುದರಿಂದಲೂ ತತ್–ಅದನ್ನೇ ಆತ್ಮವಾಗಿ ಉಳ್ಳದ್ದು ಎಂಬರ್ಥ ಉಚಿತವೆಂದು ಅರಿಯಬೇಕು.

ಭಾಷ್ಯಸಾರ

ಈ ಜೀವಕೋಟಿಗಳೆಲ್ಲವೂ ಪರಮಾತ್ಮನನ್ನೇ ಆತ್ಮವಾಗಿ ಉಳ್ಳದ್ದು ಎಂದು 'ಯಾ ಪ್ರಾಣೇನ' ಎಂಬ ಈ ಮಂತ್ರದಿಂದ ಹೇಳಲಾಗಿದೆ. ಕರ್ಮಫಲಗಳನ್ನು ಅನುಭವಿಸುವುದರಿಂದ ಜೀವನನ್ನು 'ಅದಿತಿ' ಎಂದು ಹೇಳುತ್ತಾರೆ. ದೇವತೆಗಳು ನೆಲೆಸಿರುವುದರಿಂದ ಇಂದ್ರಿಯಗಳು ದೇವತೆಗಳು ಎನ್ನಿಸಿಕೊಳ್ಳುತ್ತವೆ. ಆದುದರಿಂದ ಈತನು 'ದೇವತಾಮಯೀ'. ಇಂತಹ ಇಂದ್ರಿಯಾಧೀನವಾದ ಕರ್ತೃತ್ವಭೋಕ್ತೃತ್ವಾದಿಗಳುಳ್ಳವನು ಜೀವ ಎಂದು ಹೇಳಿದೆ. ಈ ಜೀವನು ಪ್ರಾಣವಾಯುವಿನೊಡನೆ ಕೂಡಿ ಇದ್ದಾನೆ. ಅಂದರೆ ಜೀವನು ಇಂದ್ರಿಯ ಮತ್ತು ಪ್ರಾಣಗಳೊಡನೆ ಕೂಡಿ ಫಲಗಳನ್ನು ಅನುಭವಿಸುತ್ತಾನೆ ಎಂದರ್ಥ.

'ಅದಿತಿ' ಎನಿಸಿದ ಈ ಜೀವನ ವಿಷಯವಾಗಿ 'ಗುಹಾಂ ಪ್ರವಿಶ್ಯ' ಎಂಬುದರಿಂದ ಪುನಃ ವಿವರಿಸಲಾಗಿದೆ. ಈ ಜೀವನು ಹೃದಯಗುಹೆಯಲ್ಲಿ ನೆಲೆಸಿರುವನು. ಜ್ಞಾನರೂಪದಿಂದ ಪ್ರತಿಯೊಬ್ಬ ಜೀವನೂ ಸಮಾನವಾಗಿದ್ದರೂ, ಪೃಥಿವೀ ಮುಂತಾದ ಪಂಚಭೂತಗಳಿಂದ ಆದ ಶರೀರಸಂಬಂಧ ಪಡೆದು ದೇವ–ಮನುಷ್ಯ ಎಂಬ ವಿವಿಧ ರೂಪಗಳಲ್ಲಿ ಇರುವನು, ವಸ್ತುತಃ ಜೀವ ನಿತ್ಯ, ಇವನಿಗೆ ಸ್ವರೂಪತಃ ಜನ್ಮವಿಲ್ಲ. ಆದರೂ ದೇವ–ಮನುಷ್ಯ ಮುಂತಾದ ಶರೀರವನ್ನು ಪಡೆಯುವುದೇ ಜನ್ಮವೆಂದು ಹೇಳಿದೆ. ಹೀಗೆ ಭೋಕ್ತಾ ಎನಿಸಿದ

ವನು ಪರಮಾತ್ಮನನ್ನೇ ಆತ್ಮವಾಗಿ ಉಳ್ಳವನು. ಈ ಪರಮಾತ್ಮತತ್ತ್ವವೇ ಹಿಂದೆ ಹೇಳಿದ ಮಾತ್ಮಸ್ವರೂಪ.

ಇದನ್ನೇ 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' (ಗೀ. 13-2) ಎಂಬಲ್ಲೂ ಹೇಳಿದೆ. ಾಂ' ಎಂಬುದಕ್ಕೆ ಪರಮಾತ್ಮನನ್ನು ಆತ್ಮವಾಗಿ ಉಳ್ಳವನು ಎಂದು ಗೀತಾಭಾಷ್ಯದಲ್ಲಿ ಳಿದೆ ಮತ್ತು 'ಬ್ರಹ್ಮಜಜ್ಞಂ ದೇವಮೀಡ್ಯಂ' (ಕಠ. 1-17) ಎಂಬಲ್ಲೂ ಜೀವನು ಮಾತ್ಮನನ್ನೇ ಆತ್ಮವಾಗಿ ಉಳ್ಳವನು ಎಂದು ಹೇಳಿದೆ.



## ಮಂತ್ರ ೮

अरण्योर्निहितो जातवेदा गर्भः
इवेत् सुभृतो गर्भिणीभिः ।
दिवेदिव ईड्यो जागृवद्भिः
हविष्मद्भिर्मनुष्येभिरग्निः ॥ एतद्वै तत् ॥

ಅರಣ್ಯೋರ್ನಿಹಿತೋ ಜಾತವೇದಾ ಗರ್ಭಃ
ಇವೇತ್ ಸುಭೃತೋ ಗರ್ಭಿಣೀಭಿಃ ।
ದಿವೇದಿವ ಈಡ್ಯೋ ಜಾಗೃವದ್ಭಿಃ
ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥ಏತದ್ವೈ ತತ್॥

### ಪ್ರತಿಪದಾರ್ಥ

ಗರ್ಭಿಣೀಭಿಃ—ಗರ್ಭಿಣಿಸ್ತ್ರೀಯರಿಂದ, ಸುಭೃತಃ—(ಅನ್ನಪಾನಾದಿಗಳಿಂದ) ಪೋಷಿಸಲ್ಪಟ್ಟ, ಗರ್ಭಃ ಇವ—ಗರ್ಭದಂತೆ ಜಾತವೇದಾಃ—ಅಗ್ನಿಯು, ಅರಣ್ಯೋಃ—ಅರಣಿಗಳ ಮಧ್ಯೆ, ನಿಹಿತಃ—ಇಡಲ್ಪಟ್ಟಿದೆ ದಿವೇದಿವೇ—ಪ್ರತಿ ನಿತ್ಯವೂ, ಜಾಗೃವದ್ಭಿಃ—ಜಾಗರೂಕರಾಗಿರುವ, ಹವಿಷ್ಮದ್ಭಿಃ—ಹವಿಸ್ಸನ್ನು ಕೊಡುವ ಮನುಷ್ಯೇಭಿಃ—ಋತ್ವಿಕ್ಕುಗಳಿಂದ, ಅಗ್ನಿಃ—ಅಗ್ನಿಯು, ಈಡ್ಯಃ—ಸ್ತುತಿಸಲ್ಪಡುತ್ತಾನೆ, ಏತದ್ವೈ—ಈ ಅಗ್ನಿಗೆ ಆತ್ಮವಾಗಿರುವ ಬ್ರಹ್ಮಸ್ವರೂಪವೇ, ತತ್—ಹಿಂದೆ ಹೇಳಿದ ಪ್ರಾಪ್ಯಸ್ವರೂಪ.

### ತಾತ್ಪರ್ಯ

ಗರ್ಭಿಣಿಯರು ತಮ್ಮ ಉದರದಲ್ಲಿರುವ ಗರ್ಭವನ್ನು ಅನ್ನಪಾನಾದಿಗಳಿಂದ ರಕ್ಷಿಸುತ್ತಾರೆ ಅದರಂತೆ ಅರಣಿಗಳ ಮಧ್ಯೆ ಇರುವ ಅಗ್ನಿಯನ್ನು ಋತ್ವಿಕ್ಕುಗಳು ಜಾಗರೂಕವಾಗಿ ಹವಿಸ್ಸುಗಳಿಂದ ರಕ್ಷಿಸುತ್ತಾರೆ. ಈ ಅಗ್ನಿಗೂ ಪರಮಾತ್ಮನೇ ಆತ್ಮ. ಇದೇ ಹಿಂದೆ ಹೇಳಿದ ಪ್ರಾಪ್ಯಸ್ವರೂಪ.

### ರಂಗರಾಮಾನುಜಭಾಷ್ಯಮ್

ಅರಣ್ಯೋರ್ನಿಹಿತೋ ಜಾತವೇದಾಃ । ಅರಣ್ಯೋಃ—ಅಧರೋತ್ತರಾರಣ್ಯೋಃ, ಸ್ಥಿತೋಽಗ್ನಿಃ । ಗರ್ಭ ಇವೇತ್ ಸುಭೃತೋ ಗರ್ಭಿಣೀಭಿಃ–ಗರ್ಭಿಣೀಭಿಃ ಪಾನಭೋಜನಾದಿನಾ ಸುಭೃತೋ ಗರ್ಭ ಇವ । 'ನಿಹಿತಃ' ಇತಿ ಪೂರ್ವೇಣಾನ್ವಯಃ। 'ಇತ್' ಇತ್ಯವಧಾರಣೇ । ದಿವೇ ದಿವೇ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿಃ ಮನುಷ್ಯೇಭಿರಗ್ನಿಃ। ದಿವೇದಿವೇ—ಅಹನ್ಯಹನಿ ಜಾಗೃವದ್ಭಿಃ—ಜಾಗರಣಶೀಲೈಃ ಅಪ್ರಮತ್ತೈಃ, ಹವಿಷ್ಮದ್ಭಿಃ—ಆಜ್ಯಾದಿಹವಿಃಪ್ರದಾನ ಪ್ರವೃತ್ತೈಃ ಋತ್ವಿಗ್ಭಿಃ, ಸ್ತುತ್ಯಃ, ಅಗ್ನಿಃ—ಅಗ್ರನೇತಾ 'ಅರಣ್ಯೋರ್ನಿಹಿತಃ' ಇತಿ ಯೋಜನಾ। ಏತದ್ವೈ ತತ್—ಏತತ್ ಅಗ್ನಿಸ್ವರೂಪಂ, ತತ್—ಪೂರ್ವೋಕ್ತಬ್ರಹ್ಮಾತ್ಮಕಮ್ ಇತ್ಯರ್ಥಃ ॥

ಅನುವಾದ

ಅರಣ್ಯೋರ್ನಿಹಿತೋ ಜಾತವೇದಾಃ । ಅರಣ್ಯೋಃ-ಮೇಲೆ ಮತ್ತು ಕೆಳಗೆ ಇರುವ [1]ಅರಣಿಮರದಲ್ಲಿರುವ ಅಗ್ನಿಯು, ಗರ್ಭ ಇವೇತ್ ಸುಭೃತೋ ಗರ್ಭಿಣೀಭಿಃ-ಗರ್ಭಿಣಿಯರು ಅನ್ನಪಾನಗಳಿಂದ ರಕ್ಷಿಸುವ ಗರ್ಭದಂತೆ ಇಡಲ್ಪಟ್ಟಿದೆ ಎಂಬುದರೊಡನೆ ಅನ್ವಯ ವಾಗುವುದು. ಇತ್ ಎಂಬುದು ಅವಧಾರಣಾರ್ಥಕ. ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿಃ ಮನುಷ್ಯೇಭಿರಗ್ನಿಃ । ದಿವೇ ದಿವೇ-ಪ್ರತಿನಿತ್ಯವೂ ಜಾಗೃವದ್ಭಿಃ-ಜಾಗರೂಕರಾಗಿರುವ ಹವಿಷ್ಮದ್ಭಿಃ-ತುಪ್ಪ ಮುಂತಾದ ಹವಿಸ್ಸನ್ನು ಅರ್ಪಿಸುವಲ್ಲಿ ಆಸಕ್ತರಾದ ಋತ್ವಿಕ್ಕುಗಳಿಂದ ಸ್ತುತಿಸಲ್ಪಡುವ ಅಗ್ನಿಃ-ಮುಂದೊಯ್ಯುವ ನಾಯಕನು (ಅಗ್ನಿಯು) ಅರಣಿಯ ಮರದಲ್ಲಿ ಇರುವನು ಎಂದು ಅನ್ವಯ. ಏತದ್ವೈ ತತ್ । ಏತತ್-ಈ ಅಗ್ನಿಸ್ವರೂಪವು ತತ್-ಹಿಂದೆ ಹೇಳಿದ ಬ್ರಹ್ಮವನ್ನು ಆತ್ಮವಾಗಿ ಉಳ್ಳದ್ದು ಎಂದರ್ಥ.

ಭಾಷ್ಯಸಾರ

ಹಿಂದಿನ ಮಂತ್ರದಲ್ಲಿ ಜೀವನು ಬ್ರಹ್ಮವನ್ನೇ ಆತ್ಮವಾಗಿ ಉಳ್ಳವನು ಎಂದು ಹೇಳಿದೆ. ಈ ಮಂತ್ರದಲ್ಲಿ ಬ್ರಹ್ಮಪ್ರಾಪ್ತಿಗೆ ಸಾಧನವಾದುದು ಅಗ್ನಿ. ಈ ಅಗ್ನಿಗೂ ಬ್ರಹ್ಮವೇ 'ಆತ್ಮ' ಎಂದು ಹೇಳುತ್ತಾನೆ.

ಅರಣಿ ಎಂಬುದೊಂದು ವೃಕ್ಷ ಈ ಅರಣಿವೃಕ್ಷವನ್ನು ಕಡೆದಾಗ ಅಗ್ನಿ ಉತ್ಪತ್ತಿಯಾಗುತ್ತದೆ. ಇದನ್ನು ಯಾಗದಲ್ಲಿ ಉಪಯೋಗಿಸುತ್ತಾರೆ. ಗರ್ಭಿಣಿಸ್ತ್ರೀಯರು ಅನ್ನಪಾನಾದಿಗಳಿಂದ ಗರ್ಭವನ್ನು ಪಾಲಿಸುವಂತೆ ಋತ್ವಿಕ್ಕುಗಳು ಈ ಯಾಗಾಗ್ನಿಯನ್ನು ಆಜ್ಯಹವಿಸ್ಸುಗಳಿಂದ ಪಾಲಿಸುತ್ತಾರೆ. ಯಾಗದಲ್ಲಿ ಅಗ್ನಿ ಆರಿದರೆ ದೋಷ, ಅದಕ್ಕಾಗಿ ಋತ್ವಿಕ್ಕುಗಳು ಬಹಳ ಜಾಗರೂಕತೆಯಿಂದ ಪಾಲಿಸುತ್ತಾರೆ, ಹೀಗೆ ಪಾಲಿಸಲ್ಪಟ್ಟ ಈ ಅಗ್ನಿಯು ಯಜಮಾನನನ್ನು ಉತ್ತಮಲೋಕಗಳಿಗೆ ಒಯ್ಯುತ್ತದೆ. ಹೀಗೆ ಈ ಮಂತ್ರದಲ್ಲಿ ಹೇಳಿದ ದೇವತೆಗಳಲ್ಲಿ ಮುಂದಾಳಾದ ಅಗ್ನಿಗೂ ಬ್ರಹ್ಮವೇ ಆತ್ಮವಾಗಿದೆ. ಇದೇ ಹಿಂದೆ ಹೇಳಿದ ಆತ್ಮಸ್ವರೂಪ,



1 ಅರಣಿಃ-ಬೆಂಕಿಯನ್ನು ಕಡೆಯುವ ಬನ್ನೀಮರದ ತುಂಡು

## ಮಂತ್ರ ೯

**यतश्चोदेति सूर्यो अस्तं यत्र च गच्छति ।**
**तं देवास्सर्वे अर्पितास्तदु नात्येति कश्चन ॥ एतद्वै तत् ॥**

ಯತಶ್ಚೋದೇತಿ ಸೂರ್ಯೋ ಅಸ್ತಂ ಯತ್ರ ಚ ಗಚ್ಛತಿ ।
ತಂ ದೇವಾಃ ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ ॥
ಏತದ್ವೈ ತತ್ ॥

### ಪ್ರತಿಪದಾರ್ಥ

**ಯತಃ**—ಯಾವ ಪರಮಾತ್ಮನಿಂದ, **ಸೂರ್ಯಃ**—ಸೂರ್ಯನು, **ಉದೇತಿ**—ಉದಯಿಸುತ್ತಾನೋ **ಯತ್ರ**—ಯಾವ ಪರಮಾತ್ಮನಲ್ಲಿ, **ಅಸ್ತಂ**—ಲಯವನ್ನೂ, **ಗಚ್ಛತಿ ಚ**—ಹೊಂದುತ್ತಾನೋ, **ಸರ್ವೇದೇವಾಃ**—ಎಲ್ಲ ದೇವತೆಗಳೂ, **ತಮ್**—ಆ ಪರಮಾತ್ಮನಲ್ಲಿ, **ಅರ್ಪಿತಾಃ**—ನೆಲೆಸಿರುವರೋ **ತತ್**—ಆ ಪರಮಾತ್ಮನನ್ನು **ಕಶ್ಚನ**—ಯಾರೂ, **ನಾತ್ಯೇತಿ ಉ**—ಮೀರಲೇ ಆರರು । **ಏತದ್ವೈ**—ಸೂರ್ಯನ ಸ್ವರೂಪವೇ, **ತತ್**—ಪ್ರಾಪ್ಯವೆಂದು ಹೇಳಿದ ಆ ಆತ್ಮಸ್ವರೂಪವು (ಕಾರಣ–ಸೂರ್ಯನು ಪರಮಾತ್ಮನಿಗೆ ಶರೀರವಾಗುವನು.)

### ತಾತ್ಪರ್ಯ

ಸೂರ್ಯನು ಪರಮಾತ್ಮನ ಬಳಿಯಿಂದ ಉದಯಿಸುತ್ತಾನೆ. ಅವನಲ್ಲಿಯೇ ಲಯ ಹೊಂದುತ್ತಾನೆ. ಹೀಗೆಯೇ ಎಲ್ಲ ದೇವತೆಗಳೂ ಪರಮಾತ್ಮನಲ್ಲಿ ನೆಲೆಸಿರುವರು. ಯಾರಿಂದಲೂ ಪರಮಾತ್ಮನನ್ನು ಮೀರಲು ಸಾಧ್ಯವೇ ಇಲ್ಲ. ಸೂರ್ಯಶರೀರಕನಾದ ಪರಮಾತ್ಮನೇ ಹಿಂದೆ ಪ್ರಾಪ್ಯವೆಂದು ಹೇಳಿದ ಬ್ರಹ್ಮ.

### ರಂಗರಾಮಾನುಜಭಾಷ್ಯಮ್

ಯತಶ್ಚೋದೇತಿ ಸೂರ್ಯೋ ಅಸ್ತಂ ಯತ್ರ ಚ ಗಚ್ಛತಿ । ಯಸ್ಮಾತ್ ಬ್ರಹ್ಮಣಃ ಸಕಾಶಾತ್ (?) ಸೂರ್ಯ ಉದೇತಿ, ಯತ್ರ ಚ ಲಯಮೇತಿ । ತಂ ದೇವಾಃ ಸರ್ವೇ ಅರ್ಪಿತಾಃ–ದೇವಾಃ ಸರ್ವೇ, ತಸ್ಮಿನ್ ಆತ್ಮನಿ ಪ್ರತಿಷ್ಠಿತಾಃ ಇತ್ಯರ್ಥಃ। ತದುನಾತ್ಯೇತಿ ಕಶ್ಚನ ತತ್–ಸರ್ವಾತ್ಮಕಂ ಬ್ರಹ್ಮ, ಕೋऽಪಿ ನಾತಿಕ್ರಾಮತಿ । ಛಾಯಾವತ್ ಅಂತರ್ಯಾಮಿಣೋ ದುರ್ಲಂಘತ್ವಾದಿತಿ ಭಾವಃ । ಏತದ್ವೈ ತತ್–ಉಕ್ತೋऽರ್ಥಃ ॥

### ಅನುವಾದ

ಯತಶ್ಚೋದೇತಿ ಸೂರ್ಯೋ ಅಸ್ತಂ ಯತ್ರ ಚ ಗಚ್ಛತಿ, ಯಾವ ಬ್ರಹ್ಮನ ಬಳಿಯಿಂದ ಸೂರ್ಯನು ಉದಯಿಸುತ್ತಾನೋ, ಯತ್ರ ಚ–ಯಾವ ಬ್ರಹ್ಮನಲ್ಲಿ ಲಯವಾಗುತ್ತಾನೋ, ತಂ ದೇವಾಃ ಸರ್ವೇ ಅರ್ಪಿತಾಃ–ಎಲ್ಲ ದೇವತೆಗಳು ಆ ಪರಮಾತ್ಮನಲ್ಲಿ ನೆಲೆಸಿರುವರು ಎಂದರ್ಥ. ತದು ನಾತ್ಯೇತಿ ಕಶ್ಚನ । ತತ್.........ಎಲ್ಲದಕ್ಕೂ ಆತ್ಮನಾದ ಬ್ರಹ್ಮವನ್ನು

ಾರೂ ಮೀರಲಾರರು. ನೆರಳಿನಂತೆ ಅಂತರ್ಯಾಮಿಯಾಗಿರುವವನನ್ನು ಮೀರಲಾಗು )ದಿಲ್ಲ ಎಂದು ತಾತ್ಪರ್ಯ. ಏತದ್ವೈ ತತ್–ಅರ್ಥ ಹೇಳಿದೆ.

## ಭಾಷ್ಯಸಾರ

ಎಲ್ಲ ದೇವತೆಗಳೂ ಯಾರಲ್ಲಿ ನೆಲೆಸಿರುವರೋ ಅವನೇ ಪರಮಾತ್ಮ ಎಂದು ಈ ಂತ್ರದಲ್ಲಿ ತಿಳಿಸುತ್ತಾನೆ.

ಸೂರ್ಯನು ಪರಮಾತ್ಮನಿಂದ ಆವಿರ್ಭವಿಸಿ, ಆತ್ಮನಲ್ಲಿಯೇ ಲಯಹೊಂದುತ್ತಾನೆ. ಗ್ನಿ–ಇಂದ್ರ–ವರುಣ ಮುಂತಾದ ದೇವತೆಗಳೆಲ್ಲರೂ ಗುಂಭದಲ್ಲಿ ಚಕ್ರದ ಅರೇಕಾಲುಗಳು ೕರಿರುವಂತೆ ಪರಮಾತ್ಮನನ್ನು ಸೇರಿರುತ್ತಾರೆ. ಪ್ರಪಂಚದಲ್ಲಿರುವ ಯಾವ ವಸ್ತುವೂ ರಮಾತ್ಮನನ್ನು ಅತಿಕ್ರಮಿಸಿ, ಸ್ವತಂತ್ರವಾಗಿ ಇರಲಾರದು. ಎಲ್ಲವೂ ಅವನಲ್ಲಿಯೇ ಲೆಸಿವೆ ಎಂದು ತಾತ್ಪರ್ಯ. ಈ ಮಂತ್ರದಲ್ಲಿ ಹೇಳಿದ ಸೂರ್ಯಶರೀರಕನಾದ ಪರಮಾತ್ಮ ್ರರೂಪವೇ ಹಿಂದೆ ತಿಳಿಸಿದ ಉತ್ತಮವಾದ ಪ್ರಾಪ್ಯಸ್ವರೂಪ ಎಂದರ್ಥ.



## ಮಂತ್ರ ೧೦

यदेवेह तदमुत्र यदमुत्र तदन्विह ।
मृत्योस्स मृत्युमाप्नोति य इह नानेव पश्यति ॥

ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।
ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥

### ಪ್ರತಿಪದಾರ್ಥ

**ಯದೇವ**—ಯಾವ ಪರಮಾತ್ಮತತ್ತ್ವವು **ಇಹ**—ಈ ಲೋಕದಲ್ಲಿ (ಎಲ್ಲಕ್ಕೂ ಆತ್ಮಭೂತವಾಗಿದೆಯೋ). **ತತ್**—ಆ ಪರಮಾತ್ಮತತ್ತ್ವವು, **ಅಮುತ್ರ**—ಬೇರೆ ಲೋಕದಲ್ಲಿರುವವರಿಗೂ, (ಆತ್ಮವಾಗಿ ಇದೆ.) **ಯತ್**—ಯಾವ ಪರಮಾತ್ಮತತ್ತ್ವವು. **ಅಮುತ್ರ**—ಬೇರೆ ಲೋಕದಲ್ಲಿರುವವರಿಗೆ ಆತ್ಮವಾಗಿದೆಯೋ, **ತದನು**—ಅದೇ, **ಇಹ**—ಈ ಪರಮಾತ್ಮನ ವಿಷಯದಲ್ಲಿ **ನಾನೇವ**—ಭೇದವಿದೆ ಎಂದು, **ಪಶ್ಯತಿ**—ಕಾಣುತ್ತಾನೆಯೋ, **ಸಃ**—ಅವನು **ಮೃತ್ಯೋಃ**—(ಮೃತ್ಯುವಿನಂತೆ ಭಯಂಕರವಾದ) ಸಂಸಾರದಿಂದ **ಮೃತ್ಯುಮ್**—ಸಂಸಾರವನ್ನು **ಆಪ್ನೋತಿ**—ಹೊಂದುತ್ತಾನೆ.

### ತಾತ್ಪರ್ಯ

ಈ ಲೋಕದಲ್ಲಿ ಎಲ್ಲದಕ್ಕೂ ಆತ್ಮವಾಗಿರುವುದೇ ಬೇರೆ ಲೋಕದಲ್ಲಿರುವವರಿಗೂ ಆತ್ಮವಾಗಿದೆ. ಬೇರೆ ಲೋಕದಲ್ಲಿರುವವರಿಗೆ ಆತ್ಮವಾಗಿರುವುದೇ ಇಲ್ಲಿರುವವರಿಗೂ ಆತ್ಮವಾಗಿದೆ. ಅಂದರೆ ಎಲ್ಲ ಲೋಕದಲ್ಲಿರುವ ಪದಾರ್ಥಗಳಿಗೂ ಅಂತರ್ಯಾಮಿಯಾದ ಆತ್ಮದಲ್ಲಿ ಭೇದವಿಲ್ಲ ; ಎಂದು ತಾತ್ಪರ್ಯ. ಆತ್ಮವು ಭಿನ್ನ-ಭಿನ್ನವಾಗಿದೆ ಎಂದು ಅರಿಯುವವನು ಮೂಢನು. ಅವನು ಒಂದು ಜನ್ಮದಿಂದ ಮತ್ತೊಂದು ಜನ್ಮ ಪಡೆಯುತ್ತ ಈ ಸಂಸಾರ ಚಕ್ರದಲ್ಲಿ ನರಳುವನು.

### ರಂಗರಾಮಾನುಜಭಾಷ್ಯಮ್

ನನು-ಪರಮಾತ್ಮನಃ ಸರ್ವಾತ್ಮತ್ವಂ ನ ಸಂಭವತಿ ; 'ಅಹಮ್' ಇತಿ ಅಹಂತಾಶ್ರಯತ್ವೇನ ಅನುಸಂಧೀಯಮಾನೋ ಹಿ ಆತ್ಮಾ । ಸ ಚ 'ಅಹಮಿಹೈವಾಸ್ಮಿ' ಇತಿ ದೇಶಾಂತರವ್ಯಾವೃತ್ತತಯಾ ಅನುಸಂಧೀಯತೇ । ತಸ್ಯ ಸರ್ವದೇಶಕಾಲವರ್ತಿಸರ್ವಪದಾರ್ಥಾತ್ಮಭೂತತ್ವಂ ಕಥಮಿತ್ಯಾಶಂಕ್ಯಾಽಽಹ-ಯದೇವೇಹ ತದಮುತ್ರ, ಯದಮುತ್ರ ತದನ್ವಿಹ । ಯದೇವ-ಪರಮಾತ್ಮತತ್ತ್ವಂ, ಇಹ-ಅತ್ರ ಲೋಕೇ ; ಅಹಮಿತ್ಯನುಸಂಧೀಯಮಾನತಯಾ ಆತ್ಮಭೂತಮ್, ತದೇವ-ಲೋಕಾಂತರಸ್ಥಾನಾಮಪಿ ಆತ್ಮಭೂತಮ್ ಇತ್ಯರ್ಥಃ । ತತಶ್ಚ ಆತ್ಮಭೇದೋ ನಾಸ್ತೀತ್ಯರ್ಥಃ । ಅಯಂ ಅಭಿಪ್ರಾಯಃ-ಕಿಂ ಪರಮಾತ್ಮತತ್ತ್ವವಿದಾಮ್ ಅಹಮಿಹೈವ ಇತಿ ಪ್ರತೀತಿಃ, ಸರ್ವದೇಶಕಾಲವರ್ತಿಪದಾರ್ಥಾತ್ಮತ್ವಬಾಧಕತಯಾ ಉಪನ್ಯಸ್ಯತೇ ?, ಉತ ತದ್ರಹಿತಾನಾಮ್ ? ನಾದ್ಯಃ, ತೇಷಾಮ್ ಅಹಮಿಹೈವ ಇತ್ಯಾದಿ ಪ್ರತೀತೇರೇವ ಅಭಾವಾತ್ । ಪ್ರತ್ಯುತ 'ಅಹಂ ಮನುರಭವಂ ಸೂರ್ಯಶ್ಚ' (ಬೃ. ಉ.

) ಇತಿ ಸರ್ವವಸ್ತುವರ್ತಿತಯೈವ ಅನುಭವಾತ್ । ನ ದ್ವಿತೀಯಃ ; ಅತತ್ವವಿದಾಮ್ ಪ್ರತೀತೇಃ ಜೀವಮಾತ್ರವಿಷಯತ್ವೇನ ತತ್ರ ದೇಶಾಂತರವ್ಯಾವೃತ್ತತ್ವಪ್ರತೀತೇಃ, ೀಮ್ ಅಪ್ರತೀತಪರಮಾತ್ಮನಿ ಸರ್ವದೇಶವರ್ತಿಪದಾರ್ಥಾತ್ಮತ್ವವಿರೋಧಿತ್ವಾತ್, ಇತಿ । ಮೃತ್ಯೋಃಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ । ಇಹ–ಾತ್ಮನಿ ಭೇದಮಿವ ಯಃ ಪಶ್ಯತಿ ; ಸ ತು ಸಂಸಾರಾತ್ ಸಂಸಾರಂ ಪ್ರಾಪ್ನೋತಿ ರ್ಥಃ ॥

ಅನುವಾದ

ಪರಮಾತ್ಮನು ಎಲ್ಲದಕ್ಕೂ ಆತ್ಮವಾಗಿರಲಾರನು. ಅಹಂ ಎಂಬಲ್ಲಿ ಅಹಂತಾವಿಗೆ ಯವಾಗಿರುವುದೇ ಆತ್ಮ. ಅದು 'ನಾನು ಇಲ್ಲೇ ಇರುವೆನು ಬೇರೆ ದೇಶದಲ್ಲಿಲ್ಲ' ಎಂಬು ತಿಳಿಯುತ್ತದೆ. ಈ ಆತ್ಮವು ಎಲ್ಲ ದೇಶ ಎಲ್ಲ ಕಾಲಗಳಲ್ಲೂ ಇರುವ ಪದಾರ್ಥಗಳಿಗೆ ಆತ್ಮವಾಗಬಲ್ಲುದು ಎಂದು ಶಂಕಿಸಿ, ಹೇಳುತ್ತಾನೆ—ಯದೇವೇಹ ತದಮುತ್ರ ಯದ ತದನ್ವಿಹ । ಯದೇವ–ಯಾವ ಪರಮಾತ್ಮತತ್ವವು ಇಹ–ಈ ಲೋಕದಲ್ಲಿ 'ಅಹಂ' ಅನುಸಂಧಾನ ಮಾಡುವುದಕ್ಕೆ ವಿಷಯವಾಗಿ ಆತ್ಮವಾಗಿದೆಯೋ ತದೇವ–ಬೇರೆ ಕದಲ್ಲಿರುವವರಿಗೂ ಅದೇ ಆತ್ಮವಾಗಿದೆ ಎಂದರ್ಥ. ಇದರಿಂದ (ಬೇರೆ ಬೇರೆ ಆತ್ಮ ಲ್ಲ) ಆತ್ಮಭೇದವಿಲ್ಲ ಎಂದರ್ಥ.

ಪರಮಾತ್ಮತತ್ವವನ್ನರಿತವರಿಗೆ 'ಅಹಮಿಹೈವ' ಎಂಬ ಜ್ಞಾನವು ಎಲ್ಲ ದೇಶ ಕಾಲ ರುವ ಪದಾರ್ಥಗಳಿಗೆ ಆತ್ಮ ಎಂಬುದು ಬಾಧಕ ಎಂದು ಹೇಳುತ್ತೀರೋ, ಅಥವಾ ಮಾತ್ಮತತ್ವವನ್ನರಿಯದವರಿಗೋ, ಎಂದು ಸಂದೇಹ. ಮೊದಲನೆಯದಲ್ಲ. ಅವರಿಗೆ ಮಿಹೈವ' ಮುಂತಾದ ಜ್ಞಾನವೇ ಇರುವುದಿಲ್ಲ. 'ಅಹಂ ಮನುರಭವಂ ಸೂರ್ಯಶ್ಚ' ಉ. 4–10) ಎಂದು ಎಲ್ಲ ವಸ್ತುಗಳಲ್ಲೂ ಇರುವುದೆಂದೇ ಅನುಭವವಾಗುವುದು. ನೆಯದೂ ಅಲ್ಲ. ಆತ್ಮತತ್ವವರಿಯದವರಿಗೆ 'ಅಹಂ' ಎಂಬುದರಿಂದ ಜೀವಮಾತ್ರ ವಾಗುವುದರಿಂದ, ಆ ಜೀವಾತ್ಮನು ದೇಶಾಂತರವ್ಯಾವೃತ್ತನಾಗಿಯೇ ತೋರುತ್ತಾನೆ. ಭಾಸನಾಗದಿರುವ ಪರಮಾತ್ಮನು ಎಲ್ಲ ದೇಶಗಳಲ್ಲೂ ಇರುವ ಪದಾರ್ಥಗಳಿಗೆ ಆತ್ಮನು ಲ್ಲಿ ವಿರೋಧವೇ ಇಲ್ಲ ಎಂದು ಅಭಿಪ್ರಾಯ.

ಮೃತ್ಯೋಃಸ್ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ । ಇಹ–ಪರಮಾತ್ಮನಲ್ಲಿ ವಿರುವಂತೆ ಯಾವನು ತಿಳಿಯುತ್ತಾನೋ ಅವನು ಸಂಸಾರದಿಂದ ಸಂಸಾರವನ್ನು ುದುತ್ತಾನೆ ಎಂದರ್ಥ.

ಭಾಷ್ಯಸಾರ

ಹಿಂದೆ 'ಯಾ ಪ್ರಾಣೇನ' ಎಂಬ ಏಳನೇ ಮಂತ್ರದಲ್ಲಿ ಈ ಜೀವಾತ್ಮರಿಗೆ ಪರಮಾತ್ಮ ನಾಗಿದ್ದಾನೆ ಎಂದು ಹೇಳಿದೆ. 'ಅರಣ್ಯೋಃ' ಎಂಬ ಎಂಟನೇ ಮಂತ್ರದಲ್ಲಿ ಅಗ್ನಿಗೂ ಮಾತ್ಮನೇ ಆತ್ಮ ಎಂದು ಹೇಳಿದೆ. ಇದರಿಂದ ಪಂಚಭೂತಗಳಿಗೂ ಪರಮಾತ್ಮನೇ ಆತ್ಮ ನು ತಿಳಿಯುತ್ತದೆ. 'ಯತಶ್ಚೋದೇತಿ' ಎಂಬ ಒಂಬತ್ತನೇ ಮಂತ್ರದಲ್ಲಿ ಸೂರ್ಯನ ದಯ–ಲಯಗಳ ಸಂಬಂಧದಿಂದ, ಎಲ್ಲ ದೇವತೆಗಳಿಗೂ ಪರಬ್ರಹ್ಮವೇ ಆಧಾರ–ಇದರಿಂದ

ಜಾತಿಗುಣಗಳು ಹೇಗೆ ಪದಾರ್ಥವನ್ನು ಬಿಟ್ಟಿರಲಾರವೋ, ಹಾಗೆ ಎಲ್ಲ ವಸ್ತುಗಳೂ ಪರಮಾತ್ಮನನ್ನು ಬಿಟ್ಟಿರಲಾರವು ಎಂದು ಹೇಳಿದಂತಾಯಿತು. ಹೀಗೆ ಎಲ್ಲದಕ್ಕೂ ಆತ್ಮವಾಗಿಯೂ, ಎಲ್ಲವನ್ನೂ ಶರೀರವಾಗಿಯೂ ಉಳ್ಳ ಪರಮಾತ್ಮನು ಒಬ್ಬನೇ, ಬೇರೆಯಲ್ಲ ಎಂದು ತಾತ್ಪರ್ಯ. ಬ್ರಹ್ಮಾದಿದೇವತೆಗಳು ಪರಲೋಕದಲ್ಲಿರುವರು. ಜೀವಾತ್ಮಗಳು ಈ ಲೋಕದಲ್ಲಿವೆ. ಹೀಗೆ ಭಿನ್ನದೇಶಗಳಲ್ಲಿರುವ ಬ್ರಹ್ಮಾದಿಗಳಿಗೆ ಆತ್ಮವಾದ ಪರಮಾತ್ಮನು ಈ ಜೀವರಿಗೆ ಹೇಗೆ ಆತ್ಮವಾಗಬಲ್ಲನು ಎಂಬ ಆಶಂಕೆ ಸಲ್ಲದು. ಭಿನ್ನದೇಶ-ಭಿನ್ನಕಾಲಗಳಲ್ಲಿರುವ ವಸ್ತುಗಳಲ್ಲಿ ವಿಭುವೂ, ನಿತ್ಯನೂ ಆದ ಪರಮಾತ್ಮನು ಆತ್ಮವಾಗಿರುವುದು ಅಸಂಭವವಲ್ಲ ಎಂದು 'ಯದೇವೇಹ' ಎಂಬ ಮಂತ್ರದಲ್ಲಿ ತಿಳಿಸುತ್ತಾನೆ.

ಈ ಲೋಕದಲ್ಲಿ 'ಅಹಂ' ಎಂದು ತಿಳಿಯುವ ಜೀವರಿಗೆ ಆತ್ಮವಾಗಿರುವ ಪರಮಾತ್ಮನೇ ಪರಲೋಕದಲ್ಲಿರುವ ಬ್ರಹ್ಮಾದಿಗಳಿಗೂ ಆತ್ಮವಾಗಿರುವನು. ಪರಲೋಕದಲ್ಲಿ 'ಅಹಂ' ಎಂದು ಅನುಸಂಧಾನಮಾಡುವ ದೇವತೆಗಳಿಗೆ ಆತ್ಮವಾದ ಪರಮಾತ್ಮನೇ ಈ ಲೋಕದಲ್ಲಿ 'ಅಹಂ' ಎಂಬ ಆಕಾರದಲ್ಲಿರುವ ಜೀವರಿಗೂ ಆತ್ಮವಾಗಿರುವನು ಎಂಬರ್ಥವನ್ನು 'ಯದಮುತ್ರ ತದನ್ವಿಹ' ಎಂಬ ಮಾತು ದೃಢಪಡಿಸುತ್ತದೆ. ಅಂದರೆ ಎಲ್ಲದಕ್ಕೂ ಆತ್ಮವಾಗಿರುವ ಪರಮಾತ್ಮತತ್ತ್ವದಲ್ಲಿ ಭೇದವಿಲ್ಲ ಎಂದು ತಾತ್ಪರ್ಯ. ಪರಮಾತ್ಮತತ್ತ್ವದಲ್ಲಿ ಭೇದವಿಲ್ಲ ಎಂಬುದನ್ನು ಯಾರು ಅರಿಯುವುದಿಲ್ಲವೋ, ಅಂದರೆ ಪರಮಾತ್ಮತತ್ತ್ವದಲ್ಲಿ ಭೇದವನ್ನು ಎಣಿಸುತ್ತಾರೋ ಅವರು ಸಂಸಾರಬಂಧನಕ್ಕೆ ಒಳಗಾಗುತ್ತಾರೆ. 'ಯ ಇಹ ನಾನೇವ ಪಶ್ಯತಿ' ಎಂಬಲ್ಲಿರುವ 'ಇವ' ಎಂಬ ಶಬ್ದವು ವಸ್ತುತಃ ಪರಮಾತ್ಮತತ್ತ್ವದಲ್ಲಿ ಭೇದವಿಲ್ಲ ಎಂಬುದನ್ನು ಸೂಚಿಸುತ್ತದೆ, ಎಂದು ರಾಮಾನಂದರು ವಿವರಿಸುತ್ತಾರೆ.

ಸುಬೋಧಿನೀಕಾರರು ಸರ್ವಾಂತರ್ಯಾಮಿಯಾದ ಪರಮಾತ್ಮ ಒಬ್ಬನೇ, ಅನೇಕನಲ್ಲ. ಆಯಾಯ ಶರೀರದಲ್ಲಿ ಆಯಾಯ ರೂಪದಲ್ಲಿರುವನು. ಇಲ್ಲಿ ಯಾವುದಿದೆಯೋ, ಅದೇ ಅಲ್ಲಿಯೂ ಇದೆ. ಇಹ ಅಂದರೆ ಇಲ್ಲಿ ಕಣ್ಣಿಗೆ ಕಾಣುವ ರೀತಿ ಮತ್ತು 'ಅಮುತ್ರ' ಅಂದರೆ ಕಣ್ಣಿಗೆ ಕಾಣದಿರುವ ಅಲ್ಲಿಯ ರೀತಿಗಳಲ್ಲೂ ಒಂದೇ ಪರಮಾತ್ಮತತ್ತ್ವ, ಎಂದು ತಾತ್ಪರ್ಯ. 'ಯದಮುತ್ರ ತದನ್ವಿಹ' ಎಂಬ ಮಾತು ಈ ಅರ್ಥವನ್ನು ದೃಢಪಡಿಸುತ್ತದೆ. 'ಮೃತ್ಯೋಃ ಸ ಮೃತ್ಯುಮಾಪ್ನೋತಿ' ಅಂದರೆ ಪರಮಾತ್ಮತತ್ತ್ವದಲ್ಲಿ ಭೇದ ಕಾಣುವವನು ಸಂಸಾರದಿಂದ ಸಂಸಾರವನ್ನು ಪಡೆಯುತ್ತಾನೆ ಅಂದರೆ ಪುನಃ ಪುನಃ ಸಂಸಾರಬಂಧನದಲ್ಲಿ ಸಿಲುಕಿಕೊಳ್ಳುತ್ತಾನೆ. 'ನಾನೇವ' ಎಂಬಲ್ಲಿರುವ 'ಇವ' ಎಂಬುದು ವಸ್ತುತಃ ಪರಮಾತ್ಮತತ್ತ್ವದಲ್ಲಿ ಭೇದವಿಲ್ಲ ಎಂಬುದನ್ನು ಪ್ರಕಾಶಪಡಿಸುತ್ತದೆ ಎಂದು ವಿವರಿಸುತ್ತಾರೆ.



# ಮಂತ್ರ ೧೧

**मनसैवेदमाप्तव्यं नेह नानास्ति किञ्चन ।**
**मृत्योस्स मृत्युं गच्छति य इह नानेव पश्यति ॥**

ಮನಸೈವೇದಮಾಪ್ತವ್ಯಂ ನೇಹ ನಾನಾಽಸ್ತಿ ಕಿಂಚನ ।
ಮೃತ್ಯೋಸ್ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥

## ಪ್ರತಿಪದಾರ್ಥ

ಇದಂ—(ಸರ್ವಾಂತರ್ಯಾಮಿಯಾದ ಪರಬ್ರಹ್ಮವು), ಮನಸೈವ—ಪರಿಶುದ್ಧವಾದ ಮನಸ್ಸಿನಿಂದಲೇ, ಆಪ್ತವ್ಯಮ್—ಹೊಂದಲರ್ಹವು, ಇಹ—ಈ ಪರಬ್ರಹ್ಮಸಾಕ್ಷಾತ್ಕಾರವಿಷಯದಲ್ಲಿ, ನಾನಾ—ನಾನಾ ವಿಧವಾದ ಕಿಂಚನ—ಪರಿಶುದ್ಧಮನಸ್ಸಿಗಿಂತ ಬೇರೊಂದು ಸಾಧನವು ನಾಸ್ತಿ—ಇರುವುದಿಲ್ಲ, ಯಃ—ಯಾವ ಅಜ್ಞಾನಿಯು, ಇಹ—ಈ ಪರಮಾತ್ಮವಿಷಯದಲ್ಲಿ, ನಾನೇವ—ಭೇದವಿದೆ ಎಂದು, ಪಶ್ಯತಿ—ಕಾಣುತ್ತಾನೆಯೋ ಸಃ—ಅವನು, ಮೃತ್ಯೋಃ—(ಭಯಂಕರವಾದ) ಸಂಸಾರದಿಂದ ಮೃತ್ಯುಮ್—ಸಂಸಾರವನ್ನು ಗಚ್ಛತಿ—ಸೇರುತ್ತಾನೆ.

## ತಾತ್ಪರ್ಯ

ಈ ಪರಮಾತ್ಮತತ್ತ್ವವನ್ನು ಪರಿಶುದ್ಧಮನಸ್ಸಿನಿಂದಲೇ ಅರಿಯಬೇಕು. ಈ ಪರಮಾತ್ಮತತ್ತ್ವವನ್ನು ಪರಿಶುದ್ಧ ಮನಸ್ಸನ್ನು ಬಿಟ್ಟು ಬೇರೊಂದು ಸಾಧನದಿಂದ ಅರಿಯಲಾಗುವುದಿಲ್ಲ. ಸರ್ವಾಂತರ್ಯಾಮಿಯಾದ ಆತ್ಮತತ್ತ್ವವು ಭಿನ್ನಭಿನ್ನವಾಗಿದೆ ಎಂದು ಅರಿಯುವವನು ಜನ್ಮದಿಂದ ಜನ್ಮಾಂತರವನ್ನು ಪಡೆಯುತ್ತಾ ಈ ಸಂಸಾರಚಕ್ರದಲ್ಲಿ ನರಳುತ್ತಾನೆ.

## ರಂಗರಾಮಾನುಜಭಾಷ್ಯಮ್

ನನು—ಅಸ್ಮಾಕಂ ಸರ್ವಾತ್ಮಭೂತಂ ಪರಮಾತ್ಮತತ್ತ್ವಂ ಕುತೋ ನೋಪಲಭ್ಯತೇ ? ಇತ್ಯತ್ರಾಹ—ಮನಸೈವೇದಮಾಪ್ತವ್ಯಮ್ । ಇದಮ್ ಆತ್ಮಸ್ವರೂಪಂ ವಿಶುದ್ಧಮನೋಗ್ರಾಹ್ಯಮ್ ಇತ್ಯರ್ಥಃ । ಉಕ್ತಮೇವಾರ್ಥಂ ದೃಢೀಕರಣಾಯಾಭ್ಯಸ್ಯತಿ—ನೇಹ ನಾನಾಸ್ತಿ ಕಿಂಚನ । ಮೃತ್ಯೋಸ್ಸ....ಪಶ್ಯತಿ । ಸ್ಪಷ್ಟೋಽರ್ಥಃ ॥

## ಅನುವಾದ

ಎಲ್ಲಕ್ಕೂ ಆತ್ಮವಾಗಿರುವ ಪರಮಾತ್ಮತತ್ತ್ವವು ನಮಗೆ ಏಕೆ ದೊರೆಯುವುದಿಲ್ಲ ಎಂಬಲ್ಲಿ ಹೇಳುತ್ತಾನೆ—ಮನಸೈವೇದಮಾಪ್ತವ್ಯಮ್—ಈ ಆತ್ಮಸ್ವರೂಪವು ಪರಿಶುದ್ಧವಾದ ಮನಸ್ಸಿನಿಂದ ತಿಳಿಯಲ್ಪಡುತ್ತದೆ. ಹಿಂದೆ ಹೇಳಿದ ಅರ್ಥವನ್ನು ದೃಢಪಡಿಸಲು ಪುನಃ ಹೇಳುತ್ತಾನೆ. ನೇಹ ನಾನಾಸ್ತಿ ಕಿಂಚನ । ಮೃತ್ಯೋಸ್ಸ....ಪಶ್ಯತಿ । ಅರ್ಥವು ಸ್ಪಷ್ಟವಾಗಿದೆ.

## ಭಾಷ್ಯಸಾರ

ಪರಮಾತ್ಮನು ಎಲ್ಲದಕ್ಕೂ ಆತ್ಮವಾಗಿರುವನು ಎಂದು ಹೇಳಿದಲ್ಲಿ ಜೀವಾತ್ಮಾನುಭವದಂತೆ ಪರಮಾತ್ಮಾನುಭವವು ಎಲ್ಲರಿಗೂ ಉಂಟಾಗಲಿ ಎಂಬ ಆಕ್ಷೇಪವನ್ನು 'ಮನಸೈವೇದಂ' ಎಂಬ ಈ ಮಂತ್ರದಿಂದ ಪರಿಹರಿಸುತ್ತಾನೆ.

ಪರಮಾತ್ಮನಿಗಿಂತ ಭಿನ್ನವಾದ, ಎಲ್ಲ ವಸ್ತುಗಳನ್ನು ಶರೀರವಾಗಿ ಉಳ್ಳ ಆತ್ಮತತ್ತ್ವವು ಎಲ್ಲದಕ್ಕೂ ಆತ್ಮವಾಗಿದೆ. ಇದು ಒಂದೇ ಎಲ್ಲ ಕಡೆಯಲ್ಲಿಯೂ ಇದೆ. ಈ ವಿಷಯವನ್ನು ಕಾಮ-ಕ್ರೋಧ-ರಾಗದ್ವೇಷಾದಿಗಳಿಲ್ಲದ ಮನಸ್ಸಿನಿಂದಲೇ ತಿಳಿಯಬೇಕು. ಬೇರೆ ವಿಧದಲ್ಲಿ ತಿಳಿಯಲಾಗುವುದಿಲ್ಲ ಅಂದರೆ ನಮ್ಮಂಥವರಿಂದ ತಿಳಿಯಲು ಸಾಧ್ಯವಿಲ್ಲ.

ಸುಸಂಸ್ಕೃತವಾದ ಮನಸ್ಸಿನಲ್ಲಿ ಸರಿಯಾದ ಚಿಂತನೆ ಮಾಡಿದರೆ ಪರಮಾತ್ಮತತ್ತ್ವದಲ್ಲಿ 'ನಾನಾ' ಎಂಬ ಭೇದಭಾವನೆ ಮೂಡುವುದಿಲ್ಲ. ಸರಿಯಾದ ಸಂಸ್ಕಾರವಿಲ್ಲದ ಮನಸ್ಸಿನಿಂದ ಅಥವಾ ಕಣ್ಣಿನಿಂದ ಆತ್ಮತತ್ತ್ವವನ್ನು ಭಿನ್ನಭಿನ್ನವಾಗಿ ಕಾಣುವವನು ಜನ್ಮ-ಜನ್ಮಾಂತರ ರೂಪವಾದ ಸಂಸಾರಚಕ್ರದಲ್ಲಿ ತೊಳಲಾಡುವನು.

ಸುಬೋಧಿನೀಕಾರರು—ಈ ಚರಾಚರಾತ್ಮಕವಾದ ಜಗತ್ತೆಲ್ಲದಕ್ಕೂ ಒಬ್ಬನೇ ಪರಮಾತ್ಮನು ಆತ್ಮವಾಗಿರುವನು ಎಂಬುದು ಹೇಗೆ ಸಂಭವಿಸುತ್ತದೆ ? ಲೋಕದ ಜನರಿಗೆ 'ಅಹಮಯಮಸ್ಮಿ' 'ಅಹಮಸಾವಸ್ಮಿ' ಎಂಬುದಾಗಿ ವ್ಯವಸ್ಥಿತವಾಗಿಯೇ ಜ್ಞಾನ ಉಂಟಾಗುತ್ತದೆಯಷ್ಟೆ ? ಎಲ್ಲದಕ್ಕೂ ಒಂದೇ ಆತ್ಮವಾದಲ್ಲಿ ನಿರ್ದಿಷ್ಟವಾದ ಈ ಜ್ಞಾನ ಹೇಗೆ ಉಂಟಾಗಬಲ್ಲದು ? ಹಾಗಾದಲ್ಲಿ ಎಲ್ಲವೂ ನಾನು (ಅಹಮಖಿಲಃ) ಎಂಬ ಜ್ಞಾನವೂ ಉಂಟಾಗಲಿ ಎಂಬ ಆಶಂಕೆಗೆ 'ಯದೇವೇಹ' ಎಂದು ಉತ್ತರ ಹೇಳಲಾಗಿದೆ ಎಂದು ಹೇಳುತ್ತಾರೆ.

ಇಲ್ಲಿರುವ ಆತ್ಮತತ್ತ್ವವೇ ದೇವಲೋಕದಲ್ಲೂ ಇದೆ. ದೇವಲೋಕದಲ್ಲಿರುವ ಆತ್ಮತತ್ತ್ವವೇ ಇಲ್ಲಿಯೂ ಇದೆ. ಎಲ್ಲ ಆತ್ಮಗಳಿಗೂ ಒಂದೇ ಅಂತರಾತ್ಮ. ಆತ್ಮತತ್ತ್ವಸ್ವರೂಪದ ಪರಿಪೂರ್ಣ ಜ್ಞಾನವಿಲ್ಲದಿರುವುದರಿಂದ ಅಜ್ಞರು ಶರೀರವೇ ಆತ್ಮವೆಂದು ತಿಳಿಯುತ್ತಾರೆ. ಕೆಲವರು ಜೀವನನ್ನು ಮಾತ್ರ ಆತ್ಮವೆಂದು ತಿಳಿಯುತ್ತಾರೆ. ಶಾಸ್ತ್ರದಿಂದ ಸಂಸ್ಕಾರಗೊಂಡ ಮನಸ್ಸುಳ್ಳವರು 'ಅಹಂ' ಎಂಬುದು ಪರಮಾತ್ಮನನ್ನು ಸೂಚಿಸುತ್ತದೆ ಎಂದು ತಿಳಿಯುತ್ತಾರೆ. ಆದುದರಿಂದಲೇ ವಾಮದೇವಾದಿಗಳು 'ಅಹಂ ಮನುರಭವಂ' ಎಂಬ ವ್ಯವಹಾರಗಳನ್ನು ಮಾಡುತ್ತಾರೆ. ಈ ಅಂತರಾತ್ಮವಿಷಯದಲ್ಲಿ ಭೇದ ಎಂಬುದಿಲ್ಲ. ಈ ಎರಡು ಮಂತ್ರಗಳಲ್ಲಿ ಇತರ ವಿಷಯಗಳು ಸ್ಪಷ್ಟವಾಗಿವೆ ಎಂದು ೧೦-೧೧ನೇ ಮಂತ್ರಗಳಿಗೆ 'ಅಥವಾ' ಎಂಬುದರಿಂದ ಒಟ್ಟುಗೂಡಿಸಿ ಅಭಿಪ್ರಾಯ ತಿಳಿಸಲಾಗಿದೆ.



1 ಮನಸ್ಸು ಪರಿಶುದ್ಧವಾಗಲು ಫಲಾಭಿಲಾಷೆಯಿಲ್ಲದೇ ಮಾಡುವ ಕರ್ಮಗಳು ಕಾರಣವೆಂದು ರಾಮಾನಂದರೂ, ಶಾಸ್ತ್ರಜ್ಞಾನದಿಂದ ಪರಿಪಕ್ವವಾಗುವುದು ಕಾರಣವೆಂದು ಗೋಪಾಲಾನಂದರೂ ತಿಳಿಸುತ್ತಾರೆ.

# ಮಂತ್ರ ೧೨

**अङ्गुष्ठमात्रः पुरुषो मध्य आत्मनि तिष्ठति ।**
**ईशानो भूतभव्यस्य न ततो विजुगुप्सते ॥ एतद्वै तत् ॥**

ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।
ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ॥
ಏತದ್ವೈ ತತ್॥

### ಪ್ರತಿಪದಾರ್ಥ

ಭೂತಭವ್ಯಸ್ಯ—ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಎಲ್ಲ ಚೇತನಾಚೇತನಗಳಿಗೆ **ಈಶಾನಃ**—ನಿಯಾಮಕನಾದ, ಪುರುಷಃ—ಪರಮಾತ್ಮನು, ಮಧ್ಯೇ ಆತ್ಮನಿ—ಉಪಾಸಕನ ಶರೀರಮಧ್ಯದಲ್ಲಿ ಅಂಗುಷ್ಠ ಮಾತ್ರಃ—ಹೆಬ್ಬೆರಳಿನ ಪರಿಮಾಣವುಳ್ಳವನಾಗಿ, ತಿಷ್ಠತಿ—ಇದ್ದಾನೆ, ತತಃ—ಉಪಾಸಕನಲ್ಲಿರುವ ವಾತ್ಸಲ್ಯದಿಂದ ನ ವಿಜುಗುಪ್ಸತೇ—ದೇಹದಲ್ಲಿರುವ ದೋಷಗಳನ್ನು ನೋಡಿ ಬೇಸರಿಸುವುದಿಲ್ಲ. ಏತದ್ವೈ—ಈ ಮಂತ್ರದಲ್ಲಿ ಹೇಳಿರುವ ಆತ್ಮಸ್ವರೂಪವೇ ತತ್—ಹಿಂದೆ ಹೇಳಿದ ಪರಬ್ರಹ್ಮಸ್ವರೂಪ.

### ತಾತ್ಪರ್ಯ

ಸರ್ವಾಂತರ್ಯಾಮಿಯಾದ ಪರಮಾತ್ಮನು ಹೇಗಿರುವನೆಂಬುದನ್ನು ಈ ಮಂತ್ರದಿಂದ ವಿವರಿಸಲಾಗಿದೆ. ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಎಲ್ಲ ಚೇತನಾಚೇತನರಿಗೂ ಈ ಪರಮಾತ್ಮನೇ ನಿಯಾಮಕನು. ಈತನು ಉಪಾಸಕನ ದೇಹದ ಮಧ್ಯೆ ಅವನಿಗೆ ಅನುಕೂಲವಾಗಲೆಂದು ಹೆಬ್ಬೆರಳ ಪ್ರಮಾಣದಲ್ಲಿರುವನು. ಉಪಾಸಕನಲ್ಲಿರುವ ವಾತ್ಸಲ್ಯದಿಂದ ಶರೀರದಲ್ಲಿ ನೆಲೆಸಿರುವುದರಿಂದಲೇ ಈ ದೇಹಗತವಾದ ದೋಷಗಳನ್ನು ಕಂಡು ಬೇಸರಿಸದೇ ಭೋಗ್ಯವಾಗಿ ಭಾವಿಸುತ್ತಾನೆ. ಹಿಂದೆ ಹೇಳಿದ ಪರಮಾತ್ಮತತ್ತ್ವವೇ ಈ ಮಂತ್ರದಲ್ಲೂ ಪ್ರತಿಪಾದಿಸಲ್ಪಟ್ಟಿದೆ.

### ರಂಗರಾಮಾನುಜಭಾಷ್ಯಮ್

ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ । ಕಾಲತ್ರಯವರ್ತಿನಿಖಿಲಚೇತನಾಚೇತನೇಶ್ವರಃ ಪುರುಷಃ ಮಧ್ಯ ಆತ್ಮನಿ–ಉಪಾಸಕಶರೀರೇ ಮಧ್ಯೇ, ಅಂಗುಷ್ಠಪರಿಮಾಣಸ್ಸನ್ ಆಸ್ತೇ। ನ ತತೋ ವಿಜುಗುಪ್ಸತೇ । ತತಃ–ಭೂತಭವ್ಯೇಶಾನತ್ವಾದೇವ, ವಾತ್ಸಲ್ಯಾತಿಶಯಾತ್ ದೇಹಗತಾನಪಿ ದೋಷಾನ್ ಭೋಗ್ಯತಯಾ ಪಶ್ಯತೀತ್ಯರ್ಥಃ ॥

ನನು–'ಪ್ರಾಣಾಧಿಪಸ್ಸಂಚರತಿ ಸ್ವಕರ್ಮಭಿರಂಗುಷ್ಠಮಾತ್ರೋ ರವಿತುಲ್ಯರೂಪಃ' 'ಅಂಗುಷ್ಠಮಾತ್ರಂ ಪುರುಷಂ ನಿಶ್ಚಕರ್ಷ ಯಮೋ ಬಲಾತ್' ಇತ್ಯಾದಿಶ್ರುತಿಸ್ಮೃತಿಷು ಅಂಗುಷ್ಠಮಾತ್ರತ್ವೇನ ಪ್ರತಿಪಾದಿತಸ್ಯ ಜೀವಸ್ಯೈವ ಅಸ್ಮಿನ್ ಮಂತ್ರೇ ಪ್ರತಿಪಾದನಂ ಕಿಂ ನ ಸ್ಯಾತ್ ? ನ ಚ–ತಸ್ಯ ಭೂತಭವ್ಯೇಶಾನತ್ವಾನುಪಪತ್ತಿಃ ಇತಿ ವಾಚ್ಯಮ್ ; ಪ್ರಥಮಶ್ರುತ

ಜೀವಲಿಂಗಾನುರೋಧೇನ ಚರಮಶ್ರುತಭೂತಭವ್ಯೇಶಾನತ್ವಸ್ಯ ಅಪೇಕ್ಷಿತಯಾ ಯೋಜಯಿತುಂ ಶಕ್ಯತ್ವಾತ್ ಇತಿ ಚೇನ್ನ–'ಶಬ್ದಾದೇವ ಪ್ರಮಿತಃ' (ಬ್ರ.ಸೂ. 1-3-24) ಇತ್ಯಧಿಕರಣೇ, ಏವಮೇವ ಪೂರ್ವಪಕ್ಷಂ ಕೃತ್ವಾ, ಹೃದಯಾವಚ್ಛೇದನಿಬಂಧನಾಂಗುಷ್ಠಪರಿಮಾಣಸ್ಯ ಪರಮಾತ್ಮನ್ಯಪಿ ಸಂಭವಾತ್. 'ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ' ಇತಿ ತೈತ್ತಿರೀಯಕೇ 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ' ಇತಿ ಶ್ವೇತಾಶ್ವತರೇ ಚ, ಅಂಗುಷ್ಠಮಾತ್ರತ್ವಸ್ಯ ಪರಮಾತ್ಮನ್ಯಪಿ ಶ್ರವಣಾತ್, ಅಸಂಕುಚಿತಭೂತಭವ್ಯೇಶಿತೃತ್ವಸ್ಯ ಅನ್ಯಥಾಸಿದ್ಧಬ್ರಹ್ಮಲಿಂಗತ್ವಾತ್ ಅಯಂ ಮಂತ್ರಃ ಪರಮಾತ್ಮಪರ ಏವ–ಇತಿ ಸಿದ್ಧಾಂತಿತತ್ವಾತ್ ।

ಯತ್ತ್ವತ್ರ ಕೈಶ್ಚಿದುಚ್ಯತೇ–ಅಂಗುಷ್ಠಮಾತ್ರತ್ವಂ ಜೀವಲಿಂಗಮೇವ । ಅಥಾಪಿ 'ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ' ಇತಿ ಪೂರ್ವಾರ್ಧೇನ ಜೀವಮನೂದ್ಯ, 'ಈಶಾನೋ ಭೂತಭವ್ಯಸ್ಯ' ಇತ್ಯನೇನ ಪರಮಾತ್ಮಭಾವೋ ವಿಧೀಯತೇ ಇತಿ-ತದಸಮಂಜಸಮ್ । ತಥಾ ಹಿ ಸತಿ ಪರಮಾತ್ಮನಿ ಅಂಗುಷ್ಠಮಾತ್ರತ್ವಸಂಭಾವನಾ (ಸಂಭವ ?) ಪ್ರದರ್ಶಕಸ್ಯ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಇತಿ ಸೂತ್ರಸ್ಯ ಅಸಂಗತಿಪ್ರಸಂಗಾತ್ । ನನು–ನ ಅಸ್ಮಿನ್ ಮಂತ್ರೇ ಜೀವಾನುವಾದೇನ ಬ್ರಹ್ಮಭಾವೋ ವಿಧೀಯತೇ, ಆರಾಗ್ರಮಾತ್ರತಯಾ ಪ್ರತಿಪನ್ನಸ್ಯ ಜೀವಸ್ಯ ಅಂಗುಷ್ಠಮಾತ್ರತ್ವೇ ಪ್ರಮಾಣಾಭಾವಾತ್'—ಇತಿ ತಟಸ್ಥಶಂಕಾಪರಿಹಾರಾರ್ಥಂ, ಜೀವಸ್ಯ ಅಂಗುಷ್ಠಮಾತ್ರತ್ವಸಾಧನಾಯ ಪ್ರವೃತ್ತಮಿದಂ ಸೂತ್ರಮ್ ಇತಿ ಚೇತ್—ತಥಾಽಶ್ರಯಣಸ್ಯ ಕ್ಲಿಷ್ಟತ್ವಾತ್ ।

ನನು-'ಈಶ್ವರಶ್ಶರ್ವ ಈಶಾನಃ' ಇತಿ ನಿಘಂಟುಪಾಠೇನ 'ಈಶಾನ'ಶಬ್ದಸ್ಯ ದೇವತಾವಿಶೇಷೇ ರೂಢತ್ವಾತ್, 'ಶಬ್ದಾದೇವ ಪ್ರಮಿತಃ' (ಬ್ರ.ಸೂ. 1-3-24) ಇತಿ ಸೂತ್ರೇ, —'ಈಶಾನೋ ಭೂತಭವ್ಯಸ್ಯ' ಇತಿ ಶಬ್ದಾದೇವ ; ನ ಚ ಭೂತಭವ್ಯಸ್ಯ ಸರ್ವಸ್ಯೇಶಿತೃತ್ವಂ ಕರ್ಮವಶ್ಯಸ್ಯ ಜೀವಸ್ಯೋಪಪದ್ಯತೇ–ಇತಿ ಭಾಷ್ಯಂ ವ್ಯಾಕುರ್ವದ್ಭಿಃ ವ್ಯಾಸಾರ್ಯೈಃ ಈಶಾನಶಬ್ದಸ್ಯೈವ 'ಶಬ್ದ'ಶಬ್ದೇನ ವಿವಕ್ಷಿತತ್ವಾತ್ । ......ನಾತ್ರ ಲಿಂಗಾತ್ ನಿರ್ಣಯಃ । ಕಿಂ ತು ಈಶ್ವರವಾಚಿಶಬ್ದಾದೇವ ಇತಿ ಏವಕಾರಾಭಿಪ್ರಾಯಃ ಇತಿ ವ್ಯಾಖ್ಯಾತತ್ವಾತ್ ಈಶಾನಶಬ್ದಸ್ಯ ಶ್ರುತಿತ್ವಾಭ್ಯುಪಗಮಾತ್ ತಯೈವ ಚ ಈಶಾನಶಬ್ದಶ್ರುತ್ಯಾ ಜೀವವ್ಯಾವೃತ್ತಿವದೇವ (ಜೀವವದೇವ ?) ನಾರಾಯಣಸ್ಯಾಪಿ ವ್ಯಾವರ್ತಿತತ್ವೇನ ರುದ್ರಪರತ್ವಮೇವ ಸ್ಯಾದಿತಿ ಚೇನ್ನ ಯೋಗರೂಢಿಮತಃ ಪದಸ್ಯ ಸನ್ನಿಧೌ ಅವಯವಾರ್ಥವಿಶೇಷಕಪದಾಂತರಸನ್ನಿಧಾನೇ ರೂಢ್ಯನುನ್ಮೇಷಸ್ಯ, 'ಪದ್ಮಾನಿ ಯಸ್ಯಾಗ್ರಸರೋರುಹಾಣಿ ಪ್ರಬೋಧಯತ್ಯೂರ್ಧ್ವಮುಖೈರ್ಮಯೂಖೈಃ' ಇತ್ಯಾದಿಷು ದರ್ಶನಾತ್ । ತತ್ರ ಹಿ ಸರೋರುಹಪದಾವಯವಾರ್ಥಸರೋವಿಶೇಷಕಾಗ್ರಪದೋಪಾದಾನೇನ ಸರೋರುಹಪದರೂಢಿಭಂಗಸ್ಯ ದರ್ಶನಾತ್ । ಇತರಥಾ ಪದ್ಮಾನೀತಿ ಪದಾನುಪಾದಾನಾಪತ್ತೇಃ । ಅತಃ ಈಶಾನಶಬ್ದಸ್ಯ ನ ಶ್ರುತಿತ್ವಮ್ । ಏತದಸ್ವರಸಾದೇವ ವ್ಯಾಸಾರ್ಯೈರಪಿ ಯಥಾಶ್ರುತಭಾಷ್ಯಾನುಗುಣ್ಯೇನ ಯದ್ವೇತಿ ಪಕ್ಷಾಂತರಸ್ಯ ಆಶ್ರಿತತ್ವಾದಿತ್ಯಲಮ್ ಅತಿಚರ್ಚಯಾ । ಪ್ರಕೃತಮನುಸರಾಮಃ । ಏತದ್ವೈ ತತ್–ಉಕ್ತೋಽರ್ಥಃ ॥

## ಅನುವಾದ

ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ । ಈಶಾನೋ ಭೂತಭವ್ಯಸ್ಯ, ಮೂರು ಕಾಲಗಳಲ್ಲೂ ಇರುವ ಸಮಸ್ತವಾದ ಚೇತನಾಚೇತನಗಳಿಗೆ ಒಡೆಯನಾದ ಪುರುಷ

ವಾಚ್ಯನಾದ ನಾರಾಯಣನು ಉಪಾಸಕನ ಶರೀರದ ಮಧ್ಯದಲ್ಲಿ ಹೆಬ್ಬೆಟ್ಟಿನ ಪರಿಮಾಣದಲ್ಲಿ ಇರುವನು. ನ ತತೋ ವಿಜುಗುಪ್ಸತೇ। ತತಃ–ಭೂತಭವಿಷ್ಯದ್ವರ್ತಮಾನಕಾಲದಲ್ಲಿನ ಚೇತನಾ ಚೇತನಗಳಿಗೆ ಒಡೆಯನಾದುದರಿಂದಲೇ ವಿಶೇಷವಾದ ವಾತ್ಸಲ್ಯದಿಂದ ದೇಹದಲ್ಲಿರುವ ದೋಷಗಳನ್ನೂ ಭೋಗ್ಯವಾಗಿ ಪರಿಗಣಿಸುತ್ತಾನೆ ಎಂದರ್ಥ.

"ಪ್ರಾಣಿಗಳಿಗೆ ಒಡೆಯನಾದ ಜೀವನು ಅಂಗುಷ್ಠಪರಿಮಾಣವುಳ್ಳವನು ಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳವನೂ, ಅಥವಾ ರೂಪವುಳ್ಳವನೂ ಆದ ಇವನು ತನ್ನ ಕರ್ಮ ಗಳಿಗೆ ಅನುಗುಣವಾಗಿ ಸಂಚರಿಸುತ್ತಾನೆ." "ಅಂಗುಷ್ಠಪರಿಮಾಣವುಳ್ಳ ಜೀವನನ್ನು ಯಮನು ಬಲವಂತವಾಗಿ ಎಳೆದೊಯ್ದನು." ಮುಂತಾದ ಶ್ರುತಿ–ಸ್ಮೃತಿಗಳಲ್ಲಿ ಜೀವನು ಅಂಗುಷ್ಠಪರಿ ಮಾಣವುಳ್ಳವನೆಂದು ಹೇಳಿರುವುದರಿಂದ ಆ ಜೀವನನ್ನೇ ಈ ಮಂತ್ರದಲ್ಲಿ ಹೇಳುತ್ತಿದೆ ಎಂದೇಕೆ ಹೇಳಬಾರದು ? ಜೀವನು ಭೂತಭವಿಷ್ಯದ್ವರ್ತಮಾನವಸ್ತುಗಳಿಗೆ ಒಡೆಯನಾಗ ಲಾರನು ಎಂದು ಹೇಳಲಾಗುವುದಿಲ್ಲ. ಮೊದಲು ಹೇಳಿದ ಜೀವಪರವಾದ ಕಾರಣಕ್ಕೆ ಅನುಗುಣವಾಗಿ ಕೊನೆಯಲ್ಲಿ ಹೇಳಿರುವ ಭೂತಭವಿಷ್ಯದ್ವರ್ತಮಾನದಲ್ಲಿನ ಕೆಲವು ವಸ್ತುಗಳಿಗೆ ಒಡೆಯನೆಂಬುದನ್ನು ಅನ್ವಯಿಸಲು ಆಗುತ್ತದೆ ಎಂದು ಹೇಳಬಹುದಲ್ಲ ಎಂದು ಹೇಳಲಾಗದು.

'ಶಬ್ದಾದೇವ ಪ್ರಮಿತಃ' (ಬ್ರ.ಸೂ. 1–3–23) ಎಂಬ ಅಧಿಕರಣದಲ್ಲಿ ಹೀಗೆಯೇ ಪೂರ್ವಪಕ್ಷಮಾಡಿ ಹೃದಯಕ್ಕನುಗುಣವಾದ ಅಂಗುಷ್ಠಪರಿಮಾಣವು ಪರಮಾತ್ಮನಲ್ಲೂ ಇರಬಹುದಾದ್ದರಿಂದಲೂ 'ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ' (ತೈ.ನಾ. 53) ಎಂದು ತೈತ್ತಿರೀಯದಲ್ಲೂ 'ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ' (ಶ್ವೇ.ಉ.3) ಎಂದು ಶ್ವೇತಾಶ್ವತರದಲ್ಲೂ ಪರಮಾತ್ಮನು ಅಂಗುಷ್ಠಪರಿಮಾಣವುಳ್ಳವನೆಂದು ಹೇಳಿರುವುದರಿಂದಲೂ ಭೂತಭವಿಷ್ಯದ್ವರ್ತ ಮಾನಕಾಲದ ಎಲ್ಲ ವಸ್ತುಗಳಿಗೆ ಸಂಕೋಚವಿಲ್ಲದ ಒಡೆತನವು ಸ್ವತಃಸಿದ್ಧವಾದ ಬ್ರಹ್ಮಸೂಚಕ ವಾದುದರಿಂದಲೂ ಈ ಮಂತ್ರವು ಪರಮಾತ್ಮಪರವಾದುದು ಎಂದು ಸಿದ್ಧಾಂತಮಾಡಿರುತ್ತಾರೆ.

ಅಂಗುಷ್ಠಪರಿಮಾಣವು ಜೀವಸೂಚಕವೇ ಆದರೂ 'ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ' ಎಂಬ ಮೊದಲರ್ಧದಿಂದ ಜೀವನನ್ನು ಹೇಳಿ, 'ಈಶಾನೋ ಭೂತ ಭವ್ಯಸ್ಯ' ಎಂಬುದರಿಂದ ಪರಮಾತ್ಮಭಾವವನ್ನು ವಿಧಿಸುತ್ತದೆ ಎಂದು ಈ ಮಂತ್ರದ ವಿಷಯದಲ್ಲಿ ಕೆಲವರು ಹೇಳುತ್ತಾರೆ. ಅದೂ ಸರಿಯಲ್ಲ. ಹೀಗೆ ಹೇಳಿದರೆ ಪರಮಾತ್ಮನು ಅಂಗುಷ್ಠಪರಿಮಾಣವುಳ್ಳವನೆಂದು ತೋರಿಸುವ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರ ತ್ವಾತ್' (ಬ್ರ.ಸೂ. 1–3–24) ಎಂಬ ಸೂತ್ರವು ಅಸಂಗತವಾಗುವುದು.

ಈ ಮಂತ್ರದಲ್ಲಿ ಮೊದಲು ಜೀವನನ್ನು ಹೇಳಿ ಅನಂತರ ಬ್ರಹ್ಮಭಾವವನ್ನು ವಿಧಿಸು ವುದಿಲ್ಲ. ಆರಾಗ್ರಪರಿಮಾಣವುಳ್ಳ ಜೀವನಿಗೆ ಅಂಗುಷ್ಠಪರಿಮಾಣವನ್ನು ಹೇಳುವಲ್ಲಿ ಪ್ರಮಾಣವಿಲ್ಲ ಎಂಬ ಮಧ್ಯಸ್ಥನಿಗುಂಟಾದ ಸಂದೇಹವನ್ನು ಪರಿಹರಿಸಲು ಅಂಗುಷ್ಠಪರಿಮಾಣ ವನ್ನು ಮಾತ್ರ ಜೀವನಲ್ಲಿ ಸಾಧಿಸಲು ಈ ಸೂತ್ರವನ್ನು ಹೇಳಿದ್ದಾರೆ ಎಂದು ಹೇಳಿದಲ್ಲಿ, ಹಾಗೆ ಹೇಳುವುದು ಬಹಳ ಕಷ್ಟ, 'ಈಶ್ವರಶ್ಶರ್ವ ಈಶಾನಃ' ಎಂದು ನಿಘಂಟುವಿನಲ್ಲಿದೆ. ಈಶಾನಶಬ್ದವು ದೇವತಾವಿಶೇಷದಲ್ಲಿ (ರುದ್ರನಲ್ಲಿ) ರೂಢವಾಗಿದೆ. 'ಶಬ್ದಾದೇವ ಪ್ರಮಿತಃ' (ಬ್ರ. ಸೂ. 1–3–23) ಎಂಬ ಸೂತ್ರದಲ್ಲಿ 'ಈಶಾನೋ ಭೂತಭವ್ಯಸ್ಯ' ಎಂಬ ಶಬ್ದ ದಿಂದಲೇ ಭೂತಭವಿಷ್ಯದ್ವರ್ತಮಾನದ ವಸ್ತುಗಳ ಒಡೆತನವು ಕರ್ಮವಶ್ಯನಾದ ಜೀವನಿಗೆ ಸಂಭವಿಸುವುದಿಲ್ಲ ಎಂದು ಭಾಷ್ಯವಿದೆ. ಈ ಭಾಷ್ಯಕ್ಕೆ ವಿವರಣೆ ಕೊಡುತ್ತಾ ಶ್ರುತಪ್ರಕಾಶಿಕಾ

ಚಾರ್ಯರು ' ಶಬ್ದಾದೇವ ಪ್ರಮಿತಃ ' ಎಂಬಲ್ಲಿನ ' ಶಬ್ದ ' ಎಂಬ ಪದವು ಈಶಾನಶಬ್ದವನ್ನೇ ಹೇಳುತ್ತದೆ....ಇದು ಲಿಂಗದಿಂದ ನಿರ್ಣಯಿಸಲ್ಪಡುವುದಿಲ್ಲ. ಈಶ್ವರನನ್ನು ಹೇಳುವ ಶಬ್ದದಿಂದಲೇ ಎಂದು ' ಏವ 'ಕಾರದ ತಾತ್ಪರ್ಯ, ಎಂದು ವಿವರಿಸಿರುತ್ತಾರೆ. ಈಶಾನಶಬ್ದವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಈ ಶ್ರುತಿಯಲ್ಲಿ ಹೇಳಿದ ಈಶಾನಶಬ್ದದಿಂದ ಜೀವವ್ಯಾವೃತ್ತಿಯಾಗುವಂತೆ ನಾರಾಯಣನ ವ್ಯಾವೃತ್ತಿಯೂ ಆಗುತ್ತದೆ. ಆದುದರಿಂದ ಈಶಾನಶಬ್ದವು ರುದ್ರಪರವೇ ಆಗಲಿ ಎಂಬ ಶಂಕೆ ಸಲ್ಲದು. ಯೋಗರೂಢವಾದ ಪದದೊಡನೆ ಅವಯವಾರ್ಥವನ್ನು ತಿಳಿಸುವ ಬೇರೊಂದು ಪದವಿದ್ದಲ್ಲಿ ರೂಢ್ಯರ್ಥವು ತೋರುವುದಿಲ್ಲ. ಎಂಬುದು ' ಪದ್ಮಾನಿ ಯಸ್ಯಾಗ್ರಸರೋರುಹಾಣಿ ಪ್ರಬೋಧಯತ್ಯೂರ್ಧ್ವಮುಖೈರ್ಮಯೂಖೈಃ' (ಕು. ಸಂ. 1–16) ಇತ್ಯಾದಿ ಪ್ರಯೋಗಗಳಲ್ಲಿ ಕಂಡುಬರುತ್ತಿದೆ. ಅಲ್ಲಿ ಸರೋರುಹಪದದ ಅವಯವಾರ್ಥವಾದ ಸರಸ್ಸಿನಲ್ಲೂ ವಿಶೇಷರೂಪವಾದ ಅಗ್ರಪದವನ್ನು ಬಳಸಿರುವುದರಿಂದ ಸರೋರುಹ ಪದದ ರೂಢಿಗೆ ಭಂಗ ಬಂದಿರುವುದು ಕಾಣುತ್ತದೆ. ಅಲ್ಲಿ ರೂಢಿಗೆ ಭಂಗವಿಲ್ಲ ಎಂದು ಹೇಳುವುದಾದರೆ, ಅಲ್ಲಿ ಪದ್ಮಾನಿ ಎಂಬ ಪದವನ್ನು ಹೇಳಬೇಕಾದ ಪ್ರಮೇಯವೇ ಒದಗುವುದಿಲ್ಲ. ಆದುದರಿಂದ ಈಶಾನಶಬ್ದಕ್ಕೆ ಶ್ರುತಿತ್ವವಿಲ್ಲ. ಇದರಲ್ಲಿ ಕಂಡ ಅಸ್ವಾರಸ್ಯದಿಂದಲೇ ಶ್ರುತಪ್ರಕಾಶಿಕಾಚಾರ್ಯರು ಭಾಷ್ಯದಲ್ಲಿ ಹೇಳಿರುವುದಕ್ಕೆ ಅನುಗುಣವಾಗಿ ' ಅಥವಾ ' ಎಂದು ಬೇರೊಂದು ಪಕ್ಷವನ್ನು ಅವಲಂಬಿಸಿರುವರು. ಈ ವಿಷಯದಲ್ಲಿ ಸಾಕಷ್ಟು ವಿಚಾರಮಾಡಿರುವುದರಿಂದ ಇನ್ನು ಹೆಚ್ಚು ವಿಚಾರಮಾಡಬೇಕಾಗಿಲ್ಲ. ಮುಂದುವರಿಯೋಣ, ಏತದ್ವೈ ತತ್–ಅರ್ಥ ವಿವರಿಸಿದೆ.

## ಭಾಷ್ಯಸಾರ

ಮೇಲಿನ ಮಂತ್ರಗಳಲ್ಲಿ ಹೇಳಿದ ಪರಮಾತ್ಮತತ್ತ್ವವನ್ನೇ ವಿಶೇಷರೂಪದಲ್ಲಿ 'ಅಂಗುಷ್ಠಮಾತ್ರಃ ' ಎಂಬ ಈ ಮಂತ್ರದಲ್ಲಿ ವರ್ಣಿಸುತ್ತಾರೆ.

ಪರಮಾತ್ಮನು ಉಪಾಸಕನನ್ನು ಅನುಗ್ರಹಿಸಲು ಉಪಾಸಕನ ಶರೀರದಲ್ಲಿರುವ ಹೃದಯಕಮಲದಲ್ಲಿ ಹೆಬ್ಬೆರಳಪರಿಮಾಣದಲ್ಲಿ [1]ನೆಲೆಸಿರುವನು. ' ಅಂಗುಷ್ಠಮಾತ್ರಃ ' ಎಂಬುದು ಜೀವಪರವೇ ಆಗಲಿ ಎಂಬ ಸಂದೇಹವನ್ನು ' ಈಶಾನೋ ಭೂತಭವ್ಯಸ್ಯ ' ಎಂಬುದರಿಂದ ಪರಿಹರಿಸುತ್ತಾನೆ. ಮೂರು ಕಾಲಗಳಲ್ಲಿರುವ ಚಿದಚಿದ್ರೂಪವಾದ ಎಲ್ಲ ಕಾರ್ಯಪದಾರ್ಥಗಳಿಗೂ ಈತನೇ ಒಡೆಯನು. ಈತನೇ ನಿಯಾಮಕನು. ಜೀವನು ಇವುಗಳಿಗೆ ನಿಯಾಮಕನಲ್ಲ. ಬೇರೆ ಜನರು ಪ್ರೀತಿವಿಶೇಷದಿಂದ ಕೊಳಕಾದ ತಮ್ಮ ಮಕ್ಕಳನ್ನು ಮತ್ತು ಮನೆಗಳನ್ನು ನೋಡಿ ಹೇಗೆ ಜುಗುಪ್ಸೆಗೊಳ್ಳುವುದಿಲ್ಲವೋ ಹಾಗೆ ಪರಮಾತ್ಮನು ದೇಹಮಧ್ಯದಲ್ಲಿದ್ದರೂ ಉಪಾಸಕನಲ್ಲಿರುವ ವಾತ್ಸಲ್ಯವಿಶೇಷದಿಂದ ಆ ದೇಹದಲ್ಲಿರುವ ದೋಷಗಳನ್ನು ನೋಡಿ ಜುಗುಪ್ಸೆಗೊಳ್ಳುವುದಿಲ್ಲ. ಅವುಗಳನ್ನು ಭೋಗ್ಯವಾಗಿ ಭಾವಿಸುತ್ತಾನೆ. ಹೀಗೆ ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವೇ ಹಿಂದೆ ಹೇಳಿದ ಪ್ರಾಪ್ಯಸ್ವರೂಪ.

ಸುಬೋಧಿನೀಕಾರರು ' ತತೋ ನ ವಿಜುಗುಪ್ಸತೇ ' ಎಂಬುದಕ್ಕೆ ' ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವನ್ನು ಯಾವನು ಅರಿಯುತ್ತಾನೋ ಅವನು ಈ ಕಾರ್ಯವರ್ಗವನ್ನು ನೋಡಿ ಜುಗುಪ್ಸೆಗೊಳ್ಳುವುದಿಲ್ಲ ' ಎಂದು ಅಥವಾ ಎಂಬುದರಿಂದ ವಿವರಿಸಿರುವರು.



[1] ಪರಮಾತ್ಮನು ಅಪರಿಚ್ಛಿನ್ನನು. ಆದರೂ ಪರಮಾತ್ಮನಿಗೆ ಉಪಾಸಕನ ಹೃದಯಕ್ಕನುಗುಣವಾದ ಅಳತೆಯನ್ನು ಶ್ರುತಿಯು ತಿಳಿಸಿದೆ.

## ಮಂತ್ರ ೧೩

**अङ्गुष्ठमात्रः पुरुषो ज्योतिरिवाधूमकः[1] ।**
**ईशानो भूतभव्यस्य [2]स एवाद्य स उ श्वः ॥ एतद्वै तत् ॥**

ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।
ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ ॥
ಏತದ್ವೈ ತತ್ ॥

### ಪ್ರತಿಪದಾರ್ಥ

ಭೂತಭವ್ಯಸ್ಯ—ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಚೇತನಾಚೇತನಗಳಿಗೆ, ಈಶಾನಃ—ನಿಯಾಮಕನಾದ, ಅಧೂಮಕಃ—ಹೊಗೆಯಿಲ್ಲದ, ಜ್ಯೋತಿರಿವ—ತೇಜಸ್ಸಿನಂತಿರುವ, ಅಂಗುಷ್ಠಮಾತ್ರಃ—ಹೆಬ್ಬೆರಳ ಪರಿಮಾಣದಲ್ಲಿರುವ, ಪುರುಷಃ—ಪರಮಾತ್ಮನು (ಉಪಾಸಕನ ಶರೀರಮಧ್ಯದಲ್ಲಿರುವನು) ಅದ್ಯ—ವರ್ತಮಾನಕಾಲದಲ್ಲಿರುವ ವಸ್ತುಗಳೆಲ್ಲವೂ, ಸ ಏವ—ಅವನೇ (ಆತನನ್ನೇ ಆತ್ಮವಾಗಿ ಉಳ್ಳವು), ಶ್ವಃ—ಭವಿಷ್ಯತ್ಕಾಲದಲ್ಲಿರುವ ವಸ್ತುಗಳೆಲ್ಲಕ್ಕೂ, ಸ ಉ—ಅವನೇ, ಆತ್ಮನಾಗಿರುವನು (ಆತನನ್ನೇ ಆತ್ಮವಾಗಿಉಳ್ಳವು) ಏತದ್ವೈ ತತ್—ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವೇ ಹಿಂದೆ ಹೇಳಿದ ಆತ್ಮತತ್ವವಾಗಿದೆ,

### ತಾತ್ಪರ್ಯ

ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಚೇತನಾಚೇತನಗಳಿಗೆ ನಿಯಾಮಕನಾದ ಪರಮಾತ್ಮನು ಹೊಗೆಯಿಲ್ಲದ ಅಗ್ನಿಯಂತೆ ಪ್ರಕಾಶಮಾನವಾಗಿ ಉಪಾಸಕನ ಶರೀರಮಧ್ಯದಲ್ಲಿ ನೆಲೆಸಿರುವನು. ಇವನನ್ನೇ ಈಗಿರುವ ವಸ್ತುಗಳೂ, ಮುಂದೆ ಇರಬಹುದಾದ ವಸ್ತುಗಳೂ ಆತ್ಮವಾಗಿ ಉಳ್ಳವು. ಈ ಮಂತ್ರದಲ್ಲಿ ಹಿಂದೆ ಹೇಳಿದ ಪರಮಾತ್ಮತತ್ವ (ಪರಮಾತ್ಮಸ್ವರೂಪವೇ) ವಿವರಿಸಿದೆ.

### ರಂಗರಾಮಾನುಜಭಾಷ್ಯಮ್

ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ– ಶುಷ್ಕೇಂಧನಾನಲವತ್ ಪ್ರಕಾಶಮಾನಾ ಇತ್ಯರ್ಥಃ । ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ–ಅದ್ಯತನಪದಾರ್ಥಜಾತಂ ಶ್ವಸ್ತನಪದಾರ್ಥಜಾತಂ ಕಾಲತ್ರಯವರ್ತಿಪದಾರ್ಥಜಾತಮಪಿ ತದಾತ್ಮಕಮಿತ್ಯರ್ಥಃ । ಏತದ್ವೈ ತತ್–ಪೂರ್ವವತ್ ।

### ಅನುವಾದ

ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ–ಒಣಗಿದ ಕಟ್ಟಿಗೆಯ ಬೆಂಕಿಯಂತೆ ಪ್ರಕಾಶಮಾನವಾದ ಎಂದರ್ಥ. ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ–

---

1. ಅಧೂಮಕಃ ಸ್ತ್ರೀಲಿಂಗ ಇರಬೇಕಿತ್ತು. ಪುಲ್ಲಿಂಗ ಛಾಂದಸ ಪ್ರಯೋಗ.
2. ಸ ಏವಾದ್ಯ ಸ ಉ ಶ್ವಃ–ಎಂಬುದು ಭೂತಕಾಲದ ವಸ್ತುಗಳನ್ನೂ ಸೂಚಿಸುತ್ತದೆ.

ಈಗಿರುವ ನಾಳೆಯಿರುವ ವಸ್ತುಗಳ ರಾಶಿ ಅಂದರೆ ಮೂರು ಕಾಲಗಳಲ್ಲೂ ಇರುವ ವಸ್ತುಗಳೆಲ್ಲವೂ ಪರಮಾತ್ಮನನ್ನೇ ಆತ್ಮವಾಗಿ ಉಳ್ಳದ್ದು ಎಂದರ್ಥ. ಏತದ್ವೈ ತತ್–ಹಿಂದಿನಂತೆಯೇ ಅರ್ಥ.

## ಭಾಷ್ಯಸಾರ

ಪರಮಾತ್ಮನು ಉಪಾಸಕನ ಹೃದಯದಲ್ಲಿ ಅವನ ಹೆಬ್ಬೆರಳಿನ ಪರಿಮಾಣವುಳ್ಳವನಾಗಿರುವನು. ಒಣಗಿದ ಕಟ್ಟಿಗೆಯು ಉರಿಯು ಹೇಗೆ ಹೊಗೆಯಿಲ್ಲದೇ ತೇಜಸ್ಸಿನಿಂದ ಕೂಡಿರುವುದೋ ಹಾಗೆ ಪ್ರಕಾಶಿಸುತ್ತಿರುವನು. ಅಂದರೆ ಈತನು ಬೆಳಕಿಗೂ ಬೆಳಕಾಗಿರುವನು. ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿರುವ ಚಿದ್ವಸ್ತುಗಳಿಗೆ ಒಡೆಯನು. ಅವನು ಈಗಲೂ ನಿಯಾಮಕನು. ನಾಳೆಯೂ ನಿಯಾಮಕನು. ಅಂದರೆ ಹೃದಯಗುಹೆಯಲ್ಲಿದ್ದುಕೊಂಡೇ ಮೂರು ಕಾಲಗಳಲ್ಲಿರುವ ವಸ್ತುಗಳ ನಿಯಾಮಕನಾಗಿರುವನು. ಈತನಿಗೆ ಕಾಲಭೇದವಿಲ್ಲ. ಮೂರು ಕಾಲಗಳಲ್ಲಿರುವ ವಸ್ತುಗಳೂ ಈತನನ್ನೇ ಆತ್ಮವಾಗಿವುಳ್ಳವು ಎಂದು ತಾತ್ಪರ್ಯ. ಈ ಮಂತ್ರದಲ್ಲಿ ಹೇಳಿದ ಆತ್ಮತತ್ತ್ವವೇ ಹಿಂದೆ ಹೇಳಿದ ಪರಮಾತ್ಮಸ್ವರೂಪ.



## ಮಂತ್ರ ೧೪

**यथोदकं दुर्गे वृष्टं पर्वतेषु विधावति ।**
**एवं धर्मान् पृथक्पश्यंस्तानेवानु विधावति ॥**

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ಪಶ್ಯಂಸ್ತಾನೇವಾನು ವಿಧಾವತಿ ॥

### ಪ್ರತಿಪದಾರ್ಥ

ದುರ್ಗೇ—ಪರ್ವತದ ಶಿಖರದಲ್ಲಿ ವೃಷ್ಟಂ—ಬಿದ್ದ, ಉದಕಂ—ನೀರು, ಪರ್ವತೇಷು—ಪರ್ವತಗಳ ಕೆಳಭಾಗದಲ್ಲಿ, ಯಥಾ—ಯಾವ ರೀತಿಯಲ್ಲಿ, ವಿಧಾವತಿ—ನಾನಾ ರೀತಿಯಲ್ಲಿ ಹರಿಯುವುದೋ, ಏವಂ—ಅದೇ ರೀತಿಯಲ್ಲಿ, ಧರ್ಮಾನ್—ದೇವಮನುಷ್ಯಗಂಧರ್ವಭೇದಗಳನ್ನು ತೋರ್ಪಡಿಸುವ ಪರಮಾತ್ಮನಲ್ಲಿರುವ ಅಂತರ್ಯಾಮಿತ್ವಧರ್ಮವನ್ನು, ಪೃಥಕ್‌ಪಶ್ಯನ್—ಬೇರಾದದ್ದೆಂದು ತಿಳಿಯುತ್ತಾ, ತಾನೇವ—ದೇವಮನುಷ್ಯಾದಿ ದೇಹಧರ್ಮಗಳನ್ನೇ, ಅನುವಿಧಾವತಿ—ಅನುಸರಿಸಿ ಹೋಗುವವನು, ಸಂಸಾರಕೂಪದಲ್ಲಿ ಬೀಳುವನು.

### ತಾತ್ಪರ್ಯ

ಪರ್ವತದ ತುದಿಯಲ್ಲಿ ಬಿದ್ದ ಮಳೆ ನೀರು ಕೆಳಗುರುಳುತ್ತಾ ನಾನಾ ರೂಪತಳೆದು ಹರಿಯುತ್ತದೆ. ಹಾಗೆಯೇ ದೇವತೆಗಳಲ್ಲಿ ಮತ್ತು ಮನುಷ್ಯರಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಬೇರೆ ಬೇರೆ ಎಂದು ಭಾವಿಸುವವನು ಈ ದೇವಮನುಷ್ಯಾದಿಯೋನಿಗಳಲ್ಲಿ ಜನಿಸುತ್ತಾ ಈ ಸಂಸಾರಚಕ್ರದಲ್ಲಿ ಬೀಳುತ್ತಾನೆ.

### ರಂಗರಾಮಾನುಜಭಾಷ್ಯಮ್

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ । ಪರ್ವತಮೂರ್ಧ್ನಿ ವೃಷ್ಟಂ ಪ್ರತ್ಯಂತಪರ್ವತೇಷು ನಾನಾಭೂತತಯಾ ಪತಿತ್ವಾ ಪತಿತ್ವಾ ಧಾವತಿ । ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ । ಏವಂ ಪರಮಾತ್ಮಗತದೇವಾಂತರ್ಯಾಮಿತ್ವ ಮನುಷ್ಯಾಂತರ್ಯಾಮಿತ್ವಾದಿಧರ್ಮಾನ್ ಪೃಥಗಧಿಕರಣನಿಷ್ಠಾನ್ ಪಶ್ಯನ್, ಪರ್ವತನಿರ್ಝರಪಾತಮ್ ಅನುಕೃತ್ಯ ಸಂಸಾರಕುಹರೇ ಪತತಿ ಇತ್ಯರ್ಥಃ ।

### ಅನುವಾದ

ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ–ಹೀಗೆ ಪರಮಾತ್ಮನಲ್ಲಿರುವ ದೇವತೆಗಳಲ್ಲಿರುವ ಅಂತರ್ಯಾಮಿತ್ವ, ಮನುಷ್ಯರಲ್ಲಿರುವ ಅಂತರ್ಯಾಮಿತ್ವ ಮುಂತಾದ ಬೇರೆ ಬೇರೆ ಅಧಿಕರಣಗಳಲ್ಲಿರುವ ಧರ್ಮವನ್ನು ನೋಡಿ, ಇವು ಭಿನ್ನ ಭಿನ್ನ ಎಂದು ತಿಳಿಯುವವನು ಪ್ರವಾಹ ಪರ್ವತದ ಕೆಳಗುರುಳುವಂತೆ ಸಂಸಾರವೆಂಬ ಹಳ್ಳದಲ್ಲಿ ಬೀಳುತ್ತಾನೆ ಎಂದರ್ಥ.

### ಭಾಷ್ಯಸಾರ

ಒಬ್ಬನೇ ಪರಮಾತ್ಮನು ಎಲ್ಲದಕ್ಕೂ ಅಂತರ್ಯಾಮಿಯಾಗಿ, ಸರ್ವಕ್ಕೂ ಆತ್ಮನೂ, ಸರ್ವವನ್ನೂ ಶರೀರವಾಗಿ ಉಳ್ಳವನೂ ಆಗಿರುವನು, ಇದನ್ನು ಅರಿಯದೇ ದೇವ ಮನುಷ್ಯ

ಮುಂತಾದ ಶರೀರಗಳಲ್ಲಿರುವ ಪರಮಾತ್ಮನನ್ನು ಬೇರೆ–ಬೇರೆ ಎಂದು ತಿಳಿಯುವವನು, ಪರ್ವತದ ಶಿಖರದಲ್ಲಿ ಬಿದ್ದ ನೀರು ಕೆಳಗುರುಳುತ್ತಾ ನಾನಾ ರೂಪತಾಳುವಂತೆ ನಾನಾ ಯೋನಿಗಳಲ್ಲಿ ಸಂಚರಿಸುತ್ತಾನೆ ಎಂದು 'ಯಥೋದಕಂ' ಎಂಬ ಮಂತ್ರದಲ್ಲಿ ವಿವರಿಸುತ್ತಾನೆ.

ಅತ್ಯಂತ ಎತ್ತರವಾದ ಶಿಖರಪ್ರದೇಶಗಳಲ್ಲಿ ಬಿದ್ದ ನೀರು ಪರ್ವತಗಳ ಕೆಳಭಾಗದಲ್ಲಿ ನದಿ–ಝರಿ ಮುಂತಾದ ರೂಪದಲ್ಲಿ ಹರಿದು ಹೋಗುತ್ತದೆ. ಅಂತೆಯೇ ಆತ್ಮಸಂಬಂಧಿಯಾದ ಸರ್ವಾಂತರ್ಯಾಮಿತ್ವ, ಸರ್ವಪ್ರಕಾರತ್ವ, ಸರ್ವಾತ್ಮತ್ವ ಮುಂತಾದ ಧರ್ಮಗಳು ನೇರವಾಗಿ ಅಥವಾ ಪರಂಪರೆಯಾಗಿ ವಿಶೇಷ್ಯವಾದ ಪರಮಾತ್ಮನಲ್ಲಿ ಅನ್ವಯಿಸುತ್ತದೆ ಎಂಬುದನ್ನು ತಿಳಿಯದೇ ಭಿನ್ನ–ಭಿನ್ನ ಸ್ವತಂತ್ರವಿಶೇಷ್ಯಗಳೆಂದು ತಿಳಿಯುವವನು ದೇವ–ಮನುಷ್ಯಾದಿ ಯೋನಿಗಳಲ್ಲಿ ಜನ್ಮವನ್ನು ಹೊಂದುತ್ತಾನೆ. ಪುನಃ ಪುನಃ ಈ ಸಂಸಾರಸಾಗರದಲ್ಲಿ ತೊಳಲುತ್ತಾನೆ ಎಂದರ್ಥ.



## ಮಂತ್ರ ೧೫

**यथोदकं शुद्धे शुद्धमासिक्तं तादृगेव भवति ।**
**एवं मुनेर्विजानत आत्मा भवति गौतम ॥**

ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥

### ಪ್ರತಿಪದಾರ್ಥ

ಶುದ್ಧೇ—ಪರಿಶುದ್ಧವಾದ ನೀರಿನಲ್ಲಿ, ಸಿಕ್ತಮ್—ಹಾಕಲ್ಪಟ್ಟ, ಶುದ್ಧಮ್ ಉದಕಮ್—ಪರಿಶುದ್ಧವಾದ ನೀರು, ಯಥಾ—ಯಾವ ರೀತಿಯಿಂದ, ತಾದೃಗೇವ—ಆ ಶುದ್ಧವಾದ ನೀರಿನಂತೆಯೇ ಭವತಿ—ಆಗುತ್ತದೋ (ಹಾಗೆ), ಗೌತಮ—ನಚಿಕೇತನೇ, ಏವಂ ವಿಜಾನತಃ—ಈ ರೀತಿ ಸರ್ವತ್ರವ್ಯಾಪಿಯಾದ ಪರಮಾತ್ಮನು ಏಕರೀತಿ ಇರುವನು ಎಂಬುದಾಗಿ) ತಿಳಿದ, ಮುನೇಃ—ವಿಚಾರಶೀಲನ, ಆತ್ಮಾ-ಜೀವಾತ್ಮನು ಪರಿಶುದ್ಧನಾಗಿ, ಭವತಿ—(ಪರಮಾತ್ಮಸದೃಶನಾಗಿ) ಆಗುತ್ತಾನೆ.

### ತಾತ್ಪರ್ಯ

ಎಲೈ ನಚಿಕೇತನೇ ! 'ಶುದ್ಧವಾದ ನೀರನ್ನು ಶುದ್ಧವಾದ ನೀರಿನಲ್ಲಿ ಹಾಕಿದರೆ, ಹಾಕಿದ ನೀರು ಪರಿಶುದ್ಧವಾದ ನೀರಿನಂತೆಯೇ ಆಗುವುದು. ಅಂತೆಯೇ ಮನನಶೀಲನಾದವನ ಆತ್ಮವೂ ಪರಮಾತ್ಮಜ್ಞಾನದಿಂದ ಪರಿಶುದ್ಧವಾಗಿ ಪರಮಾತ್ಮಸದೃಶವಾಗಿಯೇ ಆಗುವುದು' ಎಂದು ಯಮನು ಹೇಳಿದನು.

### ರಂಗರಾಮಾನುಜಭಾಷ್ಯಮ್

ಸರ್ವತ್ರೈಕಾತ್ಮಕತ್ವಜ್ಞಾನಸ್ಯ ಫಲಮಾಹ—ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ । ಯಥಾ ಶುದ್ಧಜಲೇ ಶುದ್ಧಜಲಂ ಯೋಜಿತಂ ತತ್ಸದೃಶಮೇವ ಭವತಿ, ನ ಕಥಂಚಿದಪಿ ವಿಸದೃಶಮ್ । ಏವಮ್-ಇತ್ಥಂ ವಿಜಾನತಃ ಮುನೇಃ-ಮನನಶೀಲಸ್ಯ, ಆತ್ಮಾಽಪಿ ಪರಮಾತ್ಮಜ್ಞಾನೇನ ವಿಶುದ್ಧಃ ಸನ್, ವಿಶುದ್ಧೇನ ಪರಮಾತ್ಮನಾ ಸಮಾನೋ ಭವತೀತ್ಯರ್ಥಃ । ಗೌತಮ ಇತಿ ಪ್ರಾಪ್ಯವೈಭವಂ ಸೂಚಯನ್ ಸಹರ್ಷಂ ಸಂಬೋಧಯತಿ ॥

### ಅನುವಾದ

ಎಲ್ಲದರಲ್ಲೂ ಒಬ್ಬನೇ ಪರಮಾತ್ಮನೆಂಬ ಜ್ಞಾನದ ಫಲವನ್ನು ತಿಳಿಸುತ್ತಾನೆ-ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ-ಶುದ್ಧವಾದ ನೀರಿನಲ್ಲಿ ಬೆರೆಸಿದ ಶುದ್ಧವಾದ ನೀರು ಆ ನೀರಿನಂತೆಯೇ ಆಗುತ್ತದೆ. ಯಾವ ರೀತಿಯಿಂದಲೂ ಬೇರೆಯಾಗುವುದಿಲ್ಲ. ಏವಮ್-ಹೀಗೆ ತಿಳಿದ ಮುನೇಃ-ಚಿಂತನೆ (ವಿಚಾರ) ಮಾಡುವವನ ಆತ್ಮವೂ, ಪರಮಾತ್ಮನ ಜ್ಞಾನದಿಂದ ಶುದ್ಧವಾಗಿ ಪರಮಾತ್ಮನಿಗೆ ಸಮನಾಗಿ ಆಗುವುದೆಂದು ತಾತ್ಪರ್ಯ. ಪ್ರಾಪ್ಯನಾದ ಪರಮಾತ್ಮನ

ವೈಭವವನ್ನು ಸೂಚಿಸುತ್ತಾ, ಗೌತಮ ! ಎಂದು ಹರ್ಷದಿಂದ ಕೂಡಿದ ಮನಸ್ಸಿನಿಂದ ಸಂಬೋಧಿಸುತ್ತಾನೆ.

ಭಾಷ್ಯಸಾರ

ಪರಮಾತ್ಮನ ಸ್ವರೂಪವನ್ನು ಅರಿತವರಲ್ಲಿ ಇರುವ ವಿಶೇಷವಾದ ವಿಷಯವನ್ನು 'ಯಥೋದಕಂ' ಎಂಬ ಈ ಮಂತ್ರದಲ್ಲಿ ವಿವರಿಸುತ್ತಾನೆ.

ಮೇಲಿನ ಮಂತ್ರಗಳಲ್ಲಿ ತಿಳಿಸಿರುವಂತೆ ಎಲ್ಲದಕ್ಕೂ ಅಂತರಾತ್ಮನಾದ ಪರಮಾತ್ಮನು ಒಬ್ಬನೇ. ಎಲ್ಲವೂ ಇವನಿಗೆ ಶರೀರಗಳು. ಈತನೇ ಎಲ್ಲದಕ್ಕೂ ಕಾರಣನು. ಆಶ್ರಯ ಭೂತನು. ಉಪಾಸಕರ ಹೃದಯದಲ್ಲಿ ನೆಲೆಸಿರುವವನು ಎಂದು ತಿಳಿಯುವವನ (ಶುದ್ಧವಾದ ನೀರಿನಲ್ಲಿ ಬಿದ್ದ ಶುದ್ಧವಾದ ನೀರು ಹೇಗೆ ಆ ನೀರಿನಂತೆಯೇ ಆಗುವುದೋ ಅದರಂತೆ) ಆತ್ಮ ಸ್ವರೂಪವು ಪರಿಶುದ್ಧವಾಗುವುದು. ಮನನಶೀಲನಾದವನ ಆತ್ಮಸ್ವರೂಪವು ಪರಮಾತ್ಮನಲ್ಲಿ ಸೇರಿ ಪರಮಾತ್ಮನಂತೆಯೇ ಆಗುವುದು. ಅಂದರೆ ಅಪಹತಪಾಪ್ಮತ್ವಾದಿ ಎಂಟು ಗುಣಗಳು ಆವಿರ್ಭವಿಸಿ ಪರಮಾತ್ಮನಿಗೆ ಸದೃಶವಾಗುವುದು ಎಂದು ತಾತ್ಪರ್ಯ. ಇಲ್ಲಿ ಗೌತಮ ಎಂಬ ಸಂಬೋಧನೆ ನಚಿಕೇತನಲ್ಲಿ ಯಮನಿಗಿರುವ ಕೃಪೆಯನ್ನು ಸೂಚಿಸುತ್ತದೆ ಅಥವಾ ನಚಿಕೇತನಂತಹ ಶಿಷ್ಯಲಾಭದಿಂದ ಉಂಟಾದ ಹರ್ಷವನ್ನು ಸೂಚಿಸುತ್ತದೆ.

ನಾಲ್ಕನೆಯ ವಲ್ಲಿ ಸಮಾಪ್ತಿಯಾಯಿತು.



## ಐದನೆಯ ವಲ್ಲಿ ಪ್ರಾರಂಭ

### ಮಂತ್ರ ೧

**पुरमेकादशद्वारमजस्यावक्रचेतसः ।**
**अनुष्ठाय न शोचति विमुक्तश्च विमुच्यते ॥ एतद्वै तत् ॥**

ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।
ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥
ಏತದ್ವೈ ತತ್ ॥

#### ಪ್ರತಿಪದಾರ್ಥ

ಅವಕ್ರಚೇತಸಃ—ಋಜುವಾದ ಮನಸ್ಸುಳ್ಳ ದೇಹಾತ್ಮವಿವೇಕವುಳ್ಳ, ಅಜಸ್ಯ—ಜನನಮರಣಾದಿಶೂನ್ಯನಾದವ(ಜೀವ)ನಿಗೆ, ಏಕಾದಶದ್ವಾರಮ್—ಹನ್ನೊಂದು (ಇಂದ್ರಿಯಗಳ ನಿರ್ಗಮನಕ್ಕೆ) ದ್ವಾರದಿಂದ ಕೂಡಿರುವ ಪುರಮ್—(ಶರೀರವೆಂಬ) ಪಟ್ಟಣವು (ಇದೆ), ಅನುಷ್ಠಾಯ—(ಶರೀರ ಆತ್ಮಗಳು ಭಿನ್ನ ಎಂದು) ವಿಚಾರ ಮಾಡಿದ ಜ್ಞಾನಿಯು. ನ ಶೋಚತಿ—(ಶರೀರಸಂಬಂಧವಾದವುಗಳಿಂದ) ದುಃಖಿಸುವುದಿಲ್ಲ, ವಿಮುಕ್ತಶ್ಚ—ಸಂಸಾರದಿಂದ ಬಿಡಲ್ಪಟ್ಟವನಾಗಿ, ವಿಮುಚ್ಯತೇ—ಮೋಕ್ಷವನ್ನು ಪಡೆಯುತ್ತಾನೆ ಅಂದರೆ ಅರ್ಚಿರಾದಿಮಾರ್ಗದಿಂದ ವೈಕುಂಠವನ್ನು ಹೊಂದಿ ಗುಣಾಷ್ಟಕಗಳಿಂದ ಕೂಡಿದವನಾಗಿ ಪ್ರಕೃತಿಸಂಬಂಧದಿಂದ ಬಿಡಲ್ಪಟ್ಟವನಾಗುತ್ತಾನೆ, ಏತತ್—ಈ ಮಂತ್ರಪ್ರತಿಪಾದ್ಯವಾದ ಮುಕ್ತಾತ್ಮಸ್ವರೂಪವು, ತದ್ವೈ—ಪರಮಾತ್ಮನನ್ನೇ ಆತ್ಮವಾಗಿ ಉಳ್ಳದ್ದು ಎಂದರ್ಥ,

#### ತಾತ್ಪರ್ಯ

ಜೀವನು ಜನನಮರಣಗಳಿಲ್ಲದವನು. ಈ ಜೀವನಿಗೆ ಐದು ಕರ್ಮೇಂದ್ರಿಯ, ಐದು ಜ್ಞಾನೇಂದ್ರಿಯ ಮತ್ತು ಮನಸ್ಸೆಂಬ (ಒಟ್ಟು ಹನ್ನೊಂದು) ಇಂದ್ರಿಯಗಳು ಜ್ಞಾನಪ್ರಸರಣಕ್ಕೆ ದ್ವಾರ. ಇವುಗಳಿಂದ ಕೂಡಿದ ಶರೀರವೆಂಬ ಪಟ್ಟಣವಿದೆ. ಋಜುವಾದ ಮನಸ್ಸುಳ್ಳ ಜೀವನು ಶರೀರ ಬೇರೆ ಆತ್ಮ ಬೇರೆ ಎಂದು ವಿವೇಚಿಸಿ ತಿಳಿಯುತ್ತಾನೆ. ಇದರಿಂದ ಅವನಿಗೆ ಶರೀರ ಸಂಬಂಧವಾದ ದುಃಖವುಂಟಾಗುವುದಿಲ್ಲ. ಶರೀರಾವಸಾನಕಾಲದಲ್ಲಿ, ಈ ಸಾಂಸಾರಿಕ ದುಃಖದಿಂದ ಪಾರಾಗಿ, ಮೋಕ್ಷವನ್ನು ಪಡೆಯುತ್ತಾನೆ ಈ ಮಂತ್ರದಲ್ಲಿ ಹೇಳಿದ ಮುಕ್ತನಿಗೆ ಆತ್ಮವಾದ ಪರಮಾತ್ಮನೇ ಹಿಂದೆ ಹೇಳಿದ ಪರಮಾತ್ಮತತ್ತ್ವ.

#### ರಂಗರಾಮಾನುಜಭಾಷ್ಯಂ

ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ–ಜನನಾದಿವಿಕ್ರಿಯಾರಹಿತಸ್ಯ ಋಜುಬುದ್ಧೇರ್ವಿವೇಕಿನ ಆತ್ಮನಃ, ಏಕಾದಶೇಂದ್ರಿಯಲಕ್ಷಣಬಹಿರ್ನಿರ್ಗಮದ್ವಾರೋಪೇತಂ ಶರೀರಾಖ್ಯಂ ಪುರಂ ಭವತಿ । ಪುರಸ್ವಾಮಿನಃ ಯಥಾ ಪುರಂ ವಿವಿಕ್ತಂ ಭವತಿ ; ತಥಾ ಶರೀರಮಪಿ ಸ್ವಾತ್ಮನೋ ವಿವಿಚ್ಯ ಜ್ಞಾತಂ ಭವತಿ । ಅವಿವೇಕಿನಸ್ತು ದೇಹ ಆತ್ಮೈವ ಭವತೀತಿ ಭಾವಃ । ಅನುಷ್ಠಾಯ ನ ಶೋಚತಿ–ವಿವಿಚ್ಯ ಜಾನನ್, ದೇಹಾನುಬಂಧಿಭಿಃ, ದುಃಖೈಃ, ಕಾಮಾದಿಭಿಶ್ಚ ವಿಮುಕ್ತೋ ಭವತೀತ್ಯರ್ಥಃ । ವಿಮುಕ್ತಶ್ಚ ವಿಮುಚ್ಯತೇ–ಜೀವದ್ದಶಾ

ಯಾಮ್ ಆಧ್ಯಾತ್ಮಿಕಾದಿದುಃಖರಾಗದ್ವೇಷಾದಿವಿಮುಕ್ತ ಏವ ಸನ್. 'ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪದ್ಯತೇ' ಇತಿ ನ್ಯಾಯೇನ ಪ್ರಾರಬ್ಧಕರ್ಮಾವಸಾನೇ ಅರ್ಚಿರಾದಿನಾ ವಿರಜಾಂ ಪ್ರಾಪ್ಯ ಪ್ರಕೃತಿಸಂಬಂಧವಿಮುಕ್ತೋ ಭವತೀತ್ಯರ್ಥಃ । ಏತದ್ವೈ ತತ್–ಏತನ್ಮಂತ್ರಪ್ರತಿಪಾದ್ಯಮುಕ್ತಸ್ವರೂಪಮಪಿ, ಪರಮಾತ್ಮಾತ್ಮಕಮೇವೇತ್ಯರ್ಥಃ ।

ಅನುವಾದ

ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ–ಜನನ-ಮರಣ ಮುಂತಾದ ಪರಿಣಾಮವಿಲ್ಲದ, ವಿವೇಕಿಯಾದ ಜೀವನಿಗೆ ಹನ್ನೊಂದು ಇಂದ್ರಿಯರೂಪವಾದ ಜ್ಞಾನಪ್ರಸರಣಕ್ಕೆ ಅನುಕೂಲವಾದ ಬಾಗಿಲುಗಳಿಂದ ಕೂಡಿದ ಶರೀರವೆಂಬ ಪಟ್ಟಣವಿದೆ. ಈ ಪಟ್ಟಣವು ಒಡೆಯನಿಗಿಂತ ಹೇಗೆ ಬೇರೆಯಾಗಿರುವುದೋ ಅಂತೆಯೇ ಈ ಜೀವನಿಗಿಂತ ಈ ಶರೀರವು ಭಿನ್ನವೆಂದು ತಿಳಿಯುವುದು ಅವಶ್ಯಕ. ಆದರೆ ಅವಿವೇಕಿಗಳು ದೇಹವನ್ನೇ ಆತ್ಮವೆಂದು ಭಾವಿಸುತ್ತಾರೆ. ಅನುಷ್ಠಾಯ ನ ಶೋಚತಿ–ಶರೀರ ಭಿನ್ನವೆಂದು ತಿಳಿದವನು ದೇಹಕ್ಕೆ ಸಂಬಂಧಿಸಿದ ದುಃಖ ಕಾಮ ಮುಂತಾದುವುಗಳಿಂದ ಬಿಡಲ್ಪಡುತ್ತಾನೆ ಎಂದರ್ಥ. ವಿಮುಕ್ತಶ್ಚ ವಿಮುಚ್ಯತೇ–ಜೀವಂತವಾಗಿರುವಾಗ ಆಧ್ಯಾತ್ಮಿಕ ಮುಂತಾದ ದುಃಖ–ರಾಗ–ದ್ವೇಷ ಮುಂತಾದುವುಗಳಿಂದ ಪಾರಾದವನಾಗಿ 'ಕರ್ಮಫಲವನ್ನು ಅನುಭವಿಸುವುದರಿಂದ ಪ್ರಾರಬ್ಧ ಕರ್ಮಗಳನ್ನು ಕಳೆದುಕೊಂಡು ಮುಕ್ತನಾಗಲು ಅರ್ಹನಾಗಿರುತ್ತಾನೆ' ಎಂಬ ನ್ಯಾಯದಿಂದ ಪ್ರಾರಬ್ಧಕರ್ಮವು ಮುಗಿಯಲಿಕ್ಕಾಗಿ ಅರ್ಚಿರಾದಿಮಾರ್ಗದಿಂದ ವಿರಜಾನದಿಯನ್ನು ಸೇರಿ ಪ್ರಕೃತಿಸಂಬಂಧದಿಂದ ಪಾರಾಗುತ್ತಾನೆ. ಏತದ್ವೈ ತತ್-ಈ ಮಂತ್ರದಲ್ಲಿ ಹೇಳಿದ ಮುಕ್ತಸ್ವರೂಪವೂ ಪರಮಾತ್ಮನನ್ನೇ ಆತ್ಮವಾಗಿವುಳ್ಳದ್ದು ಎಂದರ್ಥ.

ಭಾಷ್ಯಸಾರ

ಪರಮಾತ್ಮತತ್ತ್ವವನ್ನು ತಿಳಿಯುವುದು ಕಷ್ಟ. ಆದುದರಿಂದ ಪುನಃ ಅದನ್ನು ವಿವರಿಸಲು 'ಪುರಮ್' ಎಂದು ಆರಂಭಿಸುತ್ತಾನೆ. ಈ ಶರೀರವು ಪಟ್ಟಣಕ್ಕೆ ಸಮವಾದುದು. ಆದುದರಿಂದ ಶರೀರವನ್ನು 'ಪುರ' ಎಂದು ಹೇಳಿದೆ. ಈ ಸಮಾನತೆಯು ದ್ವಾರ, ಪ್ರಾಕಾರ, ದ್ವಾರಪಾಲಕರಿಂದ ಉಂಟಾಗಿದೆ. ನಗರ ನಿರ್ಮಾಣಮಾಡುವವನು ನಗರಗಳಿಗೆ ದ್ವಾರಗಳನ್ನು ನಿರ್ಮಿಸುತ್ತಾನೆ: ಅದರಂತೆ ಶರೀರದಲ್ಲೂ ದ್ವಾರಗಳಿವೆ ಕಣ್ಣು ಎರಡು, ಕಿವಿ ಎರಡು, ಮೂಗಿನ ದ್ವಾರ ಎರಡು, ಬಾಯಿ ಒಂದು ಹೀಗೆ ಮುಖದಲ್ಲಿ ಏಳು ದ್ವಾರಗಳಿವೆ. ನಾಭಿ, ಗುದದ್ವಾರ, ಮತ್ತು ಜನನೇಂದ್ರಿಯವೆಂಬ ಮೂರು ದ್ವಾರಗಳು ಕೆಳಭಾಗದಲ್ಲಿವೆ. ತಲೆಯ ನೆತ್ತಿಯಲ್ಲಿ ಒಂದು ದ್ವಾರ, ಹೀಗೆ ಈ ಶರೀರವೆಂಬ ಪುರಕ್ಕೆ ಹನ್ನೊಂದು ದ್ವಾರಗಳಿವೆ.

ನಗರದ ದ್ವಾರಗಳಲ್ಲಿ ಪಾಲಕರಿರುವಂತೆ ಈ ಕಣ್ಣು ಮುಂತಾದುವುಗಳಲ್ಲಿ ಇಂದ್ರಿಯಗಳ ಅಧಿದೇವತೆಗಳಾಗಿ ನೆಲೆಸಿರುವ ಆದಿತ್ಯ ಮುಂತಾದವರೇ ದ್ವಾರಪಾಲಕರು. ಅಂತೆಯೇ ಪುರದಲ್ಲಿ ಪ್ರಾಕಾರಗಳಿರುವಂತೆ, ಈ ಶರೀರಕ್ಕೂ ಚರ್ಮ–ಮಾಂಸ–ರಕ್ತ–ಮಜ್ಜಾ ಮೇದಸ್ಸು ಮೂಳೆ–ಸ್ನಾಯುಗಳೆಂಬ ಏಳು ಪ್ರಾಕಾರಗಳಿವೆ. ಹೀಗೆ ನಗರಕ್ಕಿರಬೇಕಾದ ಸಾಧನಗಳು ಶರೀರದಲ್ಲೂ ಇರುವುದರಿಂದ ಈ ಶರೀರವನ್ನು ಪುರವೆಂದು ಹೇಳಿದೆ.

ಜೀವನು ಈ ಶರೀರದಲ್ಲಿ ಅಭಿಷಿಕ್ತನಾದ ಒಡೆಯನು. ಅಲ್ಲಿ–ಇಲ್ಲಿರುವ ವಿಷಯಗಳನ್ನು ತಂದು ಜೀವನಿಗೆ ಒಪ್ಪಿಸುವ ಇಂದ್ರಿಯಗಳು ಪೌರರು. ಈ ಜೀವನೆಂಬ ಒಡೆ

ಯನು ಈ ಪೌರರಿಂದ ನೇಮಿಸಲ್ಪಡುತ್ತಾನೆ. ಈ ಶರೀರವನ್ನು ಪುರವೆಂದೂ, ಇಂದ್ರಿಯಗಳನ್ನು ಪೌರರೆಂದೂ ಅರಿತವನು ಇವುಗಳಿಗಿಂತ ವಿಲಕ್ಷಣನಾದ ಜೀವನನ್ನು ಅವುಗಳಿಗಿಂತ ಭಿನ್ನನೆಂದು ತಿಳಿದೇ ತಿಳಿಯುತ್ತಾನೆ. ಆದರೆ ಇಷ್ಟರಿಂದಲೇ ಕೃತಕೃತ್ಯತೆ ಉಂಟಾಗಲಾರದು. ಈ ಶರೀರವೆಂಬ ನಗರದಲ್ಲಿ ಜೀವನನ್ನು ಅಭಿಷೇಕಮಾಡಿದವನನ್ನೂ ತಿಳಿಯಬೇಕು ಆತನು ಜನನ-ಮರಣಗಳಿಲ್ಲದವನೂ ವಿಕಾರರಹಿತನೂ ಆದವನು ಪರಮಾತ್ಮನು. ಜೀವನಿಗೆ ಕರ್ಮಫಲಸಂಬಂಧವೆಂಬ ಉಪಾಧಿಯ ಮೂಲಕ ಜನ್ಮಸಂಬಂಧವುಂಟು. ಪರಮಾತ್ಮನಿಗೆ ಉಪಾಧಿ ಮೂಲಕವಾದ ಜನ್ಮಸಂಬಂಧವಿರುವುದಿಲ್ಲ. ಆದುದರಿಂದ ಪರಮಾತ್ಮನನ್ನು 'ಅಜ' ಎಂದು ಹೇಳುತ್ತಾರೆ. ಕರ್ಮದಿಂದ ಜೀವನಿಗೆ ಜ್ಞಾನಸಂಕೋಚ ಉಂಟಾಗುವುದು. ಜೀವನು ಜ್ಞಾನಸಂಕೋಚವಾಗುವುದರಿಂದ ವಕ್ರಚೇತಸ್ ಎನಿಸುವನು. ಪರಮಾತ್ಮನಾದರೋ ಯಾವಾಗಲೂ ಸಂಕೋಚಹೊಂದದ ಜ್ಞಾನವುಳ್ಳವನು. ಆದುದರಿಂದ ಅವಕ್ರಚೇತಾಃ ಎಂದು ಹೇಳುತ್ತಾರೆ. ಇಲ್ಲಿ ಚೇತಃ ಎಂಬ ಶಬ್ದವು ಲಕ್ಷಣೆಯಿಂದ ಜ್ಞಾನವನ್ನು ತಿಳಿಸುತ್ತದೆ.

ಈ ಶರೀರವೆಂಬ ನಗರಕ್ಕೆ ಜೀವನನ್ನು ಪ್ರಭುವಾಗಿ ನೇಮಿಸಿದ ಪರಮಾತ್ಮನನ್ನು ಚೆನ್ನಾಗಿ ಅರಿಯಬೇಕು, ಹನ್ನೊಂದು ದ್ವಾರಗಳಿಂದ ಕೂಡಿ ಪುರವೆನಿಸಿರುವ ಈ ಶರೀರವು 'ವಿಚಿತ್ರಾ ದೇಹಸಂಪತ್ತಿಃ ಈಶ್ವರಾಯ ನಿವೇದಿತುಮ್' ಎಂದು ಸ್ಮೃತಿಯಲ್ಲಿ ಹೇಳಿರುವಂತೆ ಯಾವಾಗಲೂ ಸಂಕೋಚಹೊಂದದಜ್ಞಾನವುಳ್ಳ ಪರಮಾತ್ಮನಿಗಾಗಿ ಎಂದು ತಿಳಿಯುವವನು ದುಃಖಕ್ಕೆ ಒಳಗಾಗುವುದಿಲ್ಲ. ಪರಮಾತ್ಮನು ಈ ಜನರಲ್ಲಿ ದಯೆಯುಳ್ಳವನಾಗಿ ತನ್ನನ್ನು ಆರಾಧಿಸಿ ಉದ್ಧಾರವಾಗಲೆಂದೇ ಚೇತನರಿಗೆ ಶರೀರ ಇಂದ್ರಿಯಾದಿಗಳನ್ನು ಕೊಟ್ಟನು. ಕೆಲವು ಅದೃಷ್ಟಹೀನರು ಈ ವಿಷಯವನ್ನು ತಿಳಿಯದೆ ದೇಹವನ್ನೇ ಆತ್ಮವೆಂದು ಭ್ರಮಿಸಿದರು. ಮತ್ತೆ ಕೆಲವರು ಈ ಜೀವ ಸ್ವತಂತ್ರವೆಂದು ಭ್ರಮಿಸಿದರು. ಇವರು ಖಂಡಿತ ನಾಶಹೊಂದುತ್ತಾರೆ. ಯಾವನು ಆತ್ಮದ ನಿಜಸ್ವರೂಪವನ್ನು ತಿಳಿಯುತ್ತಾನೋ, ಪರಮಾತ್ಮನು ಜೀವನಿಗೆ ಈ ಶರೀರ ಇಂದ್ರಿಯಗಳನ್ನು ಕೊಟ್ಟಿರುವನು ಎಂಬುದಾಗಿ ತಿಳಿಯುತ್ತಾನೋ, ಈ ಶರೀರ ಇಂದ್ರಿಯಗಳ ಎಲ್ಲ ವ್ಯಾಪಾರವೂ ಪರಮಾತ್ಮನ ಆರಾಧನಾರೂಪವೆಂದು ಭಾವಿಸಿ ಮಾಡುವನೋ, ಅವನು ಎಲ್ಲ ದುಃಖಗಳಿಂದಲೂ ಪಾರಾಗುತ್ತಾನೆ. ಇದನ್ನೇ 'ಪುರಂ......................ವಿಮುಚ್ಯತೇ' ಎಂಬಲ್ಲಿ ಹೇಳಿದೆ. ಅಂದರೆ ಇಲ್ಲೇ ಈ ಶೋಕಕ್ಕೆ ಕಾರಣವಾದ ರಾಗ-ದ್ವೇಷಾದಿಗಳಿಂದ ಪಾರಾಗಿ, ಈ ಶರೀರದ ಅವಸಾನಕಾಲದಲ್ಲಿ ಪ್ರಕೃತಿಸಂಬಂಧದಿಂದ ಬಿಡಲ್ಪಟ್ಟವನಾಗುತ್ತಾನೆ. ಪುನಃ ಈ ಶರೀರಸಂಬಂಧವನ್ನು ಹೊಂದುವುದಿಲ್ಲ. ಅರ್ಚಿರಾದಿಮಾರ್ಗದಿಂದ ಪರಮಪದವನ್ನು ಸೇರಿ ಮುಕ್ತನಾಗುತ್ತಾನೆ. ಹೀಗೆ ಯಾವ ಪರಮಾತ್ಮನ ಆರಾಧನೆಯಿಂದ ಜೀವನು ಮುಕ್ತನಾಗುತ್ತಾನೋ ಆ ಪರಮಾತ್ಮಸ್ವರೂಪವೇ ಹಿಂದೆ ಹೇಳಿದ ಪರಮಾತ್ಮತತ್ತ್ವ ಎಂದರ್ಥ.

ಅಥವಾ ಎಲ್ಲ ಅನರ್ಥಗಳಿಗೂ ಆಸೆಯೇ ಮೂಲಕಾರಣ. ಈ ಆಸೆಯು ದೇಹಾತ್ಮಾಭಿಮಾನದಿಂದ ಮೂಡುತ್ತದೆ. ಆದುದರಿಂದ ತತ್ತ್ವವೇನೆಂಬುದನ್ನು ಚಿಂತಿಸಬೇಕು. ವಸ್ತುತಃ ಆತ್ಮಕ್ಕೆ ಹುಟ್ಟಿಲ್ಲ. ಶರೀರವು ಹುಟ್ಟುತ್ತದೆ. ಆದುದರಿಂದ ಆತ್ಮ ಶರೀರಕ್ಕಿಂತ ಭಿನ್ನ. ಶರೀರ ಜಡವಸ್ತು. ಆತ್ಮವು ಜ್ಞಾನಸ್ವರೂಪಿ. ಆದುದರಿಂದ ಆತ್ಮನಿಗೆ ದೇವ-ಮನುಷ್ಯ ಮುಂತಾದ ಪ್ರಕೃತಿಯ ವಿಕಾರವಿಲ್ಲ. ಇದರಿಂದ ಆತ್ಮನು ಶರೀರಕ್ಕಿಂತಲೂ ತೀರ ಭಿನ್ನನು.

ಪುರದೊಡೆಯನು ಪುರದಿಂದ ಹೇಗೆ ಭಿನ್ನನೋ ಹಾಗೆಯೇ ಶರೀರದೊಡೆಯನಾದ ಜೀವನು ಶರೀರಕ್ಕಿಂತ ಭಿನ್ನನು. ಈ ವಿಷಯ ಶಾಸ್ತ್ರದಿಂದ ಎಲ್ಲರಿಗೂ ತಿಳಿಯುತ್ತದೆ. ಆದರೆ ಅನುಷ್ಠಾನದಲ್ಲಿ ಕಾಣುವುದಿಲ್ಲ. ಈ ಅಂಶವನ್ನು ತಿಳಿಯಬೇಕೆಂಬುದನ್ನೂ ತಿಳಿಯಲೋಸುಗವೇ 'ಅನುಷ್ಠಾಯ' ಎಂದು ಹೇಳಿದೆ. ಈ ವಿಷಯವನ್ನು ತಿಳಿದವನಿಗೆ ದೇಹವೇ ಆತ್ಮ ಎಂಬ ಅಭಿಮಾನ ದೂರವಾಗುತ್ತದೆ. ಇದರಿಂದ ಆತ್ಮನು ಯಾವ ದುಃಖಕ್ಕೂ ಒಳಗಾಗುವುದಿಲ್ಲ. ಅಂದರೆ ಈ ಶರೀರವೆಂಬ ಪುರದೊಡೆಯನು ಜನ್ಮಾದಿವಿಕಾರರಹಿತನೂ, ಕುಟಿಲ ಬುದ್ಧಿ ಇಲ್ಲದ ವಿವೇಕವುಳ್ಳವನು ಎಂದರ್ಥ. ಈತನು ರಾಗದ್ವೇಷಾದಿಗಳಿಂದ ಪಾರಾಗಿ, ಪ್ರಕೃತಿಸಂಬಂಧವನ್ನು ಕಳೆದುಕೊಂಡು ದುಃಖರಹಿತನಾಗುತ್ತಾನೆ. ಅನಂತರ ಮೋಕ್ಷವನ್ನು ಪಡೆಯುತ್ತಾನೆ. ಇಲ್ಲಿ ಅಜನ್ಯ–ಅವಕ್ರಚೇತಸಃ ಎಂಬ ಪದಗಳಿಗೆ ಜೀವಪರವಾಗಿ ಅರ್ಥಮಾಡಿದೆ ಈ ಜೀವಪರವಾದ ಅರ್ಥದಲ್ಲಿ 'ಏತದ್ವೈ ತತ್' ಎಂಬುದಕ್ಕೆ ಈ ರೀತಿ ಮುಕ್ತನಾದವನ ಆತ್ಮಸ್ವರೂಪವೂ ಆ ಪರಮಾತ್ಮನನ್ನೇ ಆತ್ಮವಾಗಿವುಳ್ಳದ್ದು ಎಂದು ತಾತ್ಪರ್ಯ.



## ಮಂತ್ರ ೫

हँसः शुचिषत् वसुरन्तरिक्षसद्धोतावेदिषदतिथिर्दुरोणसत् ।
नृषत् वरसत् ऋतसत् व्योमसत् अब्जा गोजा ऋतजा अद्रिजा ऋतं बृहत् ॥

ಹಂಸಃ ಶುಚಿಷತ್ ವಸುರಂತರಿಕ್ಷಸದ್ಧೋತಾ
ವೇದಿಷದತಿಥಿರ್ದುರೋಣಸತ್ |
ನೃಷತ್ ವರಸತ್ ಋತಸತ್ ವ್ಯೋಮಸದಬ್ಜಾ ಗೋಜಾ
ಋತಜಾ ಅದ್ರಿಜಾ ಋತಂ ಬೃಹತ್ ||

### ಪ್ರತಿಪದಾರ್ಥ

ಶುಚಿಷತ್—ಗ್ರೀಷ್ಮಋತುವಿನಲ್ಲಿರುವ, ಹಂಸಃ—ಸೂರ್ಯನು, ಅಂತರಿಕ್ಷಸತ್—ಆಕಾಶದಲ್ಲಿರುವ, ವಸುಃ—ವಾಯುವು, ವೇದಿಷತ್—ಯಜ್ಞವೇದಿಕೆಗಳಲ್ಲಿರುವ, ಹೋತಾ—ಅಗ್ನಿಯು, ದುರೋಣಸತ್—ಮನೆಯಲ್ಲಿರುವ, ಅತಿಥಿಃ—ಅತಿಥಿಯು, ನೃಷತ್—ಮನುಷ್ಯಶರೀರದಲ್ಲಿರುವವನು, ವರಸತ್—ದೇವತೆಗಳಲ್ಲಿ ಇರುವವನು, ಋತಸತ್—ಸತ್ಯಲೋಕದಲ್ಲಿ ಇರುವವನು, ವ್ಯೋಮಸತ್—ಪರಮಪದದಲ್ಲಿ ಇರುವವನು ಅಬ್ಜಾಃ—ನೀರಿನಲ್ಲಿ ಹುಟ್ಟಿರುವ ಶಂಖಾದಿಗಳು, ಗೋಜಾಃ—ಭೂಮಿಯಲ್ಲಿ ಹುಟ್ಟಿರುವ ತೃಣಾದಿಗಳು ಋತಜಾಃ—ಆಕಾಶದಲ್ಲಿ ಹುಟ್ಟಿದ ಶಬ್ದಾದಿಗಳು, ಅದ್ರಿಜಾಃ—ಪರ್ವತದಲ್ಲಿ ಹುಟ್ಟಿದ ನದಿ ಮುಂತಾದವುಗಳು (ಈ ಚೇತನಾಚೇತನರೂಪವಾದ ಎಲ್ಲ ಜಗತ್ತೂ), ಬೃಹತ್—ಅಪರಿಚ್ಛಿನ್ನವಾದ (ಅಳತೆಗೆ ಸಿಕ್ಕದಿರುವ) ಋತಮ್—ಸತ್ಯಸ್ವರೂಪ ಪರಬ್ರಹ್ಮವನ್ನೇ ಆತ್ಮವಾಗಿವುಳ್ಳದ್ದು.

### ತಾತ್ಪರ್ಯ

ಭಗವಂತನ ಸರ್ವಾಂತರ್ವರ್ತಿತ್ವವನ್ನು ವಿಶದಪಡಿಸುತ್ತದೆ. ಇವನು ಗ್ರೀಷ್ಮಋತುವಿನಲ್ಲಿ ಸೂರ್ಯ, ಆಕಾಶದಲ್ಲಿರುವ ವಾಯು, ಯಜ್ಞವೇದಿಕೆಗಳಲ್ಲಿರುವ ಅಗ್ನಿ, ಮನೆಗೆ ಬಂದ ಅತಿಥಿ, ಮನುಷ್ಯಹೃದಯದಲ್ಲಿ ಇರುವವನು, ದೇವತೆಗಳಲ್ಲಿ ಇರುವವನು ಹಾಗೂ ನೀರಿನಲ್ಲಿ ಹುಟ್ಟಿರುವ ಶಂಖಾದಿಗಳು, ಭೂಮಿಯಲ್ಲಿ ಹುಟ್ಟಿರುವ ತೃಣಾದಿಗಳೂ, ಆಕಾಶದಲ್ಲಿ ಹುಟ್ಟಿದ ಶಬ್ದಾದಿಗಳು, ಪರ್ವತದಲ್ಲಿ ಹುಟ್ಟಿದ ನದಿ ಮುಂತಾದವುಗಳು ಈ ಎಲ್ಲ ಚೇತನಾಚೇತನಗಳಿಗೂ ಅಪರಿಚ್ಛಿನ್ನವಾದ ಪರಬ್ರಹ್ಮವೇ ಅಂತರ್ಯಾಮಿಯಾಗಿದೆ. ಅಂದರೆ ಪರಮಾತ್ಮನೇ ಅಂತರ್ಯಾಮಿಯಾಗಿ ಎಲ್ಲದರಲ್ಲೂ ಇದ್ದಾನೆಂದರ್ಥ.

### ರಂಗರಾಮಾನುಜಭಾಷ್ಯಮ್

ಪುನರಪ್ಯಸ್ಯ ಸರ್ವಾತ್ಮತಾಮೇವ ದ್ರಢಯತಿ–ಹಂಸಶ್ಶುಚಿಷತ್ ವಸುರಂತರಿಕ್ಷಸತ್ ಹೋತಾ ವೇದಿಷತ್ ಅತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ । ಹಂಸಃ–ಸೂರ್ಯಃ ಶುಚೌ–ಗ್ರೀಷ್ಮರ್ತೌ, ಸೀದತಿ–ವರ್ತತ ಇತಿ ಶುಚಿಷತ್ । ತೇಜಸ್ವೀತಿ ಯಾವತ್ । ವಾಸಯತೀತಿ ವಸುಃ–ವಾಯುಃ । ಅಂತರಿಕ್ಷಸತ್–ಅಂತರಿಕ್ಷಗತೋ ವಾಯುಃ । ಹೋತಾ ವೇದಿಷತ್–ವೇದ್ಯಾಂ ವರ್ತಮಾನಃ ಋತ್ವಿಗ್ವಿಶೇಷಃ ; ಅಗ್ನಿರ್ವಾ । ಅತಿಥಿರ್ದುರೋಣಸತ್–ದುರೋಣಮ್–ಗೃಹಮ್,

ಗೃಹಾಗತೋಽತಿಥಿಃ । ನೃಷತ್–ನೃಷು ಆತ್ಮತಯಾ ವರ್ತಮಾನಮ್, ವರಸತ್–ವರೇಷು ಚ ತಥಾ ವರ್ತಮಾನಮ್, ಋತೇ–ಸತ್ಯಲೋಕೇ ಸೀದತೀತಿ ಋತಸತ್, ವ್ಯೋಮಸತ್–ವ್ಯೋಮ್ನಿ–ಪರಮಪದೇ ವರ್ತಮಾನಂ ಚ ಪ್ರತ್ಯಕ್ತತ್ತ್ವಮ್ ; ಅಬ್ಜಾಃ–ಜಲಜಾಃ, ಗೋಜಾಃ–ಭೂಜಾಃ ಋತಜಾಃ–ಯಜ್ಞೋತ್ಪನ್ನಾಃ ಕರ್ಮಫಲಭೂತಾಶ್ಚ ಸ್ವರ್ಗಾದಯಃ (ಇತಿ ಯಾವತ್) । ಯದ್ವಾ ಚಿರಕಾಲಸ್ಥಾಯಿತಯಾ ಋತಶಬ್ದಿತಾಕಾಶಜಾ ಇತ್ಯರ್ಥಃ । ಅದ್ರಿಜಾಃ–ಪರ್ವತಜಾಃ, ಏತತ್ ಸರ್ವಂ ಬೃಹತ್ ಋತಮ್–ಅಪರಿಚ್ಛಿನ್ನಸತ್ಯರೂಪ ಬ್ರಹ್ಮಾತ್ಮಕಮಿತ್ಯರ್ಥಃ ॥

## ಅನುವಾದ

ಪರಮಾತ್ಮನು ಎಲ್ಲದಕ್ಕೂ ಆತ್ಮನೆಂಬುದನ್ನು ಪುನಃ ದೃಢಪಡಿಸುತ್ತಾನೆ· ಹಂಸಶ್ಶುಚಿಷತ್.... ಋತಂ ಬೃಹತ್' ಹಂಸಃ–ಸೂರ್ಯನು, ಪರಿಶುದ್ಧವಾದ ಗ್ರೀಷ್ಮಋತು ವಿವಲ್ಲಿ ಸೀದತಿ–ಇದ್ದಾನೆ ಎಂದು ಶುಚಿಷತ್–ತೇಜಸ್ವಿ ಎಂದರ್ಥ. ವಾಸಿಸುತ್ತಾನೆ ಎಂದು ವಸುಃ–ವಾಯುವು, ಅಂತರಿಕ್ಷಸತ್–ಅಂತರಿಕ್ಷದಲ್ಲಿರುವ ವಾಯು ಹೋತಾವೇದಿಷತ್–ಯಜ್ಞ ವೇದಿಕೆಯಲ್ಲಿರುವ ಒಬ್ಬ ಋತ್ವಿಕ್ ಅಥವಾ ಅಗ್ನಿ, ಅತಿಥಿರ್ದುರೋಣಸತ್ (ದುರೋಣಮ್ ಮನೆ) ಮನೆಗೆ ಬಂದ ಅತಿಥಿ, ನೃಷತ್ ಮಾನವಶರೀರದಲ್ಲಿರುವವ. ವರಸತ್–ವರೇಷು–ದೇವತೆಗಳಲ್ಲಿ ಇರುವವ, ಋತೇ–ಸತ್ಯಲೋಕದಲ್ಲಿ ಸೀದತಿ–ಇರುತ್ತಾರೆ ಎಂದು ಋತಸತ್. ಸತ್ಯಲೋಕದಲ್ಲಿರುವ ಮತ್ತು ವ್ಯೋಮಸತ್–ಪರಮಪದದಲ್ಲಿರುವ ಚೇತನತತ್ತ್ವವು, ಅಬ್ಜಾಃ ನೀರಿನಲ್ಲಿ ಹುಟ್ಟಿದ, ಗೋಜಾಃ–ಭೂಮಿಯಲ್ಲಿ ಹುಟ್ಟಿದ, ಋತಜಾಃ–ಯಜ್ಞದಲ್ಲಿ ಜನಿಸಿದ ಕರ್ಮಫಲರೂಪವಾದ ಸ್ವರ್ಗಾದಿಗಳು ಅಥವಾ ಬಹಳಕಾಲ ಇರುವುದರಿಂದ 'ಋತ್' ಶಬ್ದದಿಂದ ಹೇಳಲ್ಪಟ್ಟ ಆಕಾಶದಲ್ಲಿ ಹುಟ್ಟಿದ ಎಂದರ್ಥ. ಅದ್ರಿಜಾಃ–ಪರ್ವತದಲ್ಲಿ ಹುಟ್ಟಿದ ಈ ಎಲ್ಲವೂ ಬೃಹತ್ ಋತಮ್–ಅಪರಿಚ್ಛಿನ್ನವೂ, ಸತ್ಯವೂ ಆದ ಬ್ರಹ್ಮವೇ ಆತ್ಮವಾಗಿ ಉಳ್ಳವು ಎಂದರ್ಥ.

## ಭಾಷ್ಯಸಾರ

ಚಿತ್–ಅಚಿತ್‌ರೂಪವಾದ ಎಲ್ಲ ವಸ್ತುಗಳೂ ಪರಮಾತ್ಮನನ್ನು ಆತ್ಮವಾಗಿವುಳ್ಳವು ಎಂಬುದನ್ನು 'ಹಂಸಃ' ಎಂಬ ಮಂತ್ರದಿಂದ ತಿಳಿಸುತ್ತಾನೆ.

ಶುಚಿಯಾದ ಆಕಾಶದಲ್ಲಿರುವ ಸೂರ್ಯನೂ, ಆಕಾಶದಲ್ಲಿ (ಅಂದರೆ ಪ್ರದೇಶವಿಶೇಷ ದಲ್ಲಿರುವ) ವಾಯುವೂ, 'ಅಗ್ನಿರ್ವೈ ಹೋತಾ ಇಯಂ ವೇದಿಃ ಪರೋಽನ್ತಃ ಪೃಥಿವ್ಯಾಃ' ಎಂಬಂತೆ ವೇದಿಯ ಮೇಲ್ಭಾಗದಲ್ಲಿರುವ ಋತ್ವಿಕ್ ಅಥವಾ ವೇದಿಯಲ್ಲಿರುವ ಅಗ್ನಿಯೂ, ಕಲಶಗಳಲ್ಲಿರುವ ಚಂದ್ರ ಅಥವಾ ಮನೆಗೆ ಬಂದ ಅತಿಥಿಯೂ, ಮನುಷ್ಯಯೋನಿ ಮತ್ತು ದೇವಯೋನಿಗಳಲ್ಲಿ ಜನಿಸಿದ ದೇವಮನುಷ್ಯರೂ ಸತ್ಯಲೋಕದಲ್ಲಿರುವವನೂ ಅಥವಾ ಯಜ್ಞದಲ್ಲಿರುವ ಯಜಮಾನನೂ ಪರಮಪದದಲ್ಲಿರುವ ಮುಕ್ತಾತ್ಮನೂ ಈ ಎಲ್ಲರೂ ಈ ಪರಮಾತ್ಮನನ್ನೇ ಆತ್ಮವಾಗಿ ಉಳ್ಳವರು.

ನೀರಿನಲ್ಲಿ ಹುಟ್ಟಿದ ಶಂಖ, ಮೊಸಳೆ ಮುಂತಾದವುಗಳೂ, ಭೂಮಿಯಲ್ಲಿ ಹುಟ್ಟಿದ ಭತ್ತ, ಗೋಧಿ ಮೊದಲಾದ ಔಷಧಿದ್ರವ್ಯಗಳೂ, ಋತಜಾಃ–ಋತ ಅಂದರೆ ಸತ್ಯ, ಆಕಾಶವು

ಸ್ಥಿರವಾದುದರಿಂದ ಸತ್ಯವೆನಿಸಿದೆ. ಆದುದರಿಂದ ಆಕಾಶದಲ್ಲಿ ಹುಟ್ಟಿದವುಗಳೂ, ಅಥವಾ [1]ಯಜ್ಞದಿಂದ ಉಂಟಾದ ಸ್ವರ್ಗಾದಿಫಲಗಳೂ, ಪರ್ವತಗಳಲ್ಲಿ ಹುಟ್ಟಿದ ನದಿ ಮೊದಲಾದವುಗಳೂ ಈ ಎಲ್ಲವೂ 'ಸತ್ಯಂಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಹೇಳಿರುವ ಋತ ಶಬ್ದವಾಚ್ಯವಾದ ಬ್ರಹ್ಮವನ್ನೇ ಆತ್ಮವಾಗಿ ಉಳ್ಳವುಗಳು. ಆದುದರಿಂದ ಇವು ಮಹತ್ತರವಾದವುಗಳು. ಹೀಗೆ ಸೂರ್ಯನಿಂದ ಹಿಡಿದು ಪರ್ವತದಲ್ಲಿ ಉಂಟಾದವುಗಳವರೆಗೂ ಹೇಳಿದ ಎಲ್ಲಕ್ಕೂ ಬ್ರಹ್ಮವೇ ಆತ್ಮವಾಗಿದೆ. ಹೀಗೆ ಪರಮಾತ್ಮನಿಗೆ ಎಲ್ಲವೂ ಶರೀರವಾಗಿದೆ ಎಂದು ಹೇಳಿದಂತಾಯಿತು.



1 ರಾಮಾನಂದರು 'ಋತಜಾಃ' ಎಂಬುದಕ್ಕೆ ಯಜ್ಞದಿಂದುಂಟಾದ ಫಲಗಳೂ ಎಂದು ಅರ್ಥಮಾಡಿದ್ದಾರೆ.

## ಮಂತ್ರ ೩

**ऊर्ध्वं प्राणमुन्नयत्यपानं प्रत्यगस्यति ।**
**मध्ये वामनमासीनं विश्वे देवा उपासते ॥**

ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।
ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥

### ಪ್ರತಿಪದಾರ್ಥ

(ಯಃ—ಯಾವ ಪರಮಾತ್ಮನು), ಪ್ರಾಣಮ್—(ಉಪಾಸಕನ ದೇಹದಲ್ಲಿರುವ) ಪ್ರಾಣವಾಯುವನ್ನು, ಊರ್ಧ್ವಮ್—ಊರ್ಧ್ವಮುಖವಾಗಿ, ಉನ್ನಯತಿ—ಒಯ್ಯುತ್ತಾನೋ, ಅಪಾನಮ್—ಅಪಾನವಾಯು ವನ್ನು, ಪ್ರತ್ಯಗಸ್ಯತಿ—ಕೆಳಮುಖವಾಗಿ ತಳ್ಳುತ್ತಾನೋ, ಮಧ್ಯೇ—ದೇಹಮಧ್ಯದಲ್ಲಿರುವ ಹೃತ್ಕಮಲದಲ್ಲಿ, ಆಸೀನಮ್—ಕುಳಿತಿರುವ, ವಾಮನಂ—ಮನೋಜ್ಞವಾದಗುಣಗಳುಳ್ಳಂತಹ ಪರಮಾತ್ಮನನ್ನು, ದೇವಾಃ—ಶುದ್ಧಸತ್ತ್ವಗುಣಗಳುಳ್ಳ, ವಿಶ್ವೇ—ಎಲ್ಲ ಜ್ಞಾನಿಗಳೂ, ಉಪಾಸತೇ—ಉಪಾಸಿಸುತ್ತಾರೆ.

### ತಾತ್ಪರ್ಯ

ಪರಮಾತ್ಮನು ಪ್ರಾಣವಾಯುವನ್ನು ಮೇಲಕ್ಕೆ ಹೋಗುವಂತೆಯೂ, ಅಪಾನವಾಯು ವನ್ನು ಕೆಳಮುಖವಾಗಿ ಹೋಗುವಂತೆಯೂ ಮಾಡುತ್ತಾನೆ. ಹೃದಯಕಮಲದಲ್ಲಿ ಕುಳಿತಿರುವ ಸುಂದರವಿಗ್ರಹವಿಶಿಷ್ಟನಾದ ಅಂತಹ ಪರಮಾತ್ಮನನ್ನು ಶುದ್ಧಸತ್ವಗುಣವುಳ್ಳ ಎಲ್ಲ ಜ್ಞಾನಿಗಳೂ ಉಪಾಸಿಸುತ್ತಾರೆ.

### ರಂಗರಾಮಾನುಜಭಾಷ್ಯಮ್

ಊರ್ಧ್ವಂ ಪ್ರಾಣಮುನ್ನಯತಿ । ಸರ್ವೇಷಾಂ ಹೃದಯಗತಃ ಪರಮಾತ್ಮಾ ಪ್ರಾಣ ವಾಯುಮೂರ್ಧ್ವಮುಖಮುನ್ನಯತಿ । ಅಪಾನಂ ಪ್ರತ್ಯಕ್ ಅಸ್ಯತಿ । ಅಪಾನವಾಯು ಮಧೋಮುಖಂ ಕ್ಷಿಪತಿ । ಮಧ್ಯೇ ವಾಮನಮಾಸೀನಮ್ । ಹೃದಯಪುಂಡರೀಕಮಧ್ಯೇ ಆಸೀನಂ ವಾಮನಮ್–ವನನೀಯಮ್, ಭಜನೀಯಮ್ । ಅಥವಾ ಹೃದಯಪುಂಡರೀಕ ಪರಿಮಿತತಯಾ ಹ್ರಸ್ವಪರಿಮಾಣಮಿತ್ಯರ್ಥಃ । ವಿಶ್ವೇ ದೇವಾ ಉಪಾಸತೇ । ತಂ (ದೇವಾಃ) ಸತ್ತ್ವಪ್ರಕೃತಯಃ, (ವಿಶ್ವೇ)–ಸರ್ವೇಽಪಿ ಉಪಾಸತ ಇತ್ಯರ್ಥಃ ।

### ಅನುವಾದ

ಊರ್ಧ್ವಂ ಪ್ರಾಣಮುನ್ನಯತಿ ಎಲ್ಲರ ಹೃದಯದಲ್ಲಿರುವ ಪರಮಾತ್ಮನು ಪ್ರಾಣ ವಾಯುವನ್ನು ಮೇಲ್ಮುಖವಾಗಿ ಹೋಗುವಂತೆ ಮಾಡುತ್ತಾನೆ. ಅಪಾನಂ ಪ್ರತ್ಯಕ್ ಅಸ್ಯತಿ ಅಪಾನವಾಯುವನ್ನು ಕೆಳಮುಖವಾಗಿ ಹೋಗುವಂತೆ ಮಾಡುತ್ತಾನೆ. ಮಧ್ಯೇ ವಾಮನ ಮಾಸೀನಮ್ ಹೃದಯಕಮಲದ ಮಧ್ಯದಲ್ಲಿ ನೆಲೆಸಿರುವ ವಾಮನಮ್–ವರಣೀಯನಾದ, ಅಂದರೆ ಪೂಜಾರ್ಹನಾದ ಅಥವಾ ಹೃದಯಕಮಲದ ಪರಿಮಾಣಕ್ಕೆ ಅನುಗುಣವಾಗಿ ಅಲ್ಪ ಪರಿಮಾಣದಿಂದ ಕೂಡಿದ ಎಂದರ್ಥ. ವಿಶ್ವೇ ದೇವಾ ಉಪಾಸತೇ ಆತ್ಮನನ್ನು (ಪರಮಾತ್ಮ ನನ್ನು) ಸತ್ವಗುಣಪ್ರಧಾನರಾದ ಎಲ್ಲರೂ ಉಪಾಸಿಸುತ್ತಾರೆ ಎಂದರ್ಥ.

### ಭಾಷ್ಯಸಾರ

ಪರಮಾತ್ಮನ ಸ್ವರೂಪವನ್ನು ಸುಖವಾಗಿ ಅರಿಯಲು 'ಊರ್ಧ್ವಂ ಪ್ರಾಣಮ್' ಎಂಬ ಮಂತ್ರದಿಂದ ಉಪದೇಶಿಸುತ್ತಾನೆ.

ಪರಮಾತ್ಮನು ಶರೀರಮಧ್ಯದಲ್ಲಿರುವ ಹೃದಯಕಮಲದಲ್ಲಿದ್ದು ಪ್ರಾಣವಾಯುವನ್ನು ಮೇಲ್ಮುಖವಾಗಿ ಒಯ್ಯುತ್ತಾನೆ. ಅಪಾನವಾಯುವನ್ನು ಕೆಳಮುಖವಾಗಿ ತಳ್ಳುತ್ತಾನೆ. ಹೀಗೆ ಪ್ರಾಣಾಪಾನಗಳ ವ್ಯಾಪಾರವನ್ನು ವ್ಯವಸ್ಥೆಗೊಳಿಸುತ್ತಾ ಹೃದಯಕಮಲದಲ್ಲಿರುವ, ಆಶ್ರಯಿಸಲು ಅರ್ಹನಾದ ಪರಮಾತ್ಮನನ್ನು, ಅಥವಾ ಹೃದಯದ ಪರಿಮಾಣಕ್ಕೆ ಅನುಗುಣವಾಗಿ ಹ್ರಸ್ವಪರಿಮಾಣದಲ್ಲಿ ನೆಲೆಸಿರುವ ಪರಮಾತ್ಮನನ್ನು ಸತ್ತ್ವಪ್ರಕೃತಿಯುಳ್ಳವರೆಲ್ಲರೂ ಉಪಾಸಿಸುತ್ತಾರೆ. ಇಲ್ಲಿ 'ದೇವಾಃ' ಎಂಬ ಶಬ್ದವು ಸತ್ವಪ್ರಕೃತಿಯುಳ್ಳವರು ಎಂಬ ಅರ್ಥದಲ್ಲಿದೆ. ಉಪಾಸಕರೆಲ್ಲರಿಗೂ ಸೂಚಕವಾಗಿದೆ 'ದೇವಾಃ' ಎಂಬ ಶಬ್ದ.



## ಮಂತ್ರ ೪

**अस्य विस्रंसमानस्य शरीरस्थस्य देहिनः ।**
**देहाद्विमुच्यमानस्य किमत्र परिशिष्यते ॥ एतद्वै तत् ॥**

ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।
ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ॥
ಏತದ್ವೈ ತತ್ ॥

### ಪ್ರತಿಪದಾರ್ಥ

ಶರೀರಸ್ಥಸ್ಯ—ಶರೀರದಲ್ಲಿರುವ, ಅಸ್ಯ ದೇಹಿನಃ—(ಹಿಂದಿನ ಮಂತ್ರದಲ್ಲಿ ಹೇಳಿದ) ಉಪಾಸಕನಾದ ಜೀವನಿಗೆ, (ಅಥವಾ) ವಿಸ್ರಂಸಮಾನಸ್ಯ—ಶಿಥಿಲವಾದ ಶರೀರದಲ್ಲಿರುವ. (ಅಥವಾ) ದೇಹಾದ್ವಿಮುಚ್ಯಮಾನಸ್ಯ—ದೇಹದಿಂದ ಬಿಡಲ್ಪಡುತ್ತಿರುವ (ಉಪಾಸಕನಿಗಾದರೋ), ಅತ್ರ—ಈ ಲೋಕದಲ್ಲಿ ಕಿಂ ಪರಿಶಿಷ್ಯತೇ–(ಮಾಡಬೇಕಾದುದು) ಏನು ತಾನೆ ಉಳಿಯುತ್ತದೆ? ಏತತ್—ಈ ಜೀವಾತ್ಮಸ್ವರೂಪವು, ತದ್ವೈ—ಪರಮಾತ್ಮಾತ್ಮಕವೇ. (ಪರಮಾತ್ಮನನ್ನೇ ಆತ್ಮವಾಗಿ ಉಳ್ಳದ್ದು)

### ತಾತ್ಪರ್ಯ

ಯೌವನದಿಂದ ದೃಢವಾದ ಶರೀರದಲ್ಲಿರುವಾಗ ಅಥವಾ, ಮುಪ್ಪಿನಿಂದ ಶಿಥಿಲವಾದ ಶರೀರದಲ್ಲಿರುವಾಗ ಅಥವಾ ಈ ಶರೀರವನ್ನು ಬಿಟ್ಟು ಹೋಗುವಾಗ ಅಂದರೆ ಸಾಯುವ ಕಾಲದಲ್ಲಾಗಲೀ, ಉಪಾಸಕನಾದ ಈ ಜೀವನಿಗೆ ಮಾಡಬೇಕಾದುದು ಯಾವುದೂ ಇರುವುದಿಲ್ಲ. ಅಂದರೆ ಆತನು ಆಗಲೇ ಉಪಾಸನೆಯಿಂದ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವನು ಎಂದರ್ಥ. ಈ ಮಂತ್ರದಲ್ಲಿ ಹೇಳಿದ ಜೀವನಿಗೆ ಹಿಂದೆ ಹೇಳಿದ ಪರಮಾತ್ಮತತ್ತ್ವವೇ ಆತ್ಮವಾಗಿದೆ.

### ರಂಗರಾಮಾನುಜಭಾಷ್ಯಮ್

ಏವಂ ಪರಮಾತ್ಮಾನಮುಪಾಸೀನಸ್ಯ, 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ' (ಛಾಂ. ಉ. 6–14–2) ಇತಿ ಶ್ರುತ್ಯುಕ್ತರೀತ್ಯಾ ಶರೀರಪಾತ ಏವಾಂತರಾಯಃ; ನ ಕಿಂಚಿತ್ ಕರ್ತವ್ಯಂ ಪರಿಶಿಷ್ಯತ ಇತ್ಯಾಹ—ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ । ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ । ಅಸ್ಯ–ಉಪಾಸಕಸ್ಯ ದೇಹಿನಃ, ಶರೀರಸ್ಥಸ್ಯ–ಶರೀರ ಪ್ರತಿಷ್ಠಿತಸ್ಯ ; ದೃಢಶರೀರಸ್ಯೇತಿ ಯಾವತ್। ಏವಂಭೂತಸ್ಯ ವಾ, ವಿಸ್ರಂಸಮಾನಸ್ಯ–ಶಿಥಿಲೀ ಭವದ್ಗಾತ್ರಸ್ಯ ವಾ, ದೇಹಾದ್ವಿಮುಚ್ಯಮಾನಸ್ಯ–ಮ್ರಿಯಮಾಣಸ್ಯ ವಾ ಕಿಮತ್ರ ಪರಿಶಿಷ್ಯತೇ? ಕೃತಕೃತ್ಯತ್ವಾತ್ ಕರ್ತವ್ಯಂ ಕಿಮಪಿ ನಾವಶಿಷ್ಯತ ಇತಿ ಭಾವಃ । ಏತದ್ವೈತತ್–ಪೂರ್ವವತ್॥

### ಅನುವಾದ

ಹೀಗೆ ಪರಮಾತ್ಮನನ್ನು ಉಪಾಸನೆಮಾಡುವವನಿಗೆ 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ' (ಛಾಂ.ಉ. 6–14–2) ಎಂಬ ಶ್ರುತಿಯಲ್ಲಿ ಹೇಳಿರುವಂತೆ ಶರೀರವಿಯೆ ೦ಗವೇ

ಅಡ್ಡಿಯಾಗಿದೆ. ಅವನಿಗೆ ಮಾಡಬೇಕಾದ ಕರ್ತವ್ಯವಾವುದೂ ಉಳಿದಿಲ್ಲ ಎಂದು ಹೇಳುತ್ತಾನೆ. 'ಅಸ್ಯ ವಿಸ್ರಂಸಮಾನಸ್ಯ....ಕಿಮತ್ರ ಪರಿಶಿಷ್ಯತೇ'. ಅಸ್ಯ–ಉಪಾಸಕನಾದ ದೇಹಿನಃ, ಶರೀರಸ್ಥಸ್ಯ–ಶರೀರದಲ್ಲಿ ನೆಲೆಸಿರುವ ಅಂದರೆ ದೃಢವಾದ ಶರೀರವುಳ್ಳ. ಅಥವಾ ವಿಸ್ರಂಸಮಾನಸ್ಯ–ಶಿಥಿಲಗೊಂಡ ಶರೀರವುಳ್ಳ ಅಥವಾ, ದೇಹಾದ್ವಿಮುಚ್ಯಮಾನಸ್ಯ—ಮರಣ ಹೊಂದುವವನಿಗೆ (ಜೀವನಿಗೆ) ಇಲ್ಲಿ ಮಾಡಬೇಕಾದ ಕರ್ತವ್ಯವಾವುದಿದೆ ? ಮಾಡಬೇಕಾದುದೆಲ್ಲವನ್ನೂ ಮಾಡಿರುವುದರಿಂದ ಯಾವ ಕರ್ತವ್ಯವೂ ಉಳಿದಿಲ್ಲ ಎಂದು ತಾತ್ಪರ್ಯ. ಏತದ್ವೈ ತತ್–ಹಿಂದಿನಂತೆಯೇ ಅರ್ಥ.

## ಭಾಷ್ಯಸಾರ

'ಹಿಂದಿನ ಮಂತ್ರದಲ್ಲಿ ಹೇಳಿದಂತೆ ಪರಮಾತ್ಮನು ಪ್ರಾಣಾಪಾನಗಳ ಗತಿವ್ಯವಸ್ಥಾಪಕನು. ಇವನು ಹೃದಯಕಮಲದಲ್ಲಿ ನೆಲೆಸಿರುವನು. ಈ ಪರಮಾತ್ಮನನ್ನು ಉಪಾಸನೆಯಿಂದ ಸಾಕ್ಷಾತ್ಕಾರ ಮಾಡಿಕೊಂಡ ಜೀವನಿಗೆ ಇಲ್ಲಿ ಮಾಡಬೇಕಾದ ಕರ್ತವ್ಯವಾವುದೂ ಇಲ್ಲ. ಇಲ್ಲಿ 'ದೇಹಿನಃ' ಎಂಬ ವಿಶೇಷ್ಯಕ್ಕೆ 'ಶರೀರಸ್ಥಸ್ಯ' 'ವಿಸ್ರಂಸಮಾನಸ್ಯ' ಎಂಬ ಎರಡು ವಿಶೇಷಣಗಳಿವೆ. ಈ ಜೀವನು (ಯೌವನದ) ದೇಹದಲ್ಲಿ ದೃಢವಾಗಿಯೂ, ವೃದ್ಧಾಪ್ಯದಲ್ಲಿ ಶಿಥಿಲವಾಗಿಯೂ ಇರುವನು. ಈ ದೃಢತೆ-ಶಿಥಿಲತೆಗಳು ವಸ್ತುತಃ ಶರೀರದಲ್ಲಿವೆ. ಇದನ್ನು ಶರೀರದಲ್ಲಿರುವ ಜೀವನ ಸ್ಥಿತಿಯಲ್ಲಿ ಕಲ್ಪಿಸಲಾಗಿದೆ. ಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡಿರುವವನು ದೃಢವಾಗಿರಲಿ, ಶಿಥಿಲವಾಗಿರಲಿ ಅವನು ಮಾಡಬೇಕಾದುದು ಯಾವುದೂ ಇಲ್ಲ. ಇಷ್ಟೇ ಅಲ್ಲ ಅವನು ಸತ್ತರೂ ಹಾನಿಯಿಲ್ಲ ಎಂದು 'ದೇಹಾದ್ವಿಮುಚ್ಯಮಾನಸ್ಯ' ಎಂಬುದರಿಂದ ಹೇಳುತ್ತಾನೆ. ಸಾಕ್ಷಾತ್ಕಾರಮಾಡಿಕೊಂಡ ಉಪಾಸಕನು ಮರಣೋನ್ಮುಖನಾದರೂ, ಅವನಿಗೆ ಮಾಡಬೇಕಾದ ಕರ್ತವ್ಯವಾವುದೂ ಇಲ್ಲ ಎಂದು ತಾತ್ಪರ್ಯ. ಈ ಮಂತ್ರದಲ್ಲಿ ಹೇಳಿದ ಕರ್ತವ್ಯವಾವುದೂ ಉಳಿಯದ ಜೀವಾತ್ಮಸ್ವರೂಪವೂ ಹಿಂದೆ ಹೇಳಿದ ಪರಮಾತ್ಮತತ್ತ್ವವನ್ನೇ ಆತ್ಮವಾಗಿವುಳ್ಳದ್ದು' ಎಂದು ರಾಮಾನುಜರು ಹೇಳುತ್ತಾರೆ.

ಸುಬೋಧಿನೀಕಾರರು 'ಪ್ರಾಣಾಪಾನಗಳ ಗತಿವ್ಯವಸ್ಥಾಪಕನು ಜೀವಾತ್ಮನೇ. ಅವನಿಗಿಂತ ಭಿನ್ನನಾದವನಿಲ್ಲ ಎಂದಲ್ಲಿ 'ಅಸ್ಯ' ಎಂಬುದರಿಂದ ಉತ್ತರಿಸುತ್ತಾನೆ. 'ಶರೀರಸ್ಥಸ್ಯ ದೇಹಿನಃ' ಎಂಬಲ್ಲಿ 'ಅನಾದರ' ಎಂಬರ್ಥದಲ್ಲಿ ಷಷ್ಠೀವಿಭಕ್ತಿ ಬಂದಿದೆ. ಈ ಶರೀರದಲ್ಲಿ ಜೀವಾತ್ಮನಿರುವನು. ಇವನೇ ಶರೀರಕ್ಕೆ ಒಡೆಯನು. ಜೀವನು ತನ್ನ ಕರ್ಮದಿಂದಲೇ ಈ ಶರೀರವನ್ನು ಸಂಪಾದಿಸಿರುವನು. ತನ್ನ ವಾಸಕ್ಕೆ ನೆಲೆಯಾದ ಈ ಶರೀರವನ್ನು ರಕ್ಷಿಸಲು ಇಚ್ಛಿಸುತ್ತಾನೆ. ನಾಶಪಡಿಸಲು ಬಯಸುವುದಿಲ್ಲ. ಎಲ್ಲರೂ ಜೀವಿಸಲು ಅಪೇಕ್ಷಿಸುತ್ತಾರೆ ಎಂಬುದು ತಿಳಿದ ವಿಷಯ. ಆದರೂ ಈ ಜೀವನನ್ನು ಉದಾಸೀನವಾಗಿ ಕಂಡು ಪ್ರಾಣವು ಶರೀರದಿಂದ ಉತ್ಕ್ರಮಿಸಲು ಬಯಸುತ್ತದೆ. ಕೊನೆಯಲ್ಲಿ ಶರೀರದಿಂದ ಬೇರೆಯೂ ಆಗುತ್ತದೆ. ಪ್ರಾಣವು ಶಿಥಿಲಗೊಂಡು ಬೇರೆಯಾಗುವ ವಿಷಯದಲ್ಲಿ 'ಕಿಂ ಪರಿಶಿಷ್ಯತೇ' ಕಾರಣವಾವುದು ? ಎಂಬ ಬಗ್ಗೆ ಆಲೋಚಿಸಿರಿ !

'ಜೀವಾತ್ಮನೇ ಪ್ರಾಣಸಂಚಾರವ್ಯವಸ್ಥಾಪಕನೆಂದಲ್ಲಿ ಜೀವಿಸಲು ಬಯಸಿದರೂ ಅವನ ಪ್ರಾಣಗಳು ಶರೀರವನ್ನು ಬಿಟ್ಟು ಏಕೆ ಹೊರಡುತ್ತವೆ ? ಆದುದರಿಂದ ಪ್ರಾಣದ

ಉತ್ಕ್ರಮಣದಲ್ಲಿ ಜೀವನಿಗೆ ಕಾರಣತ್ವವು ಬಾಧಿತವಾಗುತ್ತದೆ. ಬೇರೆಯುಪ್ಮಗಳಲ್ಲಿ ಈ ವ್ಯವಸ್ಥೆಯು ಪ್ರಸಂಗವೇ ಇಲ್ಲ. ಆದುದರಿಂದ ಪ್ರಾಣಸಂಚಾರವ್ಯವಸ್ಥಾಪಕ ಪರಮಾತ್ಮ ಎಂದು ಹೇಳಲೇಬೇಕಾಗುತ್ತದೆ. ಪ್ರಾಣಗತಿವ್ಯವಸ್ಥಾಪಕನಾದ ಪರಮಾತ್ಮನು ಜೀವನ ಬಗ್ಗೆ ವಿಮುಖನಾದಾಗ ಪ್ರಾಣಕ್ಕೆ ಶರೀರದಿಂದ ವಿಯೋಗ ಸಂಭವಿಸುತ್ತದೆ ಎಂದು ತಾತ್ಪರ್ಯ. ಈ ಪ್ರಾಣಾಪಾನಗಳ ಸಂಚಾರವ್ಯವಸ್ಥಾಪಕನಾದ ಈ ಅಂತರ್ಯಾಮಿ ಹಿಂದೆ ಹೇಳಿದ ಬ್ರಹ್ಮ ಎಂದರ್ಥ ಎಂದು ಹೇಳುತ್ತಾರೆ.



## ಮಂತ್ರ ೫

**न प्राणेन नापानेन मर्त्यो जीवति कश्चन ।**
**इतरेण तु जीवन्ति यस्मिन्नेतावुपाश्रितौ ॥**

ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।
ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥

### ಪ್ರತಿಪದಾರ್ಥ

ಕಶ್ಚನ ಮರ್ತ್ಯಃ—ಯಾವ ಜೀವನೂ, ಪ್ರಾಣೇನ—ಪ್ರಾಣವಾಯುವಿನಿಂದ, ನ ಜೀವತಿ—ಜೀವಿಸುವುದಿಲ್ಲ, ಅಪಾನೇನ—ಅಪಾನವಾಯುವಿನಿಂದ ನ ಜೀವತಿ—ಜೀವಿಸುವುದಿಲ್ಲ, ಯಸ್ಮಿನ್—ಸಕಲ ಪ್ರಾಣಿಗಳಿಗೂ ಪ್ರಾಣಭೂತನಾದ ಯಾವ ಪರಮಾತ್ಮನಲ್ಲಿ, ಏತೌ—ಈ ಪ್ರಾಣಾಪಾನಗಳು, ಉಪಾಶ್ರಿತೌ—ಆಶ್ರಯಪಡೆದಿರುವುವೋ, ಇತರೇಣ ತು—(ಪ್ರಾಣಾಪಾನವಿಲಕ್ಷಣನಾದ) ಪರಮಾತ್ಮನಿಂದ, ಜೀವಂತಿ-ಜೀವಿಸುತ್ತವೆ.

### ತಾತ್ಪರ್ಯ

ಮನುಷ್ಯನು ಜೀವಿಸಲು ಪ್ರಾಣ ಕಾರಣವೆಂದು ಜನರು ಭಾವಿಸುತ್ತಾರೆ. ಆದರೆ ಮನುಷ್ಯನು ಈ ಪ್ರಾಣದಿಂದ ಅಥವಾ ಅಪಾನವಾಯುವಿನಿಂದ ಜೀವಿಸುವುದಿಲ್ಲ. ಈ ಪ್ರಾಣಾಪಾನಗಳು ಯಾವ ಪರಮಾತ್ಮನನ್ನು ಆಶ್ರಯಿಸಿ ಇರುವುವೋ, ಆ ಪರಮಾತ್ಮನಿಂದಲೇ ಜೀವಿಸುತ್ತಾನೆ.

### ರಂಗರಾಮಾನುಜಭಾಷ್ಯಮ್

ತಸ್ಯ ಸರ್ವಪ್ರಾಣಿಪ್ರಾಣನಹೇತುತ್ವರೂಪಂ ಮಹಿಮಾನಮಾಹ–ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ । ಇತರೇಣ ತು ಜೀವಂತಿ । ಸ್ಪಷ್ಟೋಽರ್ಥಃ । ಕೇನೇತರೇಣ ಜೀವಂತೀತ್ಯತ್ರಾಹ–ಯಸ್ಮಿನ್ನೇತಾವುಪಾಶ್ರಿತೌ । ಯದಧೀನಂ ಪ್ರಾಣಾಪಾನಯೋರಪಿ ಜೀವನಮ್, ತದಧೀನಮೇವ ಸರ್ವೇಷಾಂ ಜೀವನಮಿತಿ ಭಾವಃ ॥

### ಅನುವಾದ

ಎಲ್ಲ ಪ್ರಾಣಿಗಳೂ ಜೀವಿಸಲು ಕಾರಣನು ಎಂಬ ಮಹಿಮೆಯು ಪರಮಾತ್ಮನಿಗೆ ಇದೆ ಎಂದು ಹೇಳುತ್ತಾನೆ—'ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ । ಇತರೇಣ ತು ಜೀವಂತಿ' ಅರ್ಥವು ಸ್ಪಷ್ಟವಾಗಿದೆ, ಬೇರೆ ಯಾವುದರಿಂದ ಪ್ರಾಣಿಗಳು ಜೀವಿಸುತ್ತವೆ ಎಂದಲ್ಲಿ ಹೇಳುತ್ತಾನೆ—ಯಸ್ಮಿನ್ನೇತಾವುಪಾಶ್ರಿತೌ ಪ್ರಾಣಾಪಾನಗಳು ಯಾವುದಕ್ಕೆ ಅಧೀನವಾಗಿ ತಮ್ಮ ಕೆಲಸಗಳನ್ನು ಮಾಡುತ್ತವೋ, ಅದರಿಂದಲೇ ಇತರ ಎಲ್ಲ ಪ್ರಾಣಿಗಳೂ ಜೀವಿಸುತ್ತವೆ ಎಂದು ತಾತ್ಪರ್ಯ.

### ಭಾಷ್ಯಸಾರ

ಪ್ರಾಣಾಪಾನಗಳ ಸ್ಥಿತಿಯೂ ಪರಮಾತ್ಮಾಧೀನವಾದುದರಿಂದಲೇ (ಲೋಕಪ್ರಸಿದ್ಧ

ವಾದ) 'ಪ್ರಾಣಿಗಳ' ಬದುಕು ಪ್ರಾಣಾಧೀನವಾದುದು ಎಂಬ ಮಾತು ಯುಕ್ತವಲ್ಲ. ಪರಮಾತ್ಮನೇ ಬದುಕಿಗೆ ಕಾರಣ ಎಂದು 'ನ ಪ್ರಾಣೇನ' ಎಂಬ ಈ ಮಂತ್ರದಿಂದ ವಿವರಿಸುತ್ತಾನೆ

ಮಾನವನು ಪ್ರಾಣವಾಯುವಿನಿಂದಾಗಲೀ, ಅಪಾನವಾಯುವಿನಿಂದಾಗಲೀ ಜೀವಿಸುವುದಿಲ್ಲ. ದೇಹದೊಡನೆ ಪ್ರಾಣಸಂಯೋಗವೇ ಜೀವನ. ಈ ಪ್ರಾಣಸಂಯೋಗಕ್ಕೆ ನಿಮಿತ್ತ ಕಾರಣವೊಂದಿರಬೇಕು. ಪ್ರಾಣಸಂಯೋಗಕ್ಕೆ ಪ್ರಾಣವೇ ನಿಮಿತ್ತಕಾರಣವಾಗಲಾರದು. ಪ್ರಾಣಾಪಾನಗಳಿಗಿಂತ ಭಿನ್ನವಾದ ಒಂದು ಕಾರಣವಿದೆ. ಅದಾವುದು ? ಈ ಪ್ರಾಣಾಪಾನಗಳು ಯಾರನ್ನು ಆಶ್ರಯಿಸಿವೆಯೋ (ಅಂದರೆ ಪ್ರಾಣಾಪಾನಗಳು ಪರಮಾತ್ಮನ ಸಂಕಲ್ಪದಿಂದ ತಮ್ಮ ವ್ಯಾಪಾರಗಳನ್ನು ಮಾಡುತ್ತವೆ) ಆ ಪರಮಾತ್ಮನೇ ಪ್ರಾಣಿಗಳ ಬದುಕಿಗೂ ಕಾರಣ ಎಂದು ತಾತ್ಪರ್ಯ.



## ಮಂತ್ರ ೬

**हन्त त इदं प्रवक्ष्यामि गुह्यं ब्रह्म सनातनम् ।
यथा च मरणं प्राप्य आत्मा भवति गौतम ॥**

ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।
ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥

### ಪ್ರತಿಪದಾರ್ಥ

ಹೇ ಗೌತಮ—ಎಲೈ ನಚಿಕೇತನೇ ! ಆತ್ಮಾ—ಜೀವನು, ಮರಣಂ ಪ್ರಾಪ್ಯ—ದೇಹತ್ಯಾಗದ ನಂತರ ಮೋಕ್ಷವನ್ನು ಹೊಂದಿ, ಯಥಾ ಚ —ಯಾವ ಪ್ರಕಾರವಾಗಿ, ಭವತಿ—ಆಗುತ್ತಾನೆಯೋ (ತಥಾ—ಹಾಗೆಯೇ) ತೇ—ಮುಮುಕ್ಷುವಾದ ನಿನಗೆ ಮತ್ತೆ, ಗುಹ್ಯಮ್—ರಹಸ್ಯವಾದ, ಸನಾತನಮ್—ಶಾಶ್ವತವಾದ, ಬ್ರಹ್ಮ—ಬ್ರಹ್ಮತತ್ತ್ವವನ್ನು, ಇದಮ್—ಈ (ಮುಂದೆ ಹೇಳುವ) ರೀತಿಯಲ್ಲಿ, ಪ್ರವಕ್ಷ್ಯಾಮಿ—ಹೇಳುತ್ತೇನೆ, ಹಂತ—(ಆಶ್ಚರ್ಯಸೂಚಕ.)

### ತಾತ್ಪರ್ಯ

ಎಲೈ ನಚಿಕೇತನೇ ! ಲೌಕಿಕಕಾಮನೆಗಳಿಲ್ಲದ ಶಿಷ್ಯನಾದ ನಿನ್ನಲ್ಲಿ ಅಪಾರವಾದ ಪ್ರೇಮವಿದೆ. ಇದರಿಂದ ಪುನಃ ನಿನಗೆ ರಹಸ್ಯವೂ, ಶಾಶ್ವತವೂ ಆದ ಬ್ರಹ್ಮವನ್ನು ಕುರಿತು ನೀನರಿಯುವಂತೆ ಉಪದೇಶಿಸುತ್ತೇನೆ. ಮತ್ತು ಈ ಜೀವನು ಮರಣಾನಂತರ ಮೋಕ್ಷವನ್ನು ಹೊಂದಿ ಯಾವ ರೀತಿಯಿರುವನು ಎಂಬುದನ್ನೂ ಉಪದೇಶಿಸುತ್ತೇನೆ ಎಂದು ಯಮನು ಹೇಳಿದನು. ಇದು ಆಶ್ಚರ್ಯ.

### ರಂಗರಾಮಾನುಜಭಾಷ್ಯಮ್

ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ । ಗುಹ್ಯಮ್-ಅತಿರಹಸ್ಯಂ ಸನಾತನಂ ಬ್ರಹ್ಮ, ತೇ ಪುನರಪಿ ಪ್ರವಕ್ಷ್ಯಾಮಿ । ಹಂತ ಇತಿ ಸ್ವಗತಮ್ ಆಶ್ಚರ್ಯೇ । ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ । ಹೇ ಗೌತಮ ! ಆತ್ಮಾ ಮರಣಮ್-ಮೋಕ್ಷಂ ಪ್ರಾಪ್ಯ ಯಥಾ ಯತ್ಪ್ರಕಾರವಿಶಿಷ್ಟೋ ಭವತಿ, ತಥಾ ಪುನರಪಿ ಮುಮುಕ್ಷವೇ ರಾಗಾದ್ಯನುಪಹತಾಯ ಉಪದೇಶಯೋಗ್ಯಾಯ ತುಭ್ಯಂ ವಕ್ಷ್ಯಾಮಿ ಇತ್ಯರ್ಥಃ ॥

### ಅನುವಾದ

ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್. ಗುಹ್ಯಮ್-ಅತಿರಹಸ್ಯವಾದ, ಯಾವಾಗಲೂ ಇರುವ ಬ್ರಹ್ಮವನ್ನು ನಿನಗೆ ಪುನಃ ಉಪದೇಶಿಸುತ್ತೇನೆ. 'ಹಂತ' ಎಂಬುದು ಆಶ್ಚರ್ಯಾರ್ಥದಲ್ಲಿ ಸ್ವಗತವಾದ ಮಾತು. ಯಥಾ ಚ ಮರಣಂ ಪ್ರಾಪ್ಯ ಆತ್ಮಾ

(ರಾಮಾನಂದ ಮತ್ತು ಗೋಪಾಲಾನಂದರು 'ಆತ್ಮಾ ಮರಣಂ ಪ್ರಾಪ್ಯ ಯಥಾ ಭವತಿ' ಎಂಬುದಕ್ಕೆ ಸಾವಿನ ನಂತರ ಯಾವ ರೀತಿ ಜನ್ಮ ಪಡೆಯುತ್ತಾನೆ ಎಂಬುದನ್ನು ಉಪದೇಶಿಸುತ್ತೇನೆ ಎಂದು ಅರ್ಥ ಹೇಳಿರುತ್ತಾರೆ)

ಭವತಿ ಗೌತಮ । ಹೇ ಗೌತಮ–ಎಲೈ ನಚಿಕೇತನೇ ! ಜೀವಾತ್ಮನು ಮರಣಮ್–ಮೋಕ್ಷ ವನ್ನು ಪಡೆದು ಯಥಾ–ಯಾವ ರೀತಿಯಿಂದ ಇರುತ್ತಾನೋ, ಆ ರೀತಿಯನ್ನು ಪುನಃ ಮುಮುಕ್ಷುವೂ, ರಾಗಾದಿದೋಷರಹಿತನೂ, ಉಪದೇಶಕ್ಕೆ ಅರ್ಹನೂ ಆದ ನಿನಗೆ ಉಪದೇಶಿಸುತ್ತೇನೆ.

## ಭಾಷ್ಯಸಾರ

ಯಮನು ನಚಿಕೇತನಿಗೆ ಪರಮಾತ್ಮಸ್ವರೂಪವನ್ನು ಅನೇಕ ರೀತಿಯಲ್ಲಿ ಉಪದೇಶಿಸಿದನು. ತನ್ನ ಉಪದೇಶಕ್ಕೆ ಅರ್ಹನಾದ ವ್ಯಕ್ತಿ ಸಿಕ್ಕಿದನಲ್ಲಾ ಎಂಬ ಸಂತೋಷ ಯಮನಿಗುಂಟಾಯಿತು. ಈ ಬ್ರಹ್ಮಸ್ವರೂಪವು ಬಹಳ ರಹಸ್ಯವಾದುದು. ಆದುದರಿಂದ ಪುನಃ ಇದನ್ನು ವಿವೇಚಿಸುತ್ತಾ ಉಪದೇಶಿಸುತ್ತೇನೆ ಎಂದು 'ಹಂತ' ಎಂಬುದರಿಂದ ಪ್ರತಿಜ್ಞೆ ಮಾಡುತ್ತಾನೆ.

'ಹಂತ' ಎಂಬುದು ಅವ್ಯಯ, ಇದು ಹರ್ಷಸೂಚಕ. ಪರಮಾತ್ಮಸ್ವರೂಪ ತಿಳಿಯಲು ಕಷ್ಟವಾದುದು. ಶಿಷ್ಯನೂ, ಪರಮಾತ್ಮಸ್ವರೂಪವನ್ನು ತಿಳಿಯಲು ಅರ್ಹನೂ ಆದ ವ್ಯಕ್ತಿ ನಚಿಕೇತ. ಈ ನಚಿಕೇತನಿಗೆ ವಿಶೇಷರೀತಿಯಲ್ಲಿ ಉಪದೇಶಿಸಬೇಕೆಂಬ ಬಯಕೆ ಯಮನಿಗೆ, ಈ ಬಯಕೆ ಸರಿಯಾದ ಅಧಿಕಾರಿ ಸಿಕ್ಕಿದನಲ್ಲಾ ಎಂಬ ಸಂತೋಷದಿಂದ ತಾನಾಗಿಯೇ ಉಂಟಾಯಿತೆಂದು ತಾತ್ಪರ್ಯ.

ಎಲೈ ನಚಿಕೇತನೇ ! ನಿನ್ನನ್ನು ಲೌಕಿಕವಾದ ಯಾವ ಆಸೆಗಳೂ ಬಂಧಿಸಲಿಲ್ಲ. ಆದುದರಿಂದಲೇ ನೀನು ಉಪದೇಶಕ್ಕೆ ಉತ್ತಮಾಧಿಕಾರಿಯಾಗಿರುವೆ. ನಿನಗೆ ಹಿಂದೆ ಉಪದೇಶಿಸಿದ, ಅತಿರಹಸ್ಯವೂ ಸನಾತನವೂ ಆದ ಬ್ರಹ್ಮಸ್ವರೂಪವನ್ನು ಸುಲಭವಾಗಿ ತಿಳಿಯುವಂತೆ ವಿವರವಾಗಿ ಉಪದೇಸುತ್ತೇನೆ.

ಪರಮಾತ್ಮನನ್ನು ತಿಳಿದರೆ ಶಾಶ್ವತಸುಖ ಲಭಿಸುತ್ತದೆ. ತಿಳಿಯದಿದ್ದರೆ ಜೀವನು ಮರಣಾನಂತರ ಯಾವ ರೀತಿಯಾಗುತ್ತಾನೆ ? ಅಂದರೆ ನಾನಾ ವಿಧವಾದ ದುಃಖಗಳಿಂದ ಕೂಡಿದ ಯಾವ ಯಾವ ಯೋನಿಗಳಲ್ಲಿ ಹುಟ್ಟುತ್ತಾನೆ ಎಂಬುದನ್ನು ಹೇಳುತ್ತೇನೆ ಎಂದನು. ಬ್ರಹ್ಮವಿಷಯಕವಾದ ಜ್ಞಾನದಲ್ಲಿ ದೃಢತೆ ಮೂಡಲು ಈ ಮಾತನ್ನು ಹೇಳಲಾಗಿದೆ. ಗೌತಮ ಎಂಬ ಸಂಬೋಧನೆಯು ನಚಿಕೇತನಲ್ಲಿ ಯಮನಿಗಿರುವ ಕೃಪೆಯನ್ನು ಸೂಚಿಸುತ್ತದೆ.



## ಮಂತ್ರ ೭

**योनिमन्ये प्रपद्यन्ते शरीरत्वाय देहिनः ।**
**स्थाणुमन्येऽनुसंयन्ति यथाकर्म यथाश्रुतम् ॥**

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥

### ಪ್ರತಿಪದಾರ್ಥ

ಅನ್ಯೇ — ನಿನಗಿಂತ ಬೇರೆಯಾದ (ಜ್ಞಾನಿಗಳಲ್ಲದ) ದೇಹಿನಃ — ದೇವಮನುಷ್ಯಾದಿಗಳು, ಯಥಾಕರ್ಮ - ಈ ಜನ್ಮದಲ್ಲಿ ಮಾಡಿದ ಕರ್ಮಕ್ಕನುಗುಣವಾಗಿ, ಯಥಾಶ್ರುತಮ್ — ಈ ಜನ್ಮದಲ್ಲಿ ಸಂಪಾದಿಸಿದ ಜ್ಞಾನಕ್ಕನುಗುಣವಾಗಿ, ಶರೀರತ್ವಾಯ — ಶರೀರವನ್ನು ಹೊಂದಲು, ಯೋನಿಮ್ — ದೇವಮನುಷ್ಯಾದಿಯೋನಿಯನ್ನು, ಪ್ರಪದ್ಯಂತೇ — ಹೊಂದುತ್ತಾರೆ. ಅನ್ಯೇ — ಮತ್ತೆ ಕೆಲವರು (ಸಂಪಾದಿಸಲ್ಪಟ್ಟ ಜ್ಞಾನಕರ್ಮಗಳಿಗನುಗುಣವಾಗಿ) ಸ್ಥಾಣುಮ್ — ಸ್ಥಾವರಾದಿ ಜನ್ಮವನ್ನು ಅನುಸಂಯಂತಿ — ಹೊಂದುತ್ತಾರೆ.

### ತಾತ್ಪರ್ಯ

ನೀನು ಬ್ರಹ್ಮಜ್ಞಾನಿ. ನಿನಗಿಂತ ಭಿನ್ನರಾದ ಅಂದರೆ ಪರಬ್ರಹ್ಮತತ್ತ್ವವನ್ನರಿಯದ ಮನುಷ್ಯರು ಅವರವರ ಕರ್ಮ ಮತ್ತು ಜ್ಞಾನಕ್ಕನುಗುಣವಾಗಿ ದೇವ-ಮನುಷ್ಯಾದಿ ಯೋನಿಗಳಲ್ಲಿ ಹುಟ್ಟುತ್ತಾರೆ. ಮತ್ತೆ ಕೆಲವರು ಸ್ಥಾವರ ಮುಂತಾದ ಜನ್ಮವನ್ನು ಹೊಂದುತ್ತಾರೆ.

### ರಂಗರಾಮಾನುಜಭಾಷ್ಯಮ್

ಅಧಿಕಾರಿವಿಶೇಷನಿರ್ದೇಶಪರೇಣ, 'ಹಂತ ತೇ' ಇತ್ಯನೇನ ಸೂಚಿತಮರ್ಥಂ ವಿವೃಣೋತಿ — ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ । ಸ್ಥಾಣುಮನ್ಯೇಽನು ಸಂಯಂತಿ ಯಥಾಕರ್ಮ ಯಥಾಶ್ರುತಮ್ । ಅನ್ಯೇ ಪರಮಾತ್ಮತತ್ತ್ವಶ್ರವಣವಿಮುಖಾಃ ತ್ವದ್ವಿಸದೃಶಾಃ ಶರೀರಪರಿಗ್ರಹಾಯ ಬ್ರಾಹ್ಮಣಾದಿಯೋನಿಂ ಪ್ರಪದ್ಯಂತೇ, ಅನ್ಯೇ ಸ್ಥಾವರ ಭಾವಮನುಗಚ್ಛಂತಿ ಸ್ವಾನುಷ್ಠಿತಯಜ್ಞಾದಿಕರ್ಮೋಪಾಸನಾನತಿಕ್ರಮೇಣ; 'ರಮಣೀಯ ಚರಣಾಃ' 'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ' ಇತ್ಯಾದಿಶ್ರುತ್ಯನುರೋಧಾದಿತಿ ಭಾವಃ ॥

### ಅನುವಾದ

'ಹಂತ ತೇ' ಎಂಬ ಮಂತ್ರದಿಂದ ಉಪದೇಶ ಪಡೆಯಲು ಯೋಗ್ಯನಾದ ನಿನಗೆ ಎಂದು ಹೇಳಿದ ಅರ್ಥವನ್ನು ಅಧಿಕಾರಿವಿಶೇಷಪರವಾಗಿ ವಿವರಿಸುತ್ತಾನೆ. ಯೋನಿಮನ್ಯೇ ಪ್ರಪದ್ಯಂತೇ.... ..........ಯಥಾಕರ್ಮ ಯಥಾಶ್ರುತಮ್ । ಅನ್ಯೇ–ಪರಮಾತ್ಮತತ್ತ್ವವನ್ನು ಕೇಳುವುದರಲ್ಲಿ ಆಸಕ್ತಿಯಿಲ್ಲದ ನಿನಗಿಂತ ಭಿನ್ನರಾದವರು ಶರೀರವನ್ನು ಪಡೆಯಲು 'ರಮಣೀಯ ಚರಣಾಃ' (ಛಾಂ.ಉ. 5–10–7) 'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ' (ಬೃ.ಉ. 6–4–2) ಎಂಬ ಶ್ರುತಿಯಲ್ಲಿ ಹೇಳಿರುವಂತೆ ತಾವು ಆಚರಿಸಿದ ಯಜ್ಞಯಾಗಾದಿ

ಕರ್ಮ, ಉಪಾಸನೆ ಮುಂತಾದವುಗಳಿಗೆ ಅನುಗುಣವಾಗಿ ಬ್ರಾಹ್ಮಣಾದಿಯೋನಿಗಳನ್ನು ಸೇರುತ್ತಾರೆ. ಮತ್ತೆ ಕೆಲವರು ಮರಮುಂತಾದ ಸ್ಥಾವರರೂಪವನ್ನು ಹೊಂದುತ್ತಾರೆ. ಎಂದು ತಾತ್ಪರ್ಯ.

## ಭಾಷ್ಯಸಾರ

ಯಮನು ಹಿಂದಿನ ಮಂತ್ರದಲ್ಲಿ ಮೊದಲು ಬ್ರಹ್ಮಸ್ವರೂಪವನ್ನು ಕುರಿತು ಉಪದೇಶಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದನು. ಆದರೂ ಬ್ರಹ್ಮದ ಬಗ್ಗೆ ಹೇಳಬೇಕಾದುದು ಅಧಿಕವಾದುದರಿಂದಲೂ, ಜೀವನಗತಿಯ ಬಗ್ಗೆ ಹೇಳಬೇಕಾದುದು ಸ್ವಲ್ಪವಾಗಿರುವುದರಿಂದಲೂ '[1]ಸೂಚೀಕಟಾಹ ನ್ಯಾಯ'ದಿಂದ ಮೊದಲು ಅಜ್ಞಾನಿಯಾದ ಜೀವನ ಮರಣಾನಂತರದ ಗತಿವಿಷಯವನ್ನು 'ಯೋನಿಮನ್ಯೇ' ಎಂಬ ಮಂತ್ರದಲ್ಲಿ ಹೇಳುತ್ತಾನೆ.

ಬ್ರಹ್ಮಜ್ಞಾನಶೂನ್ಯರಾದ ಕೆಲವರು ದೇಹವನ್ನು ಹೊಂದಲು ಕಾರಣವಾದ ಕರ್ಮ ಮಾಡಿರುವುದರಿಂದ ಬ್ರಾಹ್ಮಣಾದಿಯೋನಿಗಳಲ್ಲಿ ಜನಿಸುತ್ತಾರೆ. ಅಂದರೆ ಒಂದು ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಪಡೆಯುತ್ತಾರೆ. ಇದರಿಂದ ಗರ್ಭವಾಸ ಮುಂತಾದ ದುಃಖಗಳನ್ನು ಅನುಭವಿಸಿ, ಜನನಮರಣರೂಪವಾದ ಈ ಸಂಸಾರ ಚಕ್ರದಲ್ಲಿ ಅಲೆದಾಡುವುದು ಮಹತ್ತರವಾದ ಕಷ್ಟ ಎಂದು ತಾತ್ಪರ್ಯ. ಇವರಿಗಿಂತ ಅಧಿಕವಾದ ಪಾಪಕರ್ಮ ಮಾಡಿದ ಮತ್ತೆ ಕೆಲವರು ತಾವು ಮಾಡಿದ ಕರ್ಮ ಮತ್ತು ತಾವುಗಳಿಸಿದ ಜ್ಞಾನಕ್ಕೆ ಅನುಗುಣವಾಗಿ ಮರಣಾನಂತರ ಮರಮುಂತಾದ ಸ್ಥಾವರ ರೂಪವನ್ನು ಹೊಂದುತ್ತಾರೆ. ಬಹಳ ಅಧಮರು ಸ್ಥಾವರರೂಪವನ್ನೂ, ಅವರಿಗಿಂತ ಉತ್ತಮರು ಪಶು-ಪಕ್ಷಿರೂಪವನ್ನೂ ಅವರಿಗಿಂತ ಉತ್ತಮರು ಮನುಷ್ಯ ಮುಂತಾದರೂಪಗಳನ್ನೂ ಮರಣಾನಂತರ ಹೊಂದುತ್ತಾರೆ ಎಂದು ತಾತ್ಪರ್ಯ. ಆದುದರಿಂದ ಅತ್ಯಂತ ದುಃಖಗಳಿಗೆ ಆಶ್ರಯವಾದ ಈ ಸಂಸಾರದ ವಿಷಯವನ್ನು ತಿಳಿದು ಯಾರು ತಾನೆ ಬ್ರಹ್ಮಜ್ಞಾನಕ್ಕಾಗಿ ಆತುರಗೊಳ್ಳುವುದಿಲ್ಲ ಎಂದು ಭಾವ.

---

1 ಲೋಹಕಾರನಲ್ಲಿಗೆ ಮೊದಲು (ಒಬ್ಬನು)ಕಟಾಹ-ಬಾಣಲಿಯನ್ನು ಮಾಡಿಸಿಕೊಂಡು ಬರಲು ಹೋದನು. ಅದೇ ಸಂದರ್ಭಕ್ಕೆ ಸೂಜಿಯನ್ನು ಮಾಡಿಸಿಕೊಂಡು ಬರಲು ಮತ್ತೊಬ್ಬನೂ ಹೋದನು. ಆದರೆ ನಂತರ ಬಂದಿರುವವನಿಗೆ ಮೊದಲು ಸೂಜಿಯನ್ನು ಲೋಹಕಾರ ತಯಾರಿಸಿಕೊಡುತ್ತಾನೆ. ಕಾರಣ-ಸೂಜಿ ಬಹಳ ಅಲ್ಪ ಕಾಲದಲ್ಲೇ, ಅಲ್ಪ ಶ್ರಮದಿಂದಲೇ ಮಾಡುವುದಾದ್ದರಿಂದ.

## ಮಂತ್ರ ೮

**य ए(ष)षु सुप्तेषु जागर्ति कामंकामं पुरुषो निर्मिमाणः ।**
**तदेव शुक्रं तद्ब्रह्म तदेवामृतमुच्यते ।**
**तस्मिन् लोकाः श्रितास्सर्वे तदु नात्येति कश्चन ॥ एतद्वै तत् ॥**

ಯ ಏ(ಷ)ಷು ಸುಪ್ತೇಷು ಜಾಗರ್ತಿ
ಕಾಮಂಕಾಮಂ ಪುರುಷೋ ನಿರ್ಮಿಮಾಣಃ ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ ॥
॥ಏತದ್ವೈ ತತ್॥

### ಪ್ರತಿಪದಾರ್ಥ

ಏಷು—ಈ ಚೇತನರು, ಸುಪ್ತೇಷು ಸತ್ಸು—(ಅಜ್ಞಾನರೂಪವಾದ ಮಾಯೆಯೆಂಬ ಹಾಸುಗೆಯಲ್ಲಿ) ನಿದ್ರಿಸುತ್ತಿರುವಾಗ, ಕಾಮಮ್—ಯಥೇಚ್ಛವಾಗಿ, ಕಾಮಮ್—ತನ್ನ ಇಷ್ಟದಂತೆ ಸಂಕಲ್ಪಿಸಿ ಸ್ವಪ್ನ ಪದಾರ್ಥಗಳನ್ನು, ನಿರ್ಮಿಮಾಣಃ—ನಿರ್ಮಿಸುತ್ತಾ, ಯಃ—ಅಂತರ್ಯಾಮಿ ಬ್ರಾಹ್ಮಣಾದಿಗಳಲ್ಲಿ ಪ್ರಸಿದ್ಧನಾದ ಯಾವ, ಪುರುಷಃ—ಪರಮ ಪುರುಷನು, ಜಾಗರ್ತಿ—ಹೃದಯಕಮಲದಲ್ಲಿ ಎಚ್ಚೆತ್ತಿರುವನೋ **ತದೇವ ಶುಕ್ರಮ್**—ಅದೇ ಪರಿಶುದ್ಧವಾದುದು ತದ್ಬ್ರಹ್ಮ—ಹಿಂದೆ ಹೇಳಿದ ಆ ಪ್ರಸಿದ್ಧವಾದ ಪರಬ್ರಹ್ಮವು **ತದೇವ**—ಅದೇ, **ಅಮೃತಮ್**—ಅಮೃತಶಬ್ದವಾಚ್ಯವಾದ ಪರಬ್ರಹ್ಮವೆಂದು, ಉಚ್ಯತೇ—ಹೇಳಲ್ಪಡುತ್ತದೆ. **ತಸ್ಮಿನ್**—ಆ ಪರಬ್ರಹ್ಮದಲ್ಲಿ, ಸರ್ವೇ—ಎಲ್ಲಾ. **ಲೋಕಾಃ ಶ್ರಿತಾಃ**—ಲೋಕಗಳು ಆಶ್ರಯಿಸಿವೆ (ಲೋಕ ಪಾಲಕರೂ ಆಶ್ರಯಿಸಿದ್ದಾರೆ) **ತತ್**—ಆ ಪರಬ್ರಹ್ಮವನ್ನು, **ಕಶ್ಚನ**—ಯಾವ ಮನುಷ್ಯನೂ **ನಾತ್ಯೇತಿ**—ಮೀರಲಾರನು, ಏತದ್ವೈ—ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವೇ **ತತ್**—ಹಿಂದೆ ಹೇಳಿದ ಪರ ತತ್ತ್ವವು.

### ತಾತ್ಪರ್ಯ

**ಚೇತನರು ಅಜ್ಞಾನರೂಪವಾದ ಮಾಯೆಯಲ್ಲಿ ನಿದ್ರಿಸುತ್ತಿರುವಾಗ ತನ್ನ ಸಂಕಲ್ಪದಿಂದ ಸ್ವಪ್ನಪದಾರ್ಥಗಳನ್ನು ಯಥೇಚ್ಛವಾಗಿ ನಿರ್ಮಿಸುತ್ತಾ ಪರಮಾತ್ಮನು ಎಚ್ಚೆತ್ತಿರುವನು. ಅವನೇ ಶುದ್ಧವಾದ ಪರಬ್ರಹ್ಮ. ಅವನೇ ನಿರವಧಿಕ ಅಮೃತಸ್ವರೂಪ, ಅವನನ್ನು ಆಶ್ರಯಿಸಿಯೇ ಎಲ್ಲಾ ಲೋಕಗಳೂ, ಲೋಕಪಾಲಕರೂ ಇದ್ದಾರೆ. ಆ ಪರಬ್ರಹ್ಮವನ್ನು ಯಾವನೂ ಮೀರಲಾರನು, ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವೇ ಹಿಂದೆ ಹೇಳಿದ ಪರತತ್ತ್ವ ಎಂದು ತಾತ್ಪರ್ಯ.**

### ರಂಗರಾಮಾನುಜಭಾಷ್ಯಮ್

ಏವಂ ಶಿಷ್ಯಂ ಪ್ರರೋಚನಯಾ ಅಭಿಮುಖೀಕೃತ್ಯ, ಪ್ರಕೃತಮನುಸರತಿ–ಯ ಏಷು ಸುಪ್ತೇಷು ಜಾಗರ್ತಿ ಕಾಮಂಕಾಮಂ ಪುರುಷೋ ನಿರ್ಮಿಮಾಣಃ । ಸರ್ವೇಷು ಸುಪ್ತೇಷು ಜೀವೇಷು ಕಾಮಂಕಾಮಮ್–ಣಮುಲಂತಮಿದಮ್। ಸಂಕಲ್ಪ್ಯ ಸಂಕಲ್ಪ್ಯ ಇತ್ಯರ್ಥಃ, ನ ತು

'ಸರ್ವಾನ್ ಕಾಮಾನ್ ಛಂದತಃ ಪ್ರಾರ್ಥಯಸ್ವ' ಇತಿ ಪ್ರಕೃತಾಃ ಪುತ್ರಾದಯಃ 'ಕಾಮ' ಶಬ್ದೇನ ನಿರ್ದಿಶ್ಯಂತೇ। ಅಯಂ ಚಾರ್ಥಃ ಸಂಧ್ಯಾಽಧಿಕರಣ (3–2–1) ಭಾಷ್ಯಶ್ರುತಪ್ರಕಾಶಿಕಯೋಃ ಸ್ಪಷ್ಟಃ। ಸಂಕಲ್ಪ್ಯ ಸಂಕಲ್ಪ್ಯ ಸ್ವಚ್ಛಂದಾನುರೋಧೇನ ನಿರ್ಮಿಮಾಣಃ ಪುರುಷೋ ಯೋಽಸ್ತೀತ್ಯರ್ಥಃ । ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ । ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ । ತದೇವ ಶುಕ್ರಮ್–ಪ್ರಕಾಶಕಮ್, ತದೇವ ಅನನ್ಯಾಧೀನಮಮೃತಮುಚ್ಯತ ಇತ್ಯರ್ಥಃ । ಶಿಷ್ಟಂ ಸ್ಪಷ್ಟಮ್ । ನಿತ್ಯಮುಕ್ತಾನಾಮ್ ಅಮೃತತ್ವಸತ್ತ್ವೇಽಪಿ, ನಿರುಪಾಧಿಕಾಮೃತತ್ವಾಭಾವಾತ್ 'ತದೇವ ಅಮೃತಂ' ಇತ್ಯವಧಾರಣಸ್ಯ ನ ಅನುಪಪತ್ತಿರಿತಿ ದ್ರಷ್ಟವ್ಯಮ್ । ಏತೇನ ಅಮೃತಾಂತರ ನಿಷೇಧಾತ್ ಮುಕ್ತಪರಮಾತ್ಮನೋಃ ಅಭೇದಪ್ರತ್ಯಾಶಾ ಪ್ರತ್ಯುಕ್ತಾ; ಅತ್ರತ್ಯಾಮೃತಶಬ್ದಸ್ಯ ನಿರುಪಾಧಿಕಾಮೃತವಾಚಿತ್ವಾತ್ ॥

### ಅನುವಾದ

ಹಿಂದಿನ ಮಂತ್ರದಲ್ಲಿ ಹೇಳಿದಂತೆ ಶಿಷ್ಯನಾದ ನಚಿಕೇತನನ್ನು ಉತ್ತೇಜಿಸುವುದರ ಮೂಲಕ ತಾನು ಉಪದೇಶಿಸಬೇಕಾದ ವಿಷಯದತ್ತ ತಿರುಗಿಸಿ, ಬ್ರಹ್ಮವಿಷಯವನ್ನು ಉಪದೇಶಿಸುತ್ತಾನೆ. 'ಯ ಏಷು............ನಿರ್ಮಿಮಾಣಃ'–ಎಲ್ಲ ಜೀವರು ಮಲಗಿರುವಾಗ, ಕಾಮಂಕಾಮಮ್ ಎಂಬುದು ಣಮುಲಂತವಾದ ಶಬ್ದ. ಇದಕ್ಕೆ ಪುನಃ ಪುನಃ ಸಂಕಲ್ಪ ಮಾಡಿ ಎಂದರ್ಥ, ಹಿಂದೆ 'ಸರ್ವಾನ್ ಕಾಮಾನ್ ಛಂದತಃ ಪ್ರಾರ್ಥಯಸ್ವ' ಎಂದು ಹೇಳಿದ ಪುತ್ರ–ಪಶು ಮುಂತಾದವುಗಳು ಕಾಮಶಬ್ದದಿಂದ ಹೇಳಲ್ಪಡುವುದಿಲ್ಲ. ಈ ಅರ್ಥವು 'ಸಂಧ್ಯಾಧಿಕರಣ' (3–2–1)ದ ಭಾಷ್ಯ ಮತ್ತು ಶ್ರುತಪ್ರಕಾಶಿಕೆಗಳಲ್ಲಿ ಸ್ಪಷ್ಟವಾಗಿದೆ. ತನ್ನ ಇಚ್ಛೆಗೆ ಅನುಗುಣವಾಗಿ ಸಂಕಲ್ಪದಿಂದ ಸೃಷ್ಟಿಸುತ್ತಾ ಯಾವ ಪರಮಪುರುಷನಿರುವನೋ ಎಂದರ್ಥ. ತದೇವ ಶುಕ್ರಮ್..........................ಏತದ್ವೈ ತತ್–ಅದೇ, ಶುಕ್ರಮ್–ಪ್ರಕಾಶವುಳ್ಳದ್ದು ಅದೇ ಬೇರೊಂದರ ಅಧೀನವಾಗದ ಅಮೃತವೆಂದು ಹೇಳಲ್ಪಡುತ್ತದೆ. ಉಳಿದ ವಿಷಯ ಸ್ಪಷ್ಟವಾಗಿದೆ. ನಿತ್ಯರಲ್ಲೂ, ಮುಕ್ತರಲ್ಲೂ ಅಮೃತತ್ವವಿದ್ದರೂ ಉಪಾಧಿ ವಿಶಿಷ್ಟವಾದುದು. ಉಪಾಧಿರಹಿತವಾದ ಅಮೃತತ್ವವಿಲ್ಲದಿರುವುದರಿಂದ ತದೇವ ಅಮೃತಮ್ ಎಂಬಲ್ಲಿ 'ಏವ' ಎಂಬ ಅವಧಾರಣೆಯು ಉಪಪನ್ನವಾಗುವುದು. ಇದರಿಂದ ಬೇರೊಂದು ಅಮೃತವಿದೆ ಎಂಬುದನ್ನು ನಿಷೇಧಮಾಡಿರುವುದರಿಂದ, ಮುಕ್ತ–ಪರಮಾತ್ಮರಲ್ಲಿ ಅಭೇದವೆಂಬುದನ್ನು ಪರಿಹರಿಸಿದಂತಾಯಿತು. ಇಲ್ಲಿರುವ ಅಮೃತಶಬ್ದವು ಉಪಾಧಿರಹಿತವಾದ ಅಮೃತಸ್ವರೂಪವನ್ನು ತಿಳಿಸುತ್ತದೆ.

### ಭಾಷ್ಯಸಾರ

ಆರನೇ ಮಂತ್ರದಲ್ಲಿ ಪ್ರತಿಜ್ಞೆಮಾಡಿದ ಸನಾತನವಾದ ಬ್ರಹ್ಮವನ್ನು ಕುರಿತು 'ಯ ಏಷು ಸುಪ್ತೇಷು' ಎಂಬ ಮಂತ್ರದಿಂದ ಉಪದೇಶಿಸುತ್ತಾನೆ.

ಪ್ರಾಣಿಗಳು ಮಲಗಿರುವಾಗ ಅವರಿಗೆ ಬೇಕಾದುದೆಲ್ಲವನ್ನೂ ತನ್ನ ಸಂಕಲ್ಪದಿಂದ ಸೃಷ್ಟಿಸಿ, ತಾನು ಎಚ್ಚರವಾಗಿರುತ್ತಾನೆ. ಪ್ರಾಣಿಗಳಂತೆ ಪರಮಾತ್ಮನಿಗೆ ಸ್ವಪ್ನಾವಸ್ಥೆಯಿರುವುದಿಲ್ಲ, ಜೀವನು ಮಲಗಿರುವಾಗ ಸ್ವಪ್ನದಲ್ಲಿ ರಥ-ಕುದುರೆ ಮುಂತಾದ ಅನೇಕ ವಿಚಿತ್ರ ವಸ್ತುಗಳನ್ನು ಕಾಣುತ್ತಾನೆ. ಜೀವನು ಕರ್ಮವಶ್ಯನು. ಇವನು ಇಂದ್ರಿಯಗಳ ಸಹಾಯ

ದಿಂದ ತಿಳಿಯಬಲ್ಲವನು. ನಿದ್ರೆಯಲ್ಲಿ ಇಂದ್ರಿಯಗಳು ವಿರಾಮಗೊಂಡು ತಮ್ಮ ವ್ಯಾಪಾರ ಗಳಿಂದ ವಿಮುಕ್ತವಾಗಿವೆ. ಇಂತಹ ಜೀವನಿಗೆ ಸಂಕಲ್ಪದಿಂದ ವಸ್ತುಗಳನ್ನು ಸೃಷ್ಟಿಸುವ ಶಕ್ತಿಯಿರುವುದಿಲ್ಲ. ಆದುದರಿಂದ ಪುರುಷೋತ್ತಮನಾದ ಪರಮಾತ್ಮನೇ ಈ ಸ್ವಾಪ್ನಿಕ ವಸ್ತುಗಳನ್ನು ಸೃಷ್ಟಿಸುತ್ತಾನೆ ಎಂದು ತಾತ್ಪರ್ಯ. ಈತನೇ ಬ್ರಹ್ಮ. ಈತನು ಎಲ್ಲ ರೀತಿಯಲ್ಲೂ ಪ್ರಕಾಶಕನು. ಅವನೇ ನಿರುಪಾಧಿಕ ಅಮೃತಸ್ವರೂಪನು. ಇದರಿಂದ ನಿತ್ಯಮುಕ್ತರಲ್ಲಿರುವ ಅಮೃತಸ್ವರೂಪವು ಉಪಾಧಿವಿಶಿಷ್ಟವಾದುದರಿಂದ ಅವರನ್ನು ಬೇರ್ಪಡಿಸಿದಂತಾಗುತ್ತದೆ. ಅಥವಾ ಈ ಬ್ರಹ್ಮವು ಅತ್ಯಧಿಕ ಆನಂದಸ್ವರೂಪವಾದುದರಿಂದ, ಅಮೃತದಂತೆ ಅತಿಶಯ ವಾದ ಭೋಗ್ಯಸ್ವರೂಪವು ಎಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.

ಸ್ವಪ್ನದಲ್ಲಿ ಕಾಣುವ ವಸ್ತುಗಳನ್ನು ಸಂಕಲ್ಪದಿಂದಲೇ ಸೃಷ್ಟಿಸಬಲ್ಲ ಪರಮಾತ್ಮನಲ್ಲಿ ಪೃಥಿವೀ ಮುಂತಾದ ಎಲ್ಲ ಲೋಕಗಳೂ ಆಶ್ರಯಪಡೆದಿವೆ. ಈತನೇ ಸರ್ವಲೋಕ ಕಾರಣನು. ಎಲ್ಲ ವಸ್ತುಗಳಿಗೂ ಆತ್ಮವಾಗಿರುವ ಪರಮಾತ್ಮನನ್ನು ಯಾರೂ ಮೀರಲಾರರು. ಅಂದರೆ ಕಾರಣವನ್ನು ಮೀರಿ ಕಾರ್ಯಗಳಿರುವುದು ಎಲ್ಲೂ ಕಾಣದಿರುವುದರಿಂದ, ಸರ್ವಕಾರಣ ನಾದ ಪರಮಾತ್ಮನನ್ನು ಮೀರಿ ಯಾವ ಲೋಕವೂ ಇಲ್ಲ ಎಂದು ತಾತ್ಪರ್ಯ.



## ಮಂತ್ರ ೯

**अग्निर्यथैको भुवनं प्रविष्टो रूपं रूपं प्रतिरूपो बभूव ।**
**एकस्तथा सर्वभूतान्तरात्मा रूपं रूपं प्रतिरूपो बहिश्च ॥**

ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂರೂಪಂ ಪ್ರತಿರೂಪೋ ಬಹಿಶ್ಚ ॥

### ಪ್ರತಿಪದಾರ್ಥ

ಏಕಃ—(ಪಂಚೀಕರಣಹೊಂದದೆ) ಒಂದೇ ಆದ ಅಗ್ನಿಃ—ಅಗ್ನಿಯು ಭುವನಮ್—ಬ್ರಹ್ಮಾಂಡವನ್ನು ಪ್ರವಿಷ್ಟಃ—(ಪಂಚೀಕರಣದಿಂದ) ಪ್ರವೇಶಿಸಿ ರೂಪಂ ರೂಪಮ್—ಎಲ್ಲ ಭೂತಗಳಲ್ಲಿಯೂ, ಪ್ರತಿರೂಪಃ—ಸೇರಿರುವ ರೂಪವುಳ್ಳದ್ದಾಗಿ ಯಥಾ—ಯಾವರೀತಿ ಬಭೂವ—ಆಯಿತೋ ತಥಾ—ಹಾಗೆಯೇ, ಸರ್ವಭೂತಾಂತರಾತ್ಮಾ—ಸರ್ವಪ್ರಾಣಿಗಳಲ್ಲೂ ಅಂತರಾತ್ಮನಾದ, ಏಕಃ—ಒಬ್ಬನೇ ಆದ ಪರಮಾತ್ಮನು. ರೂಪಂ ರೂಪಮ್—ಪ್ರತಿಪ್ರಾಣಿಗಳಲ್ಲೂ, ಪ್ರತಿರೂಪಃ—(ಅಯಾಯಾ ವಸ್ತುಗಳಲ್ಲಿ) ಅಂತರ್ಯಾಮಿಯಾಗಿಯೂ, ಬಹಿಶ್ಚ—ಹೊರಗೂ (ಇರುವವನಾಗಿ), ಬಭೂವ—ಆದನು (ಅಂದರೆ ಸಕಲ ಪ್ರಾಣಿಗಳ ಒಳಗೂ ಮತ್ತು ಹೊರಗೂ ಇರುವವನಾಗಿ ಆದನು ಎಂದು ಅರ್ಥ.)

### ತಾತ್ಪರ್ಯ

[1]ಪಂಚೀಕರಣಕ್ಕೆ ಮೊದಲು, ಒಂದೇ ಅಗ್ನಿ ಇತ್ತು. ಅನಂತರ ಅಗ್ನಿಯು ಪಂಚೀಕರಣದಿಂದ ಈ ಲೋಕದಲ್ಲಿರುವ ಪೃಥಿವೀ–ವಾಯು ಮುಂತಾದ ಎಲ್ಲ ಭೌತಿಕವಸ್ತುಗಳಲ್ಲೂ ಸೇರಿ, ಆಯಾಯಾ ಭೌತಿಕವಸ್ತುರೂಪದಲ್ಲಿರುವುದು. ಹಾಗೆಯೇ ಒಬ್ಬನೇ ಪರಮಾತ್ಮನು, ಎಲ್ಲ ಪ್ರಾಣಿಗಳಿಗೂ ಅಂತರಾತ್ಮನಾಗಿ ದೇವ–ಮನುಷ್ಯ ಮುಂತಾದ ರೂಪವನ್ನು ಪಡೆಯುತ್ತಾನೆ ಮತ್ತು ವಸ್ತುಗಳ ಹೊರಗೂ ವ್ಯಾಪಿಸುತ್ತಾನೆ.

### ರಂಗರಾಮಾನುಜಭಾಷ್ಯಮ್

'ಏಕ ಏವಾತ್ಮಾ ಸರ್ವೇಷಾಮಹಮರ್ಥತಯಾ ಆಸ್ತೇ' ಇತ್ಯಸ್ಯಾರ್ಥಸ್ಯ ದುರ್ಬೋಧತ್ವಾತ್, ತದ್ದೃಢೀಕರಣಾಯ ಪುನರಪ್ಯುಪದಿಶತಿ–ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿರೂಪೋ ಬಭೂವ । ಯಥಾ ಏಕಸ್ತೇಜೋಧಾತುಃ, ತ್ರಿವೃತ್ಕರಣಕೃತವ್ಯಾಪ್ತ್ಯಾ ಅಂಡಾಂತರ್ಗತಲೋಕೇ ಪ್ರವಿಷ್ಟಸ್ಸನ್, ರೂಪಂ ರೂಪಮ್–ರೂಪೇ ರೂಪೇ, ಯಾವದ್ಭೌತಿಕವ್ಯಕ್ತಿ। ವೀಪ್ಸಾಯಾಂ ದ್ವಿರ್ವಚನಮ್ । ಪ್ರತಿರೂಪಃ–ಪ್ರತ್ಯುಪ್ತಂ ರೂಪಂ ಯಸ್ಯ ಸ ತಥೋಕ್ತಃ । ಸರ್ವಾಸು ಭೌತಿಕವ್ಯಕ್ತಿಷು ತೇಜೋಧಾತೋರ್ಮಿಲಿತ

---

1. ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಇವು ಪಂಚಭೂತಗಳು. ಪ್ರತಿಯೊಂದು ಭೂತವನ್ನೂ ಮೊದಲು ಎರಡು ಭಾಗ ಮಾಡಬೇಕು. ನಂತರ ಎರಡನೇ ಭಾಗದಲ್ಲಿ ಪುನಃ ನಾಲ್ಕು ಭಾಗಮಾಡಿ ಆ ನಾಲ್ಕು ಭಾಗವನ್ನು ಉಳಿದ 4 ಭೂತಗಳಿಗೆ ಸೇರಿಸಬೇಕು. ಹಾಗೆ ಸೇರಿಸುವಿಕೆಯನ್ನು ಪಂಚೀಕರಣವೆನ್ನುತ್ತಾರೆ.

ತ್ವೇನ ಪ್ರತಿಸಂಕ್ರಾಂತರೂಪತ್ವಮಸ್ತೀತಿ ದ್ರಷ್ಟವ್ಯಮ್ । ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂರೂಪಂ ಪ್ರತಿರೂಪೋ ಬಹಿಶ್ಚ । ತಥಾ ಏಕ ಏವ ಸನ್ ಪರಮಾತ್ಮಾ, ಪ್ರತಿವಸ್ತು ಸಂಕ್ರಾಂತಾಂತರ್ಯಾಮಿವಿಗ್ರಹೋ, ಬಹಿಶ್ಚ ವ್ಯಾಪ್ನೋತಿ ಇತ್ಯರ್ಥಃ ॥

ಅನುವಾದ

'ಒಂದೇ ಆತ್ಮವು ಎಲ್ಲರಿಗೂ ಅಹಂ ಎಂದು ಭಾಸವಾಗುತ್ತಿದೆ' ಎಂಬುದನ್ನು ತಿಳಿಯಲು ಕಷ್ಟವಾಗಿರುವುದರಿಂದ ಅದನ್ನು ದೃಢಪಡಿಸಲು ಪುನಃ ಉಪದೇಶಿಸುತ್ತಾನೆ. ಅಗ್ನಿರ್ಯಥೈಕೋ ಭುವನಂ....ಬಭೂವ–ಹೇಗೆ ತೇಜೋರೂಪವಾದ ಒಂದೇ ಧಾತುವು [1]ತ್ರಿವೃತ್ಕರಣ ರೂಪದಿಂದ ಬ್ರಹ್ಮಾಂಡದಲ್ಲಿ (ಪ್ರಪಂಚದಲ್ಲಿ) ಪ್ರವೇಶಿಸಿ. ರೂಪಂರೂಪಮ್–ಎಲ್ಲ ಭೌತಿಕ ವಸ್ತುಗಳಲ್ಲಿ ಎಂದರ್ಥ. ವೀಪ್ಸಾರ್ಥದಲ್ಲಿ ದ್ವಿರುಕ್ತಿ ಬಂದಿದೆ. ಪ್ರತಿರೂಪಃ–ಯಾವುದರ ರೂಪವು ಪ್ರತಿಯೊಂದರಲ್ಲೂ ಸೇರಿದೆಯೋ ಅದು. ಅಂದರೆ ಎಲ್ಲ ಭೌತಿಕವಸ್ತುಗಳಲ್ಲೂ ತೇಜೋಧಾತುವು ಸೇರಿರುವುದರಿಂದ ಪ್ರತಿಯೊಂದರಲ್ಲೂ ಸೇರಿರುವ ರೂಪವುಳ್ಳದ್ದಾಗಿದೆ ಎಂದು ತಿಳಿಯಬೇಕು. ಏಕಸ್ತಥಾ..........ಬಹಿಶ್ಚ. ಪರಮಾತ್ಮನೊಬ್ಬನೇ ಆದರೂ ಪ್ರತಿ ವಸ್ತುವಿನಲ್ಲೂ ಅಂತರ್ಯಾಮಿಸ್ವರೂಪದಿಂದ ಸೇರಿ, ಹೊರಗೂ ವ್ಯಾಪಿಸುತ್ತಾನೆ ಎಂದು ತಾತ್ಪರ್ಯ.

ಭಾಷ್ಯಸಾರ

ಒಬ್ಬನೇ ಪರಮಾತ್ಮನು ಎಲ್ಲ ಪ್ರಾಣಿಗಳಿಗೂ ಅಂತರಾತ್ಮನಾಗಿರುವನು ಎಂಬುದನ್ನು ತಿಳಿಯುವುದು ಕಷ್ಟ. ಆದುದರಿಂದ ವಹ್ನಿದೃಷ್ಟಾಂತದಿಂದ ಪರಮಾತ್ಮನು ಎಲ್ಲ ಪ್ರಾಣಿಗಳಿಗೂ ಅಂತರಾತ್ಮನಾಗಿರುವನು ಎಂಬುದನ್ನು 'ಅಗ್ನಿರ್ಯಥೈಕೋ' ಎಂಬ ಮಂತ್ರದಿಂದ ದೃಢಪಡಿಸಿದೆ.

ತೇಜಃಪದಾರ್ಥವು ಒಂದೇ ಆದರೂ ಪ್ರಪಂಚದಲ್ಲಿ ಪಂಚೀಕರಣದಿಂದ ಉಂಟಾದ ಕಟ್ಟಿಗೆ ಮುಂತಾದ ಸಕಲ ಭೌತಿಕಪದಾರ್ಥಗಳಲ್ಲೂ ಪಂಚೀಕರಣಕ್ರಮದಿಂದ ವ್ಯಾಪಿಸಿದೆ. 'ರೂಪಂ ರೂಪಮ್' ಎಂಬಲ್ಲಿ ರೂಪಶಬ್ದವು ಆಕಾರಸೂಚಕ. ವ್ಯಾಪಿಸಿದೆ ಅಂದರೆ ಕಟ್ಟಿಗೆ ಮುಂತಾದ ವಸ್ತುಗಳ ರೂಪದಂತೆಯೇ ರೂಪಹೊಂದಿದೆ ; ಕಟ್ಟಿಗೆಯಲ್ಲಿರುವ ಬೆಂಕಿ ಉರಿಯಲಾರಂಭಿಸಿದಾಗ ಬೆಂಕಿಯು ಕಟ್ಟಿಗೆಯ ಅಂಕುಡೊಂಕಿನಂತೆಯೇ ಆಕಾರ ತಳೆಯುತ್ತದೆ. ಹೀಗೆ ತೇಜಸ್ಸು ಕಟ್ಟಿಗೆಯ ಒಳಗೂ ಹೊರಗೂ ವ್ಯಾಪಿಸುತ್ತದೆ ಎಂದರ್ಥ. ಅಂತೆಯೇ ಎಲ್ಲ ವಸ್ತುಗಳಿಗೂ ಅಂತರಾತ್ಮನಾದ ಪರಮಾತ್ಮನು ಅಂತರ್ಯಾಮಿಯಾಗಿದ್ದರೂ ದೇವ–ಮನುಷ್ಯಮುಂತಾದವರಂತೆಯೇ ಆಕಾರ ತಳೆಯುತ್ತಾನೆ. ಹೊರಗೆ ಆಕಾಶದಂತೆ ಎಲ್ಲವನ್ನೂ ವ್ಯಾಪಿಸುತ್ತಾನೆ. ಈ ಅರ್ಥವನ್ನು 'ಅಂತರ್ಬಹಿಶ್ಚ ಭೂತಾನಾಂ ವ್ಯಾಪ್ಯ ನಾರಾಯಣಃಸ್ಥಿತಃ' ಎಂಬ ಸ್ಮೃತಿವಾಕ್ಯವು ಸಮರ್ಥಿಸುತ್ತದೆ' ಎಂದು ರಾಮಾನಂದರು ಹೇಳುತ್ತಾರೆ.

ಪರಮಾತ್ಮನು ಎಲ್ಲ ವಸ್ತುಗಳಿಗೂ ಅಂತರಾತ್ಮನಾಗಿರುವನು ಎಂದಲ್ಲಿ ಅಡೆತಡೆಗಳಿಲ್ಲದ ಜ್ಞಾನಶಕ್ತಿಗಳುಳ್ಳ ಈ ಪರಮಾತ್ಮನು ಅಂತರಾತ್ಮನಾಗಿರುವಾಗ ಜೀವಾತ್ಮರಲ್ಲಿ ಜ್ಞಾನ ವೈಲಕ್ಷಣ್ಯವು ಹೇಗೆ ಉಂಟಾಗುವುದು ? ಶರೀರಗಳು ಭಿನ್ನವಾಗಿರುವಂತೆ ಜೀವರೂ ಭಿನ್ನ ಎಂದು ಹೇಳುವುದರಿಂದ ಏನೂ ಪ್ರಯೋಜನವಿಲ್ಲ. ಮತ್ತು ಒಂದೇ ಪರಮಾತ್ಮನನ್ನು

1 ಪೃಥಿವೀ ಅಪ್ ತೇಜಸ್ಸು ಇದು ಮೂರು ಭೂತಗಳು, ಪ್ರತಿಯೊಂದು ಭೂತವನ್ನು ಮೊದಲು ಎರಡು ಭಾಗಮಾಡಿ, ಎರಡನೇ ಭಾಗದಲ್ಲಿ ಪುನಃ ಎರಡು ಭಾಗಮಾಡಿ ಆ ಎರಡು ಭಾಗವನ್ನು ಉಳಿದ ಎರಡು ಭೂತಗಳಿಗೆ ಸೇರಿಸಬೇಕು. ಇದನ್ನು ತ್ರಿವೃತ್ಕರಣವೆನ್ನುತ್ತಾರೆ.

ಆತ್ಮವಾಗಿ ಉಳ್ಳ ಜೀವಾತ್ಮರಲ್ಲಿ ಭಿನ್ನತೆಯು ಉಂಟಾಗಲಾರದು ಎಂಬ ಸಂದೇಹವನ್ನು ದೃಷ್ಟಾಂತದ ಮೂಲಕ ಪರಿಹರಿಸುತ್ತಾ, ಪರಮಾತ್ಮನೊಬ್ಬನೇ ಎಲ್ಲದಕ್ಕೂ ಅಂತರಾತ್ಮನಾಗಿರುವನು ಎಂಬುದನ್ನು 'ಅಗ್ನಿರ್ಯಥಾ' ಎಂಬುದರಿಂದ ಉಪದೇಶಿಸುತ್ತಾನೆ,

'ಸುಬೋಧಿನೀಕಾರರು' ಬೆಂಕಿಯಲ್ಲಿ ಸ್ವಾಭಾವಿಕವಾಗಿ ಅಂಕುಡೊಂಕುಗಳಿಲ್ಲ ಒಂದೇ ರೂಪವಿದೆ. ಈ ಅಗ್ನಿಯು ಸುಡಲು ಅರ್ಹವಾದ ಕಟ್ಟಿಗೆ ಮುಂತಾದ ವಸ್ತುಗಳನ್ನು ಪ್ರವೇಶಿಸಿ ಆಯಾಯಾ ವಸ್ತುಗಳ ಆಕಾರವನ್ನು ತಾಳುತ್ತದೆ. ವಕ್ರವಾದ ವಸ್ತುವನ್ನು ಸೇರಿ ವಕ್ರವಾಗಿರುವಂತೆಯೂ, ಉದ್ದವಾದ ವಸ್ತುವನ್ನು ಸೇರಿ ಉದ್ದವಾಗಿರುವಂತೆಯೂ, ಕಾಣುತ್ತದೆ. ಮತ್ತು ಕಟ್ಟಿಗೆಯ ಒಳಗೂ ಹೊರಗೂ ವ್ಯಾಪಿಸಿರುತ್ತದೆ. ಅಂತೆಯೇ ಎಲ್ಲ ಪ್ರಾಣಿಗಳ ಅಂತರಾತ್ಮನು ದೇವ ಮನುಷ್ಯ ಮುಂತಾದ ಪ್ರಾಣಿಗಳಲ್ಲಿ ಸೇರಿ, ತಾನು ಕರ್ಮವಶನಾಗದ ಕಾರಣ ಜ್ಞಾನದ ಸಂಕೋಚ-ವಿಕಾಸಗಳಿಲ್ಲದಿದ್ದರೂ, ದೇವತೆಗಳಲ್ಲಿ ಸೇರಿ ದೇವತೆಗಳಂತೆಯೂ, ಮನುಷ್ಯರಲ್ಲಿ ಸೇರಿ ಮನುಷ್ಯರಂತೆಯೂ ರೂಪವುಳ್ಳವನಾಗಿ ಕಾಣುತ್ತಾನೆ.

'ಕರ್ಮಫಲವಿಶೇಷದಿಂದ ಮನುಷ್ಯರಾಗಿ ಜನಿಸುತ್ತಾರೆ. ಇದರಿಂದ ಇವರಿಗೆ ಜ್ಞಾನ ಸಂಕೋಚವಾಗುತ್ತದೆ. ಇಂತಹ ಮನುಷ್ಯರಲ್ಲಿ ಪರಮಾತ್ಮನು ಇದ್ದು ನಿಯಂತ್ರಿಸುತ್ತಾನೆ. ಪರಮಾತ್ಮನಿಗೆ ಜ್ಞಾನಸಂಕೋಚವಿಲ್ಲದಿದ್ದರೂ ದೇವತೆಗಳನ್ನು ಎಚ್ಚರಿಸುವಂತೆ ಮಾನವರನ್ನು ಎಚ್ಚರಿಸುವುದಿಲ್ಲ. ಪರಮಾತ್ಮನು ಚೇತನರಲ್ಲಿ ನೆಲೆಸಲು ಅವರ ಕರ್ಮದ ಅಪೇಕ್ಷೆಯಿರುವುದು. ಆದುದರಿಂದ ತಾನು ಕರ್ಮವಶನಲ್ಲದಿದ್ದರೂ, ಅಡೆತಡೆಗಳಿಲ್ಲದ ಜ್ಞಾನಶಕ್ತಿವಿಶಿಷ್ಟನಾಗಿದ್ದರೂ, ಕರ್ಮವಶರಾದ ಚೇತನರಲ್ಲಿ ನೆಲೆಸಿ ಅವರವರ ಕರ್ಮಕ್ಕೆ ಅನುಗುಣವಾಗಿಯೇ ಕೆಲಸಮಾಡುವಂತೆ ಪ್ರೇರೇಪಿಸುತ್ತಾನೆ' ಎಂದು ದೇವ-ಮನುಷ್ಯಾದಿ ರೂಪವುಳ್ಳವನಂತೆ ಕಾಣುತ್ತಾನೆ ಎಂಬ ಮಾತಿನ ತಾತ್ಪರ್ಯ. ಇದರಿಂದ ಅಪ್ರತಿಹತವಾದ ಜ್ಞಾನಶಕ್ತಿಯುಳ್ಳ ಪರಮಾತ್ಮನೊಬ್ಬನೇ ಎಲ್ಲ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದರೂ, ಶರೀರವು ಕರ್ಮಾಧೀನವಾದುದರಿಂದ ಶರೀರದಲ್ಲಿರುವ ಚೇತನಗಳಲ್ಲಿ ಯೋನಿಭೇದದಿಂದ ಜ್ಞಾನವೈಲಕ್ಷಣ್ಯವುಂಟಾಗಿಯೇ ಉಂಟಾಗುವುದು ಎಂದು ಸಿದ್ಧವಾಗುವುದು. ಹೀಗೆ ಅಂತರ್ಯಾಮಿಯಾಗಿರುವಾಗ ಆಯಾ ಚೇತನದ ಕರ್ಮಕ್ಕೆ ಅನುಗುಣವಾಗಿಯೇ ಪ್ರೇರೇಪಿಸುತ್ತಾ, ತನ್ನ ಜ್ಞಾನಶಕ್ತಿಗಳನ್ನು ಪ್ರಕಾಶಪಡಿಸದೆಯೇ ಇರುವನು. ತನ್ನ ನೆಲೆಯಾದ ಪರಮಪದದಲ್ಲಿ ತನ್ನ ನಿಜಸ್ವರೂಪದಲ್ಲಿರುವಾಗ ತನ್ನ ಜ್ಞಾನಶಕ್ತಿ ಮುಂತಾದ ಗುಣಗಳನ್ನು ಯಾವಾಗಲೂ ಪ್ರಕಾಶಪಡಿಸುತ್ತಲೇ ಇರುವನು ಎಂಬ ಅಭಿಪ್ರಾಯದಿಂದ ಹೇಳುತ್ತಾನೆ. 'ಬಹಿಶ್ಚ' ಎಂಬಲ್ಲಿನ 'ಚ'ಕಾರವು 'ತು' ಎಂಬರ್ಥದಲ್ಲಿದೆ. ಅಂತರ್ಯಾಮಿಸ್ವರೂಪವನ್ನು ಬಿಟ್ಟು ಇತರ ಕಡೆಗಳಲ್ಲಿ ಎಂದರ್ಥ.

ಪರಮಾತ್ಮನು ಎಲ್ಲ ಪ್ರಾಣಿಗಳ ಒಳಗೂ ಹೊರಗೂ ವ್ಯಾಪಿಸಿರುವನು ಎಂಬುದನ್ನು 'ಅಗ್ನಿ' ಎಂಬ ದೃಷ್ಟಾಂತದ ಮೂಲಕ ಉಪದೇಶಿಸುತ್ತಾನೆ. ಅಗ್ನಿ ಎಂದರೆ ತೇಜಸ್ಸು. ಅಗ್ನಿಯು ವ್ಯಾಪಿಸದೇ ಇರುವ ಪ್ರದೇಶವೇ ಇಲ್ಲ. ಅವನು ಸೂಕ್ಷ್ಮರೂಪದಲ್ಲಿ ಎಲ್ಲ ಕಡೆಯೂ ಇರುವನು. ಸ್ಥೂಲವಾದ ಜಲ ಮುಂತಾದ ಭೌತಿಕ ವಸ್ತುಗಳಲ್ಲಿ ಒಳಹೊಕ್ಕು ಇರುವನು. ಸೂಕ್ಷ್ಮವಾದ ಕಡೆಗಳಲ್ಲಿ ಹೊರಗೆ ಮಾತ್ರ ವ್ಯಾಪಿಸಿರುವನು. ಹೀಗೆ ಅಗ್ನಿಯು

ಹೊರಗೂ ಒಳಗೂ ವ್ಯಾಪಿಸಿದ್ದರೂ ಏಕರೂಪದಲ್ಲಿಯೇ ಹೇಗೆ ಇರುವನೋ ; ಹಾಗೆಯೇ ಎಲ್ಲ ಪ್ರಾಣಿಗಳ ಅಂತರಾತ್ಮನಾದವನು ಎಲ್ಲ ವಸ್ತುಗಳ ಹೊರಗೂ ಒಳಗೂ ಏಕರೂಪದಲ್ಲಿಯೇ ವ್ಯಾಪಿಸಿರುವನು ಎಂಬ ಅಭಿಪ್ರಾಯದಿಂದ 'ಅಗ್ನಿರ್ಯಥಾ ಭುವನಂ ಪ್ರವಿಷ್ಟೋ ಭಹಿಶ್ಚ ಏಕಸ್ತಥಾ ಸರ್ವಭೂತಾಂತರಾತ್ಮಾ' ಎಂದು ಅಥವಾ ಎಂಬುದರಿಂದ ವಿವರಿಸುತ್ತಾರೆ.

'ಅಂತರ್ಯಾಮಿಯಾಗಿ ಸೂಕ್ಷ್ಮರೂಪದಲ್ಲಿ ಎಲ್ಲ ಪ್ರಾಣಿಗಳ ಒಳಗೂ ಹೊರಗೂ ವ್ಯಾಪಿಸಿರುವ ಪರಬ್ರಹ್ಮವು ಒಳ-ಹೊರ ಎಂಬ ಭೇದವಿದ್ದರೂ ತಾನು ಯಾವ ವ್ಯತ್ಯಾಸವೂ ಇಲ್ಲದೇ ಇರುವುದು ಎಂದು ತಾತ್ಪರ್ಯ. ಒಳಗೆ ವ್ಯಾಪಿಸಿದೆ ಎಂಬಲ್ಲಿರುವ ವಿಶೇಷವನ್ನು 'ರೂಪಂರೂಪಮ್' ಎಂಬುದರಿಂದ ಹೇಳುತ್ತಾರೆ. ಒಂದೇ ತೆರನಾದ ಅಗ್ನಿಯು ಭೌತಿಕ ವಸ್ತುಗಳ ಒಳಗೆ ವ್ಯಾಪಿಸಿ ಹೇಗೆ ಭಿನ್ನ-ಭಿನ್ನ ಆಕಾರವನ್ನು ತಳೆಯುವುದೋ ಹಾಗೆ ಒಂದೇ ಅಂತರಾತ್ಮವು ಪ್ರತಿವಸ್ತುವಿನ ಆಕಾರವನ್ನು ತಳೆಯುತ್ತದೆ. ಅಗ್ನಿಯು ನೀರು, ಪೃಥಿವೀ ಮುಂತಾದ ಭೌತಿಕವಸ್ತುಗಳ ಒಳಗೆ ವ್ಯಾಪಿಸಿದ್ದರೂ, ಅವುಗಳಿಂದ ಬೇರ್ಪಡಿಸಲಾಗದುದರಿಂದ ಭಿನ್ನ-ಭಿನ್ನ ಆಕಾರತಳೆಯದೆ ಜಲ, ಪೃಥಿವೀ ಎಂದೇ ಭಿನ್ನ-ಭಿನ್ನ ನಾಮರೂಪಗಳಿಂದ ವ್ಯವಹರಿಸಲ್ಪಡುತ್ತದೆ, ಹಾಗೆಯೇ ಪರಮಾತ್ಮನು ಆಯಾಯಾ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದು ಪೃಥಕ್ಕರಿಸಲಾಗದ ಕಾರಣ ದೇವ-ಮನುಷ್ಯಾದಿಭಿನ್ನ-ಭಿನ್ನ ನಾಮರೂಪಗಳಿಂದ ಕಾಣಿಸುತ್ತಾನೆ ಎಂದು ತಾತ್ಪರ್ಯ. ಮತ್ತೆ ಕೆಲವರು ಅಲ್ಲಲ್ಲಿ ಅಂತರ್ಯಾಮಿಯಾಗಿ ಬೇರೆ ಬೇರೆ ಶರೀರದಿಂದ ಪ್ರಕಾಶಿಸುತ್ತಾನೆ ಎಂದು ಅನ್ವಯಿಸುತ್ತಾರೆ. ಅಂತರ್ಯಾಮಿತ್ವವೂ ಪರಮಾತ್ಮನ ಒಂದು ಅವತಾರವಿಶೇಷವೆಂದು ಅವರ ಅಭಿಪ್ರಾಯ' ಎಂದು ಹೇಳುತ್ತಾರೆ.



## ಮಂತ್ರ ೧೦

**वायुर्यथैको भुवनं प्रविष्टो रूपंरूपं प्रतिरूपो बभूव ।**
**एकस्तथा सर्वभूतान्तरात्मा रूपंरूपं प्रतिरूपो बहिश्च ॥**

ವಾಯುರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂರೂಪಂ ಪ್ರತಿರೂಪೋ ಬಹಿಶ್ಚ ।

### ಪ್ರತಿಪದಾರ್ಥ

ಏಕೋ ವಾಯುಃ—ಪಂಚೀಕರಣಹೊಂದದೇ ಇರುವ ವಾಯುವು ಭುವನಮ್—ಭೂಲೋಕವನ್ನು ಪ್ರವಿಷ್ಟಃ—ಪಂಚೀಕರಣದಿಂದ ಪ್ರವೇಶಿಸಿ ರೂಪಂ ರೂಪಮ್—ಎಲ್ಲ ರೂಪಗಳಲ್ಲಿಯೂ ಪ್ರತಿರೂಪಃ—ಸೇರಿದ ರೂಪವುಳ್ಳದ್ದಾಗಿ, ಯಥಾ—ಹೇಗೆ ಬಭೂವ—ಆಗಿರುವುದೋ ತಥಾ—ಹಾಗೆಯೇ ಸರ್ವಭೂತಾಂತರಾತ್ಮಾ—ಸರ್ವವಸ್ತುಗಳಿಗೂ ಅಂತರಾತ್ಮನಾದ ಪರಮಾತ್ಮನು ಏಕಃ—ಒಬ್ಬನೇ ರೂಪಂರೂಪಮ್—ಎಲ್ಲ ಪ್ರಾಣಿಗಳ (ಒಳಗೂ) ಬಹಿಶ್ಚ-ಹೊರಗೂ ಪ್ರತಿರೂಪಃ—ಆಯಾಯಾ ರೂಪವುಳ್ಳದ್ದಾಗಿ, ಬಭೂವ—ಆಗಿರುವನು.

### ತಾತ್ಪರ್ಯ

ಹೇಗೆ ಒಂದೇ ವಾಯುವು ಈ ಲೋಕವನ್ನು ಪ್ರವೇಶಿಸಿ ಎಲ್ಲ ಭೂತಗಳಲ್ಲೂ (ಪಂಚೀಕರಣದಿಂದ) ಪ್ರತಿರೂಪವಾಗಿರುವುದೋ, ಹಾಗೆಯೇ ಸರ್ವಭೂತಾಂತರಾತ್ಮನಾದ ಒಬ್ಬನೇ ಪರಮಾತ್ಮನು ಎಲ್ಲ ಭೂತಗಳಲ್ಲೂ ಆಯಾಯಾ ರೂಪವಾಗಿ ಒಳಗೂ ಹೊರಗೂ ಇರುವನು.

### ರಂಗರಾಮಾನುಜಭಾಷ್ಯಮ್

ಉದಾಹರಣಾಂತರಮಾಹ—ವಾಯುರ್ಯಥೈಕೋ ಭುವನಮ್...........ಬಹಿಶ್ಚ ! ಪೂರ್ವವತ್ ॥

### ಅನುವಾದ

ಬೇರೊಂದು ಉದಾಹರಣೆಯನ್ನು ಹೇಳುತ್ತಾನೆ. ವಾಯುರ್ಯಥೈಕೋ ಭುವನಮ್ ...ಬಹಿಶ್ಚ ಹಿಂದಿನ ಮಂತ್ರದಂತೆಯೇ ಅರ್ಥ.

### ಭಾಷ್ಯಸಾರ

ಅಗ್ನಿಗಿಂತಲೂ ಸೂಕ್ಷ್ಮವಾದ ವಾಯುವಿನ ದೃಷ್ಟಾಂತದಿಂದ ಒಬ್ಬನೇ ಪರಮಾತ್ಮನು ಎಲ್ಲದಕ್ಕೂ ಅಂತರಾತ್ಮನಾಗಿರುವನು ಎಂಬುದನ್ನು 'ವಾಯುರ್ಯಥಾ' ಎಂಬುದರಿಂದ ಪುನಃ ದೃಢಪಡಿಸುತ್ತಾನೆ.

ಮಂತ್ರಾರ್ಥವು ಹಿಂದಿನ ಮಂತ್ರದಲ್ಲಿ ಹೇಳಿರುವಂತೆಯೇ ವಾಯುವು ಪಂಚೀಕರಣ ಪ್ರಕ್ರಿಯೆಯಿಂದ ಅಗ್ನಿಯಲ್ಲೂ ಇರುವುದರಿಂದ ಅಗ್ನಿಗಿಂತಲೂ ವಾಯುವಿನ ಉದಾಹರಣೆ ಸೂಕ್ಷ್ಮವಾದುದು ಎಂದು ತಿಳಿಯಬೇಕು. ವಾಯುವು ಪ್ರಪಂಚದ ಎಲ್ಲ ವಸ್ತುಗಳ ಒಳಗೂ ಹೊರಗೂ ಹೇಗೆ ವ್ಯಾಪಿಸಿರುವುದೋ ಅಂತೆಯೇ ಪರಮಾತ್ಮನು ಎಲ್ಲ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿದ್ದಾನೆ ಎಂದು ತಾತ್ಪರ್ಯ.



## ಮಂತ್ರ ೧೧

**सूर्यो यथा सर्वलोकस्य चक्षुर्न लिप्यते चाक्षुषैर्बाह्यदोषैः ।**
**एकस्तथा सर्वभूतान्तरात्मा न लिप्यते लोकदुःखेन बाह्यः ॥**

ಸೂರ್‍ಯೋ ಯಥಾ ಸರ್ವಲೋಕಸ್ಯ ಚಕ್ಷುಃ
ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥

### ಪ್ರತಿಪದಾರ್ಥ

ಸರ್ವಲೋಕಸ್ಯ ಚಕ್ಷುಃ—ಎಲ್ಲ ಪ್ರಾಣಿಗಳ ಕಣ್ಣಿನಲ್ಲೂ ಇರುವ, ಸೂರ್‍ಯಃ —ಸೂರ್ಯನು, ಯಥಾ-ಹೇಗೆ ಚಾಕ್ಷುಷೈಃ—ಕಣ್ಣಿಗೆ ಸಂಬಂಧಪಟ್ಟ, ಬಾಹ್ಯದೋಷೈಃ—ಹೊರಗಿನ ಮಾಲಿನ್ಯಾದಿದೋಷಗಳಿಂದ, ನ ಲಿಪ್ಯತೇ—ಅಂಟಿಕೊಳ್ಳುವುದಿಲ್ಲ, ತಥಾ—ಹಾಗೆ, ಏಕಃ—ಒಬ್ಬನೇ ಆದ, ಸರ್ವಭೂತಾಂತರಾತ್ಮಾ—ಎಲ್ಲಾ ಪ್ರಾಣಿಗಳಲ್ಲಿಯೂ ಇರುವ ಪರಮಾತ್ಮನು, ಲೋಕದುಃಖೇನ–ಸಮಸ್ತ ಪ್ರಾಣಿಗಳ (ಸಂಸಾರ) ದುಃಖದಿಂದ ನ ಲಿಪ್ಯತೇ-ಸಂಬಂಧಿಸಲ್ಪಡುವುದಿಲ್ಲ, ಬಾಹ್ಯಃ—ಈ ಪರಮಾತ್ಮನು ಚೇತನಾಚೇತನಗಳಿಂದ ವಿಲಕ್ಷಣನು.

### ತಾತ್ಪರ್ಯ

ಸೂರ್‍ಯನು ಕಣ್ಣಿಗೆ ಅಧಿದೇವತೆಯಾಗಿ ಕಣ್ಣಿನಲ್ಲಿ ನೆಲೆಸಿರುವನು. ಹೀಗಿದ್ದರೂ ಕಣ್ಣಿಗೆ ಸಂಬಂಧಪಟ್ಟ ಬಾಹ್ಯದೋಷಗಳು ಸೂರ್ಯನಿಗೆ ಅಂಟಿಕೊಳ್ಳುವುದಿಲ್ಲ. ಹಾಗೆಯೇ ಸಕಲ ಚೇತನಾಚೇತನಗಳಿಗಿಂತ ವಿಲಕ್ಷಣನಾದ ಪರಮಾತ್ಮನು ಸರ್ವಪ್ರಾಣಿಗಳಲ್ಲಿ ಅಂತರಾತ್ಮನಾಗಿದ್ದರೂ, ಕರ್ಮದಿಂದುಂಟಾಗುವ ದುಃಖಗಳು ಅವನಿಗೆ ಅಂಟುವುದಿಲ್ಲ ಎಂದು ತಾತ್ಪರ್ಯ.

### ರಂಗರಾಮಾನುಜಭಾಷ್ಯಮ್

ಆತ್ಮತ್ವಾವಿಶೇಷೇಽಪಿ 'ಜೀವಾತ್ಮವತ್ ದೋಷಾಃ ಪರಮಾತ್ಮನಿ ನ ಭವಂತೀ'ತ್ಯೇತತ್ ಸದೃಷ್ಟಾಂತಮಾಹ–ಸೂರ್‍ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ। ಏಕಸ್ತಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಬಾಹ್ಯಃ॥ 'ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ (ಬೃ.ಉ.7-5-1) 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್ (ಐ.ಉ. ?) ಇತಿ ಶ್ರುತ್ಯನುಸಾರೇಣ, ಯಥಾ ಸೂರ್‍ಯಃ ಚಕ್ಷುರಧಿಷ್ಠಾತೃತಯಾ ತದಂತರ್ಗತೋಽಪಿ, ಬಹಿರ್ನಿರ್ಗತೈಶ್ಚಕ್ಷುರ್ಮಲಾದಿಭಿರ್ನ ಸ್ಪೃಶ್ಯತೇ; ತಥಾ ಪರಮಾತ್ಮಾ ಸರ್ವಭೂತೇಷು ಆತ್ಮತಯಾ ವರ್ತಮಾನೋಽಪಿ, ತದ್ಗತೈರ್ದೋಷೈರ್ನ ಸ್ಪೃಶ್ಯತೇ। ತಸ್ಯ ಸ್ವಾಭಾವಿಕಾಪಹತಪಾಪ್ಮತ್ವಾದಿಗುಣಯುಕ್ತತಯಾ ಸ್ವೇತರಸಮಸ್ತಬಾಹ್ಯತ್ವಾತ್–ವಿಲಕ್ಷಣತ್ವಾತ್ ಇತ್ಯರ್ಥಃ.

### ಅನುವಾದ

ಆತ್ಮತ್ವವೆಂಬುದು ಜೀವಾತ್ಮ–ಪರಮಾತ್ಮರಿಬ್ಬರಲ್ಲೂ ಇದೆ. ಆದರೂ ಜೀವಾತ್ಮನಲ್ಲಿರುವಂತೆ ದೋಷಗಳು ಪರಮಾತ್ಮನಲ್ಲಿ ಇರುವುದಿಲ್ಲ. ಇದನ್ನು ದೃಷ್ಟಾಂತದ ಮೂಲಕ

ವಿವರಿಸುತ್ತಾನೆ. ಸೂರ್ಯೋ ಯಥಾ................ಲೋಕದುಃಖೇನ ಬಾಹ್ಯಃ. 'ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ' (ಬೃ.ಉ 7-5-1) 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್' (ಐ.ಉ. 2) ಎಂಬ ಶ್ರುತಿಗನುಸಾರವಾಗಿ ಸೂರ್ಯನು ಚಕ್ಷುರಿಂದ್ರಿಯದ ಅಧಿದೇವತೆಯಾಗಿ ಕಣ್ಣಿನಲ್ಲಿದ್ದರೂ, ಹೊರ ಚೆಲ್ಲುವ ಕಣ್ಣಿನ ಮಲ ಮುಂತಾದ ದೋಷಗಳು ಅವನಿಗೆ ಹೇಗೆ ಅಂಟುವುದಿಲ್ಲವೋ ಹಾಗೆಯೇ, ಎಲ್ಲ ಪ್ರಾಣಿಗಳಿಗೂ ಆಪ್ತನಾಗಿದ್ದರೂ ಪರಮಾತ್ಮನಿಗೆ ಆ ಪ್ರಾಣಿಗಳ ದೋಷಗಳು ಅಂಟುವುದಿಲ್ಲ. ಏಕೆಂದರೆ ಆತನು ಸ್ವಾಭಾವಿಕವಾದ ಅಪಹತ ಪಾಪ್ಮತ್ವ ಮುಂತಾದ ಗುಣವಿಶಿಷ್ಟನಾದುದರಿಂದ ತನಗಿಂತ ಭಿನ್ನವಾದ ಸಮಸ್ತವಸ್ತು ಗಳಿಗಿಂತ ವಿಲಕ್ಷಣನು.

ಭಾಷ್ಯಸಾರ

ಪರಮಾತ್ಮನು ಎಲ್ಲ ವಸ್ತುಗಳ ಒಳಗೂ ಹೊರಗೂ ಆತ್ಮನಾಗಿರುವನು ಎಂದಲ್ಲಿ ಜೀವನಂತೆ ಪರಮಾತ್ಮನಿಗೂ ಸುಖದುಃಖಗಳ ಸಂಬಂಧ ಉಂಟಾಗಲಿ ಎಂಬ ಆಶಂಕೆಯನ್ನು 'ಸೂರ್ಯೋ ಯಥಾ' ಎಂಬ ದೃಷ್ಟಾಂತದಿಂದ ಪರಿಹರಿಸುತ್ತಾನೆ.

'ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ'(ಬೃ.ಉ.7-5-1) 'ಆದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶತ್' (ಐ.ಉ.-2) ಎಂಬ ಶ್ರುತಿಗಳಲ್ಲಿ ಹೇಳಿರುವಂತೆ ಸೂರ್ಯನು ಕಣ್ಣಿನ ಅಧಿದೇವತೆಯಾಗಿ ಕಣ್ಣಿನೊಳಗೆ ನೆಲೆಸಿರುವನು. ಹೀಗಿದ್ದರೂ ಕಣ್ಣಿನ ಹೊರದೋಷಗಳೆನಿಸಿದ ಕಾಂತಿಹೀನತೆ-ಕಾಮಾಲೆ-ಹೂವು-ಕೊಳಕು ಮುಂತಾದ ದೋಷಗಳು ಸೂರ್ಯನನ್ನು ಮರೆಸುವುದಿಲ್ಲ. ಈ ದೋಷಗಳು ಸೂರ್ಯನಿಗೆ ಅಂಟುವುದಿಲ್ಲ. ಅಂತೆಯೇ ಅಂತರ್ಯಾಮಿಯಾದ ಒಬ್ಬನೇ ಎಲ್ಲ ವಸ್ತುಗಳ ಒಳಗೆ ಇದ್ದರೂ ಅವುಗಳ ದೋಷವು ಪರಮಾತ್ಮನಿಗೆ ಅಂಟುವುದಿಲ್ಲ.

ಪ್ರಾಣಿಗಳ ಶರೀರದ ಒಳಗಿರುವ ಜೀವಾತ್ಮನ ಸುಖದುಃಖಗಳು ಪರಮಾತ್ಮನಿಗೆ ಅಂಟುವುದಿಲ್ಲ. ಜೀವಾತ್ಮನಿಗೆ ದೋಷ ಅಂಟಿದರೂ ಪರಮಾತ್ಮನಿಗೆ ದೋಷ ಅಂಟುವುದಿಲ್ಲ ಎಂಬುದರಿಂದ ಜಡವಸ್ತುಗಳಿಗಿಂತ ವಿಲಕ್ಷಣನು ಎಂದು ಹೇಳಿದಂತಾಗುತ್ತದೆ. ಜೀವಾತ್ಮಸಮುದಾಯದ ಸುಖದುಃಖಗಳು ಕರ್ಮದಿಂದ ಉಂಟಾದುದು. ಪರಮಾತ್ಮ ಕರ್ಮವಶ್ಯನಲ್ಲ. ಆತನು ಸಹಜವಾದ ಅಪಹತಪಾಪ್ಮತ್ವಾದಿ ಗುಣಗಳುಳ್ಳವನು. ಆದುದರಿಂದಲೇ ಅವನು ಇತರ ವಸ್ತುಗಳಿಗಿಂತ ವಿಲಕ್ಷಣನು.

ಅಥವಾ ಕಣ್ಣಿನಲ್ಲಿದ್ದರೂ ಸೂರ್ಯನು ಹೇಗೆ ಅದಕ್ಕಿಂತ ಭಿನ್ನವಾಗಿ ಕಣ್ಣಿನ ದೋಷಗಳಿಗೆ ಒಳಗಾಗುವುದಿಲ್ಲವೋ, ಹಾಗೆಯೇ ಪರಮಾತ್ಮನು ಎಲ್ಲ ವಸ್ತುಗಳಲ್ಲೂ ಅಂತರಾತ್ಮವಾಗಿದ್ದರೂ ಅವುಗಳಿಗಿಂತ ವಿಲಕ್ಷಣನಾದುದರಿಂದ ಅವುಗಳ ದೋಷಗಳಿಗೆ ಪರಮಾತ್ಮನು ಒಳಗಾಗುವುದಿಲ್ಲ ಎಂದು ತಾತ್ಪರ್ಯ.



1. ಸೂರ್ಯನು ಕಿರಣಗಳಿಂದ ಕಣ್ಣಿನಲ್ಲಿ ನೆಲೆಸಿದ್ದಾನೆ.
2. ಸೂರ್ಯನು ಕಣ್ಣಿನ ಅಧಿದೇವತೆಯಾಗಿ ಕಣ್ಣಿನಲ್ಲಿ ಪ್ರವೇಶಿಸಿರುವನು

# ಮಂತ್ರ ೧೨

**एको वशी सर्वभूतान्तरात्मा एकं बीजं बहुधा यः करोति ।**
**तमात्मस्थं येऽनुपश्यन्ति धीराः तेषां सुखं नेतरेषाम् ॥**

ಏಕೋ ವಶೀ ಸರ್ವಭೂತಾಂತರಾತ್ಮಾ
ಏಕಂ ಬೀಜಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ
ತೇಷಾಂ ಸುಖಂ ನೇತರೇಷಾಮ್ ॥

### ಪ್ರತಿಪದಾರ್ಥ

ಏಕಃ—ತನಗೆ ಸಮರೂ-ಅಧಿಕರೂ ಇಲ್ಲದ, ವಶೀ—ಜಗತ್ತನ್ನು ತನ್ನ ವಶದಲ್ಲಿಟ್ಟುಕೊಂಡಿರುವ, ಸರ್ವಭೂತಾಂತರಾತ್ಮಾ—ಸರ್ವಪ್ರಾಣಿಗಳಿಗೂ ಅಂತರಾತ್ಮನೂ ಆದ, ಯಃ—ಯಾವ ಪರಮಾತ್ಮನು, ಏಕಂ ಬೀಜಮ್—ತನ್ನಲ್ಲಿ ಸೇರಿರುವ ಜಗತ್ತಿಗೆ ಕಾರಣವಾದ ಪ್ರಕೃತಿಯನ್ನು, ಬಹುಧಾ—ಅನೇಕವಾಗಿ, ಕರೋತಿ—(ಸಂಕಲ್ಪದಿಂದ) ಮಾಡುತ್ತಾನೋ, ತಮ್—ಆ, ಆತ್ಮಸ್ಥಮ್—(ಆತ್ಮದಲ್ಲಿ) ಅಂತರ್ಯಾಮಿಯಾಗಿರುವ ಪರಮಾತ್ಮನನ್ನು, ಯೇ ಧೀರಾಃ—ಯಾವ ಜ್ಞಾನಿಗಳು, ಅನುಪಶ್ಯಂತಿ—ಯಾವಾಗಲೂ ನೋಡುತ್ತಾರೆಯೋ, ತೇಷಾಮ್—ಆ ಜ್ಞಾನಿಗಳಿಗೆ, ಶಾಶ್ವತಮ್—ನಿರಂತರವಾದ, ಸುಖಮ್—ಸುಖವು, ಇತರೇಷಾಮ್—ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳದವರಿಗೆ, ನ—ಆ ಸುಖವಿಲ್ಲ.

### ತಾತ್ಪರ್ಯ

ಪರಮಾತ್ಮನು ಎಲ್ಲ ಪ್ರಾಣಿಗಳಲ್ಲೂ ಅಂತರಾತ್ಮನಾಗಿರುವನು. ಆದುದರಿಂದಲೇ ಈತನು ಚೇತನಾಚೇತನರೂಪವಾದ ಪ್ರಪಂಚವನ್ನು ತನ್ನ ವಶದಲ್ಲಿಟ್ಟುಕೊಂಡಿರುವನು. ಇವನಿಗೆ ಬೇರೆ ಸಹಾಯ ಬೇಕಿಲ್ಲ. ತನ್ನಲ್ಲಿ ಸೇರಿರುವ ಪ್ರಕೃತಿಯನ್ನು ಮಹದಾದಿರೂಪಗಳಲ್ಲಿ ನಾನಾವಿಧವಾಗಿ ಸಂಕಲ್ಪದಿಂದಲೇ ಸೃಷ್ಟಿಸುತ್ತಾನೆ. ಈ ಅಂತರಾತ್ಮವನ್ನು ಯಾರು ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೋ ಅವರು ಸಾಂಸಾರಿಕದುಃಖಗಳಿಂದ ಪಾರಾಗಿ, ಶಾಶ್ವತವಾದ ಮೋಕ್ಷವನ್ನು ಪಡೆಯುತ್ತಾರೆ. ಪರಮಾತ್ಮನ ಸಾಕ್ಷಾತ್ಕಾರವಿಲ್ಲದವರು ಈ ಮೋಕ್ಷವನ್ನು ಪಡೆಯುವುದಿಲ್ಲ.

### ರಂಗರಾಮಾನುಜಭಾಷ್ಯಮ್

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ಬೀಜಂ ಬಹುಧಾ ಯಃ ಕರೋತಿ। ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್। ಏಕಃ-ಸಮಾಭ್ಯಧಿಕರಹಿತಃ। ವಶಃ-ಇಚ್ಛಾ। ಸೋಽಸ್ಯಾಸ್ತೀತಿ ವಶೀ। 'ಜಗದ್ವಶೇ ವರ್ತತೇದಮ್' ಇತ್ಯುಕ್ತರೀತ್ಯಾ ವಶವರ್ತಿಪ್ರಪಂಚಕ ಇತ್ಯರ್ಥಃ। 'ಇಮೌ ಸ್ಮ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ' (ರಾ.ಬಾ. 31-4)ಇತ್ಯುಕ್ತರೀತ್ಯಾ 'ಭಕ್ತವಶ್ಯಃ' ಇತಿ ವಾ ಅರ್ಥಃ। ಏಕಂ ಬೀಜಮ್ 'ತಮಃ ಪರೇ ದೇವ ಏಕೀಭವತಿ' (ಸುಬಾ.ಉ.-2) ಇತಿ ಶ್ರುತ್ಯುಕ್ತರೀತ್ಯಾ ಸ್ವೇನ ಏಕೀಭೂತಮವಿಭಾಗಾವಸ್ಥಂ ತಮೋಲಕ್ಷಣಂ ಬೀಜಂ, ಮಹದಾದಿಬಹುವಿಧಪ್ರಪಂಚರೂಪೇಣ ಯೋ ಪಶ್ಯಂತಿ, ತೇಷಾಮೇವ ಮುಕ್ತಿಃ ಇತ್ಯರ್ಥಃ॥

## ಅನುವಾದ

ಏಕೋ ವಶೀ.................. ... . ........ಶಾಶ್ವತಂ ನೇತರೇಷಾಮ್ । ಏಕಃ— ತನಗೆ ಸಮವೂ, ಅಧಿಕವೂ ಆದ ವಸ್ತುಗಳಿಲ್ಲದವನು. ವಶಃ–ಇಚ್ಛೆ ಅದನ್ನುಳ್ಳವನು ವಶೀ. 'ಜಗದ್ವಶೇ ವರ್ತತೇದಮ್' ಎಂದು ಹೇಳಿದಂತೆ ಪ್ರಪಂಚವನ್ನು ವಶದಲ್ಲಿಟ್ಟುಕೊಂಡಿರುವವನು ಎಂದರ್ಥ. ಅಥವಾ 'ಇಮೌ ಸ್ಮ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ' (ರಾ.ಬಾ. 31–4) ಎಂದು ಹೇಳಿರುವಂತೆ ಭಕ್ತಪರವಶನು ಎಂದರ್ಥ. ಏಕಂ ಬೀಜಮ್–'ತಮಃ ಪರೇ ದೇವ ಏಕೀಭವತಿ' (ಸುಬಾ.ಉ.–2) ಎಂದು ಶ್ರುತಿಯಲ್ಲಿ ಹೇಳಿರುವಂತೆ ತನ್ನೊಡನೆ ಒಂದಾಗಿ ಸೇರಿ ವಿಭಾಗಿಸಲಸಾಧ್ಯವಾದ ತಮೋರೂಪವಾದ ಬೀಜವನ್ನು, ಮಹತ್ ಮುಂತಾದ ಅನೇಕ ವಿಧವಾದ ಪ್ರಪಂಚರೂಪವಾಗಿ ಯಾವನು ಮಾಡುತ್ತಾನೋ; ತಮ್ –'ಯ ಆತ್ಮನಿ ತಿಷ್ಠನ್' ಎಂಬಲ್ಲಿ ಹೇಳಿರುವಂತೆ ಅಂತರ್ಯಾಮಿಯಾದ ಅವನನ್ನು ಯಾರು ನೋಡುತ್ತಾರೋ ಅವರಿಗೆ ಮುಕ್ತಿಯು ಎಂದರ್ಥ.

## ಭಾಷ್ಯಸಾರ

ಪರಮಾತ್ಮತತ್ತ್ವವನ್ನು ಅರಿಯುವುದರಿಂದ ಶಾಶ್ವತವಾದ ಸುಖ ಸಿಗುವುದು. ಇಲ್ಲದಿದ್ದರೆ ಇಲ್ಲ ಎಂಬುದನ್ನು 'ಏಕೋ ವಶೀ' ಎಂಬ ಈ ಮಂತ್ರದಿಂದ ತಿಳಿಸುತ್ತಾನೆ.

'ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಪರಮಾತ್ಮನಿಗೆ ಸಮನಾದ ಅಥವಾ ಅಧಿಕವಾದ ವಸ್ತುವಿಲ್ಲ. ಆದುದರಿಂದ ಈತನೊಬ್ಬನೇ. ಈತನು ಚಿದಚಿದ್ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದು ಅವುಗಳನ್ನು ನಿಯಂತ್ರಿಸುತ್ತಾನೆ. ಆದ್ದರಿಂದ ಚರಾಚರಪ್ರಪಂಚವೆಲ್ಲವೂ ಇವನ ವಶದಲ್ಲಿದೆ. ಆದುದರಿಂದ ಈತನನ್ನು 'ವಶೀ' ಎಂದು ಹೇಳುತ್ತಾರೆ ಈತನೇ ಎಲ್ಲದಕ್ಕೂ ಕಾರಣನು ಎಂಬ ವಿಷಯವನ್ನು 'ಏಕಂ ಬೀಜಮ್' ಎಂಬುದರಿಂದ ತಿಳಿಸುತ್ತಾನೆ. ಪ್ರಕೃತಿಯೇ ಪರಿಣಾಮಕ್ಕೆ ಕಾರಣ. ಇದು ಪರಮಾತ್ಮನಲ್ಲಿ ಬೇರ್ಪಡಿಸದಂತೆ ಸೇರಿದೆ. ಆದುದರಿಂದ ಈ ಪ್ರಕೃತಿಯನ್ನು 'ಏಕಂ ಬೀಜಮ್' ಎಂದು ಹೇಳಿದೆ. ಪರಮಾತ್ಮನು ತನ್ನ ಸಂಕಲ್ಪದಿಂದ ಕಾರಣವಾದ ಈ ಪ್ರಕೃತಿಯನ್ನು ಮಹತ್ ಮುಂತಾದ ರೂಪಗಳಲ್ಲಿ ಅನೇಕ ವಿಧವಾಗಿ ತನ್ನ ಸಂಕಲ್ಪದಿಂದಲೇ ಪರಿಣಾಮಗೊಳಿಸುತ್ತಾನೆ. 'ಏಕಮ್' ಎಂಬ ಅವಿಭಕ್ತವಿಶೇಷಣದಿಂದ ಎಲ್ಲ ವಿಕಾರಿದ್ರವ್ಯಗಳಿಗೂ ಪರಮಾತ್ಮನೇ ಉಪಾದಾನಕಾರಣ ಎಂದು ಹೇಳಿದಂತಾಗುತ್ತದೆ. ಎಲ್ಲದಕ್ಕೂ ಕಾರಣನು, ಎಲ್ಲದಕ್ಕೂ ಅಂತರಾತ್ಮನು. 'ಯ ಆತ್ಮನಿ ತಿಷ್ಠನ್' ಎಂಬ ಶ್ರುತಿಯಲ್ಲಿ ಹೇಳಿರುವಂತೆ ಆತ್ಮಕ್ಕೂ ಅಂತರ್ಯಾಮಿಯಾಗಿರುವವನೂ ಆದ ಪರಮಾತ್ಮನನ್ನು ಯಾರು ಶ್ರವಣಾನಂತರ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೋ, ಅವರಿಗೆ ಶಾಶ್ವತವಾದ ಸುಖವುಂಟಾಗುತ್ತದೆ. ಅಂದರೆ ಮೋಕ್ಷವುಂಟಾಗುವುದು ಎಂದರ್ಥ. ಈತನನ್ನು ಯಾರು ತಿಳಿಯುವುದಿಲ್ಲವೋ, ಅಥವಾ ಶಾಸ್ತ್ರದಿಂದ ತಿಳಿದರೂ ಯೋಗದಿಂದ ಸಾಕ್ಷಾತ್ಕರಿಸಿಕೊಳ್ಳುವುದಿಲ್ಲವೋ, ಬೇರೆಡೆ ಆತ್ಮವನ್ನು ಕಂಡು ತನ್ನ ಆತ್ಮದಲ್ಲಿರುವುದನ್ನು ತಿಳಿಯುವುದಿಲ್ಲವೋ, ಅವರಿಗೆ ಈ ಶಾಶ್ವತ ಸುಖ ಸಿಗುವುದಿಲ್ಲ. ಸುಖರೂಪದಲ್ಲಿ ಕಾಣುವ ದುಃಖದೊಡಗೂಡಿದ ಈ ಸಂಸಾರವೇ ಸಿಗುವುದು ಎಂದು ತಾತ್ಪರ್ಯ.



---

1. ಮುನಿಶ್ರೇಷ್ಠನೇ ! ನಾವಿಬ್ಬರೂ ನಿನ್ನ ಸೇವಕರಾಗಿ ಬಂದಿರುವೆವು.
2. ತಮಸ್ಸು ಪರಮಾತ್ಮನಲ್ಲಿ ಒಂದಾಗುವುದು.

## ಮಂತ್ರ ೧೩

**नित्यो नित्यानां चेतनश्चेतनानामेको बहूनां यो विदधाति कामान् ।
तमात्मस्थं येऽनुपश्यन्ति धीराः तेषां शान्तिः शाश्वती नेतरेषाम् ॥**

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್
ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ
ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥

### ಪ್ರತಿಪದಾರ್ಥ

ನಿತ್ಯಾನಾಮ್—ನಾಶರಹಿತವಾದ, ಬಹೂನಾಮ್—ನಾನಾ ವಿಧರಾದ, ಚೇತನಾನಾಮ್—ಚೈತನ್ಯವಿಶಿಷ್ಟರಾದ ಸರ್ವಪ್ರಾಣಿಗಳಲ್ಲಿ, ನಿತ್ಯಃ—ಸರ್ವಕಾಲದಲ್ಲೂ ಇರುವವನೂ (ನಿತ್ಯನು) ಏಕಃ—ತನಗೆ ಸಮವೂ ಅಧಿಕವೂ ಆದ ವಸ್ತು ಇನ್ನೊಂದಿಲ್ಲದವನೂ, ಚೇತನಃ—ಸರ್ವಜ್ಞನೂ (ಸಕಲಗುಣವಿಶಿಷ್ಟನೂ) ಆದ, ಯಃ—ಯಾವ ಪರಮಾತ್ಮನು, ಕಾಮಾನ್—ಚೇತನರು ಅಪೇಕ್ಷಿಸುವ ಐಹಿಕ ಆಮುಷ್ಮಿಕವಾದ ಫಲಗಳನ್ನು ವಿದಧಾತಿ—ಕೃಪೆಯಿಂದ ಕೊಡುತ್ತಾನೆಯೋ ತಮ್—ಆ ಪರಮಾತ್ಮನನ್ನು, ಆತ್ಮಸ್ಥಮ್—ಆತ್ಮದಲ್ಲಿ ಅಂತರ್ಯಾಮಿಯಾಗಿ ಇರುವವನೆಂದು, ಯೇ ಧೀರಾಃ—ಯಾವ ಜ್ಞಾನಿಗಳು, ಅನುಪಶ್ಯಂತಿ—ಯಾವಾಗಲೂ ನೋಡುತ್ತಾರೆಯೋ, ತೇಷಾಮ್—ಅಂತಹವರಿಗೆ, ಶಾಶ್ವತೀ ಶಾಂತಿಃ—ಶಾಶ್ವತವಾದ ಶಾಂತಿಯು (ಉಂಟಾಗುತ್ತದೆ). ಇತರೇಷಾಮ್—ಪರಮಾತ್ಮಸಾಕ್ಷಾತ್ಕಾರವಿಲ್ಲದವರಿಗೆ, ನ—ಶಾಂತಿ ಇಲ್ಲ.

### ತಾತ್ಪರ್ಯ

ಚೇತನರು ನಿತ್ಯರು ಮುಕ್ತರು ಎಂದು ನಾನಾವಿಧರಾಗಿರುವರು. ಇವರೆಲ್ಲರಿಗೂ ನಿತ್ಯನೂ, ಜ್ಞಾನಸ್ವರೂಪಿಯೂ ಆದ ಪರಮಾತ್ಮನೊಬ್ಬನೇ ಅವರವರ ಕರ್ಮಫಲಗಳನ್ನು ಕೊಡುತ್ತಾನೆ. ಇವನು ಎಲ್ಲರ ಆತ್ಮದಲ್ಲೂ ಅಂತರ್ಯಾಮಿಯಾಗಿರುವನೆಂದು ಯಾರು ಸಾಕ್ಷಾತ್ಕಾರಮಾಡಿಕೊಳ್ಳುತ್ತಾರೋ ಅವರು ಸಾಂಸಾರಿಕಕಷ್ಟದಿಂದ ಪಾರಾಗಿ ಶಾಶ್ವತವಾದ ಶಾಂತಿಯನ್ನು ಪಡೆಯುತ್ತಾರೆ. ಬೇರೆಯವರಿಗೆ ಈ ಶಾಂತಿ ಸಿಗುವುದಿಲ್ಲ.

### ರಂಗರಾಮಾನುಜಭಾಷ್ಯಮ್

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ । ನಿತ್ಯಶ್ಚೇತನ ಏಕ ಏವ ಸನ್ ಬಹೂನಾಂ ನಿತ್ಯಾನಾಂ ಚೇತನಾನಾಮಪೇಕ್ಷಿತಾರ್ಥಾನ್ ಅನಾಯಾಸೇನ ಪ್ರಯಚ್ಛತಿ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ । ಸ್ಪಷ್ಟೋಽರ್ಥಃ ॥

### ಅನುವಾದ

ನಿತ್ಯೋ ನಿತ್ಯಾನಾಮ್............ಕಾಮಾನ್. ನಿತ್ಯನೂ, ಚೇತನರೂಪನೂ ಆದ ಒಬ್ಬನೇ ಪರಮಾತ್ಮನು ಅನೇಕರೂ, ನಿತ್ಯರೂ ಆದ ಚೇತನರೂಪರಾದ ಜೀವಾತ್ಮರಿಗೆ ಬೇಕಾದವು

ಗಳನ್ನು ಶ್ರಮವಿಲ್ಲದೆ ಕೊಡುತ್ತಾನೆ. ತಮಾತ್ಮಸ್ಥಂ ಯೋಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ । ಅರ್ಥ ಸ್ಪಷ್ಟವಾಗಿದೆ.

ಭಾಷ್ಯಸಾರ

ಪರಮಾತ್ಮನೊಬ್ಬನೇ ಸಕಲವಿಧವಾದ ಬಯಕೆಗಳನ್ನು ಪೂರ್ಣಗೊಳಿಸುವನು ಎಂದು 'ನಿತ್ಯೋ ನಿತ್ಯಾನಾಮ್' ಎಂಬ ಮಂತ್ರದಿಂದ ತಿಳಿಸುತ್ತಾನೆ.

ಪರಮಾತ್ಮನು ನಿತ್ಯನು. ಅವನು ಇತರ ವಸ್ತುವಿಗಿಂತ ವಿಲಕ್ಷಣನು. ಈತನು ನಿತ್ಯರೂ, ಅನೇಕ ರೀತಿಯಲ್ಲಿರುವವರೂ ಆದ ಚೇತನರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವನು. ಈ ಪರಮಾತ್ಮನೇ ಚೇತನರಿಗೆ ಕರ್ಮಾನುಗುಣವಾಗಿ ಅವರವರ ಬಯಕೆಗಳನ್ನು ಅಂದರೆ ಭೋಗ್ಯ ವಸ್ತುಗಳನ್ನು ಪೂರ್ಣಗೊಳಿಸುತ್ತಾನೆ. ಜೀವಾತ್ಮರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವರಿಗೆ ಸಂಸಾರನಿವೃತ್ತಿರೂಪವಾದ, ಶಾಶ್ವತವಾದ ಶಾಂತಿ ಲಭಿಸುತ್ತದೆ. ಬೇರೆಯವರು ಈ ಸಂಸಾರದಲ್ಲಿ ತೊಳಲಾಡಬೇಕಾಗುತ್ತದೆ. ಇಲ್ಲಿ 'ನಿತ್ಯಾನಾಂ ಬಹೂನಾಮ್' ಎಂದು ಹೇಳುವುದರಿಂದ 'ಜೀವಗಳು ಅನೇಕ' ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.



## ಮಂತ್ರ ೧೪

**तदेतदिति मन्यन्तेऽनिर्देश्यं परमं सुखम् ।**
**कथन्नु तद् विजानीयां किमु भाति विभाति वा ॥**

ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್।
ಕಥನ್ನು ತದ್ ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ॥

### ಪ್ರತಿಪದಾರ್ಥ

ಅನಿರ್ದೇಶ್ಯಮ್—ಗುರುತಿಸಲಸಾಧ್ಯವಾದ, ಪರಮಮ್—ಉತ್ಕೃಷ್ಟವಾದ, ಸುಖಮ್—ಆನಂದ ಸ್ವರೂಪವಾದ ತತ್—ಹಿಂದೆ ಹೇಳಲ್ಪಟ್ಟ ಆ ಪರಬ್ರಹ್ಮವನ್ನು, ಏತದಿತಿ—ಈ ರೀತಿಯದೆಂದು (ಪ್ರತ್ಯಕ್ಷವಾಗಿ) ಮನ್ಯಂತೇ—ಬ್ರಹ್ಮಜ್ಞಾನಿಗಳು ತಿಳಿಯುತ್ತಾರೆ, ತತ್—(ಅನಿರ್ದೇಶ್ಯಸುಖರೂಪವಾದ) ಆ ಪರಬ್ರಹ್ಮವನ್ನು ಕಥನ್ನು—ಹೇಗೆ ತಾನೇ, ವಿಜಾನೀಯಾಮ್—(ನಾನು) ತಿಳಿಯಬಲ್ಲೆನು. ಕಿಮು ಭಾತಿ—ಆ ಪರಬ್ರಹ್ಮವು ಸಾಮಾನ್ಯರೂಪದಲ್ಲಿ) ಪ್ರಕಾಶಿಸುವುದೇ ? ವಾ—ಅಥವಾ, ವಿಭಾತಿ—ಸ್ಪಷ್ಟವಾಗಿ ಪ್ರಕಾಶಿಸುವುದೇ ? (ಎಂದು ನಚಿಕೇತನು ಪ್ರಶ್ನಿಸಿದನು.)

### ತಾತ್ಪರ್ಯ

ಪರಬ್ರಹ್ಮವು ಹೀಗಿದೆ ಎಂದು ತಿಳಿಯಲು ಅಸಾಧ್ಯವಾದುದು ಮತ್ತು ಉತ್ತಮವೂ ಆನಂದಸ್ವರೂಪವೂ, ಆದ ಆ ಪರಬ್ರಹ್ಮಸ್ವರೂಪವನ್ನು ಜ್ಞಾನಿಗಳು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳಬಲ್ಲರು. ಈ ಅನಿರ್ದೇಶ್ಯವೂ, ಉತ್ಕೃಷ್ಟವೂ, ಆನಂದಸ್ವರೂಪವೂ ಆದ ಪರಬ್ರಹ್ಮವನ್ನು ನಾನು ಹೇಗೆ ತಿಳಿಯಬಲ್ಲೆನು ? ಆ ಪರಬ್ರಹ್ಮವುಸಾಮಾನ್ಯಾಕಾರ ದಲ್ಲಿ ಪ್ರಕಾಶಿಸುವುದೇ ? ಅಥವಾ ಸ್ಪಷ್ಟವಾಗಿ ವಿಶೇಷರೂಪದಲ್ಲಿಪ್ರಕಾಶಿಸುವುದೇ ? ಎಂದು ನಚಿಕೇತನು ಯಮನನ್ನು ಕೇಳಿದನು.

### ರಂಗರಾಮಾನುಜಭಾಷ್ಯಮ್

ಏವಮುಕ್ತಃ ಶಿಷ್ಯಃ ಆಹ–ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್। ಕಥನ್ನು ತದ್ವಿಜಾನೀಯಾಂ ಕಿಮು ಭಾತಿ ವಿಭಾತಿ ವಾ। ತತ್–ಅಲೌಕಿಕಂ ಪರಮಾನಂದರೂಪಂ ಬ್ರಹ್ಮ, ಏತದಿತಿ–ಕರತಲಾಮಲಕವತ್ ಅಪರೋಕ್ಷಂ ಭವಾದೃಶಾಃ ನಿಷ್ಪನ್ನಯೋಗಾಃ ಮನ್ಯಂತೇ । ಭವಾದೃಶಾಸ್ಸಾಕ್ಷಾತ್ಕರ್ತುಂ ಶಕ್ನುವಂತೀತ್ಯರ್ಥಃ । ಕಥಂ ರೂಪಾದಿಹೀನಬ್ರಹ್ಮಗ್ರಹಣಾಸಮರ್ಥಮಾನಸೋಽಹಂ ತತ್ ಕಿಂ ದೀಪ್ತಿಮತ್ತಯಾ ಭಾಸತೇ । ತತ್ರಾಪಿ ವಿಸ್ಪಷ್ಟಂ ಪ್ರಕಾಶತೇ। ಉತ ತೇಜೋಽಂತರಸಂವಲನಾನ್ನ ವಿಸ್ಪಷ್ಟಂ ಪ್ರಕಾಶತೇ ? ಇತಿ ಪ್ರಶ್ನಃ ॥

### ಅನುವಾದ

ಗುರುವಾದ ಯಮನು 'ನಿತ್ಯೋ ನಿತ್ಯಾನಾಮ್' ಎಂಬುವುದರಿಂದ ಪರಮಾತ್ಮಸಾಕ್ಷಾತ್ಕಾರಮಾಡಿಕೊಂಡವರಿಗೆ ಮುಕ್ತಿ ಎಂದು ಹೇಳಲಿಕ್ಕಾಗಿ ಶಿಷ್ಯನಾದ ನಚಿಕೇತನು ಹೇಳುತ್ತಾನೆ ತದೇತದಿತಿ....................ವಿಭಾತಿ ವಾ. ತತ್–ಅಲೌಕಿಕವೂ, ಪರಮಾನಂದರೂಪವೂ ಆದ ಬ್ರಹ್ಮವನ್ನು ಏತದಿತಿ–ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಪ್ರತ್ಯಕ್ಷವಾಗಿ ನಿನ್ನಂತಹ ಯೋಗಸಿದ್ಧಿಪಡೆದ(ಯಮನಂತಹ)ವರು ತಿಳಿಯುತ್ತಾರೆ. ನಿಮ್ಮಂತಹವರು ಸಾಕ್ಷಾತ್ಕರಿಸಲು ಸಮರ್ಥರು ಎಂದು ತಾತ್ಪರ್ಯ. ರೂಪಾದಿಗಳಿಲ್ಲದ ಬ್ರಹ್ಮವನ್ನು ಅರಿಯಲು ಅಸಮರ್ಥ

ನಾದ ನಾನು (ನಚಿಕೇತ) ಹೇಗೆ ಆ ಬ್ರಹ್ಮವನ್ನು ತಿಳಿಯಬಲ್ಲೆನು. ಆ ಬ್ರಹ್ಮವು ತೇಜೋರೂಪವಾಗಿ ಪ್ರಕಾಶಿಸುವುದೇ ? ಅಲ್ಲೂ ಸ್ಪಷ್ಟವಾಗಿ ಪ್ರಕಾಶಿಸುತ್ತದೆಯೋ ? ಅಥವಾ ಬೇರೊಂದು ತೇಜಸ್ಸಿನಿಂದ ಮರೆಸಲ್ಪಟ್ಟು ಸ್ಪಷ್ಟವಾಗಿ ಪ್ರಕಾಶಿಸುವುದಿಲ್ಲವೇ ? ಎಂದು ಪ್ರಶ್ನಿಸಿದನು.

## ಭಾಷ್ಯಸಾರ

ಯಮನು ಉಪದೇಶಿಸಿದ ಪರಮಾತ್ಮಸ್ವರೂಪವನ್ನು ಕೇಳಿದ ನಚಿಕೇತನು ಈ ಪರಮಾತ್ಮಸ್ವರೂಪದ ಸಾಕ್ಷಾತ್ಕಾರವು ನಮಗೆ ಉಂಟಾಗುವುದೋ ಅಥವಾ ಇಲ್ಲವೋ ಎಂದು 'ತದೇತದಿತಿ' ಎಂಬ ಮಂತ್ರದಿಂದ ಶಂಕಿಸುತ್ತಾನೆ,

ಪರಮಾತ್ಮನ ಸಾಕ್ಷಾತ್ಕಾರದಿಂದ ಶಾಶ್ವತವಾದ ಸುಖ ಲಭಿಸುತ್ತದೆ ಎಂದು ಯಮನು ತಿಳಿಸಿದನು. ಈ ಸುಖವು ಉತ್ಕೃಷ್ಟವಾದುದು. ಅಂದರೆ ಯಾವ ಪರಮಾತ್ಮನನ್ನು ಅನುಭವಿಸುವುದರಿಂದ ಇತರ ಎಲ್ಲ ಸುಖಾನುಭವಗಳೂ ಉಂಟಾಗುವುವೋ ಅದು ಉತ್ಕೃಷ್ಟವಾದುದು. ಅದನ್ನು ಗುರುತಿಸಲೂ ಆಗುವುದಿಲ್ಲ. ಆದರೂ 'ಏತತ್' ಎಂದು ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಯೋಗದಲ್ಲಿ ಸಿದ್ಧಿಪಡೆದ ನಿನ್ನಂತಹವರು ತಿಳಿಯಬಲ್ಲರು. ನಾನಾದರೋ ಯೋಗಿಯಲ್ಲ. ಆದುದರಿಂದ ಗುರುತಿಸಲಾಗದ ಪರಮಸುಖರೂಪವಾದ ಬ್ರಹ್ಮವನ್ನು ಹೇಗೆ ತಿಳಿಯಲಿ ಅಂದರೆ ಹೇಗೆ ಸಾಕ್ಷಾತ್ಕರಿಸಬಲ್ಲೆನು ? ಸುಖಸ್ವರೂಪವಾದ ಬ್ರಹ್ಮಕ್ಕೆ ಆಕಾರ ಮುಂತಾದವುಗಳು ಇಲ್ಲದಿರುವುದರಿಂದ ನನ್ನಂತಹ ಜನರು ತಿಳಿಯಲು ಅರ್ಹರಲ್ಲ.

ಆ ಬ್ರಹ್ಮವು ನನ್ನಂತಹವರೂ ತಿಳಿಯುವಂತೆ ಪ್ರಕಾಶಿಸುವುದೇ ಅಥವಾ ನಿನ್ನಂತಹವರು ಸ್ಪಷ್ಟವಾಗಿ ಸಾಕ್ಷಾತ್ಕರಿಸಲು ಆಗುವಂತೆ ಪ್ರಕಾಶಿಸುವುದೇ ? ಮಂತ್ರದಲ್ಲಿ 'ಭಾತಿ ವಿಭಾತಿ ವಾ' ಎಂದಿದೆ. ಇಲ್ಲಿನ 'ವಾ' ಎಂಬುದು ವಿಕಲ್ಪಾರ್ಥದಲ್ಲಿದೆ. ಆದುದರಿಂದ ವಿಶೇಷ ರೂಪದಲ್ಲಿ ಭಾಸವಾಗುವುದೇ ಇಲ್ಲವೇ ? ಎಂಬ ಪ್ರಶ್ನೆಯೂ ಹುಟ್ಟುತ್ತದೆ ಎಂದು ರಾಮಾನಂದರು ವಿವರಿಸಿದ್ದಾರೆ.

ಸುಬೋಧಿನೀಕಾರರು 'ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವರಿಗೆ ಶಾಶ್ವತವಾದ ಸುಖಸಿಗುವುದೆಂದು ಫಲರೂಪವಾಗಿ ಪ್ರಸ್ತಾಪಿಸಲ್ಪಟ್ಟಿರುವುದು ಯಾವುದು ? ಎಂಬುದಕ್ಕೆ 'ತದೇತತ್' ಎಂಬ ಮಂತ್ರವು ವಿವರಿಸುತ್ತದೆ. 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಲ್ಲಿ ಹೇಳಿದಂತೆ 'ಇದು' ಎಂದು ಗುರುತಿಸಿ ಹೇಳಲು ಆಗದ ಪರಮಸುಖವನ್ನು ಅನುಭವಿಸುವುದರಿಂದ ಅನುಭವಿಸಬೇಕಾದ ಇತರ ಸುಖಗಳಾವುದೂ ಉಳಿಯುವುದಿಲ್ಲವೋ, ಆ ಸುಖ ಪರಮಸುಖ. ಅಂದರೆ ಪರಮಾತ್ಮನ ಅನುಭವದಲ್ಲಿ ಇಲ್ಲಿರುವ ಇರದಿರುವ ಎಲ್ಲ ಸುಖಗಳೂ ಸೇರಿವೆ. ಆದುದರಿಂದ ಇತರ ಸುಖಗಳನ್ನು ಅನುಭವಿಸಬೇಕೆಂಬ ಇಚ್ಛೆ ಉಳಿಯುವುದಿಲ್ಲ ಎಂದು ತಾತ್ಪರ್ಯ. ಹಿಂದಿನ ವಲ್ಲಿಯಲ್ಲಿ ಹೇಳಿದ ಪರಬ್ರಹ್ಮವು ಇಲ್ಲಿ ಹೇಳಿರುವುದಕ್ಕಿಂತ ಭಿನ್ನವಾದುದಲ್ಲ. 'ಅದೇ ಇದು' ಎಂದು ಬ್ರಹ್ಮಜ್ಞಾನಿಗಳು ತಿಳಿಯುತ್ತಾರೆ. ಈ ವಿಷಯದಲ್ಲಿ ಆಪ್ತರ ಸಮ್ಮತಿಯನ್ನು 'ಮನ್ಯಂತೇ' ಎಂಬುದರಿಂದ ತಿಳಿಸುತ್ತಾರೆ.

ಅನಂತರ ಶಿಷ್ಯನು ಪರಮಾತ್ಮನ ದಿವ್ಯಮಂಗಳವಿಗ್ರಹದ ಬಗ್ಗೆ ಉಂಟಾದ ಜಿಜ್ಞಾಸೆಯಿಂದ 'ಕಥನ್ನು ತದಿಜಾನೀಯಾಮ್' ಎಂದು ಕೇಳುತ್ತಾನೆ. ಅಳತೆಗೊಳಪಡದ ಪರಮಾ

ಸುಖಸ್ವರೂಪವಾದುದು ಪರಮಾತ್ಮ ಎಂದು ಉಪದೇಶದಿಂದ ತಿಳಿದುಬರುತ್ತದೆ. ಪರಮಾತ್ಮನು ಆಕಾರರಹಿತನು. ಒಂದೇ ರೂಪದಲ್ಲಿರುವವನು ಎಲ್ಲಕಡೆಯೂ ವ್ಯಾಪಿಸಿರುವವನು ಎಂದು ಭಾಸವಾಗುತ್ತದೆ. ಇದನ್ನು ನಿಶ್ಚಯಿಸುವುದೆಂತು ? 'ಕಥಮ್' ಎಂದು ಜಿಜ್ಞಾಸೆ ಮಾಡಿದ ವಿಷಯವನ್ನು 'ಕಿಮು ಭಾತಿ ವಿಭಾತಿ ವಾ ?' ಎಂದು ವಿಕಲ್ಪಮಾಡಿ ತಿಳಿಸುತ್ತಾನೆ. ನಿರತಿಶಯಸುಖರೂಪವಾದ ಪರಬ್ರಹ್ಮವು ಸಾಮಾನ್ಯರೀತಿಯಲ್ಲಿ ಪ್ರಕಾಶಿಸುವುದೇ ? ಅಥವಾ ವಿಶೇಷರೂಪದಲ್ಲಿ ಪ್ರಕಾಶಿಸುವುದೇ ?

'ಆಸ್ತಿಕರಲ್ಲಿ ಶ್ರೇಷ್ಠನಾದ ನಚಿಕೇತನು ಪರಮಾತ್ಮನಿಗೆ ವಿಗ್ರಹವುಂಟೇ ? ಇಲ್ಲವೇ? ಎಂದು ನೇರವಾಗಿ ಕೇಳಲು ಸಂಕೋಚಪಟ್ಟು, ತನಗೆ ಸಾಮಾನ್ಯವಾಗಿ ಉಂಟಾದ ಸಂದೇಹವನ್ನು ಪರಿಹರಿಸಿಕೊಳ್ಳಲು, ವಿಗ್ರಹವುಂಟೆಂಬ ಪಕ್ಷದಲ್ಲಿ ಸಾಮಾನ್ಯವಾಗಿ ಪ್ರಕಾಶಿಸುವುದೇ ? ವಿಶೇಷರೂಪದಲ್ಲಿ ಪ್ರಕಾಶಿಸುವುದೇ ಎಂದು ವಿಕಲ್ಪಮಾಡುತ್ತಾನೆ. ಇದರ ಉತ್ತರದಲ್ಲಿ ವಿಗ್ರಹವು 'ಉಂಟು ಇಲ್ಲ' ಎಂಬುದರಲ್ಲಿ ಒಂದು ಪಕ್ಷವು ನಿಶ್ಚಯಿಸಲ್ಪಡುತ್ತದೆ. ಮುಂದೆ ಹೇಳುವ ಪ್ರಕಾಶವು ತನಗಾಧಾರವಾದ ವಿಗ್ರಹವನ್ನು ಸ್ಮೃತಿಗೆ ತರುತ್ತದೆ. ಇದು 'ಆದಿತ್ಯವರ್ಣಮ್' (ಶ್ವೇ. ಉ. 3-8) ಎಂಬ ಬೇರೊಂದು ಶ್ರುತಿಯ ಅರ್ಥದೊಡನೆಯೂ ಸರಿಹೊಂದುತ್ತದೆ' ಎಂದು ವಿವರಿಸುತ್ತಾರೆ,



## ಮಂತ್ರ ೧೫

**न तत्र सूर्यो भाति न चन्द्रतारकं नेमा विद्युतो भान्ति कुतोऽयमग्निः ।
तमेव भान्तमनुभाति सर्वं तस्य भासा सर्वमिदं विभाति ॥**

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ॥

### ಪ್ರತಿಪದಾರ್ಥ

ತತ್ರ—ಅಲ್ಲಿ (ಪರಮಾತ್ಮನ ಸಾನ್ನಿಧ್ಯದಲ್ಲಿ), ಸೂರ್ಯಃ—ಸೂರ್ಯನು ನ ಭಾತಿ—ಪ್ರಕಾಶಿಸುವುದಿಲ್ಲ, ಚಂದ್ರತಾರಕಮ್—ಚಂದ್ರ ಮತ್ತು ನಕ್ಷತ್ರಗಳೂ, ನ ಭಾತಿ—ಪ್ರಕಾಶಿಸುವುದಿಲ್ಲ, ಇಮಾ ವಿದ್ಯುತಃ—ಕಣ್ಣಿಗೆ ಕಾಣುವ ಈ ಮಿಂಚುಗಳೂ, ನ ಭಾಂತಿ—ಪ್ರಕಾಶಿಸುವುದಿಲ್ಲ. ಅಯಮ್—ಈ ಅಗ್ನಿಃ—ಅಗ್ನಿಯು ಕುತೋಭಾಂತಿ ಪ್ರಕಾಶಿಸುವುದೇ ಇಲ್ಲ, ಭಾಂತಮ್—(ತನ್ನ ತೇಜಸ್ಸಿನಿಂದ) ಪ್ರಕಾಶಿಸುತ್ತಿರುವ, ತಮೇವ—ಆ ಪರಮಾತ್ಮನನ್ನೇ ಸರ್ವಮ್—ಎಲ್ಲವೂ, ಅನುಭಾತಿ—ಅನುಸರಿಸಿ, ಪ್ರಕಾಶಿಸುತ್ತವೆ, ತಸ್ಯ ಭಾಸಾ—ಅವನಿತ್ತ ಪ್ರಕಾಶದಿಂದಲೇ, ಇದಮ್—ಕಣ್ಣಿಗೆ ಕಾಣುತ್ತಿರುವ ಸರ್ವಮ್—ಸೂರ್ಯಚಂದ್ರನಕ್ಷತ್ರಾದಿಗಳೆಲ್ಲವೂ, ವಿಭಾತಿ—ಪ್ರಕಾಶಿಸುತ್ತವೆ.

### ತಾತ್ಪರ್ಯ

ಪರಮಾತ್ಮನ ಸನ್ನಿಧಾನದಲ್ಲಿ ಸೂರ್ಯನಾಗಲೀ, ಚಂದ್ರನಾಗಲೀ, ನಕ್ಷತ್ರಗಳಾಗಲೀ, ಮಿಂಚಾಗಲೀ, ಪ್ರಕಾಶಿಸುವುದಿಲ್ಲ. ಹೀಗಿರುವಲ್ಲಿ ಇಂಧನಗಳಿಂದ ಉಂಟಾದ ಈ ಅಗ್ನಿಯು ಪ್ರಕಾಶಿಸುವುದಿಲ್ಲ ಎಂದು ಹೇಳಬೇಕಾದುದೇ ಇಲ್ಲ ತೇಜೋವಿಶಿಷ್ಟನಾಗಿ ಪ್ರಕಾಶಿಸುತ್ತಿರುವ ಆ ಪರಮಾತ್ಮನನ್ನು ಅನುಸರಿಸಿಯೇ ಇವೆಲ್ಲವೂ ಪ್ರಕಾಶಿಸುತ್ತವೆ. ಆ ಪರಮಾತ್ಮನಿತ್ತ ಪ್ರಕಾಶದಿಂದಲೇ ಕಣ್ಣಿಗೆ ಕಾಣುತ್ತಿರುವ ಸೂರ್ಯ-ಚಂದ್ರಾದಿಗಳು ಪ್ರಕಾಶಿಸುತ್ತವೆ.

### ರಂಗರಾಮಾನುಜಭಾಷ್ಯಮ್

ಪರಮಾತ್ಮನಃ ಯೋಗಯುಗಾಲಂಬನತ್ವಾಯ, 'ಆದಿತ್ಯವರ್ಣಂ ತಮಸಃ ಪರಸ್ತಾತ್' (ಶ್ವೇ.ಉ. 3–8) 'ಸದ್ಯೈಕರೂಪರೂಪಾಯ' (ವಿ.ಸ.ಧ್ಯಾ. 4) ಇತಿ ಪ್ರಮಾಣಪ್ರತಿಪನ್ನ ಶುಭಾಶ್ರಯದಿವ್ಯಮಂಗಳವಿಗ್ರಹೋಽಸ್ತಿ ; ತದ್ವಿಶಿಷ್ಟಃ ಪರಮಾತ್ಮಾ, ವಿಭಾತಿ ಸರ್ವಾತ್ಮಾತಿಶಾಯಿದೀಪ್ತಿಮಾನ್ ಇತ್ಯಾಹ ನ ತತ್ರ........ವಿಭಾತಿ । ಅಯಂ ಚ ಮಂತ್ರಃ, 'ಜ್ಯೋತಿರ್ದರ್ಶನಾತ್' (ಬ್ರ.ಸೂ.1–3–41) ಇತಿ ಸೂತ್ರೇ, 'ಸರ್ವತೇಜಸಾಂ ಭಾದಕಂ ಸರ್ವತೇಜಸಾಂ ಕಾರಣಭೂತಮನುಗ್ರಾಹಕಂ ಚ ಅಂಗುಷ್ಠಪ್ರಮಿತಸ್ಯ ಜ್ಯೋತಿರ್ದೃಶ್ಯತೇ' ಇತಿ ಭಾಷ್ಯೇಣ ವಿವೃತಃ । ಇದಂ ಚ ಭಾಷ್ಯಮ್– 'ನ ತತ್ರ ಸೂರ್ಯಃ' ಇತ್ಯಾದಿಮಂತ್ರೇ ಪೂರ್ವಾರ್ಧಸ್ಯಾರ್ಥಮಾಹ-ಸರ್ವತೇಜಸಾಂ ಭಾದಕಮ್ ಇತಿ। ಉತ್ತರಾರ್ಧಸ್ಯ ಪೂರ್ವಪಾದಾರ್ಥಮಾಹ-ಸರ್ವತೇಜಸಾಂ ಕಾರಣಭೂತಮ್ ಇತಿ। ಅನುಭಾನಂ–ಪಶ್ಚಾದ್ಭಾನಮ್। ತೇನ ಕಾರ್ಯಕಾರಣಭಾವಃ ಸಿದ್ಧಃ । ಪೌರ್ವಾಪರ್ಯನಿಯಮೋ ಹಿ ಕಾರ್ಯಕಾರಣಭಾವ ಇತಿ

ಭಾವಃ । ಚತುರ್ಥಪಾದಾರ್ಥಮಾಹ – ಅನುಗ್ರಾಹಕಮಿತಿ ।'ಯಸ್ಮಾದಿತ್ಯೋ ಮಾಮುಪಯುಜ್ಯ ಭಾತಿ' ಇತ್ಯಾದಿಶ್ರುತಿಶ್ಚಾನುಗ್ರಾಹಕತ್ವೇ ಪ್ರಮಾಣಮ್' ಇತಿ ವ್ಯಾಸಾರ್ಯೈರ್ವಿವೃತಮ್। ತದೀಯದೀಪ್ತಿಸಾಕ್ಷಾತ್ಕಾರಸಂಭವೇ ತೇಜೋಂತರಾಣಾಮಭಿಭೂತತ್ವಂ, 'ಪ್ರಥಮಾರ್ಧಾರ್ಥಃ; ತೇಜೋಂತರೋತ್ಪತ್ತೌ ತದುಪಾದಾನದ್ರವ್ಯಾನುಗ್ರಾಹಕತ್ವರೂಪಂ ನಿಮಿತ್ತತ್ವಂ, ತೃತೀಯಪಾದಾರ್ಥಃ; ಚಾಕ್ಷುರಶ್ಮ್ಯನುಗ್ರಾಹಕಚಂದ್ರಾತಪಾದೇರಿವ, ಉತ್ಪನ್ನಸ್ಯಾಪಿ ತೇಜಸಃ ಸ್ವಸಂಬಂಧೇನ ಸ್ವಕಾರ್ಯಕರಣಸಾಮರ್ಥ್ಯಾಧಾಯಕತ್ವಲಕ್ಷಣಾನುಗ್ರಾಹಕತ್ವಂ, ಚತುರ್ಥಪಾದಾರ್ಥ ಇತ್ಯಪಿ ಅರ್ಥಃ ತತ್ರೈವ ದ್ರಷ್ಟವ್ಯಃ॥

ಅಧಿಷ್ಠಾನಬ್ರಹ್ಮರೂಪಭಾನವ್ಯತಿರಿಕ್ತಭಾನಶೂನ್ಯತ್ವಮಧ್ಯಸ್ತಪ್ರಪಂಚಸ್ಯ ತೃತೀಯಪಾದಾರ್ಥ ಇತಿ ಯತ್ ಪರೈಃ ಉಚ್ಯತೇ, ತದಯುಕ್ತಮ್। ತಥಾ ಹಿ ಸತಿ ಭಾಂತಮಿತಿ ಕರ್ತರ್ಥಶತೃಪ್ರತ್ಯಯಸ್ಯ 'ಶಿಷ್ಯಜ್ಞಾನಂ ಪ್ರಕಾಶತೇ' ಇತಿವತ್ ಅಭೇದೇಽಪಿ ಕಥಂಚಿತ್ಸಂಭವೇಽಪಿ ಅನುಭಾತೀತ್ಯಸ್ಯ ಶಬ್ದಸ್ಯ ಅಯೋಗಾತ್। ನ ಹಿ ದೇವದತ್ತಗಮನಕ್ರಿಯಾವ್ಯತಿರಿಕ್ತಗಮನಕ್ರಿಯಾಶೂನ್ಯೇ ತಿಷ್ಠತಿ ಯಜ್ಞದತ್ತೇ, ಗಚ್ಛಂತಂ ದೇವದತ್ತಂ ಯಜ್ಞದತ್ತೋಽನುಗಚ್ಛತೀತಿ ಪ್ರಯೋಗೋ ದೃಷ್ಟಚರಃ। ನನು-ವಹ್ನಿಮೇವ ದಹಂತಮ್ ಅಯೋಽನುದಹತೀತಿ ಪ್ರಯೋಗೋ ದೃಷ್ಟಚರ–ಇತಿ ಚೇತ್–ನ; ಅಯಸಃ ಪೃಥಕ್‌ದಗ್ಧೃತ್ವಾಭಾವಂ ನಿಶ್ಚಿತವತಃ ತತ್ಪ್ರತಿಪಿಪಾದಯಿಷಯಾ ತಾದೃಶಪ್ರಯೋಗಸ್ಯ ಸಂಪ್ರತಿಪನ್ನತ್ವಾಭಾವಾತ್।

ನನು ತದೀಯದೀಪ್ತಿಸಾಕ್ಷಾತ್ಕಾರಸಂಭವೇ ತೇಜೋಽಂತರಾಣಾಮಭಿಭೂತತ್ವಮಿತಿ ಭವದಭಿಮತಾರ್ಥೋಽಪಿ ನ ಯುಜ್ಯತೇ ; ತದೀಯದೀಪ್ತಿಸಾಕ್ಷಾತ್ಕಾರವತಾಮಪಿ ಮುಕ್ತಾನಾಂ ತೇಜೋಂತರಸಾಕ್ಷಾತ್ಕಾರದರ್ಶನೇನ ಸಜಾತೀಯಸಂವಲನಾಧೀನಾಗ್ರಹಣಲಕ್ಷಣಾಭಿಭವಸ್ಯಾಭಾವಾದಿತಿ ಚೇತ್‌ಉಚ್ಯತೇ । ಬದ್ಧವಿಷಯಮೇವೈತತ್ ॥ ಬದ್ಧಾನಾಂ ತತ್ಸಾಕ್ಷಾತ್ಕಾರಾಪ್ರಸಕ್ತೇರಿದಂ ಕಥಮಿತಿ ಚೇನ್ನ ; ಬದ್ಧಾನಾಮೇವ ಅರ್ಜುನಾದೀನಾಂ ತತ್ಸಾಕ್ಷಾತ್ಕಾರದರ್ಶನಾತ್ । ಯದ್ವಾ ಕಾಲಿದಾಸಕವೌ ಪರಿಗಣ್ಯಮಾನೇ, ಇತರಃ ಕುಕವಿರಕವಿರಿತಿವತ್, ಭಾತಿ ಬ್ರಹ್ಮಣಿ ಪರಿಗಣ್ಯಮಾನೇ, ಸೂರ್ಯಾದಿತೇಜೋಂತರಂ ನ ಭಾತಿ ; ಅತಸ್ತದೇವ ಬ್ರಹ್ಮ ಅತಿಭಾಸ್ವರರೂಪಶಾಲೀತಿ ಪೂರ್ವಾರ್ಧಾರ್ಥಃ । 'ತದೀಯದೀಪ್ತಿಸಾಕ್ಷಾತ್ಕಾರಸಂಭವೇ ತೇಜೋಽಂತರಾಣಾಮಭಿಭೂತತ್ವಮ್' ಇತಿ ವ್ಯಾಸಾರ್ಯವಚನಸ್ಯಾಪಿ ಅಯಮೇವಾರ್ಥಃ। ಇಮಮೇವಾರ್ಥಮ್ ಇತರತೇಜಸಾಂ ಸ್ವರೂಪೋತ್ಪತ್ತೌ ಫಲಜನನೇ ಚ ಪರಮಾತ್ಮಾನುಗ್ರಹಸಾಪೇಕ್ಷತ್ವಪ್ರದರ್ಶಕೇನ, ತಮೇವ ಭಾಂತಮ್ ಇತ್ಯುತ್ತರಾರ್ಧೇನ ದ್ರಢಯತೀತಿ ದೋಷಃ ಇತ್ಯವಗಂತವ್ಯಮ್ । ಯದ್ವಾ–ಪೂರ್ವಾರ್ಧಸ್ಯ ಯಥಾಶ್ರುತ ಏವಾರ್ಥಃ। ನನು ಅತಿಭಾಸ್ವರರೂಪವತಿ ಸೂರ್ಯಾದೌ ಪ್ರತ್ಯಕ್ಷೇಣ ಅನುಭೂಯಮಾನೇ ; ನ ಭಾತೀತಿ ಪ್ರತ್ಯಕ್ಷವಿರುದ್ಧಂ ಕಥಮಭಿಧೀಯತ ಇತ್ಯತ್ರಾಹ–ತಮೇವ ಭಾಂತಮನುಭಾತಿ ಇತಿ। ಇದಂ ಚ ಪರಿದೃಶ್ಯಮಾನಂ ಭಾಸ್ವರರೂಪಂ ನ ಸ್ವಾಭಾವಿಕಮ್, ಅಪಿ ತು ಪರಮಾತ್ಮದತ್ತಂ ತದೀಯಮೇವ ತೇಜಃ। ಗೀತಂ ಚ ಭಗವತಾ,

'ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್।' (ಭ.ಗೀ.15–12)

ಇತಿ। ವಿವೃತಂ ಚೈತತ್ ಭಗವತಾ ಭಾಷ್ಯಕೃತಾ–'ಅಖಿಲಸ್ಯ ಜಗತೋ ಭಾಸಕಮೇತೇಷಾಮಾದಿತ್ಯಾದೀನಾಂ ಯತ್ ತೇಜಃ, ತನ್ಮದೀಯಂ ತೇಜಃ। ತೈಸ್ತೈರಾರಾಧಿತೇನ ಮಯಾ ತೇಭ್ಯೋ ದತ್ತಮಿತಿ ವಿದ್ಧಿ ' ಇತಿ। ಅತೋ ಯಾಚಿತಮಂಡಿತಪುರುಷತುಲ್ಯಾನಾಮೇತೇಷಾಂ ಭಾಸ್ವರರೂಪಶಾಲಿನಾಂ ನ ಭಾತೀತಿ ವ್ಯಪದೇಶೋ ಯುಜ್ಯತ ಇತಿ ಭಾವಃ॥

## ಅನುವಾದ

ಯೋಗಾಸಕ್ತನಾದ ಜೀವನಿಗೆ ಉಪಾಸನಾಧಾರವಾಗಿ 'ಆದಿತ್ಯವರ್ಣಂ ತಮಸಃ ಪರಸ್ತಾತ್' (ಶ್ವೇ. ಉ. 3–8) 'ಸದ್ಯೈಕರೂಪರೂಪಾಯ' (ವಿ. ಸ. ಧ್ಯಾ. 4) ಎಂಬ ಪ್ರಮಾಣಗಳಿಂದ ಸಿದ್ಧವಾದ ಮಂಗಳಕರವಾದ ದಿವ್ಯಮಂಗಳವಿಗ್ರಹವು ಪರಮಾತ್ಮನಿಗಿದೆ. ವಿಗ್ರಹವಿಶಿಷ್ಟನಾದ ಪರಮಾತ್ಮನು ಎಲ್ಲದಕ್ಕಿಂತಲೂ ಮಿಗಿಲಾದ ಕಾಂತಿಯುಳ್ಳವನು ಎಂದು 'ನ ತತ್ರ.... .. ವಿಭಾತಿ' ಎಂಬುದರಿಂದ ವಿವರಿಸುತ್ತಾನೆ.

ಈ ಮಂತ್ರವು 'ಜ್ಯೋತಿರ್ದರ್ಶನಾತ್' (ಬ್ರ.ಸೂ. 1–3–41) ಎಂಬ ಸೂತ್ರದಲ್ಲಿ 'ಎಲ್ಲ ತೇಜಸ್ಸುಗಳನ್ನು ಮರೆಸುವುದೂ, ಎಲ್ಲ ತೇಜಸ್ಸುಗಳಿಗೆ ಕಾರಣವೂ, ಅನುಗ್ರಾಹಕವೂ ಆದ ಅಂಗುಷ್ಠಪರಿಮಾಣವುಳ್ಳ ಕಾಂತಿಯು ಕಾಣುತ್ತದೆ' ಎಂದು ಭಾಷ್ಯದಲ್ಲಿ ವಿವರಿಸಿದೆ. ಈ ಭಾಷ್ಯವು 'ನ ತತ್ರ ಸೂರ್ಯೋ....' ಎಂಬ ಮಂತ್ರದ ಪೂರ್ವಾರ್ಧದ ಅರ್ಥವನ್ನು 'ಎಲ್ಲ ತೇಜಸ್ಸುಗಳನ್ನು ಮರೆಸುವುದು' ಎಂಬುದಾಗಿಯೂ, ಉತ್ತರಾರ್ಧದ ಮೊದಲಭಾಗದ ಅರ್ಥವನ್ನು 'ಎಲ್ಲ ತೇಜಸ್ಸುಗಳಿಗೆ ಕಾರಣವು' ಎಂಬುದಾಗಿಯೂ ವಿವರಿಸಿದೆ. 'ಅನುಭಾನಮ್' ಅಂದರೆ ಅನಂತರ ಪ್ರಕಾಶಿಸುವುದು ಎಂದರ್ಥ. ಇದರಿಂದ ಕಾರ್ಯಕಾರಣ ಭಾವವು ಸಿದ್ಧವಾಗುವುದು. 'ಮೊದಲು ಅನಂತರ' ಎಂಬ ನಿಯಮವೇ ಕಾರ್ಯಕಾರಣಭಾವ ಎನಿಸುತ್ತದೆ ಎಂದು ತಾತ್ಪರ್ಯ. ಮಂತ್ರದ ನಾಲ್ಕನೇ ಪಾದದ ಅರ್ಥವನ್ನು 'ಅನುಗ್ರಾಹಕ' ಎಂಬುದರಿಂದ ಹೇಳಿದೆ. 'ಯಸ್ಯಾದಿತ್ಯೋ ಮಾಮುಪಯುಜ್ಯ ಭಾತಿ' ಮುಂತಾದ ಶ್ರುತಿಯು 'ಅನುಗ್ರಾಹಕ' ಎಂಬಲ್ಲಿ ಪ್ರಮಾಣವೆನಿಸಿದೆ ಎಂದು ಶ್ರುತಪ್ರಕಾಶಿಕಾಚಾರ್ಯರು ವಿವರಿಸಿರುವರು. ಪರಮಾತ್ಮನ ತೇಜಸ್ಸಿನ ಸಾಕ್ಷಾತ್ಕಾರವಾದಲ್ಲಿ ಇತರ ತೇಜಸ್ಸುಗಳು ಕಾಂತಿಹೀನವಾಗುವುವು ಎಂಬುದು ಮಂತ್ರದ ಮೊದಲನೆ ಅರ್ಧದ ಅರ್ಥ, ಇತರ ತೇಜಸ್ಸಿನ ಉತ್ಪತ್ತಿಗೆ ಉಪಾದಾನಕಾರಣವಾದ ದ್ರವ್ಯಕ್ಕೆ ಉಪಕಾರಕವಾದ ನಿಮಿತ್ತಕಾರಣವೆಂಬುದು ಮೂರನೇ ಪಾದದ ಅರ್ಥ. ಕಣ್ಣಿನ ಕಾಂತಿಗೆ ಉಪಕಾರಕವಾದ ಚಂದ್ರ ಆತಪ ಮುಂತಾದವುಗಳಂತೆ ಉತ್ಪನ್ನವಾದ ತೇಜಸ್ಸಿಗೆ ತನ್ನ ಸಂಬಂಧದಿಂದ ಕಾರ್ಯಮಾಡುವ ಸಾಮರ್ಥ್ಯವನ್ನುಂಟು ಮಾಡುವಂತಹ 'ಉಪಕಾರಕತ್ವ' ಎಂಬುದು ನಾಲ್ಕನೆಯ ಪಾದದ ಅರ್ಥ ಎಂದೂ ಅಲ್ಲೇ ತಿಳಿದುಬರುತ್ತದೆ.

ಬ್ರಹ್ಮನಲ್ಲಿ ಆರೋಪಿತವಾದುದು ಪ್ರಪಂಚ. ಬ್ರಹ್ಮ ಅಧಿಕರಣ. ಪ್ರಪಂಚದಲ್ಲಿ ಈ ಅಧಿಕರಣವಾದ ಬ್ರಹ್ಮರೂಪದ ತಿಳಿವಿಗಿಂತ ಭಿನ್ನವಾದ ತಿಳಿವಿಲ್ಲ ಎಂಬುದೇ ಮೂರನೇ ಪಾದದ ಅರ್ಥ ಎಂದು ಇತರರು ಹೇಳುತ್ತಾರೆ. ಅದು ಸರಿಯಲ್ಲ. ಹಾಗಾದಲ್ಲಿ 'ತಮೇವ ಭಾಂತಮ್ ಅನುಭಾತಿ' ಎಂಬಲ್ಲಿ 'ಭಾಂತಮ್' ಎಂಬಲ್ಲಿನ ಕರ್ತ್ರರ್ಥವುಳ್ಳ ಶತೃಪ್ರತ್ಯಯವು (ಶಿಷ್ಯನ ಜ್ಞಾನವನ್ನು ಪ್ರಕಾಶಿಸುತ್ತದೆ. ಶಿಷ್ಯಜ್ಞಾನಂ ಪ್ರಕಾಶತೇ) ಎಂಬಂತೆ ಅಭೇದಾರ್ಥದಲ್ಲಿ ಸಂಭವಿಸಿದರೂ 'ಅನುಭಾತಿ' ಎಂಬ ಶಬ್ದ ಸರಿಹೊಂದಲಾರದು. 'ದೇವದತ್ತನು ಹೋಗುತ್ತಿರುವಾಗ ಕುಳಿತಿರುವ ಯಜ್ಞದತ್ತನು ದೇವದತ್ತನನ್ನು ಅನುಸರಿಸಿ ಹೋಗುತ್ತಾನೆ ಎಂದು' ಯಾರೂ ಪ್ರಯೋಗಿಸಲಾರರು. ಸುಡುವ ಬೆಂಕಿಯನ್ನು ಅನುಸರಿಸಿ ಕಬ್ಬಿಣವು ಸುಡುತ್ತದೆ ಎಂಬ ಪ್ರಯೋಗವಿದೆಯಲ್ಲ ಎಂದು ಹೇಳಲಾಗದು. ಕಬ್ಬಿಣಕ್ಕೆ ಪ್ರತ್ಯೇಕವಾಗಿ ಸುಡುವಿಕೆಯಿಲ್ಲ ಎಂಬ ನಿಶ್ಚಯವುಳ್ಳವನು ಅದನ್ನು ವಿವರಿಸುವ ಬಯಕೆಯಿಂದ ಹಾಗೆ ಪ್ರಯೋಗಿಸಲಾಗದ ಕಾರಣ ಪರಮಾತ್ಮನ ತೇಜಸ್ಸಿನ ಸಾಕ್ಷಾತ್ಕಾರವುಂಟಾದಲ್ಲಿ ಇತರ ತೇಜಸ್ಸು ಕಾಂತಿಹೀನವಾಗುವುವು ಎಂಬ ನಿಮ್ಮ ಅಭಿಪ್ರಾಯವೂ ಸರಿಹೊಂದಲಾರದು.

ಪರಮಾತ್ಮನ ಪ್ರಕಾಶವನ್ನು ಸಾಕ್ಷಾತ್ಕರಿಸಿಕೊಂಡ ಮುಕ್ತರಿಗೆ ಇತರ ತೇಜಸ್ಸುಗಳ ಸಾಕ್ಷಾತ್ಕಾರವುಂಟೆಂದು ತಿಳಿದುಬರುತ್ತದೆ. 'ಅಭಿಭವ' ಅಂದರೆ ಸಜಾತೀಯವಾದವುಗಳಿಂದಮುಚ್ಚಲ್ಪಟ್ಟು ಗ್ರಹಿಸಲು ಸಾಧ್ಯವಿಲ್ಲದ ಎಂದರ್ಥ. ಅದುದರಿಂದ ಇತರ'ತೇಜೋಽಭಿಭವ' ಎಂಬ ಮಾತು ಸಲ್ಲದು. ಮುಕ್ತರಿಗೆ ಸಾಕ್ಷಾತ್ಕಾರವಾಗುವುದರಿಂದ ಈ ಅಭಿಭವ ಇಲ್ಲ ಎಂದಲ್ಲಿ ಇದು ಬದ್ಧರ ಬಗ್ಗೆ ಹೇಳಿದ ವಿಷಯ. ಬದ್ಧರಿಗೆ ಪರಮಾತ್ಮಸಾಕ್ಷಾತ್ಕಾರ ಪ್ರಸಕ್ತಿಯೇ ಇಲ್ಲದಿರುವುದರಿಂದ ಬದ್ಧರ ಬಗ್ಗೆ ಹೇಳಿದ ವಿಷಯ ಎಂದು ಹೇಳಲಾಗದು ಎಂಬುದು ಸರಿಯಲ್ಲ. ಬದ್ಧನೆನಿಸಿದ ಅರ್ಜುನ ಮುಂತಾದವರಿಗೆ ಪರಮಾತ್ಮಸಾಕ್ಷಾತ್ಕಾರ ವುಂಟಾಗಿರುವುದು ಕಂಡು ಬಂದಿದೆ. ಅಥವಾ ಕಾಳಿದಾಸನನ್ನು ಕವಿ ಎಂದು ಪರಿಗಣಿಸುವಲ್ಲಿ ಇತರರು ಕುಕವಿಗಳು ಅಥವಾ ಕವಿಗಳಲ್ಲ ಎಂಬಂತೆ ಬ್ರಹ್ಮಪ್ರಕಾಶದ ಹಿರಿಮೆ ಹೇಳುವಲ್ಲಿ ಸೂರ್ಯಮುಂತಾದ ತೇಜಃಪದಾರ್ಥಗಳು ಪ್ರಕಾಶಿಸುವುದಿಲ್ಲ. ಆದುದರಿಂದ ಆ ಬ್ರಹ್ಮವೇ ಅತ್ಯಂತಪ್ರಕಾಶವುಳ್ಳದ್ದು ಎಂಬುವುದು ಮೊದಲರ್ಧದ ಅರ್ಥ. ಬ್ರಹ್ಮಪ್ರಕಾಶದ ಸಾಕ್ಷಾತ್ಕಾರವಾಗುವಲ್ಲಿ ಇತರ ತೇಜಃಪದಾರ್ಥಗಳ ತೇಜಸ್ಸು ಕಾಂತಿಹೀನವಾಗುವವು ಎಂಬ ಶ್ರುತಪ್ರಕಾಶಿಕಾಚಾರ್ಯರ ಮಾತಿಗೂ ಇದೇ ಅರ್ಥ. ಈ ಅರ್ಥವನ್ನೇ ಇತರ ತೇಜಸ್ಸುಗಳ ಉತ್ಪತ್ತಿ ಮತ್ತು ಅವುಗಳ ಫಲಕೊಡುವಿಕೆಗಳಿಗೆ ಪರಮಾತ್ಮನ ಅನುಗ್ರಹದ ಅಪೇಕ್ಷೆಯಿದೆ'ಎಂಬುದನ್ನು 'ತಮೇವ ಭಾಂತಮ್' ಎಂಬ ಕೊನೆಯ ಅರ್ಧಭಾಗದಿಂದ ದೃಢಪಡಿಸುತ್ತಾನೆ ಎಂಬುದರಿಂದ ಯಾವ ದೋಷವೂ ಇಲ್ಲ ಎಂದು ತಿಳಿಯಬೇಕು. ಅಥವಾ ಮೊದಲರ್ಧಕ್ಕೆ ಮೇಲೆ ಹೇಳಿದಂತೆಯೇ ಅರ್ಥ, ಅತ್ಯಂತ ಪ್ರಕಾಶದಿಂದ ಕೂಡಿದ ಸೂರ್ಯ ಮುಂತಾದವುಗಳಲ್ಲಿ 'ತೇಜಸ್ಸನ್ನು ಕಣ್ಣಿನಿಂದ ನೋಡುತ್ತಿರುವಾಗ, ಪ್ರಕಾಶಿಸುವುದಿಲ್ಲ'ಎಂದು ಪ್ರತ್ಯಕ್ಷವಿರುದ್ಧವಾದುದನ್ನು ಹೇಗೆ ಹೇಳುವಿರಿ ? ಎಂಬಲ್ಲಿ 'ತಮೇವ ಭಾಂತಮ್ ಅನುಭಾತಿ' ಎಂದು ಹೇಳುತ್ತಾನೆ. ಕಣ್ಣಿಗೆ ಕಾಣುವ ತೇಜಸ್ಸು ಸ್ವಾಭಾವಿಕವಾದುದಲ್ಲ. ಅದು ಪರಮಾತ್ಮನಿಂದ ಕೊಡಲ್ಪಟ್ಟ ಆತನ ತೇಜಸ್ಸು. ಗೀತೆಯಲ್ಲಿ ಶ್ರೀಕೃಷ್ಣನು,

'ಯದಾದಿತ್ಯಗತಂ ತೇಜೋ ಜಗತ್ ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್॥' (ಭ.ಗೀ.15-12)

ಎಂದು ಹೇಳಿದ್ದಾನೆ. ಇದನ್ನೇ ಭಗವದ್ರಾಮಾನುಜರು ತಮ್ಮ ಭಾಷ್ಯದಲ್ಲಿ ವಿವರಿಸುತ್ತಾ ಸಮಸ್ತ ಜಗತ್ತನ್ನು ಪ್ರಕಾಶಪಡಿಸುವ ಸೂರ್ಯ, ಚಂದ್ರ ಮುಂತಾದವರಲ್ಲಿ ಯಾವ ತೇಜಸ್ಸಿದೆಯೋ ಅದು ನನ್ನ ತೇಜಸ್ಸು ಆಯಾಯಾ ವ್ಯಕ್ತಿಗಳಿಂದ ಆರಾಧಿಸಲ್ಪಟ್ಟ ನನ್ನಿಂದ ಅವರವರಿಗೆ ಆ ತೇಜಸ್ಸುಕೊಡಲ್ಪಟ್ಟಿದೆ ಎಂದು ತಿಳಿ' ಎಂದು ಗೀತಾಭಾಷ್ಯದಲ್ಲಿ ವಿವರಿಸಿದ್ದಾರೆ. ಒಡವೆಗಳನ್ನು ಮತ್ತೊಬ್ಬರಿಂದ ಯಾಚಿಸಿ ತಂದ ಅಲಂಕರಿಸಿಕೊಂಡವರಂತೆ ಈ ತೇಜೋವಿಶಿಷ್ಟರಾದ ಸೂರ್ಯಾದಿಗಳೂ ಪ್ರಕಾಶಿಸುತ್ತಾರೆ ಎಂಬ ವ್ಯವಹಾರವೂ ಸಮರ್ಪಕವಾಗಿದೆ ಎಂದುಕ್ತಿತಾತ್ಪರ್ಯ.

ಭಾಷ್ಯಸಾರ

ಇತರ ಎಲ್ಲ ತೇಜಸ್ಸುಗಳನ್ನು ಮರೆಮಾಡುವ, ತೇಜಃಪದಾರ್ಥಗಳಿಗೆ ತೇಜಸ್ಸನ್ನು ಅನುಗ್ರಹಿಸುವ ದಿವ್ಯವಾದ ರೂಪವು ಪರಮಾತ್ಮನಿಗಿದೆ ಎಂಬ ಅಭಿಪ್ರಾಯದಿಂದ 'ನ ತತ್ರ' ಎಂಬ ಮಂತ್ರದಲ್ಲಿ ಉತ್ತರಿಸುತ್ತಾನೆ.

ಸೂರ್ಯ ಮುಂತಾದ ತೇಜಃಪದಾರ್ಥಗಳು ಭಗವಂತನ ದಿವ್ಯವಿಗ್ರಹದ ಮುಂದೆ ಕಾಂತಿಹೀನವಾಗುವುವು. ದಿವ್ಯಪ್ರಕಾಶದಿಂದ ಕೂಡಿದ ಪರಮಾತ್ಮನ ತೇಜಸ್ಸನ್ನು ಅನುಸರಿಸಿಯೇ ಸೂರ್ಯಾದಿಗಳು ಪ್ರಕಾಶಿಸುತ್ತವೆ. ಅಂದರೆ ಪರಮಾತ್ಮನಿತ್ತ ಪ್ರಕಾಶದಿಂದಲೇ ಸೂರ್ಯ ಮುಂತಾದವುಗಳು ಪ್ರಕಾಶಿಸುತ್ತವೆ ಎಂದು ತಾತ್ಪರ್ಯ.

ಸುಬೋಧಿನೀಕಾರರು 'ಹದಿನಾಲ್ಕನೆಯ ಮಂತ್ರಕ್ಕೆ ಬೇರೊಂದು ರೀತಿಯಲ್ಲಿ ಅರ್ಥ ಮಾಡಿ ಅದಕ್ಕೆ ಉತ್ತರರೂಪವಾಗಿ 'ಅಥವಾ' ಎಂಬುದರಿಂದ ಈ ಮಂತ್ರವನ್ನು ವಿವರಿಸುತ್ತಾರೆ. ನಚಿಕೇತನು 'ತದೇತತ್' ಎಂಬ ಮಂತ್ರದಿಂದ ಉತ್ಕೃಷ್ಟಸುಖರೂಪವಾದ ಪರಬ್ರಹ್ಮವನ್ನು 'ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ಯೋಗಸಿದ್ಧಿಪಡೆದ ನಿನ್ನಂತಹ ಕೆಲವರು ತಿಳಿಯುತ್ತಾರೆ, ಯೋಗಸಿದ್ಧಿಪಡೆಯದ ನನ್ನಂತಹವರು ಹೇಗೆ ತಿಳಿಯಬೇಕು ? ಆ ಬ್ರಹ್ಮವು ಸಾಮಾನ್ಯವಾಗಿ ಪ್ರಕಾಶಿಸುವುದೇ ? ಅಥವಾ ವಿಶೇಷರೀತಿಯಲ್ಲಿ ಪ್ರಕಾಶಿಸುವುದೇ ಎಂದು ಕೇಳಿದನು.

ಅದಕ್ಕೆ 'ನ ತತ್ರ' ಎಂಬುದರಿಂದ ಯಮನು ಉತ್ತರಿಸುತ್ತಾನೆ—'ಯೋಗಿಗಳು ತಿಳಿಯುತ್ತಾರೆ. ಯೋಗಿಗಳಲ್ಲದವರು ಹೇಗೆ ತಿಳಿಯಬಲ್ಲರು ?' ಎಂಬ ನಿನ್ನ ಸಂದೇಹ ನಿಜವಾದುದೇ. ಅಯೋಗಿಗಳು ತಿಳಿಯಲಾರರು. ವಸ್ತುಗಳನ್ನು ಪ್ರಕಾಶಪಡಿಸುವ ಸೂರ್ಯ ಮುಂತಾದ ತೇಜಃಪದಾರ್ಥಗಳು ಪರಮಾತ್ಮನನ್ನು ಪ್ರಕಾಶಪಡಿಸಲಾರವು. ಆದುದರಿಂದ ಪರಮಾತ್ಮನಲ್ಲಿ ನಮ್ಮ ನೋಟ ಪ್ರಸರಿಸಲಾರದು. ಪರಮಸುಖರೂಪವಾದ ಪರಮಾತ್ಮನಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರನಕ್ಷತ್ರಗಳು ಪ್ರಕಾಶಿಸುವುದಿಲ್ಲ. ಹೊಳೆಯುವ ಮಿಂಚೂ ಪ್ರಕಾಶಿಸುವುದಿಲ್ಲ. ಹೀಗಿರುವಲ್ಲಿ ಅಗ್ನಿ ಹೇಗೆ ಪ್ರಕಾಶಿಸೀತು? ಭೌತಿಕವಾದ ಘಟ ಮುಂತಾದ ವಸ್ತುಗಳಲ್ಲಿ ಪ್ರಕಾಶಿಸುತ್ತವೆ. ಪರಮಾತ್ಮನಲ್ಲಿ ಪ್ರಕಾಶಿಸುವುದಿಲ್ಲ ಎಂಬುದಕ್ಕೆ ಕಾರಣವೇನು ? ಎಂಬಲ್ಲಿ 'ತಮೇವ ಭಾಂತಮ್ ಅನುಭಾತಿ ಸರ್ವಮ್' ಎಂದು ಹೇಳುತ್ತಾನೆ. ಅಂತರ್ಯಾಮಿಯಾಗಿ ಪ್ರಕಾಶಿಸುತ್ತಿರುವ ಪರಮಾತ್ಮನನ್ನು ಅನುಸರಿಸಿ ಈ ಸೂರ್ಯ ಮುಂತಾದವುಗಳೆಲ್ಲವೂ ಪ್ರಕಾಶಿಸುತ್ತವೆ. ಪರಮಾತ್ಮನಿತ್ತ ಪ್ರಕಾಶದಿಂದಲೇ ಇವುಗಳು ಭಿನ್ನ–ಭಿನ್ನವಾಗಿ ಪ್ರಕಾಶಿಸುತ್ತವೆ. ಹೀಗಿರುವಾಗ ಇವು ಪರಮಾತ್ಮನನ್ನು ಹೇಗೆ ಬೆಳಗಬಲ್ಲವು ? ಪರಮಾತ್ಮನು ಇತರ ವಸ್ತುಗಳಂತೆ ಪ್ರಕಾಶಿಸುವುದಿಲ್ಲ. ಅವನು ವಿಲಕ್ಷಣವಾಗಿ ಪ್ರಕಾಶಿಸುತ್ತಾನೆ. ಆದುದರಿಂದ ಯೋಗಸಿದ್ಧಿಪಡೆದವರು ಮಾತ್ರ ಸ್ಪಷ್ಟವಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲರು ಇತರರಿಗೆ ಸಾಧ್ಯವಿಲ್ಲ' ಎಂದು ವಿವರಿಸಿದ್ದಾರೆ.

ರಾಮಾನಂದರು ಪರಮಾತ್ಮನು ಪ್ರಕಾಶಿಸುವಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ. ಅಧಿಕವಾದ ಪರಮಾತ್ಮನ ಪ್ರಕಾಶದಿಂದ ಸೂರ್ಯನ ಪ್ರಕಾಶ ಕಾಂತಿಹೀನವಾಗುತ್ತದೆ. ಅಂತೆಯೇ ಚಂದ್ರನಕ್ಷತ್ರ ಮತ್ತು ಕಾಂತಿಯಿಂದ ಕೂಡಿದ ಮಿಂಚು ಇವುಗಳೂ ಪ್ರಕಾಶಿಸುವುದಿಲ್ಲ, ಪರಮಾತ್ಮನ ಪ್ರಕಾಶದಿಂದ ಇವುಗಳು ಕಾಂತಿಹೀನವಾಗುತ್ತವೆ. ಹೀಗಿರುವಾಗ ಅತ್ಯಲ್ಪ ಪ್ರಕಾಶವುಳ್ಳ ಅಗ್ನಿ ಹೇಗೆ ಪ್ರಕಾಶಿಸೀತು ? ಅಂದರೆ ಬ್ರಹ್ಮವು ಪ್ರಕಾಶಿಸದಿದ್ದಲ್ಲಿ ಅಗ್ನಿಯೂ ಪ್ರಕಾಶಿಸುವುದಿಲ್ಲ ಎಂದರ್ಥ. ಸರ್ವಾಂತರ್ಯಾಮಿಯಾದ ಮತ್ತು ಪ್ರಕಾಶಿಸುತ್ತಿರುವ ಪರಮಾತ್ಮನನ್ನು ಅನುಸರಿಸಿ ಸೂರ್ಯಾದಿಗಳು ಪ್ರಕಾಶಿಸುತ್ತವೆ. 'ಯಾಚಿತಮಂಡನ'ನ್ಯಾಯದಂತೆ ಬ್ರಹ್ಮಸಂಬಂಧಿಯಾದ ಪ್ರಕಾಶದಿಂದ ಈ ತೇಜೋವಸ್ತುಗಳು ಪ್ರಕಾಶಿಸುತ್ತವೆ.

ಅಥವಾ ಸೂರ್ಯ ಮುಂತಾದವುಗಳಲ್ಲಿರುವ ಪ್ರಕಾಶವು ಪರಮಾತ್ಮನಿಂದ ಕೊಡಲ್ಪಟ್ಟಿದ್ದು ಅದರಿಂದ ಸೂರ್ಯ–ಚಂದ್ರ ಮುಂತಾದವರು 'ಗಡಿಗೆ' ಮುಂತಾದ ಪದಾರ್ಥಗಳನ್ನು ಪ್ರಕಾಶ ಪಡಿಸುತ್ತಾರೆ. ಇದರಿಂದ ಪರಮಾತ್ಮನು ಪ್ರಕಾಶಕ್ಕೆ ಆಶ್ರಯನು ಎಂದು ಹೇಳಿದಂತಾಗು ವುದು. ಆದುರಿಂದ ಪರಮಾತ್ಮನಿಗೆ ರೂಪಾದಿಗಳುಂಟು ಎಂಬುದು ಸ್ಪಷ್ಟವಾಗುತ್ತದೆ. ಈ ರೂಪಾದಿಗಳುಂಟು ಎಂಬುದು 'ಆದಿತ್ಯವರ್ಣಂ ತಮಸಃ ಪರಸ್ತಾತ್' (ಶ್ವೇ.ಉ. 3–8) ಎಂಬಲ್ಲಿ ಪ್ರಸಿದ್ಧವಾಗಿದೆ. ಇದರಿಂದ ರೂಪಾದಿಗಳಿಲ್ಲದಿರುವುದರಿಂದ ನಮ್ಮಂತಹವರು ನೋಡಲಾದೀತೇ ? ಎಂದು ಸಂದೇಹಪಡಬೇಕಾಗಿಲ್ಲ. ಪರಮಾತ್ಮನು ದಿವ್ಯಮಂಗಳ ವಿಶಿಷ್ಟನಾಗಿಯೇ ಪ್ರಕಾಶಿಸುತ್ತಾನೆ. ವಿಶೇಷ ರೀತಿಯಲ್ಲಿ ಪ್ರಕಾಶಿಸುತ್ತಾನೆ ಎಂದು 'ವಿಭಾತಿ' ಎಂಬುದರಿಂದ ಹೇಳಿರುವುದರಿಂದ 'ವಿಭಾತಿ ನ ವಾ' ಎಂಬುದರಿಂದಲೂ ಸಂದೇಹಿಸಬೇಕಾಗಿಲ್ಲ ಎಂದು ಶಿಷ್ಯನಿಗೆ ಯಮನು ಉತ್ತರಿಸಿದನು ಎಂದು ತಾತ್ಪರ್ಯ.

ಪರಮಾತ್ಮನಿಗೆ ರೂಪಾದಿಗಳುಂಟು ಎಂಬ ವಿಷಯದಲ್ಲಿ ಜಗದ್ಗುರು ರಾಮೇಶ್ವರಾ ನಂದಾಚಾರ್ಯರ 'ಶ್ರೀರಾಮಪ್ರಾಪ್ತಿಪದ್ಧತಿ' ಎಂಬ ಗ್ರಂಥದಲ್ಲಿ ಹೇಳಿರುವ 'ಧಿವ್ಯಾಯು ಧಾನ್ವಿತಂ ಸೀತಯಾ ಸದಾ ಹೀನಂ ದಿವ್ಯಭೂಷಣಭೂಷಿತಮ್' ಎಂಬ ಮಾತುಗಳೂ ಸಾಧಕ ಗಳಾಗಿವೆ ಎಂದು ವಿವರಿಸುತ್ತಾರೆ.

ಐದನೆಯ ವಲ್ಲಿ ಮುಗಿದುದು



## ಆರನೆಯ ವಲ್ಲಿ ಪ್ರಾರಂಭ

### ಮಂತ್ರ ೧

ऊर्ध्वमूलो अवाक्शाख एषोऽश्वत्थस्सनातनः ।
तदेव शुक्रं तद्ब्रह्म तदेवामृतमुच्यते ।
तस्मिन् लोकाः श्रितास्सर्वे तदु नात्येति कश्चन ॥ एतद्वै तत् ॥

ಊರ್ಧ್ವಮೂಲೋ ಅವಾಕ್‌ಶಾಖ ಏಷೋಽಶ್ವತ್ಥಸ್ಸನಾತನಃ ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ ॥
ಏತದ್ವೈ ತತ್ ॥

#### ಪ್ರತಿಪದಾರ್ಥ

ಏಷಃ—ಈ ಸಂಸಾರವು, ಊರ್ಧ್ವಮೂಲಃ—ಮೇಲುಬೇರುಳ್ಳದ್ದೂ, ಅಧಃಶಾಖಃ—ಕೆಳಗೊಂಬೆ ಉಳ್ಳದ್ದೂ, ಸನಾತನಃ—ಅನಾದಿಪ್ರವಾಹರೂಪವಾಗಿರುವುದೂ ಆಗಿದ್ದು, ಅಶ್ವತ್ಥಃ—ವೃಕ್ಷಸಾಮ್ಯಹೊಂದಿ ಅಶ್ವತ್ಥವೆನ್ನಲು ಯೋಗ್ಯವಾಗಿದೆ. ತದೇವ—ಇದಕ್ಕಿಂತ ವಿಲಕ್ಷಣವಾದ ಹಿಂದೆ ಹೇಳಿದ ವಸ್ತುವೇ, ಶುಕ್ರಮ್—ಶುಭ್ರವು (ಪ್ರಕಾಶಕರವು) ತತ್‌ಬ್ರಹ್ಮ—ಅದೇ ಕಾರಣರೂಪವಾದ ಬ್ರಹ್ಮವು, ತದೇವ—ಆ ವಸ್ತುವೇ, ಅಮೃತಮುಚ್ಯತೇ—ಅಮೃತಸ್ವರೂಪವಾದುದು. ತಸ್ಮಿನ್—ಆ ವಸ್ತುವಿನಲ್ಲಿಯೇ, ಸರ್ವೇ ಲೋಕಾಃ—ಎಲ್ಲ ಲೋಕಗಳೂ, ಶ್ರಿತಾಃ—ಆಶ್ರಯವನ್ನು ಹೊಂದಿವೆ. ತತ್—ಆ ಬ್ರಹ್ಮವನ್ನು, ಕಶ್ಚನ—ಯಾವನೂ ನ ಅತ್ಯೇತಿ—ಮೀರಲಾರನು, ಏತದ್ವೈ—ಈ ಮಂತ್ರದಲ್ಲಿ ಹೇಳಿದ ಪರಮಾತ್ಮಸ್ವರೂಪವೇ, ತತ್—ಹಿಂದೆ ಹೇಳಿದ ಆ ಪರತತ್ತ್ವವು.

#### ತಾತ್ಪರ್ಯ

ಈ ಸಾಂಸಾರಿಕಪ್ರಪಂಚವೆಂಬುದು ಮೇಲು ಬೇರುಳ್ಳದ್ದೂ, ಕೆಳರೆಂಬೆಗಳುಳ್ಳದ್ದೂ, ಅನಾದಿಪ್ರವಾಹರೂಪವೂ ಆಗಿದ್ದು ಅಶ್ವತ್ಥವೃಕ್ಷವೆನ್ನಲು ಯೋಗ್ಯವಾಗಿದೆ. ಇದಕ್ಕಿಂತ ವಿಜಾತೀಯವಾದ ಹಿಂದೆ ಹೇಳಿದ ವಸ್ತುವೇ ಶುಭ್ರವಾದುದು, ಅಮೃತಸ್ವರೂಪವೆಂದು ಹೇಳಲ್ಪಡುತ್ತದೆ. ಎಲ್ಲ ಲೋಕಗಳೂ ಆ ಪರಬ್ರಹ್ಮನಲ್ಲಿ ಆಶ್ರಯವನ್ನು ಹೊಂದಿವೆ. ಈ ಬ್ರಹ್ಮವನ್ನು ಯಾವನೂ ಮೀರಲಾರನು. ಈ ಪರಮಾತ್ಮಸ್ವರೂಪವೇ ಹಿಂದೆ ಹೇಳಿದ ಪರತತ್ತ್ವವು.

#### ರಂಗರಾಮಾನುಜಭಾಷ್ಯಮ್

ಊರ್ಧ್ವಮೂಲೋ ಅವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ । ಅಯಂ ಚ ಮಂತ್ರಖಂಡಃ, 'ಊರ್ಧ್ವಮೂಲಮಧಶ್ಶಾಖಮ್' (ಭ.ಗೀ. 15-1) ಇತಿ ಗೀತಾವ್ಯಾಖ್ಯಾನಾವಸರೇ ಭಗವತಾ ಭಾಷ್ಯಕೃತಾ ವ್ಯಾಖ್ಯಾತಃ । ಇತ್ಥಂ ಹಿ ತತ್ರ ಭಾಷ್ಯಮ್—'ಯಂ ಸಂಸಾರಾಖ್ಯಮಶ್ವತ್ಥಮೂರ್ಧ್ವಮೂಲಮಧಶ್ಶಾಖಮವ್ಯಯಂ ಪ್ರಾಹುಃ ಶ್ರುತಯಃ,

'ಊರ್ಧ್ವಮೂಲೋ ಅವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ', 'ಊರ್ಧ್ವಮೂಲ ಮವಾಕ್‌ಶಾಖಂ ವೃಕ್ಷಂ ಯೋ ವೇದ ಸಂಪ್ರತಿ' ಇತ್ಯಾದ್ಯಾಃ । ಸಪ್ತಲೋಕೋಪರಿ ನಿವಿಷ್ಟಚತುರ್ಮುಖಾದಿತ್ವೇನ ತಸ್ಯ ಊರ್ಧ್ವಮೂಲತ್ವಮ್ । ಪೃಥಿವೀನಿವಾಸಿಸಕಲನರಪಶು ಮೃಗ-ಕ್ರಿಮಿ-ಕೀಟ-ಪತಂಗ-ಸ್ಥಾವರಾಂತತಯಾ ಅಧಶ್ಶಾಖಿತ್ವಮ್' ಇತಿ । ತದ್ವಿಲಕ್ಷಣ ಮೇವ (ತಲ್ಲಕ್ಷಣಮೇವ) ಬ್ರಹ್ಮೇತಿ ದರ್ಶಯತಿ—ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತ ಮುಚ್ಯತೇ । ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ॥ ಪೂರ್ವಮೇವ ವ್ಯಾಕೃತೋಽಯಂ ಮಂತ್ರಃ ॥

### ಅನುವಾದ

ಊರ್ಧ್ವಮೂಲೋ ಅವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ—ಈ ಮಂತ್ರಭಾಗಕ್ಕೆ 'ಊರ್ಧ್ವಮೂಲಮಧಶ್ಶಾಖಮ್' (ಭ.ಗೀ. 15-1) ಎಂಬ ಭಗವದ್ಗೀತೆಯಲ್ಲಿ ಶ್ಲೋಕಕ್ಕೆ ವ್ಯಾಖ್ಯಾನ ಬರೆಯುವಾಗ ಭಗವದ್ರಾಮಾನುಜರು ಹೀಗೆ ವ್ಯಾಖ್ಯಾನಮಾಡಿರುವರು. ಅಲ್ಲಿನ ಭಾಷ್ಯ ಹೀಗಿದೆ. 'ಊರ್ಧ್ವಮೂಲೋ ಅವಾಕ್‌ಶಾಖಃ ಏಷೋಽಶ್ವತ್ಥ ಸ್ಸನಾತನಃ', 'ಊರ್ಧ್ವಮೂಲಮವಾಕ್ಶಾಖಂ ವೃಕ್ಷಂ ಯೋ ವೇದ ಸಂಪ್ರತಿ' (ತೈ.ಆ. 1-11-5) ಮುಂತಾದ ಶ್ರುತಿಗಳು ಪ್ರಪಂಚವೆಂಬ ಅಶ್ವತ್ಥವು ಮೇಲು ಬೇರುಳ್ಳದ್ದೂ, ಕೆಳಕೊಂಬೆಯುಳ್ಳದ್ದೂ, ನಾಶರಹಿತವೂ ಆಗಿದೆ ಎಂದು ಹೇಳಿವೆ. ಏಳು ಲೋಕಗಳ ಮೇಲೆ ಇರುವ ಚತುರ್ಮುಖನೇ ಇದರ ಮೊದಲನೆಯನಾಗಿರುವುದರಿಂದ ಇದು ಮೇಲೆ ಬೇರುಳ್ಳದ್ದೂ ಭೂಮಿಯಲ್ಲಿ ವಾಸವಾಗಿರುವ ಸಮಸ್ತ ಮನುಷ್ಯ-ಪಶು-ಪ್ರಾಣಿ-ಕೀಟ-ಚಿಟ್ಟೆ ಮೊದಲಾದ ಚರವಸ್ತುಗಳೂ ಮತ್ತು ಮರ ಮುಂತಾದ ಸ್ಥಾವರಪದಾರ್ಥಗಳೂ ಇದರ ಬೆಳವಣಿಗೆಯ ಕೊನೆಯಾಗಿರುವುದರಿಂದ ಕೆಳರೆಂಬೆಯುಳ್ಳದ್ದೂ ಎಂದು ಇದನ್ನು ವಿವರಿಸಿರುವರು. ಇವುಗಳಿಗಿಂತ ವಿಲಕ್ಷಣವಾದುದು ಬ್ರಹ್ಮ ಎಂಬುದನ್ನು 'ತದೇವ ಶುಕ್ರಂ.... ಏತದ್ವೈ ತತ್' । ಎಂಬುದರಿಂದ (ಶ್ರುತಿಯು) ವಿವರಿಸುತ್ತಾನೆ. ಈ ಮಂತ್ರ ಭಾಗಕ್ಕೆ ಐದನೆಯ ವಲ್ಲಿ ಎಂಟನೇ ಮಂತ್ರದಲ್ಲಿ ಅರ್ಥ ವಿವರಿಸಲಾಗಿದೆ.

### ಭಾಷ್ಯಸಾರ

'ಪರಬ್ರಹ್ಮವನ್ನು ತಿಳಿಯುವುದು ಕಷ್ಟ' ಎಂದು ಪುನಃ ಉಪದೇಶಿಸಲು ಆರಂಭಿಸುತ್ತಾ, ಮೊದಲು 'ಈ ಪ್ರಪಂಚಕ್ಕಿಂತ ಪರಬ್ರಹ್ಮವು ವಿಲಕ್ಷಣ' ಎಂದು 'ಊರ್ಧ್ವ ಮೂಲಃ' ಇತ್ಯಾದಿಯಾಗಿ ವಿವರಿಸುತ್ತಾನೆ.

ಕಣ್ಣಿಗೆ ಕಾಣುವ ಈ ಪ್ರಪಂಚವೊಂದು ಅರಳೀಮರ. ನಾಳೆಯಿರುವುದು 'ಶ್ವಃಸ್ಥ' ವೆನಿಸುವುದು ಇಲ್ಲದಿರುವುದು. 'ಅಶ್ವತ್ಥ'. ಆದುದರಿಂದ ಈ ಪ್ರಪಂಚವನ್ನು ಅಶ್ವತ್ಥವೆಂದು ಹೇಳುತ್ತಾರೆ. ಇದು ನಾಶವಾಗುವುದರಿಂದ ಆದರಣೀಯವಲ್ಲವೆಂದು ತಿಳಿಯುತ್ತದೆ.

ಪ್ರಸಿದ್ಧವಾದ ಅರಳೀಮರಕ್ಕಿಂತ ಪ್ರಪಂಚವೆಂಬ ಅಶ್ವತ್ಥದಲ್ಲಿರುವ ವಿಶೇಷವನ್ನು 'ಊರ್ಧ್ವಮೂಲೋಽವಾಕ್ ಶಾಖಃ' ಎಂಬುದರಿಂದ ವಿವರಿಸುತ್ತಾನೆ. ಎಲ್ಲಕ್ಕಿಂತಲೂ ಮೇಲಿರುವ ಚತುರ್ಮುಖನೇ ಈ ಪ್ರಪಂಚಕ್ಕೆ ಆರಂಭವಾಗಿರುವುದರಿಂದ ಊರ್ಧ್ವಮೂಲ ವೆಂದು ಹೇಳುತ್ತಾರೆ. ಅದಕ್ಕಿಂತ ಕೆಳಗೆ ದೇವ-ಮನುಷ್ಯ-ಪಶು-ಪಕ್ಷಿ-ಸ್ಥಾವರವಸ್ತುಗಳು ಹರಡುವುದರಿಂದ ಕೆಳಮುಖವಾದ ಕೊಂಬೆಗಳೆಂದು ಹೇಳುತ್ತಾರೆ. 'ಊರ್ಧ್ವಮೂಲಃ'

ಎಂಬುದರಿಂದ ಪರಬ್ರಹ್ಮವೇ ಮೂಲಕಾರಣವೆಂದು ಹೇಳುವುದು ಉಚಿತವಲ್ಲ. ಕೊಂಬೆಯಂತೆಯೇ ಬೇರಿನಲ್ಲೂ ಮರವೆಂಬ ವ್ಯವಹಾರವಿರುವುದರಿಂದ ಪರಮಾತ್ಮನು ಉಪಾದೇಯನಲ್ಲ ಎಂದು ಹೇಳಬೇಕಾದೀತು. ಈ ಪ್ರಪಂಚವೆಂಬ ಅಶ್ವತ್ಥವು ಪ್ರವಾಹ ರೂಪದಲ್ಲಿ ಅನಾದಿಯಾದುದರಿಂದ ಪುರಾತನವಾದುದು.

ಈ ಅಶ್ವತ್ಥವು ಅತ್ಯಲ್ಪವಾದ ಸುಖ–ದುಃಖವೆಂಬ ಫಲಗಳಿಂದಲೂ, ವಿಕಸಿತವಾದ ಧರ್ಮಾಧರ್ಮವೆಂಬ ಪುಷ್ಪಗಳಿಂದಲೂ, ಸುತ್ತಲೂ ಇರುವ ಶಬ್ದಾದಿವಿಷಯಗಳೆಂಬ ಚಿಗುರುಗಳಿಂದಲೂ, ಪ್ರಸಿದ್ಧವಾದ ಕರ್ಮವೆಂಬ ಎಲೆಗಳಿಂದಲೂ ಕೂಡಿ ದೃಢವಾದ ಬೇರುಳ್ಳದ್ದಾಗಿ, ಎಲ್ಲ ಪ್ರಾಣಿಗಳಿಗೂ ಆಶ್ರಯವಾಗಿದೆ. ಇದು ಅನಾಸಕ್ತಿ(ನಿರ್ಲಿಪ್ತತೆ) ಯೆಂಬ ಶಸ್ತ್ರದಿಂದ ಕಡಿಯಲು ಯೋಗ್ಯವಾದುದು ಎಂದು ಪರಮಾತ್ಮನು 'ಅಶ್ವತ್ಥಮೇನಂ ಸುವಿರೂಢಮೂಲಂ ಅಸಂಗಶಸ್ತ್ರೇಣ ದೃಢೇನ ಛಿತ್ವಾ' ಎಂದು ಹೇಳಿರುವನು.

ಪರಬ್ರಹ್ಮವು ಈ ಪ್ರಪಂಚವೆಂಬ ಅಶ್ವತ್ಥಕ್ಕಿಂತ ವಿಲಕ್ಷಣವು. ಅಮೃತಸ್ವರೂಪವೂ, ಶುದ್ಧವೂ ಆದುದರಿಂದ ಆಶ್ರಯಿಸಲರ್ಹನು ಎಂದು ಹಿಂದೆಯೇ ಹೇಳಿದೆ ಎಂದು 'ತದೇವ' ಎಂಬುದರಿಂದ ಜ್ಞಾಪಿಸುತ್ತಾನೆ. 'ಯ ಏಷ....ನಿರ್ಮಿಮಾಣಃ' (ಕ.ಉ. 5–8) ಎಂದು ಹೇಳಿದ ಮಂತ್ರದ ಉತ್ತರಭಾಗವನ್ನು ಇಲ್ಲಿ ಪುನಃ ಹೇಳಿದೆ.

ರಾಮಾನಂದರು 'ಎಲ್ಲ ಲೋಕಗಳಿಗೂ ಮೇಲಿರುವ ಸತ್ಯಲೋಕದಲ್ಲಿ ನೆಲೆಸಿರುವ ಪರಮಾತ್ಮನು ಈ ಪ್ರಪಂಚಕ್ಕೆ ಮೂಲ ಕಾರಣನು. ಆದುದರಿಂದ ಈ ಪ್ರಪಂಚವೆಂಬ ಅಶ್ವತ್ಥದ ಬೇರು ಮೇಲಿದೆ. ಸುರ–ನರ–ಪಶು–ಪಕ್ಷಿರೂಪವಾದ ಕೊಂಬೆಗಳು ಕೆಳಗಿವೆ. 'ಶ್ವಃ ತಿಷ್ಠತೀತಿ ಶ್ವತ್ಥಃ, ಶ್ವಃ ನ ತಿಷ್ಠತೀತಿ ಅಶ್ವತ್ಥಃ' ಎಂಬುದರಿಂದ ಅಶ್ವತ್ಥಪದಕ್ಕೆ ನಾಳೆ ನಾಶ ಹೊಂದುವುದು ಎಂಬರ್ಥವೂ ಭಾಸವಾಗುವುದು. ಇದರಿಂದ ಪ್ರಪಂಚವೆಂಬ ಅಶ್ವತ್ಥವು ನಾಶವಾಗುವುದು ಎಂದು ಹೇಳಿದಂತಾಗುತ್ತದೆ.

ಈ ಪ್ರಪಂಚವೆಂಬ ಅಶ್ವತ್ಥವು ಅಭಿನ್ನನಿಮಿತ್ತೋಪಾದಾನರೂಪವಾದ ಯಾವ ಕಾರಣದಿಂದ ಉಂಟಾಗುವುದೋ ಅದೇ ಪರಬ್ರಹ್ಮವು. ಅದೇ ಪವಿತ್ರವಾದುದು. ಅದೇ 'ಅಮೃತ'. ಅಂದರೆ ಅಮೃತದಂತೆ ಭೋಗ್ಯವಾದುದು. ಈ ಅಮೃತತ್ವವು ಬ್ರಹ್ಮಕ್ಕೆ ನಿರುಪಾಧಿಕವಾದುದು ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಆ ಪರಮಾತ್ಮನಲ್ಲಿಯೇ ಎಲ್ಲ ಲೋಕಗಳೂ ನೆಲೆಸಿವೆ. ಉತ್ಪತ್ತಿ ಮುಂತಾದ ಕಾಲಗಳಲ್ಲಿ ಅವನನ್ನು ಯಾರೂ ಮೀರಲಾರರು. ಪ್ರಪಂಚವೆಂಬ ಅಶ್ವತ್ಥಕ್ಕೆ ಮೂಲ ಕಾರಣವಾದುದೇ ಹಿಂದೆ ಹೇಳಿದ ಪರಬ್ರಹ್ಮಸ್ವರೂಪವು ಎಂದು ತಾತ್ಪರ್ಯ' ಎಂದು ವಿವರಿಸಿರುವರು.



## ಮಂತ್ರ ೨

**यदिदं किञ्च जगत् सर्वं प्राण एजति निस्सृतम् ।**
**महद्भयं वज्रमुद्यतं य एतद्विदुरमृतास्ते भवन्ति ॥**

ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಸ್ಸೃತಮ್ ।
ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ॥

### ಪ್ರತಿಪದಾರ್ಥ

ಪ್ರಾಣೇ—ಪ್ರಾಣಶಬ್ದವಾಚ್ಯನಾದ ಪರಬ್ರಹ್ಮ ವಸ್ತುವಿನಲ್ಲಿ ನೆಲೆಸಿದ್ದು, ನಿಸ್ಸೃತಮ್—ಅದರಿಂದಲೇ ಜನ್ಮತಳೆದಿರುವ, ಇದಂ ಯತ್ಕಿಂಚ ಜಗತ್—ಕಣ್ಣಿಗೆ ಕಾಣುವ ಈ ಜಗತ್ತೆಲ್ಲವೂ, ಉದ್ಯತ ವಜ್ರಂ—ಎತ್ತಿದ ವಜ್ರಾಯುಧದಂತೆ, ಮಹದ್ಭಯಂ—ಅಧಿಕಭಯಂಕರವಾಗಿರುವ ಪರಮಾತ್ಮನಿಂದ, ಏಜತಿ—ನಡುಗುತ್ತದೆ. ಯೇ—ಯಾವ ಜನರು, ಏತತ್—ಇಂತಹ ಪರಮಾತ್ಮಸ್ವರೂಪವನ್ನು, ವಿದುಃ—ತಿಳಿಯುತ್ತಾರೋ, ತೇ—ಅವರು, ಅಮೃತಾಃ ಭವಂತಿ—ಮುಕ್ತರಾಗುತ್ತಾರೆ.

### ತಾತ್ಪರ್ಯ

ಪ್ರಾಣಶಬ್ದವಾಚ್ಯನಾದ ಪರಬ್ರಹ್ಮನಲ್ಲೇ ನೆಲೆಸಿದ್ದು ಅವನಿಂದಲೇ ಈ ಜಗತ್ತು ಸೃಷ್ಟಿಸಲ್ಪಟ್ಟಿದೆ. ಹೊಡೆಯಲು ಎತ್ತಿದ ವಜ್ರಾಯುಧವನ್ನು ನೋಡಿ ಭಯಪಡುವಂತೆ ಈ ಜಗತ್ತೆಲ್ಲವೂ ಪರಮಾತ್ಮನಲ್ಲಿ ಭಯದಿಂದ ನಡುಗುತ್ತವೆ. ಅಂದರೆ ತಮ್ಮ ತಮ್ಮ ಕಾರ್ಯಗಳನ್ನು ತಪ್ಪದೇ ಮಾಡುತ್ತವೆ. ಇಂತಹ ಪರಮಾತ್ಮನನ್ನು ತಿಳಿದವರು ಮುಕ್ತರಾಗುತ್ತಾರೆ.

### ರಂಗರಾಮಾನುಜಭಾಷ್ಯಮ್

ಯ ಇದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಸ್ಸೃತಮ್ । ಮಹದ್ಭಯಂ ವಜ್ರಮುದ್ಯತಮ್ । ಅಯಂ ಚ ಮಂತ್ರಖಂಡಃ 'ಕಂಪನಾತ್' ಇತಿ ಸೂತ್ರೇ ಭಗವತಾ ಭಾಷ್ಯಕೃತಾ ವ್ಯಾಖ್ಯಾತಃ । ತತ್ರಾಯಂ ಮಂತ್ರಂ ಪ್ರಸ್ತುತ್ಯ, 'ಕೃತ್ಸ್ನಸ್ಯ ಜಗತಃ' ಅಸ್ಮಿನ್ ಅಂಗುಷ್ಠಮಾತ್ರೇ ಪುರುಷೇ ಪ್ರಾಣಶಬ್ದನಿರ್ದಿಷ್ಟೇ ಸ್ಥಿತಾನಾಂ, ಸರ್ವೇಷಾಂ ತತೋ ನಿಸ್ಸೃತಾನಾಂ, ತಸ್ಮಾತ್ಸಂಜಾತಮಹಾಭಯನಿಮಿತ್ತಮೇಜನಂ-ಕಂಪನಂ ಶ್ರೂಯತೇ । ತಚ್ಛಾಸನಾತಿವೃತ್ತೌ ಕಿಂ ಭವಿಷ್ಯತಿ ಇತಿ ಮಹತೋ ಭಯಾತ್, ವಜ್ರಾದಿವೋದ್ಯತಾತ್ ಕೃತ್ಸ್ನಂ ಜಗತ್ ಕಂಪತ ಇತ್ಯರ್ಥಃ ; 'ಭಯಾದಸ್ಯಾಗ್ನಿಸ್ತಪತಿ' ಇತ್ಯನೇನ ಐಕಾರ್ಥ್ಯಾತ್ । ಮಹದ್ಭಯಂ[1] ವಜ್ರಮುದ್ಯತಮ್ ಇತಿ ಪಂಚಮ್ಯರ್ಥೇ ಪ್ರಥಮಾ ಇತಿ ಭಾಷಿತಮ್ । ವಿವೃತಂ ಚೈತತ್ ಶ್ರುತಪ್ರಕಾಶಿಕಾಯಾಮ್ ಪ್ರಾಣ—ಇತಿ ಸಪ್ತಮ್ಯಂತಪದಸಾಮರ್ಥ್ಯಾತ್ ಸ್ಥಿತಾನಾಮಿತ್ಯಧ್ಯಾಹಾರಃ । ಕುತೋ ನಿಸ್ಸೃತಾನಾಮಿತ್ಯಪೇಕ್ಷಾಯಾಂ ಪ್ರಕೃತಸ್ಯೈವಾಪಾದನತ್ವಮಾಹ ತತ್–ಇತಿ ।........ಏಜನಂ–ಕಂಪನಮಿತಿ । 'ಏಜೃ ಕಂಪನೇ' ಇತಿ ಹಿ ಧಾತುಃ । ಪ್ರತ್ಯವಾಯಭಯಾತ್ ಸ್ವಸ್ವಕಾರ್ಯ(ಕಾರ್ಯೇಷು)ಪ್ರವೃತ್ತಿಃ—ಕಂಪನಮ್ । ಉದ್ಯತ

---

1 ಪಂಚಮ್ಯರ್ಥದಲ್ಲಿ ದ್ವಿತೀಯಾವಿಭಕ್ತಿ ಬಂದಿದೆ ಅಥವಾ ಪಂಚಮ್ಯರ್ಥದಲ್ಲಿ ಪ್ರಥಮ.

ಪ್ರಥಮಾಂತಾನಿ, ಆದ್ಯಮ್, ವಜ್ರಾದಿವ ಪರಮಪುರುಷಾತ್ ಸಂಜಾತೇನ ಭಯೇನ, ಕೃತ್ಸ್ನಂ ಜಗತ್ ಕಂಪತ ಇತ್ಯರ್ಥಃ' ಇತಿ । ಅತ್ರ 'ಮಹದ್ಭಯಂ ವಜ್ರಮುದ್ಯತಮ್' ಇತಿ ಚತ್ವಾರಿ ಪದಾನಿ ಪಂಚಮ್ಯರ್ಥಪ್ರಥಮಾಂತಪದದ್ವಯಂ, ಭಯವಾಚಿ । ಉತ್ತರಂ ತು ಪದದ್ವಯಂ ತದ್ಧೇತುಭೂತಪ್ರಾಣಶಬ್ದಿತಪರಬ್ರಹ್ಮಪರಮಿತಿ–ದ್ರಷ್ಟವ್ಯಮ್ । ಕೇಚಿತ್ತು 'ಬಿಭೇತ್ಯಸ್ಮಾದಿತಿ ಭಯಮ್ ; ಭಯಾನಕಮಿತ್ಯರ್ಥಃ । ಮಹಾಭಯಾನಕೋದ್ಯತ ವಜ್ರವತ್ ಸ್ವಸ್ಮಾನ್ನಿಸ್ಸೃತಂ ಸಕಲಂ ಜಗತ್, ಪ್ರಾಣಶಬ್ದಿತಃ ಪರಮಾತ್ಮಾ ಕಂಪಯತಿ। ಏಜಿಃ ಣ್ಯರ್ಥಗರ್ಭಃ । ಇತ್ಯಮುಮಪ್ಯರ್ಥಂ ವರ್ಣಯಂತಿ। ಯ ಏತದ್ವಿದುರಮೃತಾಸ್ತೇ ಭವಂತಿ–ಸ್ಪಷ್ಟೋಽರ್ಥಃ । 'ಅತ ಏವ ಪ್ರಾಣಃ' (1–1–9) ಇತ್ಯಧಿಕರಣನ್ಯಾಯಾತ್ ಪ್ರಾಣಶಬ್ದಸ್ಯ ಪರಮಾತ್ಮಪರತ್ವೇ ನ ವಿವಾದ ಇತಿ ದ್ರಷ್ಟವ್ಯಮ್ ॥

## ಅನುವಾದ

ಯದಿದಂ ಕಿಂಚ....ವಜ್ರಮುದ್ಯತಮ್ । ಈ ಮಂತ್ರಭಾಗವನ್ನು 'ಕಂಪನಾತ್' (ಬ್ರ. ಸೂ. 1–3–40) ಎಂಬ ಸೂತ್ರದಲ್ಲಿ ಪೂಜ್ಯರಾದ ಭಾಷ್ಯಕಾರರಿಂದ ವ್ಯಾಖ್ಯಾನಿಸಲ್ಪಟ್ಟಿದೆ. ಅಲ್ಲಿ ಈ ಮಂತ್ರವನ್ನು ಪ್ರಸ್ತಾಪಿಸಿ, ಅಂಗುಷ್ಠಪರಿಮಿತನಾದ ಪ್ರಾಣಶಬ್ದದಿಂದ ಹೇಳಲ್ಪಟ್ಟ ಪರಮಾತ್ಮನಲ್ಲಿ ಸೇರಿರುವ ಎಲ್ಲ ಜಗತ್ತೂ ಪರಮಾತ್ಮನಿಂದ ಹೊರಬಂದಿರುವುದು. ಸಮಸ್ತ ಜಗತ್ತಿಗೂ ಪರಮಾತ್ಮನಿಂದ ಉಂಟಾದ ಅಧಿಕವಾದ ಭಯದ ಕಾರಣ ನಡುಕ ಉಂಟಾಗಿದೆ. ಪರಮಾತ್ಮನ ಆಜ್ಞೆಯನ್ನು ಮೀರಿದರೆ ಏನಾಗುವುದೋ ಎಂಬ ಭಯದಿಂದ ಎತ್ತಿದ ವಜ್ರಾಯುಧವನ್ನು ನೋಡಿ ಹೆದರುವಂತೆ ಸಮಸ್ತ ಜಗತ್ತೂ ನಡುಗುತ್ತದೆ ಎಂದರ್ಥ. 'ಭಯಾದಸ್ಯಾಗ್ನಿಸ್ತಪತಿ' (ಕಠ. 6–3) ಎಂಬಶ್ರುತಿಯೂ ಇದೇ ಅರ್ಥವನ್ನು ತಿಳಿಸುತ್ತದೆ. 'ಮಹದ್ಭಯಂ ವಜ್ರಮುದ್ಯತಮ್' ಎಂಬಲ್ಲಿ ಪಂಚಮೀವಿಭಕ್ತ್ಯರ್ಥದಲ್ಲಿ ಪ್ರಥಮಾವಿಭಕ್ತಿ ಬಂದಿದೆ ಎಂದು ಭಾಷ್ಯದಲ್ಲಿ ವಿವರಿಸಿರುವರು. (ಇದನ್ನು ಶ್ರುತಪ್ರಕಾಶಿಕೆಯಲ್ಲೂ— 'ಪ್ರಾಣೇ' ಎಂಬ ಸಪ್ತಮೀವಿಭಕ್ತಿಪದ ಬಂದಿರುವುದರಿಂದ 'ಸ್ಥಿತಾನಾಂ' ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಎಲ್ಲಿಂದ ಹೊರಟವು ಎಂಬ ಆಕಾಂಕ್ಷೆಯಿಂದ ಪ್ರಕೃತವಾದ ಪರಮಾತ್ಮನಿಂದಲೇ ಎಂದು 'ತತಃ' ಎಂಬ ಪಂಚಮ್ಯಂತಪದದಿಂದ ಹೇಳಿದೆ) ಏಜನಂ ಅಂದರೆ ನಡುಗುವಿಕೆ 'ಏಜೃ ಕಂಪನೇ' (ಧಾ.ಪಾ 234) ಎಂಬುದು ಧಾತು. ತಮ್ಮ ಕಾರ್ಯಮಾಡದಿದ್ದಲ್ಲಿ ಏನಾಗುವುದೋ ಎಂಬ ಭೀತಿಯಿಂದ ತಮ್ಮ ತಮ್ಮ ಕಾರ್ಯದಲ್ಲಿ ಪ್ರವರ್ತಿಸುವುದು ಕಂಪನ. ಎತ್ತಿದ ವಜ್ರಾಯುಧದಂತೆ ಪರಮಾತ್ಮನಿಂದುಂಟಾದ ಭಯದಿಂದ ಸಮಸ್ತ ಜಗತ್ತೂ ನಡುಗುತ್ತದೆ ಎಂದು ಶ್ರುತಪ್ರಕಾಶಿಕಾಚಾರ್ಯರು ವಿವರಿಸಿರುವರು.

ಇಲ್ಲಿ ಮಹತ್–ಭಯಂ–ವಜ್ರಂ, ಉದ್ಯತಂ ಎಂಬ ನಾಲ್ಕು ಪದಗಳು ಪಂಚಮೀ ವಿಭಕ್ತ್ಯರ್ಥದಲ್ಲಿ ಬಂದಿರುವ ಪ್ರಥಮಾವಿಭಕ್ತಿಯ ಪದಗಳು ಮೊದಲ ಪಂಚಮ್ಯರ್ಥದ ಎರಡು ಪ್ರಥಮಾಂತ ಪದಗಳು ಭಯವನ್ನುತಿಳಿಸುತ್ತವೆ. ಅನಂತರದ ಎರಡು ಪದಗಳು ಭಯಕ್ಕೆ ಕಾರಣವಾದ 'ಪ್ರಾಣ'ಶಬ್ದದಿಂದ ಹೇಳಲ್ಪಟ್ಟ ಪರಬ್ರಹ್ಮವನ್ನು ಕುರಿತದ್ದು ಎಂದು ತಿಳಿಯಬೇಕು.

ಕೆಲವರು 'ಬಿಭೇತ್ಯಸ್ಮಾದಿತಿ ಭಯಮ್' ಭಯಮ್ ಭಯವನ್ನುಂಟುಮಾಡುವುದು ಎಂದರ್ಥ. ಅಧಿಕಭಯವನ್ನುಂಟುಮಾಡುವ ಎತ್ತಿದ ವಜ್ರಾಯುಧದಂತೆ ತನ್ನಿಂದ

ಹೊರಟ ಸಮಸ್ತಜಗತ್ತನ್ನೂ ಪ್ರಾಣಶಬ್ದವಾಚ್ಯನಾದ ಪರಮಾತ್ಮನು ನಡುಗಿಸುತ್ತಾನೆ. 'ಏಜೃ' ಧಾತುವು [1]ಣ್ಯರ್ಥವನ್ನೊಳಗೊಂಡಿದೆ ಎಂದು ಹೇಳುತ್ತಾರೆ. ಯ ಏತದ್ವಿದುರ ಮೃತಾಸ್ತೇ ಭವಂತಿ (ಅರ್ಥ ಸ್ಪಷ್ಟವಾಗಿದೆ) ಈ ಪರಮಾತ್ಮಸ್ವರೂಪವನ್ನರಿತವರಿಗೆ ಮುಕ್ತಿ ದೊರಕುತ್ತದೆ. 'ಅತ ಏವ ಪ್ರಾಣಃ' (1–1–9) ಎಂಬ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದ ವಾಚ್ಯನೆಂದು ಹೇಳಿರುವುದರಿಂದ ಇಲ್ಲಿಯು ಪ್ರಾಣಶಬ್ದವೂ ಪರಮಾತ್ಮಪರವೆನ್ನುವಲ್ಲಿ ಯಾವ ವಿವಾದವೂ ಇಲ್ಲ' ಎಂದು ತಿಳಿಯಬೇಕು.

### ಭಾಷ್ಯಸಾರ

ಕಣ್ಣಿಗೆ ಕಾಣುವ ಈ ಜಗತ್ತು ಅಂದರೆ ಅಗ್ನಿ–ವಾಯು ಮುಂತಾದ ರೂಪದಲ್ಲಿರುವ ವಿಶ್ವವೆಲ್ಲವೂ ನಿಮಿತ್ತಕಾರಣವೂ–ಉಪಾದಾನಕಾರಣವೂ ಆದ ಪ್ರಾಣಶಬ್ದದಿಂದ ಹೇಳಲ್ಪಟ್ಟ ಪರಮಾತ್ಮನಿಂದಲೇ ಹುಟ್ಟಿದೆ. ಅಗ್ನಿ–ವಾಯು ಮುಂತಾದವರು ಎಚ್ಚರದಪ್ಪದೇ ತಮ್ಮ ತಮ್ಮ ಕಾರ್ಯಮಾಡುವಂತೆ ಪರಮಾತ್ಮನೇ ಪ್ರೇರೇಪಿಸುತ್ತಾನೆ. ಎತ್ತಿದ ವಜ್ರಾಯುಧ ನೋಡಿದಾಗ ಹೇಗೆ ಭಯವಾಗುವುದೋ ಹಾಗೆ ಪರಮಾತ್ಮನನ್ನು ನೋಡಿ ಜಗತ್ತು ಭಯಪಡುತ್ತದೆ. ಆದುದರಿಂದ ಪರಮಾತ್ಮನು ಭಯಕಾರಣನು ಎಂದು ಹೇಳಿದೆ. ಆಯುಧವನ್ನು ಎತ್ತಿ ಹಿಡಿದ ಯಜಮಾನನನ್ನು ನೋಡಿ ನೌಕರರು ಭಯದಿಂದ ತಮ್ಮ ತಮ್ಮ ಕೆಲಸಮಾಡುವಂತೆ ಇವನ ಆಜ್ಞಾವಶರಾದ ಅಗ್ನಿವಾಯುಗಳು ಇವನಿಗೆ ಹೆದರಿ ತಮ್ಮ ತಮ್ಮ ಕಾರ್ಯಮಾಡುತ್ತಾರೆ ಎಂದು ತಾತ್ಪರ್ಯ. ಇಲ್ಲಿ 'ಏಜತಿ' ಎಂಬುದು 'ಣ್ಯತ್' ಪ್ರತ್ಯಯಾಂತವಾಗಿದ್ದು ಪ್ರೇರಣಾರ್ಥದಲ್ಲಿದೆ. ಅಥವಾ ಎತ್ತಿದ ವಜ್ರಾಯುಧದಂತೆ ಮಹಾ ಭಯಂಕರನಾದ ಪ್ರಾಣಶಬ್ದವಾಚ್ಯನಾದ ಪರಮಾತ್ಮನಿಂದುಂಟಾದ ಭಯದಿಂದ ವಾಯು ಆದಿತ್ಯ ಮುಂತಾದವರು ತಮ್ಮ ತಮ್ಮ ಕೆಲಸ ಮಾಡುತ್ತಾರೆ ಎಂದು ಅನ್ವಯಿಸಬಹುದು. ಇಲ್ಲಿ 'ಸುಪಾಂ ಸುಃ[2]' ಎಂಬ ನಿಯಮ. ಪ್ರಾಣಶಬ್ದವಾಚ್ಯನೂ–ಭಯಕಾರಣನೂ– ಜಗದೊಡೆಯನೂ ಆದ ಪರಮಾತ್ಮನನ್ನು ಅರಿತವರು ಈ ಸಂಸಾರದಿಂದ ಮುಕ್ತರಾಗುತ್ತಾರೆ.



1 ಪ್ರೇರಕಾರ್ಥದಲ್ಲಿದೆ

2 'ಸುಪಾಂ ಸು'ಃ ಛಂದಸ್ಸಿನಲ್ಲಿ ಎಲ್ಲ ವಿಭಕ್ತಿಗಳಿಗೂ ಪ್ರಥಮಾವಿಭಕ್ತಿಪ್ರತ್ಯಯವಾದ 'ಸುಃ' ಎಂಬುದು ಆದೇಶವಾಗಿ ಬರಬಹುದು.

## ಮಂತ್ರ ೩

**भयादस्याग्निस्तपति भयात्तपति सूर्यः ।**
**भयादिन्द्रश्च वायुश्च मृत्युर्धावति पञ्चमः ॥**

ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।
ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥

### ಪ್ರತಿಪದಾರ್ಥ

ಅಸ್ಯ—ಈ ಪರಮಾತ್ಮನೇ, ಭಯಾತ —ಭಯದಿಂದ, ಅಗ್ನಿಃ—ಅಗ್ನಿಯು, ತಪತಿ —ಜ್ವಲಿಸುತ್ತಾನೆ ಶಾಖಕೊಡುತ್ತಾನೆ. ಸುಡುತ್ತಾನೆ, ಭಯಾತ್—(ಈ ಪರಮಾತ್ಮನ) ಭಯದಿಂದಲೇ, ಸೂರ್ಯಃ—ಸೂರ್ಯನು, ತಪತಿ—ಪ್ರಕಾಶಿಸುತ್ತಾನೆ, ಇಂದ್ರಶ್ಚ—ಇಂದ್ರನೂ, ವಾಯುಶ್ಚ—ವಾಯುವೂ, ಪಂಚಮಃ—ಮರಣಕಾರಕನಾದ. ಮೃತ್ಯುಃ—ಯಮನೂ, ಅಸ್ಯ—ಈ ಪರಮಾತ್ಮನ, ಭಯಾತ್—ಭಯದಿಂದ ಧಾವತಿ—ತ್ವರೆ ಹೊಂದಿ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿದ್ದಾರೆ.

### ತಾತ್ಪರ್ಯ

ಈ ಪರಮಾತ್ಮನ ಭಯದಿಂದ ಅಗ್ನಿಯು ಸುಡುತ್ತಾನೆ. ಸೂರ್ಯನು ಪ್ರಕಾಶಿಸುತ್ತಾನೆ. ಈತನ ಶಾಸನ ಮೀರಿದರೆ ಏನಾಗುವುದೋ ಎಂಬ ಭಯದಿಂದ ಇಂದ್ರ ಮತ್ತು ವಾಯುಗಳೂ ಅವರವರ ಕೆಲಸದಲ್ಲಿ ತೊಡಗುತ್ತಾರೆ ; ಮೃತ್ಯುದೇವತೆಯಾದ ಯಮನೂ ತನ್ನ ಕೆಲಸವನ್ನು ಮಾಡುತ್ತಾನೆ. ಅಂದರೆ ಎಲ್ಲರೂ ತಮ್ಮ ತಮ್ಮ ಕಾರ್ಯ ನಿರ್ವಹಣೆ ಮಾಡುತ್ತಾರೆ ಎಂದು ತಾತ್ಪರ್ಯ.

### ರಂಗರಾಮಾನುಜಭಾಷ್ಯಮ್

ಭಯಾದಸ್ಯಾಗ್ನಿಸ್ತಪತಿ.........ಮೃತ್ಯುರ್ಧಾವತಿ ಪಂಚಮಃ ॥ ಧಾವತಿಶಬ್ದಃ ಇಂದ್ರಾದೀನಾಂ ಸ್ವಸ್ವವ್ಯಾಪಾರಪ್ರವೃತ್ತಿಪರಃ । ಶಿಷ್ಟಂ ಸ್ಪಷ್ಟಮ್ ॥

### ಅನುವಾದ

ಭಯಾದಸ್ಯಾಗ್ನಿಸ್ತಪತಿ........ಮೃತ್ಯುರ್ಧಾವತಿ ಪಂಚಮಃ । ಧಾವತಿ ಎಂಬ ಶಬ್ದವು ಇಂದ್ರ ಮುಂತಾದವರು ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗುತ್ತಿರುವವರು ಎಂಬರ್ಥದಲ್ಲಿದೆ. (ಉಳಿದ ಪದಗಳ ಅರ್ಥ ಸ್ಪಷ್ಟವಾಗಿದೆ.)

### ಭಾಷ್ಯಸಾರ

'ಯದಿದಂ ಕಿಂಚ' ಎಂಬ ಹಿಂದಿನ ಮಂತ್ರದಲ್ಲಿ ಹೇಳಿದ ಅರ್ಥವನ್ನೇ ವಿಶೇಷರೂಪದಲ್ಲಿ 'ಭಯಾದಸ್ಯ' ಎಂಬ ಈ ಮಂತ್ರದಲ್ಲಿ ವಿವರಿಸುತ್ತಾರೆ.

ಈ ಪರಬ್ರಹ್ಮನ ಭಯದಿಂದಲೇ ಅಗ್ನಿಯು ಸುಡುತ್ತಾನೆ. ಇವನ ಭಯದಿಂದಲೇ

ಸೂರ್ಯನು ಪ್ರಕಾಶಿಸುತ್ತಾನೆ. ಈತನ ಭಯದಿಂದಲೇ ಇಂದ್ರ, ವಾಯು ಮತ್ತು ಐದನೆಯವನಾದ ಯಮ ಎಲ್ಲರೂ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಸಮರ್ಥರಾದ ಲೋಕಪಾಲರೆನಿಸಿದ ಅಗ್ನಿ ಮುಂತಾದವರು ಪರಮಾತ್ಮನ ಶಾಸನವನ್ನು ಮೀರಿದರೆ ಏನಾಗುವುದೋ ಎಂಬ ಭಯದಿಂದಲೇ ತಮಗೆ ನಿಯತವಾದ ಕಾರ್ಯಗಳನ್ನು ಜಾಗರೂಕರಾಗಿ ನಿರ್ವಹಿಸುತ್ತಾರೆ ಎಂದು ತಾತ್ಪರ್ಯ.



## ಮಂತ್ರ ೪

**इह चेदशकत् बोद्धुं प्राक् शरीरस्य विस्रसः ।**
**ततःसर्गे(र्वे)षु लोकेषु शरीरत्वाय कल्पते ॥**

ಇಹ ಚೇದಶಕತ್ ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।
ತತಸ್ಸರ್ಗೇ(ರ್ವೇ)ಷು ಲೋಕೇಷು ಶರೀರತ್ವಾಯ ಕಲ್ಪತೇ ॥

### ಪ್ರತಿಪದಾರ್ಥ

ಶರೀರಸ್ಯ—ಶರೀರದ, ವಿಸ್ರಸಃ—ಪತನಕ್ಕಿಂತ, ಪ್ರಾಕ್—ಮೊದಲು (ಜೀವದೆಶೆಯಲ್ಲಿ) ಇಹ—ಈ ಲೋಕದಲ್ಲಿಯೇ, ಬೋದ್ಧುಂ—(ಪರಮಾತ್ಮನನ್ನು) ತಿಳಿದುಕೊಳ್ಳಲು, ಅಶಕತ್‌ಚೇತ್—ಅಶಕ್ತನಾದರೆ ತತಃ—ಶರೀರವಿಯೋಗದ ನಂತರ, ಸರ್ಗೇಷು ಲೋಕೇಷು—ಸೃಷ್ಟಿಗೆ ಗೋಚರವಾದ ಮನುಷ್ಯಾದಿಲೋಕಗಳಲ್ಲಿ, ಶರೀರತ್ವಾಯ—ಜರಾಮರಣಯುಕ್ತವಾದ ಶರೀರವನ್ನು ಹೊಂದಲು, ಕಲ್ಪತೇ—ಅರ್ಹನಾಗಿಬಿಡುತ್ತಾನೆ.

### ತಾತ್ಪರ್ಯ

ಶರೀರಪಾತಕ್ಕೆ ಮೊದಲು ಈ ಪರಬ್ರಹ್ಮವನ್ನು ತಿಳಿದುಕೊಳ್ಳಬೇಕು. ಹಾಗೆ ತಿಳಿಯಲು ಶಕ್ತನಾದರೆ ಸಂಸಾರಬಂಧನದಿಂದ ಮುಕ್ತನಾಗುತ್ತಾನೆ. ಹಾಗೆ ತಿಳಿದುಕೊಳ್ಳಲು ಅಶಕ್ತನಾದರೆ ಶರೀರವಿಯೋಗದನಂತರ ಪುನಃ ಮನುಷ್ಯಾದಿಲೋಕಗಳಲ್ಲಿ ಜರಾಮರಣಗಳಿಂದ ಕೂಡಿದ ಶರೀರವನ್ನು ಪಡೆಯುತ್ತಾನೆ.

### ರಂಗರಾಮಾನುಜಭಾಷ್ಯಮ್

ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ । ಶರೀರಸ್ಯ ವಿಸ್ರಸಃ—ವಿಸ್ರಂಸನಾತ್ ಪತನಾತ್ಪ್ರಾಕ್ ಇಹ-ಲೋಕೇ ಬ್ರಹ್ಮ ಬೋದ್ಧುಂ ಅಶಕಚ್ಚೇತ್-ಅಶಕ್ನುವಂಶ್ಚೇತ್ ವಿಕರಣವ್ಯತ್ಯಯಃ ಛಾಂದಸಃ । ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ । ತತಃ ತಸ್ಮಾತ್ ಜ್ಞಾನಾಭಾವಾದ್ಧೇತೋಃ, ಸೃಜ್ಯಮಾನಸರ್ವಲೋಕೇಷು ಜನ್ಮಜರಾಮರಣಾದಿಮತ್ತ್ವಲಕ್ಷಣಶೀರ್ಯಮಾಣತ್ವಾಯ ಭವತೀತ್ಯರ್ಥಃ । ತಸ್ಮಾತ್ ಶರೀರಪಾತಾತ್ಪ್ರಾಗೇವ ಆತ್ಮಜ್ಞಾನಾಯ ಯತೇತೇತಿ ಭಾವಃ ॥

### ಅನುವಾದ

ಇಹ ಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ । ಶರೀರಸ್ಯ ವಿಸ್ರಸಃ ಶರೀರನಾಶಕ್ಕೆ ಮೊದಲು, ಇಹ–ಈ ಲೋಕದಲ್ಲಿ ಬ್ರಹ್ಮವನ್ನು ತಿಳಿಯಲು ಅಶಕಚ್ಚೇತ್-ಅಶಕ್ತನಾದಲ್ಲಿ. ಬೇರೆ ವಿಕರಣ ಪ್ರತ್ಯಯವು ಛಾಂದಸ, ತತಸ್ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ । ತತಃ–ಅದರಿಂದ ಅಂದರೆ ಪರಬ್ರಹ್ಮದ ಜ್ಞಾನವಿಲ್ಲದ ಕಾರಣ, ಸೃಷ್ಟಿಸಲ್ಪಡುವ ಎಲ್ಲ ಲೋಕಗಳಲ್ಲೂ ಜನ್ಮ–ಮುಪ್ಪು–ಮರಣ ಮುಂತಾದವುಗಳ ಮೂಲಕ ಜೀವನು ವಿಕಾರಯೋಗ್ಯನಾಗಿಬಿಡುವನು. (ತನ್ನ ಸ್ಥಾಯಿರೂಪ ಮರೆಮಾಡಿಕೊಳ್ಳುವನು) ಆದುದರಿಂದ ಈ ಶರೀರವು ನಾಶವಾಗುವ ಮೊದಲೇ ಪರಮಾತ್ಮಜ್ಞಾನ ಪಡೆಯಲು ಯತ್ನಿಸಬೇಕು ಎಂದು ತಾತ್ಪರ್ಯ.

## ಭಾಷ್ಯಸಾರ

ಪರಬ್ರಹ್ಮವನ್ನು ಅರಿಯಲು ಕೂಡಲೇ ಯತ್ನಿಸಬೇಕು, ಎಂಬ ಅಭಿಪ್ರಾಯದಿಂದ "ಇಹ ಚೇದಶಕತ್‌" ಎಂದು ಹೇಳುತ್ತಾನೆ.

ಪರಮಾತ್ಮನನ್ನು ಅರಿಯಲು ಇದೇ ಸರಿಯಾದ ಸಮಯ. ಇದು ಆತ್ಮ ; ಇದು ಅನಾತ್ಮ ; ಎಂದು ವಿವೇಚಿಸಲು ಬೇಕಾದ ಶರೀರ ಇಲ್ಲಿ ಈಗ ಸಿಕ್ಕಿದೆ. ಆದರೆ ಈ ಶರೀರವು ನಾಶಹೊಂದುವ ಸ್ವಭಾವವುಳ್ಳದ್ದು. ಆದ್ದರಿಂದಲೇ ಶರೀರವೆಂದು ಪ್ರಸಿದ್ಧವಾಗಿದೆ. ಈ ಶರೀರ ನಾಶವಾಗುವ ಮೊದಲೇ ಎಲ್ಲದಕ್ಕೂ ಶಾಸಕನಾದ ಪರಮಾತ್ಮನ ಸ್ವರೂಪವನ್ನು ಅರಿಯಲು ಯತ್ನಿಸದೇ ಹೋದರೆ ಈ ಅಜ್ಞಾನದ ಕಾರಣದಿಂದಲೇ ಭೂಮಿ ಮುಂತಾದ ಸ್ಥಳಗಳಲ್ಲಿ ನರ–ಪಶು–ಪಕ್ಷಿ ಮುಂತಾದ ಶರೀರವನ್ನು ಪಡೆಯಲು ಯೋಗ್ಯನಾಗುತ್ತಾನೆ. ಅಂದರೆ ಜನನ–ಮರಣರೂಪವಾದ ಈ ಸಂಸಾರವು ತಪ್ಪಿದ್ದಲ್ಲ ಎಂದು ತಾತ್ಪರ್ಯ.



## ಮಂತ್ರ ೫

**यथा-दर्शे तथाऽऽत्मनि यथा स्वप्ने तथा पितृलोके ।**
**यथाऽप्सु परीव ददृशे तथा गन्धर्वलोके छायातपयोरिव ब्रह्मलोके ॥**

ಯಥಾದರ್ಶೇ ತಥಾಽಽತ್ಮನಿ
ಯಥಾ ಸ್ವಪ್ನೇ ತಥಾ ಪಿತೃಲೋಕೇ ।
ಯಥಾಽಪ್ಸು ಪರೀವ ದದೃಶೇ ತಥಾ ಗಂಧರ್ವಲೋಕೇ
ಛಾಯಾತಪಯೋರಿವ ಬ್ರಹ್ಮಲೋಕೇ ।

### ಪ್ರತಿಪದಾರ್ಥ

ಆದರ್ಶೇ—ಕನ್ನಡಿಯಲ್ಲಿ, ಯಥಾ ಪರಿದೃಶೇ ಇವ—ಮುಖಾದಿಗಳು ಹೇಗೆ ಸುಸ್ಪಷ್ಟವಾಗಿ ಕಂಡಂತೆ ತೋರಿದರೂ ನೇರವಾಗಿ ಕಣ್ಣಿಂದ ಕಂಡಂತಾಗುವುದಿಲ್ಲವೋ, ತಥಾ ಆತ್ಮನಿ—ಹಾಗೆಯೇ ಆತ್ಮನ ಬಗ್ಗೆ ತಿಳುವಳಿಕೆಯೂ ಸಹ ಈ ಲೋಕದಲ್ಲಿ ಸ್ಪಷ್ಟವಲ್ಲ, ಯಥಾ ಸ್ವಪ್ನೇ—ಹೇಗೆ ಕನಸಿನಲ್ಲಿ ಕಂಡದ್ದು ಸ್ಫುಟವಂತೆ ತೋರಿದರೂ ಮಸುಕುಮಸುಕಾಗುವುದೋ, ತಥಾ—ಹಾಗೆಯೇ, ಪಿತೃಲೋಕೇ—ಪಿತೃಲೋಕ (ಶರೀರ)ದಲ್ಲಿ ಆತ್ಮನ ಬಗ್ಗೆ ಅರಿವೂ ಅಸ್ಫುಟವು, ಯಥಾ ಅಪ್ಸು—ಹೇಗೆ ನೀರಿನಲ್ಲಿ ಕಂಡದ್ದು ಸ್ಫುಟವಾಗಿರುವಂತಾದರೂ ಅಸ್ತವ್ಯಸ್ತವಾಗಿ ಕಾಣುವುದೋ, ತಥಾ ಗಂಧರ್ವ ಲೋಕೇ—ಹಾಗೆಯೇ ಗಂಧರ್ವಲೋಕದಲ್ಲಿಯೂ ಸಹ ಆತ್ಮ ಪ್ರಕಾಶವು ಅಸ್ಫುಟವು, ಬ್ರಹ್ಮಲೋಕೇ—ಹಿರಣ್ಯಗರ್ಭನ ಸ್ಥಾನದಲ್ಲಿಯೂ ಸಹ ಆತ್ಮಪ್ರಕಾಶವು ಛಾಯಾ ತಪಯೋರಿವ—ಬಿಸಿಲು ನೆರಳುಗಳುಳ್ಳ ಜಾಗದಲ್ಲಿರುವ ವಸ್ತುವಿನಂತೆ ಅಸ್ಫುಟವೇ ಹೊರತು ಕೇವಲ ಬಿಸಿಲಲ್ಲಿರುವ ವಸ್ತುವಿನಂತೆ ಸ್ಫುಟವಲ್ಲವೆಂದರ್ಥ.

### ತಾತ್ಪರ್ಯ

ಈ ಲೋಕದಲ್ಲಿ ಪರಮಾತ್ಮಸ್ವರೂಪದ ಅರಿವು ಕನ್ನಡಿಯಲ್ಲಿ ನೋಡಿದಂತೆ ಅಸ್ಪಷ್ಟವಾಗಿ ಇರುವುದು. ಎದುರಿಗೆ ನೋಡಿದಂತೆ ಸ್ಪಷ್ಟವಾಗಿಲ್ಲ. ಹಾಗೆಯೇ ಪಿತೃಲೋಕದಲ್ಲಿ ಕನಸಿನಲ್ಲಿ ಕಂಡಂತೆಯೇ ಗಂಧರ್ವಲೋಕದಲ್ಲಿ ನೀರಿನಲ್ಲಿ ನೋಡಿದಂತೆಯೂ. ಬ್ರಹ್ಮ (ಚತುರ್ಮುಖ)ಲೋಕದಲ್ಲಿ ನೆರಳು ಬಿಸಿಲು ಬೆರೆತ ಜಾಗದಲ್ಲಿ ನೋಡಿದಂತೆಯೂ ಅಸ್ಫುಟವೇ ಆದಕಾರಣ ಆತ್ಮತತ್ತ್ವದ ಅರಿವು ಗಹನ.

### ರಂಗರಾಮಾನುಜಭಾಷ್ಯಮ್

ಆತ್ಮನೋ ದುರ್ಬೋಧತ್ವಮೇವಾಹ—ಯಥಾದರ್ಶೇ ತಥಾಽಽತ್ಮನಿ । ಯಥಾದರ್ಶೇ ಚಂದ್ರಿಕಾಯಾ ಅಭಾವಾತ್ ನ ಸ್ಪಷ್ಟಃ ಪ್ರತಿಭಾಸಃ ; ತಥಾ ಇಹ ಲೋಕೇ ಆತ್ಮನಿ ಇತ್ಯರ್ಥಃ । ಯದ್ವಾ ಯಥಾ ಆದರ್ಶೇ–ದರ್ಪಣೇ, ಪ್ರತೀಯಮಾನಂ ವಸ್ತು ಸಾಕ್ಷಾದ್ದೃಷ್ಟವಸ್ತುವತ್ ಪ್ರತ್ಯಙ್ಮುಖತ್ವಾದಿಕಲ್ಪಿತಾರ್ಥಾನವರುದ್ಧತಯಾ ನೋಪಲಭ್ಯತೇ, ತಥೇಹಾತ್ಮವಿಷಯಿಣೀ ಪ್ರತೀತಿರಿತ್ಯರ್ಥಃ । ಲೋಕಾಂತರೇಽಪಿ ತಥೇತ್ಯಾಹ–ಯಥಾ ಸ್ವಪ್ನೇ ತಥಾ ಪಿತೃಲೋಕೇ । ಯಥಾ ಸ್ವಪ್ನದರ್ಶನಸ್ಯ, ಜಾಗ್ರದ್ದರ್ಶನವತ್ ಸಮ್ಯಕ್ತ್ವಯಾ ಸಂಶಯಾದಿ ವಿರೋಧಿತಯಾ ಪುನರನುಸಂಧಾನಯೋಗ್ಯತ್ವಾಭಾವಃ ; ತಥಾ ಪಿತೃಲೋಕ ಇತ್ಯರ್ಥಃ । ಯಥಾಪ್ಸು ಪರೀವ ದದೃಶೇ ತಥಾ ಗಂಧರ್ವಲೋಕೇ । ಯಥಾ ಜಲಾಂತಸ್ಥವಸ್ತುನೋ ನೇತರವತ್ ಸ್ಪಷ್ಟಪ್ರಕಾಶಃ ; ತದ್ವತ್ ಪರಿದದೃಶ ಇವ । ನ ವಸ್ತುತಃ(ಯಥಾವತ್ ?)

ಪರಿತೋ ದೃಶ್ಯತ ಇತ್ಯರ್ಥಃ । ಗಂಧರ್ವಲೋಕೇಽಪ್ಯಾಪಾತತಃ ಪ್ರತೀತಿಮಾತ್ರಮ್ ಇತ್ಯರ್ಥಃ । ಛಾಯಾತಪಯೋರಿವ ಬ್ರಹ್ಮಲೋಕೇ ಯಥಾ ಛಾಯಾತಪಯೋರ್ವಿಶ್ರಣೇ ಶುದ್ಧಾತಪವರ್ತಿಪದಾರ್ಥವತ್ ನೋಪಲಂಭಃ ; ಏವಂ ಬ್ರಹ್ಮಲೋಕೇಽಪಿ ನ ಸಮ್ಯಗುಪಲಂಭಃ । ಅತೋ ದುರಧಿಗಮಮಾತ್ಮತತ್ತ್ವಮಿತಿ ಭಾವಃ । ಯದ್ವಾ–ಬ್ರಹ್ಮಲೋಕೇ ಯದ್ಯಪಿ ಛಾಯಾತಪಯೋರ್ವಿವಿಕ್ತೋಪಲಂಭವತ್ ಆತ್ಮಾನಾತ್ಮಸ್ವರೂಪಯೋರ್ವಿವಿಕ್ತೋಪಲಂಭಃ ಸಂಭವತಿ, ತಥಾಪಿ ನಾತ್ರತ್ಯಾನಾಮಾತ್ಮತತ್ತ್ವಂ ಸುಲಭಮಿತಿ ಭಾವಃ ॥

## ಅನುವಾದ

ಆತ್ಮವನ್ನು ತಿಳಿಯುವುದು ಕಷ್ಟ ಎಂಬುದನ್ನು ವಿವರಿಸುತ್ತಾನೆ. [1]ಯಥಾದರ್ಶೇ ತಥಾತ್ಮನಿ ಅಮಾವಾಸ್ಯೆಯಂದು ಬೆಳದಿಂಗಳಿಲ್ಲದಿರುವುದರಿಂದ ವಸ್ತುಗಳು ಸ್ಪಷ್ಟವಾಗಿ ಹೇಗೆ ಕಾಣಿಸುವುದಿಲ್ಲವೋ, ಹಾಗೆ ಈ ಲೋಕದಲ್ಲಿ ಆತ್ಮನ ಬಗ್ಗೆ ಅರಿವು ಅಥವಾ ಕನ್ನಡಿಯಲ್ಲಿ ತೋರುವ ವಸ್ತುವು ಪೂರ್ವಾಭಿಮುಖವಾಗಿದ್ದುದ್ದು ಪಶ್ಚಿಮಾಭಿಮುಖತ್ವ ರೂಪವಾಗಿ ಕಲ್ಪಿತಾರ್ಥದೊಡನೆ ತೋರುತ್ತದೆ. ಕಣ್ಣೆದುರಿಗೆ ಇರುವ ವಸ್ತುವು ಕಲ್ಪಿತಾರ್ಥ ಸಂಬಂಧವಿಲ್ಲದೇ, ಇದ್ದಂತೆ ಕಾಣುತ್ತದೆ. ಹಾಗೆಯೇ ಈ ಲೋಕದಲ್ಲಿ ಆತ್ಮನ ಅರಿವು ಕಲ್ಪಿತಾರ್ಥಮಿಶ್ರಿತವಾಗಿಯೇ ತೋರುತ್ತದೆ. ವ್ಯತ್ಯಾಸವಾಗಿ ಬೇರೆ ಲೋಕಗಳಲ್ಲೂ ಹಾಗೆಯೇ ಎಂದು ಹೇಳುತ್ತಾನೆ. ಯಥಾ ಸ್ವಪ್ನೇ ತಥಾ ಪಿತೃಲೋಕೇ ಸ್ವಪ್ನದಲ್ಲಿ ಕಾಣುವುದು ಎಚ್ಚರವಾಗಿರುವಾಗ ಕಾಣುವಂತೆ ಸ್ಫುಟವಾಗಿ, ಸಂಶಯಾದಿಗಳಿಲ್ಲದಂತೆ ಪುನಃ ಅನುಸಂಧಾನಮಾಡಲು ಹೇಗೆ ಅರ್ಹವಾಗಿರುವುದಿಲ್ಲವೋ ಅಂತೆಯೇ ಪಿತೃಲೋಕದಲ್ಲಿ ಉಂಟಾಗುವ ಆತ್ಮಬೋಧವೂ, ಯಥಾಪ್ಸು ಪರೀವ ದದೃಶೇ ತಥಾ ಗಂಧರ್ವಲೋಕೇ– ನೀರೊಳಗಿರುವ ವಸ್ತುಗಳು ಇತರವಸ್ತುಗಳಂತೆ ಹೇಗೆ ಸ್ಪಷ್ಟವಾಗಿ ಕಾಣಲಾರವೋ, ಅದರಂತೆ ಗಂಧರ್ವಲೋಕದಲ್ಲಿ ಆತ್ಮದ ಬೋಧವೂ ಸ್ಪಷ್ಟವಾಗಿ ಕಂಡಂತಿದ್ದರೂ ವಸ್ತುತಃ ಅಸ್ಪಷ್ಟವೇ ಆಪಾತತಃ(ಸಾಮಾನ್ಯವಾಗಿ)ಕಾಣುತ್ತದೆಎಂದು ತಾತ್ಪರ್ಯ. ಛಾಯಾತಪಯೋರಿವ ಬ್ರಹ್ಮಲೋಕೇ ನೆರಳು ಬಿಸಿಲು ಸೇರುವೆಡೆ ಇರುವ ವಸ್ತುವು, ಬಿಸಿಲಿನಲ್ಲಿರುವ ವಸ್ತುವಿನಂತೆ ಹೇಗೆ ಸ್ಪಷ್ಟವಾಗಿ ಕಾಣುವುದಿಲ್ಲವೋ, ಅದರಂತೆ ಬ್ರಹ್ಮಲೋಕದಲ್ಲಿಯೂ ಆತ್ಮತತ್ತ್ವ ಬೋಧವು ಅಸ್ಪಷ್ಟ. (ಅಥವಾ) ನೆರಳು ಬಿಸಿಲುಗಳನ್ನು ಬೇರ್ಪಡಿಸಿ ತಿಳಿಯುವಂತೆ, ಬ್ರಹ್ಮಲೋಕದಲ್ಲಿ ಆತ್ಮ, ಅನಾತ್ಮಗಳ ಸ್ವರೂಪವನ್ನು ವಿವೇಚಿಸಿ ತಿಳಿಯಬಹುದಾದರೂ, ಇಹಲೋಕದಲ್ಲಿರುವವರಿಗೆ ಆತ್ಮಬೋಧವು ಸುಲಭವಲ್ಲವೆಂದು ತಾತ್ಪರ್ಯ.

## ಭಾಷ್ಯಸಾರ

ಸರ್ವಾಂತರ್ಯಾಮಿಯಾದ ಪರಮಾತ್ಮನು ಸರ್ವರ ಹೃದಯದಲ್ಲಿಯೂ ಸನ್ನಿಹಿತನಾಗಿಯೇ ಇರುವನು. ಇದು ಎಲ್ಲ ಲೋಕಕ್ಕೂ ಸಮ. ಹೀಗಿರುವಲ್ಲಿ ಮಾನವದೇಹದಲ್ಲೇ ಕಾಣಲು ಯತ್ನಿಸಬೇಕೆಂಬುದಕ್ಕೆ ಸೋದಾಹರಣ ವಿವರಣೆ ನೀಡುತ್ತಾನೆ. ಕನ್ನಡಿಯಲ್ಲಿ ಮುಖ ಮುಂತಾದವು ಹೇಗೆ ಸ್ವಚ್ಛವಾಗಿ ಕಾಣುವುವೋ ಅಂತೆಯೇ ಯೋಗಬಲದಿಂದ

1 ಯಥಾದರ್ಶೇ ಎಂಬಲ್ಲಿ ಒಮ್ಮೆ ದರ್ಶೇ ಎಂಬುದಾಗಿ ಪದವಿಭಾಗ ಮಾಡಿಯೂ, ಮತ್ತೊಮ್ಮೆ ಆದರ್ಶೇ ಎಂಬುದಾಗಿ ಪದವಿಭಾಗ ಮಾಡಿಯೂ ಅರ್ಥಭೇದ ಕೊಟ್ಟಿದೆ.

ಹೃದಯಕೋಶವನ್ನು ತೆರೆದುಕೊಂಡವರಿಗೆ ತನ್ನ ದೇಹದಲ್ಲಿ ಸ್ವಾತ್ಮನೂ ಪರಮಾತ್ಮನೂ ಇಬ್ಬರೂ ಸ್ಫುಟವಾಗಿಯೇ ಗೋಚರಿಸುವರು. ಯಾರಾದರೂ ಇವನನ್ನು ಯಾವುದೋ ಒಂದು ಸೀಮಿತವಾದ ಜಾಗದಲ್ಲಿ ಮಾತ್ರ ಇರುವನೆಂದು ಭಾವಿಸಿ ಪಿತೃ, ಗಂಧರ್ವ, ಹಿರಣ್ಯಗರ್ಭಲೋಕ ಮೊದಲಾದ ಬೇರೆ ಬೇರೆ ಎಡೆಗಳಲ್ಲಿ ಸಾಕ್ಷಾತ್ಕರಿಸಲು ಯತ್ನಿಸಿದ್ದೇ ಆದರೆ ಅವರಿಗೆ ಪರಮಾತ್ಮತತ್ತ್ವವು ಕನಸಿನಲ್ಲೂ, ಪ್ರತಿಬಿಂಬವು ನೀರಿನಲ್ಲೂ, ಮಂದಾಂಧಕಾರದಲ್ಲಿ ವಸ್ತುವು ತೋರಿದಂತೆ ಅಸ್ಫುಟವಾಗಿ ತೋರಬಹುದೇ ಹೊರತು ಈ ಮಾನವದೇಹದಲ್ಲಿ ಗೋಚರಿಸುವಂತೆ ಸ್ಫುಟವಲ್ಲ. ಅಥವಾ ಇಲ್ಲಿ 'ಆತ್ಮನಿ' ಎಂಬುದಕ್ಕೆ ಮನಸ್ಸಿನಲ್ಲಿ ಎಂಬ ಅಭಿಪ್ರಾಯ ಕೊಟ್ಟು ವ್ಯಾಖ್ಯಾನಿಸಬಹುದು. ಆವಾಗ, ತತ್ತ್ವವನ್ನು ನಿಜವಾಗಿ ಕಾಣಲು ರಜಃ ತಮಸ್ಸುಗಳ ಸಂಪರ್ಕವಿಲ್ಲದ ಮನಸ್ಸೇ ಮುಖ್ಯಕಾರಣ. ಆ ಮನಸ್ಸು ಯಾವ ಲೋಕಕ್ಕೆ ಹೋದರೂ ಒಂದೇ ಆದ್ದರಿಂದ ಸಿಕ್ಕಿರುವ ಮನುಷ್ಯದೇಹದಲ್ಲೇ ಮನಸ್ಸನ್ನು ಬದ್ಧಗೊಳಿಸಿಕೊಂಡು ಅವನನ್ನು ಕಾಣಲು ಯತ್ನಿಸುವುದು ಉತ್ತಮ ಎಂದು ಅಭಿಪ್ರಾಯ.

ಸುಬೋಧಿನೀಕಾರರು—ಈ ಮಾನವದೇಹವು ಬಿದ್ದುಹೋಗುವ ಮೊದಲೇ ಪರಮಾತ್ಮನನ್ನು ಕಾಣಲು ಯತ್ನಿಸುವುದು ಉತ್ತಮ. ಏಕೆಂದರೆ ಇಲ್ಲಿ ಸ್ಫುಟವಾಗಿ ಗೋಚರಿಸುವಂತೆ ಮತ್ತೆ ಯಾವ ಲೋಕದಲ್ಲಿಯೂ ಇಲ್ಲ. ಕನ್ನಡಿ, ಕನಸು, ನೀರು ಮೊದಲಾದವುಗಳಲ್ಲಿ ವಸ್ತುವು ಗೋಚರಿಸಿದರೂ ಆ ಬಗ್ಗೆ ಹುಟ್ಟಿದ ಸಂಶಯ ಮತ್ತು ಭ್ರಮೆಗಳನ್ನು ನಿವಾರಿಸಲು ಹೇಗೆ ಸಾಧ್ಯವಿಲ್ಲವೋ ಅಂದರೆ ಅವುಗಳಿಂದ ಹುಟ್ಟಿದ ಅರಿವು ಹೇಗೆ ಸಂಮುಗ್ಧವಾಗುವುದೋ (ಮಸಕು) ಅದರಂತೆ ತತ್ತ್ವಜ್ಞಾನವೂ. ಪಿತೃಗಂಧರ್ವಾದಿಲೋಕಗಳಲ್ಲಿ ಜೀವಾತ್ಮನು ಕರ್ಮಫಲಭೋಗಕ್ಕಾಗಿ ಮಾತ್ರ ತೆರಳಿರುವುದರಿಂದ ಆ ಲಾಲಸೆಯ ಮಧ್ಯೆ ಪರಮಾತ್ಮತತ್ತ್ವವನ್ನು ಅರಿಯುವುದು ಕಠಿಣವಾದುದರಿಂದ ಈ ಶರೀರವಿರುವಾಗಲೇ ಯತ್ನಿಸಬೇಕೆನ್ನುವರು.



## ಮಂತ್ರ ೬

**इन्द्रियाणां पृथग्भावमुदयास्तमयौ च यत् ।**
**पृथगुत्पद्यमानानां मत्वा धीरो न शोचति ॥**

ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।
ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥

### ಪ್ರತಿಪದಾರ್ಥ

ಧೀರಃ–ಜ್ಞಾನಿಯು, ಪೃಥಗುತ್ಪದ್ಯಮಾನಾನಾಮ್–ಬೇರೆ ಬೇರೆಯಾಗಿ ಹುಟ್ಟಿರುವ ಇಂದ್ರಿಯಾಣಾಮ್–(ದೇಹ) ಇಂದ್ರಿಯಗಳ, ಪೃಥಗ್ಭಾವಮ್—ಬೇರೆ ಬೇರೆಯಾದ ವ್ಯಾಪಾರವನ್ನೂ, ಯತ್—ಯಾವ, ಉದಯಾಸ್ತಮಯೌ ಚ—ಉತ್ಪತ್ತಿ ಮತ್ತು ನಾಶಗಳುಂಟೋ ಅವುಗಳನ್ನೂ, ಮತ್ವಾ—ಇವುಗಳ ಸ್ವಾಭಾವಿಕ ಧರ್ಮಗಳೆಂದು ತಿಳಿದು, ನ ಶೋಚತಿ—ದುಃಖಪಡುವುದಿಲ್ಲ.

### ತಾತ್ಪರ್ಯ

ಜ್ಞಾನಿಯಾದವನು ದೇಹೇಂದ್ರಿಯಗಳು ಭಿನ್ನಭಿನ್ನವಾಗಿ ಹುಟ್ಟುತ್ತವೆ, ಇವುಗಳ ಕಾರ್ಯಗಳೂ ಭಿನ್ನಭಿನ್ನವಾಗಿವೆ, ಇವುಗಳಿಗೆ ಹುಟ್ಟು ಸಾವುಗಳುಂಟು. ಈ ಧರ್ಮಗಳು ಆತ್ಮನಲ್ಲಿ ಇಲ್ಲ ಎಂದು ತಿಳಿಯುತ್ತಾನೆ. ಆದುದರಿಂದ ಅವನು ದುಃಖಿಗೊಳ್ಳುವುದಿಲ್ಲ.

### ರಂಗರಾಮಾನುಜಭಾಷ್ಯಮ್

ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ । ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ । ಪೃಥಗ್ಭೂತಾನಾಮುತ್ಪದ್ಯಮಾನಾನಾಮ್ ಇಂದ್ರಿಯಾಣಾಮ್ ಇತ್ಯೇತತ್, ದೇಹಾದೀನಾಮಪ್ಯುಪಲಕ್ಷಣಮ್ । ಉದಯಾಸ್ತಮಯೌ ಚ ಯತ್। ಯದಿತ್ಯವ್ಯಯಂ ಯಾವಿತ್ಯರ್ಥೇ । ಯೌ ಉತ್ಪಾದವಿನಾಶೌ ಯಶ್ಚ ಪರಸ್ಪರ ವೈಲಕ್ಷಣ್ಯಲಕ್ಷಣಪೃಥಗ್ಭಾವಶ್ಚ (ವಃ ?) ತಾನ್ ಸರ್ವಾನ್ ಇಂದ್ರಿಯಾದಿಗತಾನ್ ಮತ್ವಾ, ಧೀರೋ ನ ಶೋಚತೀತ್ಯರ್ಥಃ । ಪರಸ್ಪರವೈಲಕ್ಷಣ್ಯೋತ್ಪಾದವಿನಾಶಾಃ, ಜ್ಞಾನೈಕಾಕಾರೇ ನಿತ್ಯೇ ಆತ್ಮನಿ ನ ಸಂತೀತಿ ಜ್ಞಾತ್ವಾ ನ ಶೋಚತಿ ಇತ್ಯರ್ಥಃ ॥

### ಅನುವಾದ

ಇಂದ್ರಿಯಾಣಾಂ ಪೃಥಗ್ಭಾವಮ್.......ಧೀರೋ ನ ಶೋಚತಿ । ಭಿನ್ನಭಿನ್ನವಾದ ಮತ್ತು ಉತ್ಪತ್ತಿಯಾಗುವ ಇಂದ್ರಿಯಗಳಿಗೆ. 'ಇಂದ್ರಿಯಾಣಾಂ' ಎಂಬುದು ದೇಹ ಮೊದಲಾದವುಗಳನ್ನೂ ತಿಳಿಸುತ್ತದೆ. 'ಯತ್' ಎಂಬ ಅವ್ಯಯ 'ಯೌ' ಎಂಬರ್ಥದಲ್ಲಿದೆ, ಯಾವ ಉತ್ಪತ್ತಿ-ವಿನಾಶಗಳು, ಮತ್ತು ಪರಸ್ಪರ ವೈಲಕ್ಷಣ್ಯರೂಪವಾದ ಭಿನ್ನತೆ ಎಂಬುವು ಯಾವುವುಂಟೊ ಅವೆಲ್ಲವನ್ನೂ ಧರ್ಮವೆಂದು ತಿಳಿದು ಧೀರನಾದವನು ದುಃಖಿಸುವುದಿಲ್ಲ. ಇಂದ್ರಿಯಗಳಲ್ಲಿರುವ ಪರಸ್ಪರ ವೈಲಕ್ಷಣ್ಯ ಮತ್ತು ಉತ್ಪತ್ತಿವಿನಾಶಗಳು ಜ್ಞಾನಸ್ವರೂಪವೂ, ನಿತ್ಯವೂ ಆದ ಆತ್ಮದಲ್ಲಿ ಇರುವುದಿಲ್ಲ ಎಂದು ತಿಳಿದು ದುಃಖಿಸುವುದಿಲ್ಲ ಎಂದು ತಾತ್ಪರ್ಯ.

## ಭಾಷ್ಯಸಾರ

ಪ್ರಕೃತಿ(ದೇಹೇಂದ್ರಿಯಾದಿ)ಗಿಂತಲೂ ಪ್ರತ್ಯೇಕವಾದ ಜೀವಾತ್ಮಸ್ವರೂಪವನ್ನು ಅರಿತ ಮೇಲೆಯೇ ಪರಮಾತ್ಮಜ್ಞಾನವು ಸಾಧ್ಯವಾಗುವುದರಿಂದ ಅಂಥ ಜೀವಾತ್ಮಜ್ಞಾನವೇ ಮೊದಲು ಸಂಪಾದಿಸತಕ್ಕದ್ದು. ಆ ಮೂಲಕ ಪರಮಾತ್ಮನನ್ನು ಅರಿತು ಶೋಕನಿವೃತ್ತಿಯಾಗುವುದು ಎಂಬ ಆಶಯವನ್ನು ವ್ಯಕ್ತಪಡಿಸಲು ಈ ಮಂತ್ರ ಹೊರಟಿದೆ.

ಎಲ್ಲರಿಗೂ 'ನಾನು ಸ್ಥೂಲ, ನಾನು ಕೃಶ, ಕುರುಡ, ಕಿವುಡ' ಮೊದಲಾದ ಅನುಭವವು ಹುಟ್ಟುವುದರಿಂದ ಜನಸಾಮಾನ್ಯವು ದೇಹೇಂದ್ರಿಯಾದಿಗಳನ್ನೇ ಆತ್ಮವಾಗಿ ಭ್ರಮಿಸಿದೆ ಎನ್ನಬಹುದು. ಆದರೆ ಈ ಅನುಭವವು ಕಾರ್ಯಕಾರಣರೂಪವಾದ ದೇಹೇಂದ್ರಿಯ ಸ್ತೋಮದಲ್ಲಿ ಆತ್ಮತ್ವವನ್ನು ಭ್ರಮಿಸಿ ಆಗಿದೆ. ಆದಕಾರಣ ಅಂತರ್ಬಾಹ್ಯೇಂದ್ರಿಯಗಳ ವಿಭಿನ್ನತೆಯೆಂಬುದು ಜೀವಾತ್ಮನಿಗಿಂತ ಸ್ವಭಾವಕೃತವಾದ ವೈಲಕ್ಷಣ್ಯವೇ ಸರಿ. ಇವುಗಳಲ್ಲಿ ವೈಲಕ್ಷಣ್ಯವನ್ನು ಅವವುಗಳ ಕಾರಣಾಧೀನವಾಗಿ ಹುಟ್ಟುವುದೆಂದರಿತು ಆತ್ಮನನ್ನೂ, ದೇಹೇಂದ್ರಿಯಾದಿಗಳನ್ನೂ, ಪೃಥಕ್ಕಾಗಿ ನಿಶ್ಚಯಿಸಿದ ಧೀರನು ಮತ್ತೊಮ್ಮೆ ಸಂಸಾರದುಃಖ ವನ್ನು ಅನುಭವಿಸಲಾರನು.

ಆತ್ಮನು ಜ್ಞಾನೈಕಸ್ವರೂಪನಾಗಿರುವುದರಿಂದ ಜಾಗ್ರತ್ಸ್ವಪ್ನ ಮೊದಲಾದ ದೆಶೆಗಳಲ್ಲೂ ಕಾಣುವ ಉತ್ಪತ್ತಿ-ವಿನಾಶಾದಿಭಾವಗಳು ಇಂದ್ರಿಯವ್ಯಾಪಾರಗಳಿಗೇ ಹೊರತು ಆತ್ಮನಿಗಲ್ಲ. ಇದನ್ನು ನಿಷ್ಕೃಷ್ಟವಾಗಿ ಅರಿತವನು ಮುಕ್ತಿಗೆ ಅರ್ಹನಾಗುತ್ತಾನೆ.

ಸುಬೋಧಿನೀಕಾರರು–ಇವನು ಕುರುಡ–ಇವನಲ್ಲ, ಇವನು ಕಿವುಡ–ಇವನಲ್ಲ ಎಂಬ ವೈಲಕ್ಷಣ್ಯವು (ಪೃಥಗ್ಭಾವ) ದೇಹಿಗಳಲ್ಲೂ ಕಂಡುಬರುತ್ತದೆ. ಆದರೂ ಇವು ಜ್ಞಾನೈಕ ಸ್ವರೂಪನಾದ ಆತ್ಮನಿಗೆ ಸಲ್ಲವು. ಇಂದ್ರಿಯಗಳಿಗೆ ಮಾತ್ರ, ಏಕೆಂದರೆ ರೂಪಗ್ರಾಹಕತ್ವ, ಶಬ್ದಗ್ರಾಹಕತ್ವ ಮೊದಲಾದ ಅನ್ಯೋನ್ಯಸ್ವಭಾವಭೇದವು ಇಂದ್ರಿಯಗಳಿಗೆ ಸೇರಿದ್ದು. ಇವುಗಳಲ್ಲಿ ಅದರದರ ಸ್ವಭಾವಾತ್ಮಕವಾದ ಶಕ್ತಿಯ ಪ್ರಸರಣ ಮತ್ತು ಪ್ರತಿರೋಧಗಳಿಂದ ಅಂಧ, ಬಧಿರಾದಿ ವ್ಯವಹಾರಗಳು ಏರ್ಪಡುತ್ತವೆಯಷ್ಟೆ. ಇಂಥ ಸ್ವಭಾವಭೇದವು ಮತ್ತು ಜಾಗ್ರತ್‌ನಿದ್ರಾದಿದೆಶೆಗಳಲ್ಲಿ ಕಾಣುವ ಅವವುಗಳ ಸ್ವಭಾವ ಪ್ರಕರಣ–ಪ್ರತಿರೋಧಗಳೆಂಬ ಉತ್ಪತ್ತಿ–ವಿನಾಶಗಳು ಇಂದ್ರಿಯಗಳದ್ದೇ ಹೊರತು ನಿತ್ಯವಾದ ಜ್ಞಾನಪ್ರಭೆಯನ್ನು ಹೊಂದಿರುವ ಆತ್ಮನದಲ್ಲ. ಅಂತೆಯೇ ದೇವಮನುಷ್ಯಾದಿಗಳಲ್ಲಿ ಕಾಣುವ ವಿಭಾಗವೂ, ಹುಟ್ಟು–ಸಾವುಗಳಲ್ಲಿ ಕಾಣುವ ವಿಭಾಗವೂ ಶರೀರದ್ದೇ ಹೊರತು ಆತ್ಮನದಲ್ಲ. ಈ ರೀತಿ ಆತ್ಮಾನಾತ್ಮಗಳ ಸ್ವರೂಪ-ಸ್ವಭಾವಗಳನ್ನು ನಿಶ್ಚಿತಮತಿಯಿಂದ ಗ್ರಹಿಸಿದವನು ಮತ್ತೊಮ್ಮೆ ಸಂಸಾರಕ್ಕೆ ಎಡೆಯಾಗಲಾರನು ಎಂದು ವ್ಯಾಖ್ಯಾನಿಸಿರುವರು.



## ಮಂತ್ರ ೭, ೮

**इन्द्रियेभ्यः परं मनो मनसस्सत्त्वमुत्तमम् ।**
**सत्त्वादधि महानात्मा महतोऽव्यक्तमुत्तमम् ॥**

ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ತ್ವಮುತ್ತಮಮ್ ।
ಸತ್ತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥

**अव्यक्तात्तु परः पुरुषो व्यापकोऽलिङ्ग एव च ।**
**यद् (यं?) ज्ञात्वा मुच्यते जन्तुरमृतत्वं च गच्छति ॥**

ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ ।
ಯದ್ (ಯಂ ?) ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ।
ಗಚ್ಛತಿ ॥

### ಪ್ರತಿಪದಾರ್ಥ

ಇಂದ್ರಿಯೇಭ್ಯಃ—ಹತ್ತು ಇಂದ್ರಿಯಗಳಿಗಿಂತ, ಮನಃ ಪರಮ್—ಮನಸ್ಸು ಶ್ರೇಷ್ಠವಾದುದು, ಮನಸಃ—ಮನಸ್ಸಿಗಿಂತ, ಸತ್ತ್ವಮ್—ಬುದ್ಧಿಯು, ಉತ್ತಮಮ್—ಉತ್ಕೃಷ್ಟವಾದುದು, ಸತ್ತ್ವಾತ್—ಬುದ್ಧಿಗಿಂತ, ಮಹಾನಾತ್ಮಾ—ಮಹದ್‌ಗುಣಯುಕ್ತನಾದ ಜೀವನು, ಅಧಿ—ಅಧಿಕನು, ಮಹತಃ—ಜೀವನಿಗಿಂತ, ಅವ್ಯಕ್ತಮ್—ಶರೀರವು, ಉತ್ತಮಮ್—ಉತ್ಕೃಷ್ಟವಾದುದು, ಅವ್ಯಕ್ತಾತ್ ತು—ಶರೀರರಾತ್ಮಗಳಿಗಿಂತ, ವ್ಯಾಪಕಃ—ಸರ್ವವ್ಯಾಪಕನೂ, ಚ—ಮತ್ತು, ಅಲಿಂಗಃ—ಹೇತುಗಳ ಮೂಲಕ ಊಹೆಗೆ ನಿಲುಕದವನೂ ಆದ ಪುರುಷ ಏವ—ಪರಮಾತ್ಮನೇ, ಪರಃ—ಶ್ರೇಷ್ಠನು, ಯತ್—ಯಾವ ಈ ಪರಮಾತ್ಮಸ್ವರೂಪವನ್ನು, ಜ್ಞಾತ್ವಾ—ತಿಳಿದು, ಜಂತುಃ—ಜೀವನು, ಮುಚ್ಯತೇ— ಸಂಸಾರದಿಂದ ಬಿಡುಗಡೆ ಹೊಂದುತ್ತಾನೆ. ಅಮೃತತ್ವಂ ಚ—ಮೋಕ್ಷವನ್ನೂ, ಗಚ್ಛತಿ—ಹೊಂದುತ್ತಾನೆ.

### ತಾತ್ಪರ್ಯ

ದೇಹಾತ್ಮವಿವೇಕವಿದ್ದರೂ ಪರಮಾತ್ಮಜ್ಞಾನವಿಲ್ಲದೆ ಮೋಕ್ಷವು ಸಿದ್ಧಿಸುವುದಿಲ್ಲ. ಈ ಪರಮಾತ್ಮಜ್ಞಾನಪಡೆಯುವುದು ಹೇಗೆ ಎಂಬುದನ್ನು ಈ ಎರಡು ಮಂತ್ರಗಳಿಂದ ತಿಳಿಸುತ್ತಾರೆ. ಹತ್ತು ಇಂದ್ರಿಯಗಳಿಗಿಂತ ಮನ ಇಂದ್ರಿಯವು, ಮನಸ್ಸಿಗಿಂತ ಬುದ್ಧಿಯೂ, ಬುದ್ಧಿಗಿಂತ ಜೀವಾತ್ಮನೂ, ಜೀವಾತ್ಮನಿಗಿಂತ ಶರೀರವೂ ಶ್ರೇಷ್ಠವಾದುದು.

ಈ ಶರೀರಾತ್ಮಗಳಿಗಿಂತ ವ್ಯಾಪಕನೂ, ಊಹಾತೀತನೂ ಆದ ಪರಮಾತ್ಮನು ಶ್ರೇಷ್ಠನು. ಇದನ್ನರಿತ ಜೀವನು ಬಂಧದಿಂದ ಬಿಡುಗಡೆ ಹೊಂದಿ ಮೋಕ್ಷಾನಂದಕ್ಕೆ ಭಾಗಿಯಾಗುವನು.

### ರಂಗರಾಮಾನುಜಭಾಷ್ಯಮ್

'ದೇಹವಿವಿಕ್ತಪ್ರತ್ಯಗಾತ್ಮಯಾಥಾತ್ಮ್ಯಜ್ಞಾನೇಽಪಿ ಭಗವಚ್ಛರಣಾಗತಿರೇವೋಪಾಯಃ' ಇತಿ ಪೂರ್ವೋಕ್ತಮ್. ಶರಣವರಣಮೇವ, ಪ್ರತಿಪಾದಯತಿ–ಇಂದ್ರಿಯೇಭ್ಯಃ ಪರಂ ಮನೋ ....ಯದ್ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ । ಇಂದ್ರಿಯೇಭ್ಯಃ ಇತ್ಯೇತತ್ ಅರ್ಥಾನಾಮಪ್ಯುಪಲಕ್ಷಣಮ್ । ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ

ಮನಃ' ಇತ್ಯನೇನ ಐಕಾರ್ಥ್ಯಾತ್ । ಸತ್ತ್ವಶಬ್ದೋ ಬುದ್ಧಿಪರಃ 'ಮನಸಸ್ತು ಪರಾ ಬುದ್ಧಿಃ' ಇತಿ ಪೂರ್ವೋಕ್ತೇಃ । ಅಲಿಂಗಃ ಲಿಂಗಾಗಮ್ಯಃ । ಪರತ್ವಂ ಚ ವಶೀಕಾರ್ಯತಾಯಾಂ ವಿವಕ್ಷಿತಮ್ । ಪರಸ್ಯ ಚ ವಶೀಕರಣಂ ಶರಣಾಗತಿರೇವ । ಶಿಷ್ಟಂ ಸ್ಪಷ್ಟಮ್॥

## ಅನುವಾದ

ದೇಹಕ್ಕಿಂತ ವಿಲಕ್ಷಣನಾದ ಜೀವಾತ್ಮನ ನೈಜಜ್ಞಾನವಿದ್ದರೂ ಭಗವಂತನಲ್ಲಿ ಶರಣಾಗತಿಯೇ ಉಪಾಯ ಎಂದು ಹಿಂದೆ ಹೇಳಿದ ಶರಣ-ವರಣವನ್ನೇ ಆ (ಪರಮಾತ್ಮನ ಆಶ್ರಯಣವನ್ನೇ) 'ಇಂದ್ರಿಯೇಭ್ಯಃ ಪರಂ ಮನೋ...........ಅಮೃತತಂ ಚ ಗಚ್ಛತಿ' ಎಂಬ ಎರಡು ಮಂತ್ರಗಳಿಂದ ವಿವರಿಸುತ್ತಾನೆ—'ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ[1]' (ಕ.ಉ. 1-3-10) ಎಂಬುದರೊಡನೆ ಸಮಾನತಾತ್ಪರ್ಯವುಳ್ಳದಾದ್ದರಿಂದ (ಇಂದ್ರಿಯಪದವು) ಇಂದ್ರಿಯೇಭ್ಯಃ ಎಂಬ ಅರ್ಥಗಳನ್ನೂ ತಿಳಿಸುತ್ತದೆ. 'ಮನಸಸ್ತು ಪರಾ ಬುದ್ಧಿಃ' ಎಂದು ಹಿಂದೆ ಹೇಳಿರುವುದರಿಂದ ಇಲ್ಲಿಯ ಸತ್ತ್ವಶಬ್ದವು ಬುದ್ಧಿ ಎಂಬರ್ಥದಲ್ಲಿದೆ. ಅಲಿಂಗಃ-ಹೇತುವಿನಿಂದ (ಜ್ಞಾಪಕ) ತಿಳಿಯಲಸಾಧ್ಯವಾದುದು ಪರತ್ವವೆಂಬುದು (ಉತ್ಕೃಷ್ಟತೆ) ವಶೀಕರಣೀಯತ್ವವನ್ನವಲಂಬಿಸಿ ಅಂದರೆ (ವಶಪಡಿಸಿಕೊಳ್ಳತಕ್ಕ ವಸ್ತುಗಳಲ್ಲಿ ಅತ್ಯಾವಶ್ಯಕವಾದುದು ಎಂದರ್ಥ.) ಪರಮಾತ್ಮನನ್ನು ವಶೀಕರಿಸಿಕೊಳ್ಳುವುದೆಂದರೆ ಅವನನ್ನು ಶರಣುಹೊಂದುವುದೇ. ಉಳಿದ ಭಾಗದ ಅರ್ಥವು ಸ್ಪಷ್ಟವಾಗಿದೆ.

## ಭಾಷ್ಯಸಾರ

ಈ ಪ್ರಕೃತಿವಿವಿಕ್ತವಾದ ಆತ್ಮಸ್ವರೂಪದ ಜ್ಞಾನವೂ ಸಹ ಇಂದ್ರಿಯ ಮೊದಲುಗೊಂಡು ಪುರುಷನವರೆಗಿನ ವಿಷಯಗಳನ್ನು ವಶಪಡಿಸಿಕೊಂಡಾಗ ಮಾತ್ರವೇ ಸಿದ್ಧಿಸುವುದು. ಮಾರ್ಗಾಂತರವಿಲ್ಲ. ಆದುದರಿಂದ ಹಿಂದೆ ಹೇಳಿದುದನ್ನೇ ಸ್ಮರಣೆಗೆ ತರುತ್ತವೆ. ಈ ಮುಂದಿನ ಮಂತ್ರಗಳು.

ಕಣ್ಣು, ಕಿವಿ ಮೊದಲಾದ ಬಾಹ್ಯೇಂದ್ರಿಯಗಳಿಗಿಂತಲೂ ಅಂತರಿಂದ್ರಿಯವಾದ ಮನಸ್ಸು ವಶೀಕರಣೀಯತ್ವದಲ್ಲಿ ಹಿರಿದು. ಅಂದರೆ ಇಂದ್ರಿಯಾರ್ಥಾದಿಗಳಿಗಿಂತಲೂ ಹಿರಿದು ಎಂದು ಸೂಚ್ಯವಾಗಿ ತೋರುತ್ತದೆ. ಮನಸ್ಸಿಗಿಂತಲೂ 'ಇದಮಿತ್ಥಮ್' ಎಂದು ವಸ್ತುತತ್ತ್ವವನ್ನು ನಿಶ್ಚಯಿಸುವ ಅಧ್ಯವಸಾಯವೆನಿಸುವ ಬುದ್ಧಿಯು ಪ್ರಧಾನವು. ಆ ಬುದ್ಧಿಗಿಂತಲೂ ಜೀವಾತ್ಮನು ಪ್ರಧಾನನು. ಅವನಿಗಿಂತಲೂ ಭೂತಸೂಕ್ಷ್ಮದ ಪರಿಣಾಮವೂ ಆತ್ಮನಿಗೆ ಅಧಿಷ್ಠಾನವೂ ಆದ ಶರೀರವೂ ಪ್ರಧಾನವು, ಅದಕ್ಕಿಂತಲೂ ಪರಮಪುರುಷನು ಅತ್ಯಂತ ಪ್ರಧಾನನು. ಅಂದರೆ ಅವನನ್ನು ವಶೀಕರಿಸಿಕೊಂಡರೆ (ಅವನು ಒಲಿದರೆ) ಎಲ್ಲವೂ ವಶವಾದಂತೆಯೇ, ಪರಮಪುರುಷನಾದರೋ ಸಕಲಚೇತನಾಚೇತನಗಳ ಅಂತರ್ಬಾಹ್ಯಗಳಲ್ಲಿದ್ದುಕೊಂಡು ಯಾವುದೇ ಬಗೆಯ ಊಹೆಗೆ ನಿಲುಕದೆ ಶಾಸ್ತ್ರೈಕಗಮ್ಯನಾದ ಔಪನಿಷದಪುರುಷನಾಗಿರುವನು, ಇವನನ್ನು ಅರಿತು ಜೀವಿಯು ನಿರವಶೇಷಬಂಧವಿಮೋಚನವನ್ನೂ, ಸ್ವಸ್ವರೂಪಾವಿರ್ಭಾವರೂಪವಾದ ಮೋಕ್ಷವನ್ನೂ ಹೊಂದುವನು.

ಸುಬೋಧಿನೀಕಾರರು—ಅನಾದಿವಾಸನೆಯಿಂದ 'ನಾನು ದೇವ, ನಾನು ಮನುಷ್ಯ' ಮುಂತಾದ ದೇಹಾತ್ಮಭ್ರಮೆಯಿಂದ ಮನಃಕಾಲುಷ್ಯವನ್ನು ಹೊಂದಿದವರಿಗೆ ಹಠಾತ್ತಾಗಿ

ಆತ್ಮಸ್ವರೂಪವನ್ನು ಪ್ರತ್ಯೇಕಿಸಿ ಅರಿಯುವುದು ಕಷ್ಟಸಾಧ್ಯವಷ್ಟೆ. ಇಂದ್ರಿಯಾದಿಗಳನ್ನು ವಶಮಾಡಿಕೊಂಡವರಿಗೆ ಮಾತ್ರ ಆದರ ಸಂಭವ. ವಶೀಕರಿಸಿಕೊಳ್ಳುವ ಬದುಕುಗಳಲ್ಲಿ ಅತ್ಯಂತ ಮಿಗಿಲಾದುದು ಪರಬ್ರಹ್ಮ, ಪುರುಷೋತ್ತಮ. ಅವನೇ ಗೀತೆಯಲ್ಲಿ 'ನನ್ನನ್ನು ಯಾರು ಶರಣು ಹೊಂದುವರೋ ಅವರು ಈ ಮಾಯೆಯನ್ನು ದಾಟುವರು' ಎಂದು ಅಪ್ಪಣೆ ಕೊಡಿಸಿದಂತೆ ಪ್ರಪತ್ತ್ಯನುಷ್ಠಾನದಿಂದ ಅವನನ್ನು ವಶಪಡಿಸಿಕೊಂಡರೆ ಸರ್ವವೂ ಅನಾಯಾಸವಾಗಿ ವಶವಾಗುವುದೆಂಬುವುದನ್ನು ಹಿಂದೆ ಹೇಳಿದ್ದನ್ನೇ (ಇಂದ್ರಿಯೇಭ್ಯಃ ಪರಾಹ್ಯರ್ಥಾಃ) ಸ್ಮರಣೆಗೆ ತರಲು ಈ ಮಂತ್ರಗಳಿಂದು ವಿವರಿಸಿರುವರು. 'ಅಮೃತತ್ವಮ್' ಎಂಬುವುದಕ್ಕೆ ನಿರವಧಿಕಾನಂದಸ್ವರೂಪತೆ ಎಂದು ವ್ಯಾಖ್ಯಾನ ಮಾಡಿರುವರು,



# ಮಂತ್ರ ೯

न सन्दृशे तिष्ठति रूपमस्य न चक्षुषा पश्यति कश्चनैनम् ।
हृदा मनीषा मनसाऽभिक्लृप्तो य एनं (एतत्) विदुरमृतास्ते भवन्ति ॥

ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್
ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏನಂ (ಏತತ್)
ವಿದುರಮೃತಾಸ್ತೇ ಭವಂತಿ ||

## ಪ್ರತಿಪದಾರ್ಥ

ಅಸ್ಯ—ಈ ಭಗವಂತನ, ರೂಪಮ್—ಸತ್ಯಜ್ಞಾನಾದಿ ದಿವ್ಯಾತ್ಮಸ್ವರೂಪವು, ಅಥವಾ ಆದಿತ್ಯವರ್ಣಾದಿವಿಶಿಷ್ಟದಿವ್ಯಮಂಗಳವಿಗ್ರಹಸ್ವರೂಪವು, ಸಂದೃಶೇ–ತನ್ನ ಪ್ರಯತ್ನದಿಂದ ನೋಡುವಂತೆಡೆಯಲ್ಲಿ, ನ ತಿಷ್ಠತಿ—ಇರುವುದಿಲ್ಲ, ಏನಮ್—ಇವನನ್ನು, ಕಶ್ಚನ—ಯಾರೊಬ್ಬನೂ (ಬ್ರಹ್ಮನೂ ಸಹ) ಚಕ್ಷುಷಾ—ಚರ್ಮಚಕ್ಷುವಿನಿಂದ, ನ ಪಶ್ಯತಿ—ಕಾಣಲಾರನು (ಭಗವಂತನೇ ದಿವ್ಯಚಕ್ಷುಸ್ಸನ್ನು ಕೊಟ್ಟರೆ ನೋಡಬಹುದು ಎಂದರ್ಥ). ಹೃದಾ—ಭಕ್ತಿಯಿಂದಲೂ, ಮನೀಷಾ—ಧೈರ್ಯಯುಕ್ತವಾದ ಮನಸಾ–ಮನಸ್ಸಿನಿಂದಲೂ, ಅಭಿಕ್ಲೃಪ್ತಃ—ಸ್ಫುಟವಾಗಿ ಗ್ರಹಿಸಬಹುದು, ಯೇ—ಯಾರು, ಏತತ್—ಈ ಪರಮಾತ್ಮಸ್ವರೂಪವನ್ನು, ವಿದುಃ—ಅರಿಯುವರೋ, ತೇ—ಅವರು, ಅಮೃತಾಃ ಭವಂತಿ—ಮುಕ್ತರಾಗುವರು.

## ತಾತ್ಪರ್ಯ

ಪರಮಾತ್ಮನ ದಿವ್ಯಮಂಗಳವಿಗ್ರಹಸ್ವರೂಪವು ದರ್ಶನಕ್ಕೆ ವಿಷಯವಾಗಿ ಆಗುವುದಿಲ್ಲ. ಪರಮಾತ್ಮನನ್ನು ಯಾರೂ ಈ ಪ್ರಾಕೃತವಾದ ಕಣ್ಣಿನಿಂದ ನೋಡಲಾರರು. ಧೈರ್ಯಯುಕ್ತವಾದ ಮನಸ್ಸುಳ್ಳವರು ಭಕ್ತಿಯಿಂದ ಮಾತ್ರ ಇವನನ್ನು ಸಾಕ್ಷಾತ್ಕರಿಸಬಲ್ಲರು. ಹೀಗೆ ಈ ಪರಮಾತ್ಮಸ್ವರೂಪವನ್ನು ಯಾರು ಅರಿಯುವರೋ ಅವರು ಮುಕ್ತರಾಗುವರು.

## ರಂಗರಾಮಾನುಜಭಾಷ್ಯಮ್

ನ ಸಂದೃಶೇ ತಿಷ್ಠತಿ ರೂಪಮಸ್ಯ । ಅಸ್ಯ ರೂಪಮ್–ಸ್ವರೂಪಂ ವಿಗ್ರಹೋ ವಾ ವ್ಯಾಪಕತ್ವಾದೇವ ಸಂದರ್ಶನವಿಷಯೋ ಅಭಿಮುಖತಯಾ ನ ತಿಷ್ಠತಿ ಇತ್ಯರ್ಥಃ । ಅಥವಾ ದೃಶ್ಯಂ ನೀಲರೂಪಾದಿಕಂ ನಾಸ್ತಿ ಇತ್ಯರ್ಥಃ। ಅತ ಏವ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್। ಸ್ಪಷ್ಟೋಽರ್ಥಃ । ಹೃದಾ ಮನೀಷಾ ಮನಸಾಽಭಿಕ್ಲೃಪ್ತಃ । ಅಯಮಂಶಃ 'ಸರ್ವತ್ರ ಪ್ರಸಿದ್ಧೋಪದೇಶಾತ್' (1-2-1) ಇತ್ಯತ್ರ ವ್ಯಾಸಾರ್ಯೈಃ, ಹೃದಾ–ಇತಿ ಭಕ್ತಿರುಚ್ಯತೇ । ಮನೀಷಾ–ಇತಿ ಧೃತಿಃ। 'ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ಇತಿ ಪೂರ್ವಾರ್ಧಮೇಕರೂಪಂ ಪಠಿತ್ವಾ, 'ಭಕ್ತ್ಯಾ ಚ ಧೃತ್ಯಾ ಚ ಸಮಾಹಿತಾತ್ಮಾ ಜ್ಞಾನಸ್ವರೂಪಂ ಪರಿಪಶ್ಯತೀಹ' ಇತಿ ಮಹಾಭಾರತೇ ಉಕ್ತತ್ವಾತ್ । ಅಭಿಕ್ಲೃಪ್ತಃ–ಗ್ರಾಹ್ಯಃ ಇತಿ ವಿವೃತಃ । ಧೃತ್ಯಾ ಸಮಾಹಿತಾತ್ಮಾ ಭಕ್ತ್ಯಾ ಪುರುಷೋತ್ತಮಂ ಪಶ್ಯತಿ–ಸಾಕ್ಷಾತ್ಕರೋತಿ ಪ್ರಾಪ್ನೋತಿ ಇತ್ಯರ್ಥಃ ॥ 'ಭಕ್ತ್ಯಾ ತ್ವನನ್ಯಯಾ ಶಕ್ಯಃ' ಇತ್ಯನೇನ ಐಕಾರ್ಥ್ಯಾತ್' ಇತಿ

ವೇದಾರ್ಥಸಂಗ್ರಹೇ ಪ್ರತಿಪಾದಿತಮ್ ; ಯ ಏನಂ ವಿದುರಮೃತಾಸ್ತೇ ಭವಂತಿ । ಸ್ಪಷ್ಟೋಽರ್ಥಃ

## ಅನುವಾದ

ನ ಸಂದೃಶೇ ತಿಷ್ಠತಿ ರೂಪಮಸ್ಯ. ಅಸ್ಯರೂಪಮ್–ಪರಮಾತ್ಮನ ಸ್ವರೂಪ ಅಥವಾ ದಿವ್ಯಮಂಗಳವಿಗ್ರಹವು ಎಲ್ಲ ಕಡೆಯೂ ವ್ಯಾಪಿಸಿರುವುದರಿಂದಲೇ ದೃಷ್ಟಿಗೋಚರವಾಗುವೆಡೆಯಲ್ಲಿ ನಿಂತು (ಇದು) ಕಾಣಲಾರದು. ಅಥವಾ ನೋಡಲು ಸಾಧ್ಯವಾದ ನೀಲಿ ಮುಂತಾದ ಬಣ್ಣ ಇಲ್ಲ ಎಂದರ್ಥ. ಆದುದರಿಂದಲೇ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್' ಯಾರೂ ಕಣ್ಣಿಂದ ನೋಡಲಾರರು. ಹೃದಾ ಮನೀಷಾ ಮನಸಾಽಭಿಕ್ಲೃಪ್ತೋ–ಈ ಭಾಗವನ್ನು ಶ್ರುತಪ್ರಕಾಶಿಕಾಚಾರ್ಯರು 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ 'ಹೃದಾ' ಎಂಬುವುದಕ್ಕೆ 'ಭಕ್ತಿ' ಎಂಬುದಾಗಿಯೂ 'ಮನೀಷಾ' ಎಂಬುವುದಕ್ಕೆ 'ಧೃತಿ' ಎಂಬುವುದಾಗಿಯೂ ಅರ್ಥೈಸಿದ್ದಾರೆ. ನ ಸಂದೃಶೇ........ಕಶ್ಚನೈನಮ್ ಎಂದು ಪೂರ್ವಭಾಗವನ್ನು ಸಮಾನವಾಗಿ ಪಠಿಸಿ ಭಕ್ತ್ಯಾ ಚ .... ..........ಪಶ್ಯತೀಹ' ಎಂದು ಮಹಾಭಾರತದಲ್ಲಿ ಹೇಳಿರುವುದರಿಂದ ಅಭಿಕ್ಲೃಪ್ತಃ–ತಿಳಿಯಲ್ಪಡತಕ್ಕವನು ಎಂದು ವಿವರಿಸಿರುತ್ತಾರೆ. ವೇದಾರ್ಥಸಂಗ್ರಹದಲ್ಲಿ ಧೃತಿಯಿಂದ ಸಮಾಹಿತ ಮನಸ್ಕತೆಯನ್ನು ಹೊಂದಿದವನು ಭಕ್ತಿಯಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ, ಅಂದರೆ ಹೊಂದುತ್ತಾನೆ ಎಂದರ್ಥ. ಏಕೆಂದರೆ 'ಭಕ್ತ್ಯಾತ್ವನನ್ಯಯಾ ಶಕ್ಯ:' ಎಂಬ ಗೀತಾವಾಕ್ಯದೊಡನೆ ಸಮಾನವಾದ ಅರ್ಥಬರುವ ಕಾರಣ ಎಂದು ಹೇಳಿದೆ. 'ಯ ಏನಂ ವಿದುರಮೃತಾಸ್ತೇ ಭವಂತಿ–ಅರ್ಥಸ್ಪಷ್ಟವಾಗಿದೆ. (ಈತನನ್ನು ತಿಳಿದವರು ಮುಕ್ತರಾಗುತ್ತಾರೆ.)

## ಭಾಷ್ಯಸಾರ

ಉಪದೇಶಿಸಿದ ಪರಮಾತ್ಮನ ವ್ಯಾಪಕವಾದ ಈ ಅಂತರ್ಯಾಮಿಸ್ವರೂಪವಾಗಲೀ, ಅವನ ಅಪ್ರಾಕೃತ ವಿಗ್ರಹವೇಆಗಲಿ ಎಲ್ಲರ ದೃಷ್ಟಿಗೆ ನಿಲುಕುವಂತಹ ಎಡೆಯಲ್ಲಿ ಇಲ್ಲದ ಕಾರಣ ಯಾವನೊಬ್ಬನೂ, ಕಣ್ಣಿಂದ ಇವನನ್ನು ನೋಡಲಾರನು. ಪ್ರಾಕೃತವಾದ ಇಂದ್ರಿಯವು ಅಪ್ರಾಕೃತವಾದ ವಸ್ತುವನ್ನು ಗ್ರಹಿಸಲು ಸಮರ್ಥವಲ್ಲವಷ್ಟೆ. ಆದಕಾರಣ ಇವನನ್ನು ಕಾಣಲು ಸಾಧನವೇನು ? ಎಂಬುವುದನ್ನು ಈ ಮಂತ್ರ ವಿವರಿಸುತ್ತದೆ. ಇಲ್ಲಿರುವ 'ಹೃತ್' ಪದವು ಹೃದಯದಲ್ಲಿರುವ ಬುದ್ಧಿಯನ್ನು ಹೇಳುವುದಾಗಿದೆ. 'ಹೃದಾ' ಎಂಬುವುದಕ್ಕೆ ಹೃದಯಸ್ಥಾನಕ್ಕೆ ಸಂಬಂಧಿಸಿದ ಭಕ್ತಿರೂಪತೆಯನ್ನು ತಾಳಿದ ಬುದ್ಧಿಯಿಂದ ಎಂದರ್ಥ. ಮನೀಷಾ ಎಂಬುದು ಇದಕ್ಕೆ ವಿಶೇಷಣ 'ಪುನಃ ಈಷ್ಟೇ' ಇತಿ ಮನೀಟ್' ತಯಾ, ಮನೀಷಾ ಎಂಬುದು ವ್ಯುತ್ಪತ್ತಿ, ಅಂದರೆ ಸಂಕಲ್ಪ–ವಿಕಲ್ಪಗಳಿಗೆ ಸಾಧನವಾದ ಮನಸ್ಸನ್ನು ನಿಯಮಿಸುವ ಭಕ್ತಿರೂಪತೆಯನ್ನು ಹೊಂದಿದ ಬುದ್ಧಿಯಿಂದ ಸುಸಂಸ್ಕೃತವಾದ ಮನಸ್ಸಿನಿಂದ ಪರಮಪುರುಷನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು ಎಂದರ್ಥ. 'ಮನಸಾ ತು ವಿಶುದ್ಧೇನ' 'ಮನಸೈವೇದಮಾಪ್ತವ್ಯಮ್' ಎಂಬ ಶ್ರುತಿಗಳು ಈ ಅರ್ಥದಲ್ಲೇ ಸ್ವರಸವಾಗಿದೆ. ಇಂತಹ ಉಪಾಸಕರು ಮುಕ್ತರಾಗುತ್ತಾರೆ.

ಸುಬೋಧಿನೀಕಾರರು–ಪರಮಪುರುಷನ ಅಪ್ರಾಕೃತದಿವ್ಯಸ್ವರೂಪವು ಸಾಮಾನ್ಯರಾದ ಯಾರೊಬ್ಬರ ದೃಷ್ಟಿಗೂ ಗೋಚರವಿಲ್ಲವಾದ ಕಾರಣ ದೇವನಾಗಲೀ, ಮಾನವನಾಗಲೀ

ಇವನನ್ನು ಕಣ್ಣಿನಿಂದ ಕಾಣಲಾರ. (ಅಥವಾ) ಲೌಕಿಕವಾದ ದರ್ಶನಕ್ಕೆ ಕಾರಣವಾದ ನೀಲಿ ಹಳದಿ ಮೊದಲಾದ ರೂಪುಗಳಾವುದೂ ಇಲ್ಲದ ಕಾರಣ ಇವನು ದೃಷ್ಟಿಗೆ ಗೋಚರನಲ್ಲ. ಸೀಮಿತವಾದ ವಸ್ತುವನ್ನೇ ಇಂದ್ರಿಯವು ಗ್ರಹಿಸುವುದರಿಂದ ಅಪರಿಚ್ಛಿನ್ನನಾದ ಇವನೂ 'ಚಕ್ಷುರ್ವಿಷಯನಲ್ಲ' ಎಂದು ಕೆಲವರು ವ್ಯಾಖ್ಯಾನಿಸುವರು ಎಂದು ಹೇಳಿ ಇದರ ಉತ್ತರ ಖಂಡಕ್ಕೆ ವಿಶಿಷ್ಟವಾದ ವಿವರಣೆ ಕೊಟ್ಟಿರುವರು—ರೂಪವುಳ್ಳದ್ದೇ ನಿರೂಪವೇ ಎಂಬ ವಿಭಾಗವನ್ನೂ' ಸಮೀಪ-ದೂರ ಎಂಬ ವಿಭಾಗವನ್ನೂ ಲಕ್ಷಿಸದೆ ಎಲ್ಲ ವಿಷಯಗಳನ್ನೂ ತನ್ನಲ್ಲಿ ಹರಣ ಮಾಡುತ್ತೇ 'ಹರತೀತ್ ಹೃತ್' ಮನಸ್ಸು, 'ಕಣ್ಣು ರೂಪವನ್ನೇ ಗ್ರಹಿಸುವುದು, ಕಿವಿಯು ಶಬ್ದವನ್ನೇ ಇತ್ಯಾದಿ ನಿಯಮವಿರುವ ಕಾರಣ ಈ ಪರಮಾತ್ಮನನ್ನು ಗ್ರಹಿಸುವ ಸಾಮರ್ಥ್ಯವಿಲ್ಲದ್ದರಿಂದ ಸರ್ವಗ್ರಹಣಸಮರ್ಥವಾದ ಮನಸ್ಸು ಇವನನ್ನು ಗ್ರಹಿಸಬಹುದೆಂದರ್ಥ. ಅಂದರೆ ಸರ್ವಸಾಧಾರಣವಾದ ಕೇವಲ ಮನಸ್ಸಿನಿಂದಲ್ಲ, ಮತ್ತೇನೆಂದರೆ–ಆತ್ಮ ಮತ್ತು ಅನಾತ್ಮಗಳನ್ನು ಬೇರ್ಪಡಿಸಬಲ್ಲ ಮನೀಷೆಯೆಂಬ ಬುದ್ಧಿಯಿಂದ ಸಂಸ್ಕೃತವಾದ ಮನಸ್ಸಿನಿಂದ ಮಾತ್ರ ಸಾಧ್ಯ. 'ಮನೀಷಾ' ಎಂಬುವುದು 'ಮನೀಷಯಾ' ಎಂಬರ್ಥದಲ್ಲಿದ್ದು ತೃತೀಯಾ ಲೋಪ ಹೊಂದಿದೆ. ಶಾಸ್ತ್ರಾಭ್ಯಾಸದ ಮೂಲಕ ಇಂತಹ ವಿವೇಚನಸಮರ್ಥವಾದ ಬುದ್ಧಿ ದೊರೆತಿದ್ದರೂ ಮನನವಿಲ್ಲದಿದ್ದಾಗ ಅಂಥ ಬುದ್ಧಿಯೂ ಸಾಧಕವಾಗಲಾರದು. ಆದರಿಂದ ಮನನಯುಕ್ತವಾದ ಬುದ್ಧಿವಿಶೇಷಸಂಸ್ಕೃತವಾದ ಮನಸ್ಸಿನಿಂದ ಇವನನ್ನು ಅರಿಯಬಹುದು. ಮನನವೆಂದರೆ ವಿವೇಚನೆಯಿಂದ ತಿಳಿದಿದ್ದನ್ನು ಮತ್ತೆ ಮತ್ತೆ ಚಿಂತಿಸಿ ದೃಢಗೊಳಿಸಿಕೊಳ್ಳುವುದು. ಹೀಗೆ ಅರಿತವನು ಮುಕ್ತನಾಗುತ್ತಾನೆನ್ನುವರು.



## ಮಂತ್ರ ೧೦

**यदा पञ्चावतिष्ठन्ते ज्ञानानि मनसा सह ।**
**बुद्धिश्च न विचेष्टेत तामाहुः परमां गतिम् ॥**

ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟೇತ ತಾಮಾಹುಃ ಪರಮಾಂ ಗತಿಮ್ ॥

### ಪ್ರತಿಪದಾರ್ಥ

ಯದಾ—ಯಾವ ದೆಶೆಯಲ್ಲಿ, ಪಂಚಜ್ಞಾನಾನಿ—ಐದು ಬಗೆಯ ಜ್ಞಾನೇಂದ್ರಿಯಗಳೂ, ಮನಸಾ ಸಹ—ಪರಮಾತ್ಮಾಭಿಮುಖವಾದ ಮನಸ್ಸಿನೊಡಗೂಡಿ, ಅವತಿಷ್ಠಂತೇ—ತನ್ನ ತನ್ನ ವಿಪರೀತವ್ಯಾಪಾರದಲ್ಲಿ ತೊಡಗದೇ ಇರುವುವೋ, ಬುದ್ಧಿಶ್ಚ—ಅಧ್ಯವಸಾಯವೆನಿಸುವ ಬುದ್ಧಿಯೂ ಸಹ, ನ ವಿಚೇಷ್ಟೇತ—ಬೇರೆ ಬೇರೆ ತನ್ನ ವ್ಯಾಪಾರದಲ್ಲಿ ತೊಡಗದೇ ನಿಶ್ಚಲವಾಗಿ ಇರುವುದೋ, ತಾಮ್—ಆ ದೆಶೆಯನ್ನು, ಪರಮಾಂ ಗತಿಮ್—ಮೋಕ್ಷಾರ್ಥವಾದ ಗಮನವೆಂದು (ಗತಿಯೆಂದು), ಆಹುಃ—ಭಕ್ತಿಯೋಗವನ್ನು ಅರಿತವರು ಹೇಳುವರು.

### ತಾತ್ಪರ್ಯ

ಐದು ಜ್ಞಾನೇಂದ್ರಿಯಗಳೂ ಪರಮಾತ್ಮಾಭಿಮುಖವಾದ ಮನಸ್ಸಿನೊಡನೆ ಕೂಡಿದ್ದು ಬುದ್ಧಿಯೂ ಸಹ ವಿವಿಧವಾದ ತನ್ನ ಪ್ರವೃತ್ತಿಯನ್ನು ಬಿಟ್ಟು ಇರುವುದೋ ಆ ಸ್ಥಿತಿಯನ್ನು ಮೋಕ್ಷಾನುಗುಣವಾದ ಗಮನವೆಂದು (ಗತಿಯೆಂದು) ಭಕ್ತಿಯೋಗಜ್ಞರು ಹೇಳುತ್ತಾರೆ.

### ರಂಗರಾಮಾನುಜಭಾಷ್ಯಮ್

ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ–ಜ್ಞಾಯತೇ ಅನೇನೇತಿ ವ್ಯುತ್ಪತ್ತ್ಯಾ ಜ್ಞಾನಾನಿ–ಇಂದ್ರಿಯಾಣಿ ಇತ್ಯರ್ಥಃ । 'ಸಪ್ತ ಗತೇಃ' (2—4—2) ಇತ್ಯಧಿಕರಣೇ ವ್ಯಾಸಾರ್ಯೈಃ ತಥಾ ವ್ಯಾಖ್ಯಾತತ್ವಾತ್' ಬುದ್ಧಿಶ್ಚ ನ ವಿಚೇಷ್ಟೇತ–ಅಧ್ಯವಸಾಯೋಪೇತಂ ಮನ ಏವ ಬುದ್ಧಿಶಬ್ದೇನ ಉಚ್ಯತೇ । ಅತ ಏವ ತತ್ರ ಭಾಷ್ಯಮ್, ಅಧ್ಯವಸಾಯಾಭಿಮಾನಚಿಂತಾವೃತ್ತಿಭೇದಾತ್ ಮನ ಏವ ಬುಧ್ಧ್ಯಹಂಕಾರಚಿತ್ತಶಬ್ದೈಃ ವ್ಯಪದಿಶ್ಯತೇ' ಇತಿ । ತಾಮಾಹುಃ ಪರಮಾಂಗತಿಮ್। ಶರೀರಾಂತಸ್ಸಂಚರಣಂ ವಿಹಾಯ ಮೋಕ್ಷಾರ್ಥಗಮನಂ ಪರಮಾ ಗತಿಃ' ಇತಿ ತತ್ರೈವ ಸ್ಪಷ್ಟಮ್॥

### ಅನುವಾದ

ಯದಾ.... ...ಸಹ ಜ್ಞಾಯತೇ ಅನೇನ ಎಂಬ ವ್ಯುತ್ಪತ್ತಿಯಿಂದ ಜ್ಞಾನಾನಿ–ಅಂದರೆ ಜ್ಞಾನಸಾಧನವಾದ ಇಂದ್ರಿಯಗಳು ಎಂದರ್ಥ. 'ಸಪ್ತಗತೇ;' ಎಂಬ ಅಧಿಕರಣದಲ್ಲಿ ಶ್ರುತಪ್ರಕಾಶಿಕಾಚಾರ್ಯರು ಮೇಲೆ ತಿಳಿಸಿದಂತೆ ಅರ್ಥಮಾಡಿರುವರು. ಬುದ್ಧಿಶ್ಚ ನ ವಿಚೇಷ್ಟೇತ ದೃಢವಾದ ನಿಶ್ಚಯದಿಂದ ಕೂಡಿದ ಮನಸ್ಸೇ ಬುದ್ಧಿಶಬ್ದದಿಂದ ಹೇಳಲ್ಪಡುತ್ತದೆ. ಆದುದರಿಂದಲೇ ಆ ಅಧಿಕರಣದಲ್ಲಿ ಅಧ್ಯವಸಾಯ–ಅಭಿಮಾನ–ಚಿಂತೆಗಳೆಂಬ ವೃತ್ತಿಭೇದಗಳಿಂದ ಕೂಡಿದ ಮನಸ್ಸೇ ಬುದ್ಧಿ ಅಹಂಕಾರ ಚಿತ್ತ ಎಂಬ ಶಬ್ದಗಳಿಂದ ವ್ಯವಹರಿಸಲ್ಪಡುತ್ತದೆ

ಎಂದು ತಿಳಿಸಿರುವರು. ತಾಮಾಹುಃ ಪರಮಾಂ ಗತಿಮ್-ಶರೀರದೊಳಗಿನ ಸಂಚಾರವನ್ನು ಬಿಟ್ಟು ಮೋಕ್ಷದ ಸಲುವಾದ ಗಮನವನ್ನು ಪರಮಗತಿಯೆಂದೂ ಅಲ್ಲಿಯೇ ಸ್ಪಷ್ಟಪಡಿಸಿದೆ.

## ಭಾಷ್ಯಸಾರ

ಹಿಂದಿನ ಮಂತ್ರದಲ್ಲಿ ಹೇಳಿದ ಬುದ್ಧಿಯಿಂದಾಗಬೇಕಾದ ಸಂಸ್ಕಾರವು ಮನಸ್ಸಿಗೆ ಯಾವಾಗ ಉಂಟಾಗುತ್ತದೆ ? ಎಂಬುವುದನ್ನು ವಿವರಿಸುವ ಮಂತ್ರವಿದು. ಜ್ಞಾನಕ್ಕೆ ಸಾಧನವಾದ ಕಣ್ಣು, ಕಿವಿ ಮುಂತಾದ ಐದು ಇಂದ್ರಿಯಗಳೂ ಪರಮಾತ್ಮಪ್ರವಣ(ಗುರಿ ಹೊಂದಿರುವ)ವಾದ ಮನಸ್ಸಿನೊಡನೆ ಸೇರಿಕೊಂಡು ತಮ್ಮ ತಮ್ಮ ವಿಷಯಗಳತ್ತ ಹೋಗದೇ ಇರುವವೋ (ನಿಶ್ಚಲವಾಗಿರುವುವೋ) ಮತ್ತು ಅಧ್ಯವಸಾಯರೂಪವಾದ ಬುದ್ಧಿಯೂ ಸಹ ಮನಸ್ಸಿಗೆ ವಿರುದ್ಧವಾಗಿ ಪ್ರವರ್ತಿಸದೇ ಇರುವುದೋ ಅಂತಹ ಇಂದ್ರಿಯಗಳ ಧೃತಿಯನ್ನೇ ಮೋಕ್ಷಗತಿಸಾಧನವೆಂದು ತತ್ತ್ವಜ್ಞಾನಿಗಳು ಹೇಳುವರು.



## ಮಂತ್ರ ೧೧

**तां योगमिति मन्यन्ते स्थिरामिन्द्रियधारणाम् ।**
**अप्रमत्तस्तदा भवति योगो हि प्रभवाप्ययौ ॥**

ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।
ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥

### ಪ್ರತಿಪದಾರ್ಥ

ಸ್ಥಿರಾಮ್—ದೃಢವಾದ, ತಾಮ್— ಆ (ಹಿಂದಿನ ಮಂತ್ರದಲ್ಲಿ ಹೇಳಿದ) ಇಂದ್ರಿಯಧಾರಣಾಂ—ಹೊರಗಿನ ಮತ್ತು ಒಳಗಿನ ಇಂದ್ರಿಯಗಳ ನಿಯಮನವನ್ನು, ಯೋಗಮಿತಿ—ಯೋಗವೆಂದು. ಮನ್ಯಂತೇ—ತಿಳಿಯುತ್ತಾರೆ, ಹಿ—ಏಕೆಂದರೆ, ಯೋಗಃ—ಯೋಗವೆಂಬುವುದೇ, ಪ್ರಭವಾಪ್ಯಯೌ—ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವೃತ್ತಿಗೆ ಉಪಾಯವಾಗಿದೆ, ತದಾ (ತತಃ)—ಆದುದರಿಂದಲೇ, ಅಪ್ರಮತ್ತೋ ಭವತಿ ಏಕಾಗ್ರಚಿತ್ತನಾಗುತ್ತಾನೆ.

### ತಾತ್ಪರ್ಯ

ಯೋಗಿಗಳು ಒಳ ಮತ್ತು ಹೊರಗಿನ ಇಂದ್ರಿಯಗಳ ನಿಯಮನವನ್ನು ಯೋಗವೆಂದು ಹೇಳುತ್ತಾರೆ. ಏಕೆಂದರೆ, ಈ ಯೋಗವು ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವೃತ್ತಿಗಳಿಗೆ ಉಪಾಯವಾಗಿದೆ. ಆದ್ದರಿಂದಲೇ ಈ ಯೋಗದಿಂದ ಜೀವಾತ್ಮನು ನಿಶ್ಚಲಚಿತ್ತನಾಗುತ್ತಾನೆ.

### ರಂಗರಾಮಾನುಜಭಾಷ್ಯಮ್

ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್। ತಾಮ್-ಪೂರ್ವಮಂತ್ರ ನಿರ್ದಿಷ್ಟಾಂ ಬಾಹ್ಯಾಭ್ಯಂತರಕರಣಧಾರಣಾಂ ಪರಮಾಂ ಗತಿಂ ಯೋಗ ಇತಿ ಮನ್ಯಂತೇ । ಉಕ್ತಂ ಚ ವ್ಯಾಸಾರ್ಯೈಃ ಪರಮಾ ಗತಿರ್ಯೋಗ ಇತ್ಯರ್ಥಃ' ಇತಿ। ಅಪ್ರಮತ್ತಸ್ತದಾ ಭವತಿ ಇಂದ್ರಿಯಾಣಾಂ ನಿರ್ವ್ಯಾಪಾರತ್ವ ಏವ ಅವಹಿತಚಿತ್ತತಾ ಭವತಿ। ಚಿತ್ತಾವಧಾನಂ ಕಿಮರ್ಥಮಿತ್ಯತ್ರಾಹ ಯೋಗೋ ಹಿ ಪ್ರಭವಾಪ್ಯಯೌ- ಯೋಗಸ್ಯ ಪ್ರತಿಕ್ಷಣಾಪಾಯಶಾಲಿತಯಾ ಅವಧಾನಮಪೇಕ್ಷಿತಮಿತಿ ಭಾವಃ । ಯದ್ವಾ ಇಷ್ಟಪ್ರಭವಾನಿಷ್ಟಾಪ್ಯಯಲಕ್ಷಣಸರ್ವ ಪುರುಷಾರ್ಥಸಾಧನತ್ವಾತ್ ಯೋಗಸ್ಯ, ತತ್ರ ಅಪ್ರಮತ್ತತಯಾ ಭವಿತವ್ಯಮಿತಿ ಭಾವಃ ॥

### ಅನುವಾದ

ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್. ತಾಮ್-ಹಿಂದಿನ ಮಂತ್ರದಲ್ಲಿ ಹೇಳಿದ ಹೊರಗಿನ ಮತ್ತು ಒಳಗಿನ ಇಂದ್ರಿಯಗಳ ನಿಯಮನರೂಪವಾದ ಪರಮಗತಿಯನ್ನೇ ಯೋಗವೆಂದು ತಿಳಿಯುತ್ತಾರೆ. ಪರಮಗತಿಯೇ ಯೋಗವೆಂದರ್ಥವೆಂಬುದಾಗಿ ಶ್ರುತಪ್ರಕಾಶಿಕಾಚಾರ್ಯರೂ ಹೇಳಿರುತ್ತಾರೆ. ಅಪ್ರಮತ್ತಸ್ತದಾ ಭವತಿ–ಇಂದ್ರಿಯಗಳ ವ್ಯಾಪಾರ ಶೂನ್ಯತೆ ಇದ್ದಾಗಲೇ ಮನಸ್ಸಿನ ಅವಧಾನ ಏರ್ಪಡುವುದು. ಅವಧಾನವು ಏಕೆಂದರೆ 'ಯೋಗೋ ಹಿ ಪ್ರಭವಾಪ್ಯಯೌ' ಎಂದು ಹೇಳುತ್ತಾನೆ. ಯೋಗಕ್ಕೆ ಪ್ರತಿಕ್ಷಣದಲ್ಲೂ ಅಪಾಯವಿರುವ ಕಾರಣ ಮನಸ್ಸಿನ ಅವಧಾನವು ಅಪೇಕ್ಷಿತವಾಗಿರುವುದು ಎಂದು ತಾತ್ಪರ್ಯ. ಅಥವಾ ಇಷ್ಟ

ಪ್ರಾಪ್ತಿ ಅನಿಷ್ಟನಿವೃತ್ತಿರೂಪವಾದ ಎಲ್ಲ ಪುರುಷಾರ್ಥಪ್ರಯೋಜನಗಳಿಗೂ ಯೋಗವೇ ಕಾರಣ ವಾದುದರಿಂದ ಆ ವಿಷಯದಲ್ಲಿ ಪ್ರಮಾದಕ್ಕೆ ಎಡೆಗೊಡದೇ ಇರಬೇಕು ಎಂದು ಭಾವ.

### ಭಾಷ್ಯಸಾರ

ಹಿಂದೆ ಹೇಳಿದ ಅಂತರ್ಬಾಹ್ಯೇಂದ್ರಿಯಗಳ ಧಾರಣೆ ಅಂದರೆ ಅದರದರ ವ್ಯಾಪಾರ ವನ್ನು ತಡೆಗಟ್ಟುವ ಪರಮಾತ್ಮಪರವಾದ ಮನಸ್ಸಿನೊಡನೆ ನಿಶ್ಚಲವಾದ ನೆಲೆಯನ್ನು ಯೋಗ (ಚಿತ್ತವೃತ್ತಿನಿರೋಧ)ವೆಂಬುದಾಗಿ ಯೋಗಿಗಳು ಹೇಳುವರು. ಅಂತಹ ಯೋಗವೇರ್ಪಟ್ಟಾಗ ಇಂದ್ರಿಯಧಾರಣೆಯನ್ನು ಹೊಂದಿದವನು ಮನಸ್ಸಿನ ಅನವಧಾನವೆಂಬ ಪ್ರಮಾದವನ್ನು ಕಳೆದುಕೊಳ್ಳುತ್ತಾನೆ. ಮನಸ್ಸಿನ ಪರಮಾತ್ಮಪ್ರವಣವಾದ ಸ್ಥಿತಿಯೆಂಬ ಪ್ರಕೃಷ್ಟವೃತ್ತಿಯೂ ಬುದ್ಧಿ ಇಂದ್ರಿಯಗಳ ನಿರ್ವ್ಯಾಪಾರತೆಯೂ (ಯೋಗಾಪ್ಯಯ) ಇವೆರಡೂ ತಾನೆ ಸೇರಿದಾಗ ಯೋಗವೆನಿಸುವುದು' ಪ್ರಮಾದವೇರ್ಪಡುವುದೇ ಇಂದ್ರಿಯಗಳ ವ್ಯಾಪಾರದಿಂದ, ಅದು ನಿಂತಾಗ ಪ್ರಮಾದಕ್ಕೆ ಎಡೆಯೇ ಇಲ್ಲ ಎಂದರ್ಥ.

ಅಥವಾ ಈ ಯೋಗವೆಂಬುದು ಪ್ರತಿಕ್ಷಣವೂ(ಪ್ರಭವ)ಉತ್ಪತ್ತಿ ಉಳ್ಳದ್ದೂ ಅಂತೆಯೇ (ಅಪ್ಯಯ) ವಿನಾಶವುಳ್ಳದ್ದೂ ಆಗಿರುವುದು. ಅಂದರೆ ಆಗ ದೊರಕಿ, ಆಗ ಮರೆಯುವಂತ ಹದು. ಇಂತಹ ಯೋಗವನ್ನು ರಕ್ಷಿಸಿಕೊಳ್ಳಲು ಅಪ್ರಮತ್ತತೆಯು ಅತ್ಯಾವಶ್ಯಕ ಎಂದರ್ಥ.

ಸುಬೋಧಿನೀಕಾರರು-ಯೋಗಶಬ್ದವನ್ನು 'ಯುಜ ಸಮಾಧೌ' ಎಂಬ ಧಾತುವಿನಿಂದ ವ್ಯುತ್ಪನ್ನಗೊಳಿಸಿರುವರು. 'ತದಾ' ಎಂಬುದಕ್ಕೆ ಯೋಗೋಪಕ್ರಮಕಾಲದಲ್ಲಿ ಎಂದರ್ಥ. 'ಅಪ್ರಮತ್ತೋ ಭವತಿ' ಎಂಬುದಕ್ಕೆ 'ಭವೇತ್' ಎಂಬ ಲಿಙರ್ಥದಲ್ಲಿ ತಾತ್ಪರ್ಯ ಹೇಳಿ ಅಪ್ರಮತ್ತನಾಗಿರಬೇಕು ಎಂಬಾಶಯವನ್ನು ವರ್ಣಿಸಿರುವರು. 'ಯೋಗೋ ಹಿ ಪ್ರಭವಾಪ್ಯಯೌ' ಎಂಬ ವಾಕ್ಯವನ್ನು ಇಷ್ಟದಪ್ರಾಪ್ತಿಗೂ, ಅನಿಷ್ಟದ ನಾಶಕ್ಕೂ ಸಾಧನ ವೆಂಬ ಅರ್ಥದಲ್ಲಿ ಸ್ತುತಿಪರವಾಗಿ ವ್ಯಾಖ್ಯಾನಿಸಿರುವರು.



## ಮಂತ್ರ ೧೨

**नैव वाचा न मनसा प्राप्तुं शक्यो न चक्षुषा ।**
**अस्तीति ब्रुवतोऽन्यत्र कथं तदुपलभ्यते ॥**

ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।
ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥

### ಪ್ರತಿಪದಾರ್ಥ

(ಪರಮಾತ್ಮನ ಪ್ರಭಾವಃ–ಪ್ರಭಾವವು)ವಾಚಾ–ವಾಗಿಂದ್ರಿಯದಿಂದ, ಪ್ರಾಪ್ತುಮ್–ಹೊಂದಲು ಅಂದರೆ ವರ್ಣಿಸಲು, ನೈವ ಶಕ್ಯಃ–ಸಾಧ್ಯವಲ್ಲ. (ಪರಮಾತ್ಮನ ದಿವ್ಯಸ್ವರೂಪಮ್ – ದಿವ್ಯಸ್ವರೂಪವು)ಮನಸಾ–ವಿಷಯ ಪ್ರವಣವಾದ ಮನಸ್ಸಿನಿಂದ ಪ್ರಾಪ್ತುಮ್–ತಿಳಿಯಲು, ನ ಶಕ್ಯಮ್–ಸಾಧ್ಯವಲ್ಲ. (ಪರಮಾತ್ಮನ ದಿವ್ಯರೂಪಮ್ ದಿವ್ಯವಿಗ್ರಹದ ರೂಪವು) ಚಕ್ಷುಷಾ–ಪ್ರಾಕೃತವಾದ ಕಣ್ಣಿನಿಂದ, ಪ್ರಾಪ್ತುಮ್–ನೋಡಲು, ನ ಶಕ್ಯಮ್–ಸಾಧ್ಯವಾದುದಲ್ಲ. ಅಸ್ತೀತಿ ಬ್ರುವತಃ ಅನ್ಯತ್ರ— (ದಿವ್ಯ–ಪ್ರಭಾವ, ದಿವ್ಯರೂಪಗಳಿಂದ ಕೂಡಿದ ಪರಮಾತ್ಮನ ದಿವ್ಯಸ್ವರೂಪವು) ಇದೆಯೆಂದು ಹೇಳುವ ಶ್ರುತಿವಾಕ್ಯಗಳಿಗಿಂತಲೂ ಬೇರೆಡೆಯಲ್ಲಿ ತತ್–ಆ (ಪರಮಾತ್ಮಸ್ವರೂಪ) ಕಥಮ್ ಉಪಲಭ್ಯತೇ–ಹೇಗೆ ತಾನೆ ಗೋಚರವಾದೀತು ?

### ತಾತ್ಪರ್ಯ

ಗುಣ–ವಿಗ್ರಹ–ವಿಭೂತ್ಯಾದಿಗಳಿಂದ ಕೂಡಿದ ಪರಮಾತ್ಮನ ದಿವ್ಯಸ್ವರೂಪವು ವೇದಾಂತವಾಣಿಯನ್ನು ಬಿಟ್ಟು ಉಳಿದ ಬಾಹ್ಯಜ್ಞಾನಸಾಧನಗಳಿಂದ ತಿಳಿಯಲಾಗದು.

### ರಂಗರಾಮಾನುಜಭಾಷ್ಯಮ್

ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ। ಸ್ಪಷ್ಟೋಽರ್ಥಃ। ಪ್ರಾಣಾಃ 'ಸಪ್ತ ಗತೇರ್ವಿಶೇಷಿತತ್ವಾಚ್ಚ' (2–4–2) (ಇತಿ) ಇಂದ್ರಿಯಾಣಿ ಸಪ್ತೈವ 'ಸಪ್ತ ಇಮೇ ಲೋಕಾ ಯೇಷು ಚರಂತಿ ಪ್ರಾಣಾ ಗುಹಾಶಯಾ ನಿಹಿತಾಃ ಸಪ್ತ ಸಪ್ತ' ಇತಿ ಸಪ್ತಾನಾಮೇವ ಪರಲೋಕಗತಿಶ್ರವಣಾತ್ । 'ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಬುದ್ಧಿಶ್ಚ ನ ವಿಚೇಷ್ಟೇತ' ಇತಿ ಯೋಗದಶಾಯಾಮ್ ಇಂದ್ರಿಯಾಣಾಂ ಪರಿಗಣಿತತ್ವಾತ್ ಸಪ್ತೈವೇತಿ ಪ್ರಾಪ್ತೇ–ಉಚ್ಯತೇ–'ಹಸ್ತಾದಯಸ್ತು ಸ್ಥಿತೇಽತೋ ನೈವಮ್' ಶರೀರೇ ಆದಾನಾದಿಲಕ್ಷಣಕಾರ್ಯೋಪಯೋಗಿತ್ವಾತ್ ಹಸ್ತಾದಯೋಽಪಿ ಇಂದ್ರಿಯಾಣಿ। ಅತೋ ನೈವಮ್, 'ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ'– ಆತ್ಮಾ ಮನೋಽಭಿಧೀಯತೇ........'ಇಂದ್ರಿಯಾಣಿ ದಶೈಕಂ ಚ', 'ಏಕಾದಶಂ ಮನಶ್ಚಾತ್ರ' ಶ್ರುತಿಸ್ಮೃತಿಭ್ಯಾಮ್ (ಇಂದ್ರಿಯಸಂಖ್ಯಾ ನಿಶ್ಚಿತಾ।) ನ್ಯೂನಸಂಖ್ಯಾವಾದಃ ಉಪಕಾರಕಾಭಿಪ್ರಾಯಾಃ, ಅಧಿಕಸಂಖ್ಯಾವಾದಾಶ್ಚ ಮನೋವೃತ್ತಿಭೇದಾದಿತಿ ಸ್ಥಿತಮ್ । ಅಥ ವಾಽರ್ಥಮುಪಪಾದಯತಿ–ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ । ಬ್ರುವತಃ ಶಬ್ದಾದನ್ಯತ್ರ ಇತ್ಯರ್ಥಃ । ತಸ್ಯ ಉಪನಿಷದೇಕಗಮ್ಯತ್ವಾದಿತಿ ಭಾವಃ ।

## ಅನುವಾದ

ನೈವ ವಾಚಾ........ಚಕ್ಷುಷಾ। ಅರ್ಥ ಸ್ಪಷ್ಟವಾಗಿದೆ, ಪ್ರಾಣಪಾದದಲ್ಲಿ 'ಸಪ್ತ ಗತೇಃ ವಿಶೇಷಿತತ್ವಾಚ್ಚ' (2–4–2) ಎಂಬುದಾಗಿ ಇಂದ್ರಿಯಗಳು ಏಳು ಮಾತ್ರವೇ. 'ಸಪ್ತ ಇಮೇ ಲೋಕಾ ಯೇಷು ಚರಂತಿ ಪ್ರಾಣಾ ಗುಹಾಶಯಾ ನಿಹಿತಾಃ ಸಪ್ತ ಸಪ್ತ' (ಮುಂ.ಉ. 2–1) ಎಂದು ಏಳು ಇಂದ್ರಿಯಗಳಿಗೆ ಮಾತ್ರವೇ ಪರಲೋಕಗಮನವನ್ನು ಹೇಳಿರುವುದರಿಂದ ಇಂದ್ರಿಯಗಳು ಏಳು ಮಾತ್ರವೇ.

'ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ । ಬುದ್ಧಿಶ್ಚ ನ ವಿಚೇಷ್ಟೇತ' ಎಂದು ಯೋಗದೆಶೆಯಲ್ಲಿಯು ಇಂದ್ರಿಯಗಳನ್ನು ಪರಿಗಣಿಸಿರುವುದರಿಂದಲೂ, ಏಳೇ ಇಂದ್ರಿಯಗಳೆಂದು ಹೇಳಿದಲ್ಲಿ (ಸಿದ್ಧಾಂತವು) ಹೇಳಲ್ಪಡುತ್ತದೆ. 'ಹಸ್ತಾದಯಸ್ತು ಸ್ಥಿತೇಽತೋ ನೈವಮ್' (ಬ್ರ ಸೂ. 2–4–6) ಶರೀರವಿರುವಾಗ ಕೊಂಡುಕೊಳ್ಳುವುದೇ ಮೊದಲಾದ ಕಾರ್ಯಗಳಲ್ಲಿ ಉಪಯೋಗವಿರುವುದರಿಂದ ಹಸ್ತಮುಂತಾದವೂ ಇಂದ್ರಿಯಗಳೇ. ಆದ್ದರಿಂದ ಹಿಂದೆ ಹೇಳಿದ (ಪೂರ್ವಪಕ್ಷವು) ಶಂಕೆಯು ಸರಿಯಲ್ಲ. 'ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ' ಆತ್ಮಶಬ್ದದಿಂದ ಮನಸ್ಸು ಹೇಳಲ್ಪಡುತ್ತದೆ. 'ಇಂದ್ರಿಯಾಣಿ ದಶೈಕಂ ಚ' (ಗೀ. 13-5) ಏಕಾದಶಂ ಮನಶ್ಚಾತ್ರ' (ವಿ.ಪು. 1–2–46) ಎಂಬ ಶ್ರುತಿ ಸ್ಮೃತಿಗಳಿಂದ ಇಂದ್ರಿಯಗಳ ಸಂಖ್ಯೆಯು ಹನ್ನೊಂದು ಎಂದು ನಿಶ್ಚಿತವಾಗಿದೆ.

(ಹನ್ನೊಂದು ಇಂದ್ರಿಯಗಳ ಪೈಕಿ ಕಡಿಮೆಯಾದ ಇಂದ್ರಿಯ ಸಂಖ್ಯೆ (5—7) ಯನ್ನು ತಿಳಿಸುವ ಶ್ರುತ್ಯಾದಿವಾಕ್ಯಗಳು, ಆಯಾ ಸಂದರ್ಭದಲ್ಲಿ ವಿವಕ್ಷಿತರಾದ ಉಪಕಾರಗಳಿಗೆ ಮಾತ್ರಪ್ರಾಧಾನ್ಯಕೊಟ್ಟು 14 ಇಂದ್ರಿಯಗಳೆಂದು 11ಕ್ಕೆ ಮೀರಿದ ಸಂಖ್ಯೆಯನ್ನು ಹೇಳುವ ವಾಕ್ಯಗಳು ಬುದ್ಧಿ–ಅಹಂಕಾರ–ಚಿತ್ತಗಳೆಂಬ ಮನೋವೃತ್ತಿವಿಶೇಷಗಳನ್ನು ಇಂದ್ರಿಯಗಳೆಂದೂ ಭಾವಿಸಿ) ಎಂದು ತಾತ್ಪರ್ಯ.

## ಭಾಷ್ಯಸಾರ

ಪ್ರಸ್ತುತ ಪರಮಾತ್ಮತತ್ತ್ವವು ಉಪನಿಷತ್ತನ್ನು ಬಿಟ್ಟು ಉಳಿದ ವಾಕಿನಿಂದಲೂ, ಸುಸಂಸ್ಕೃತವಲ್ಲದ ಮನಸ್ಸಿನಿಂದಲೂ ಮತ್ತು ಪ್ರಾಕೃತವಾದ ಚಕ್ಷುರಾದಿ ಇಂದ್ರಿಯಗಳಿಂದಲೂ 'ಅಸ್ತಿ' ಎಂದು ಅರಿಯಲು ಆಗದು. 'ಬ್ರಹ್ಮಾಸ್ತಿ' (ಬ್ರಹ್ಮವು ಇದೆ) ಎಂದು ಸಾರುವ ಉಪನಿಷದ್ವಾಣಿಯನ್ನು ಬಿಟ್ಟರೆ ಮತ್ತಾವ ಪ್ರಮಾಣಕ್ಕೂ ಎಟುಕದ ಬದುಕು ಅದು. ಯಾವನೊಬ್ಬನು (ಅತೀಂದ್ರಿಯಾರ್ಥಗಳನ್ನು ತಿಳಿಸುವ) ವೇದಾಂತವಾಣಿಯಲ್ಲಿ ವಿಶ್ವಾಸ ಹೊಂದಿಲ್ಲವೋ ಅಂತಹ ಆಸುರಪ್ರಕೃತಿ(ಅಸುರಸ್ವಭಾವ)ಯಾದವನಿಗೆ ಪರಮಾತ್ಮತತ್ತ್ವವು ಗೋಚರಿಸದಿದ್ದರೂ ವೈದಿಕನಿಗೆ ಮಾತ್ರ ತತ್ತ್ವೋಪಲಬ್ಧಿಯು ಆಗಿಯೇ ಆಗುವುದು ಎಂದು ತಾತ್ಪರ್ಯ.

ಸುಬೋಧಿನೀಕಾರರು— ಈ ಮಂತ್ರಕ್ಕೆ ಹೀಗೆ ಅವತರಣಿಕೆ ಕೊಡುವರು. ಯೋಗದೆಶೆಯಲ್ಲಿ ಸಾಧಕರಿಗೆ ಪರಮಾತ್ಮತತ್ತ್ವವು ಸುಸ್ಪಷ್ಟವಾಗಿ ಗೋಚರಿಸುತ್ತದೆಂಬುದು ಕೇವಲ ಪ್ರಲೋಭನೆಯಷ್ಟೇ. ಆ ಬದುಕಿನ ಅಸ್ತಿತ್ವದ ಬಗ್ಗೆ ಪ್ರಮಾಣ ಒಂದಿದ್ದರೆ ತಾನೆ ಯೋಗದಿಂದಾಗಲೀ ಮತ್ತಾವುದೇ ಉಪಾಯದಿಂದಲಾಗಲೀ ಅದರ ಪ್ರಕಾಶವು ದೊರಕುತ್ತ

ದೆಂದು ಒಪ್ಪಲಾದೀತು. ಆದ ಕಾರಣ ಕೇವಲ ಜಡಶ್ರದ್ಧೆಯೆಂಬ ಪಿಶಾಚಾವಿಷ್ಟರ ಗುಂಪಿನಲ್ಲಿ ಮಾತ್ರ ಈ ಮಾತು ಸಾರ್ಥಕವಾದೀತು. (ಬ್ರಹ್ಮತತ್ತ್ವವು ಪ್ರಕಾಶಿಸುತ್ತದೆ ಎಂಬ ಮಾತು) ಎಂದು ಆಸುರಭಾವದಿಂದ ಆಕ್ಷೇಪ ಹುಟ್ಟಿಕೊಂಡಲ್ಲಿ ಉತ್ತರವಿದು ಎಂಬುದಾಗಿ 'ನೈವ ವಾಚಾ' ಈ ಪರಮಾತ್ಮನು ಇಂದ್ರಿಯಗಳಿಗಾಗಲೀ ಕೇವಲ ತರ್ಕಚತುರವಾದ ಮನಸ್ಸಿಗಾಗಲೀ ವಾದದಲ್ಲಿ ಮುನ್ನುಗ್ಗುವ ಮಾತಿಗಾಗಲೀ ನಿಲುಕದು ಎಂದು ವ್ಯಾಖ್ಯಾನಿಸಿರುವರು.



## ಮಂತ್ರ ೧೩

अस्तीत्येवोपलब्धव्यस्तत्त्वभावेन चोभयोः ।
अस्तीत्येवोपलब्धस्य तत्त्वभावः प्रसीदति ॥

ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।
ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥

### ಪ್ರತಿಪದಾರ್ಥ

ತತ್ತ್ವಭಾವೇನ—(ಪರತತ್ತ್ವ ಚಿಂತನೆಗೆ ಸಾಧನವಾದ) ಅಂತಃಕರಣದಿಂದಲೂ ಮತ್ತು ವೇದಾಂತವಾಕ್ಯಗಳಿಂದಲೂ, ಅಸ್ತೀತ್ಯೇವ-ಪರಮಾತ್ಮನಿರುವನೆಂದೇ, ಉಪಲಬ್ಧವ್ಯಃ-ತಿಳಿಯತಕ್ಕದ್ದು, ಉಭಯೋಃ (ಉಭಾಭ್ಯಾಂ)-ಇವೆರಡರಿಂದಲೂ, ಅಸ್ತೀತ್ಯೇವೋಪಲಬ್ಧಸ್ಯ- ಪರಮಾತ್ಮನು ಇದ್ದೇ ಇರುವನೆಂದು ತಿಳಿದವನ, ತತ್ತ್ವಭಾವಃ—ಅಂತಃಕರಣವು, ಪ್ರಸೀದತಿ-ಪ್ರಸನ್ನವಾಗುತ್ತದೆ ಅಂದರೆ ದೋಷರಹಿತವಾಗುತ್ತದೆ.

### ತಾತ್ಪರ್ಯ

ಅಂತಃಕರಣದಿಂದಲೂ ಮತ್ತು ವೇದಾಂತವಾಕ್ಯಗಳಿಂದಲೂ ಪರಮಾತ್ಮನಿರುವನೆಂದೇ ತಿಳಿಯತಕ್ಕದ್ದು. ಇವೆರಡರಿಂದಲೂ ಪರಮಾತ ಇರುವನೆಂದು ತಿಳಿದ ನಿಶ್ಚಿತಮತಿಯಾದವನ ಅಂತಃಕರಣವು ಪರಿಶುದ್ಧವಾಗುತ್ತದೆ.

### ರಂಗರಾಮಾನುಜಭಾಷ್ಯಮ್

ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ। ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದಿತಿ। ತತ್ತ್ವಂ ಭಾವಯತೀತಿ ತತ್ತ್ವಭಾವಃ-ಅಂತಃಕರಣಮ್। ತೇನ ಚ ಪರಮಾತ್ಮಾ ಅಸ್ತೀತ್ಯೇವೋಪಲಬ್ಧವ್ಯಃ । ವೇದಾಂತವಾಕ್ಯೈಃ ಅಸ್ತೀತ್ಯುಪಲಬ್ಧಸ್ಯ ಮನಸಾಪಿ ಅಸ್ತೀತ್ಯೇವಂ ಮನನನಿದಿಧ್ಯಾಸನೇ ಕರ್ತವ್ಯೇ ಇತ್ಯರ್ಥಃ । ಉಭಯೋಃ ಹೇತ್ವೋಃ-ಉಭಾಭ್ಯಾಂ ಶಬ್ದಮನೋರೂಪಾಭ್ಯಾಮ್, ಅಸ್ತೀತ್ಯೇವ ಉಪಲಬ್ಧಸ್ಯ—ಜ್ಞಾತವತಃ 'ಭುಕ್ತಾ ಬ್ರಾಹ್ಮಣಾಃ' ಇತಿವತ್ ಅಯಂ ನಿರ್ದೇಶಃ। ತತ್ತ್ವಭಾವಃ ಪ್ರಸೀದತಿ-ಮನಃ ಪ್ರಸನ್ನಂ ಭವತಿ।ನಿರ್ದುಷ್ಟಂ ಭವತಿ ಇತ್ಯರ್ಥಃ ॥

### ಅನುವಾದ

ಅಸ್ತೀತ್ಯೇವೋಪ ........... ಪ್ರಸೀದತಿ, ತತ್ತ್ವವನ್ನು ಭಾವಿಸುವಂತದು ಯಾವುದೋ ಅದುತತ್ತ್ವಭಾವ ಅಂದರೆ ಅಂತಃಕರಣವೆಂದರ್ಥ. ಅದರಿಂದ (ಅಂತಃಕರಣದಿಂದ) ಪರಮಾತ್ಮನು ಇದ್ದೇ ಇದ್ದಾನೆ ಎಂದು ಗ್ರಹಿಸಲ್ಪಡಬೇಕು. ವೇದಾಂತವಾಕ್ಯಗಳಿಂದ ಇದ್ದಾನೆ ಎಂದು ತಿಳಿಯಲ್ಪಟ್ಟ ಪರಮಾತ್ಮನ ಬಗ್ಗೆ ಮನಸ್ಸಿನಿಂದಲೂ ಸಹ ಇದ್ದಾನೆ ಎಂದು ಮನನ ಮತ್ತು ನಿದಿಧ್ಯಾಸನಗಳು ಮಾಡತಕ್ಕವು ಎಂದರ್ಥ. ಉಭಯೋಃ—ಶಬ್ದ ಮತ್ತು ಮನಸ್ಸುಗಳೆಂಬ ಎರಡೂ ಸಾಧನಗಳಿಂದ 'ಇದ್ದಾನೆ' ಎಂದು ಉಪಲಬ್ಧಸ್ಯ-ತಿಳಿದವನಿಗೆ 'ಉಪಲಬ್ಧ' ಎಂಬ ನಿರ್ದೇಶವು 'ಭುಕ್ತಾ ಬ್ರಾಹ್ಮಣಾಃ' ಎಂಬ ವಾಕ್ಯದಲ್ಲಿಯು ಭುಕ್ತಪದದಂತೆ

(ಭುಕ್ತಪದವು ತಿನ್ನಲ್ಪಟ್ಟದ್ದು ಎಂಬ ಕರ್ಮಾರ್ಥವನ್ನು ಹೇಳದೆ ತಿಂದವರು ಎಂಬ ಕರ್ತ್ರರ್ಥ ದಲ್ಲಿದೆ. ಅಂತೆಯೇ ಇದು ಗೋಚರವಾದುದು ಎಂಬರ್ಥವನ್ನು ಹೇಳದೆ ಗೋಚರ ಮಾಡಿಕೊಂಡವನು ಎಂಬರ್ಥವನ್ನು ಹೇಳುವುದಾಗಿದೆ.) ತತ್ತ್ವಭಾವಃ ಪ್ರಸೀದತಿ–ಮನಸ್ಸು ಪ್ರಸನ್ನವಾಗುವುದು ಅಂದರೆ ದೋಷರಹಿತವಾಗುವುದು ಎಂದು ತಾತ್ಪರ್ಯ.

### ಭಾಷ್ಯಸಾರ

ವೇದಾಂತವಾಣಿಯಲ್ಲಿ ವಿಶ್ವಾಸವುಳ್ಳವನಿಂದ ಆ ಪರಮಾತ್ಮನು ಮೊದಲಿಗೆ, ವಾಕ್ಯ ಪ್ರಮಾಣದಿಂದ 'ಅಸ್ತಿ' ಎಂದರಿಯತಕ್ಕವನು. ಹೀಗೆ ಸಾಮಾನ್ಯರೂಪವಾಗಿ ಅರಿಯಲ್ಪಟ್ಟ ಪರಮಾತ್ಮತತ್ತ್ವವು, ಅದರ ಅಸಾಧಾರಣಧರ್ಮವಾದ ಜಗತ್ಕರ್ತೃತ್ವ–ಸತ್ಯತ್ವ–ಜ್ಞಾನತ್ವ ಅನಂತತ್ವಾದಿಧರ್ಮರಹಿತವಾಗಿ ತಿಳಿಯತಕ್ಕದ್ದು. ಮೊದಲಿಗೆ ಶ್ರುತಿವಾಕ್ಯಜನ್ಯಜ್ಞಾನವನ್ನು ಹೊಂದಿದ ಉಪಾಸಕನಿಗೆ ಪರಮಾತ್ಮನ ಅಸಾಧಾರಣ ಧರ್ಮವಾದ ಸತ್ಯತ್ವಾದಿಗಳು ಸ್ಫುಟ ಪ್ರಕಾಶಕ್ಕೆ ಬಂದು ಆದರ ಮೂಲಕ ಆ ಧರ್ಮಕ್ಕೆ ಆಶ್ರಯವಾದ ಪರಮಾತ್ಮಸ್ವರೂಪವೂ ಇದ್ದಂತೆ ಪ್ರಕಾಶಿಸುವುದು. ಧರ್ಮವು ಧರ್ಮಿಯು ತೋರುವ ಜ್ಞಾನದಲ್ಲೇ ತೋರುವ ಸ್ವಭಾವವುಳ್ಳದ್ದು ಎಂದು ಮೊದಲು ವ್ಯಾಖ್ಯಾನಮಾಡಿ ಉಳಿದ ವಾಖ್ಯಾನದಂತೆಯೇ ಎರಡನೇ ವ್ಯಾಖ್ಯಾನ ಮಾಡಿರುವರು.

ಸುಬೋಧಿನೀಕಾರರು—ಪರಮಾತ್ಮತತ್ತ್ವವು, ದೈವೀಸಂಪತ್ತಿನೊಡನೆ ಹುಟ್ಟಿಕೊಂಡವ ನಿಂದ ಶ್ರುತಿಯ ಬಗ್ಗೆ ವಿಶ್ವಾಸದ ಮೂಲಕ 'ಅಸ್ತಿ' ಎಂಬುದಾಗಿಯೇ ನಿಶ್ಚಯಾರ್ಹವಾಗಿದೆ. ಅದನ್ನು ಕುತ್ಸಿತವಾದ ತರ್ಕಗಳಿಂದ ಕ್ಷೋಭೆಗೊಳಿಸಬಾರದು. ಈ ರೀತಿ ಆಸ್ತಿಕ್ಯಬಲದಿಂದ ಮೊದಲು ಸಾಮಾನ್ಯರೂಪವಾಗಿ ನಿಶ್ಚಯಿಸಲ್ಪಟ್ಟ ಪರಮಾತ್ಮತತ್ತ್ವವು ತತ್ತ್ವಭಾವ (ಯಥಾವಸ್ಥಿತರೂಪ) ದಿಂದ ಅರಿಯತಕ್ಕದಾಗಿದೆ. (ತತ್ವಂ ಯಾಥಾರ್ಥ್ಯಂ, ತದ್ರೂಪೋ ಭಾವಃ ತತ್ತ್ವಭಾವಃ)

ಯದ್ವಾ ಎಂಬುದಾಗಿ ಮತ್ತೊಂದು ವ್ಯಾಖ್ಯಾನರೂಪದಲ್ಲಿ 'ತತ್ತ್ವಂ ಬ್ರಹ್ಮ, ತಸ್ಯಭಾವಃ ಅಸಾಧಾರಣೋ ಧರ್ಮಃ' ಎಂದು ಹೇಳಿ ತಿಳಿಯಬೇಕೆಂದು ಶ್ರುತಿಹೇಳಿದ ಅಸ್ತಿತ್ವ ಮತ್ತು ತತ್ತ್ವಭಾವಗಳ ನಡುವೆ ಅಪ್ರಾಮಾಣ್ಯಸಂಶಯಕ್ಕಾಗಲೀ, ಕುತರ್ಕದಿಂದಾಗುವ ನಾಸ್ತಿಕ್ಯವಾದ ಕ್ಕಾಗಲೀ ಅವಕಾಶಕೊಡದೆ ಯಾರೊಬ್ಬನು 'ಅಸ್ತಿ' ಎಂಬುದಾಗಿಯೇ ನಿಶ್ಚಯ ಹೊಂದಿರು ವನೋ ಅಂತಹವನಿಗೆ ಅವನ ಆಸ್ತಿಕ್ಯಬುದ್ಧಿಯಿಂದ(ಮಹಿಮೆಯಿಂದ) ಪರಮಾತ್ಮನ ಯಥಾವಸ್ಥಿತ ಸ್ವರೂಪವು ಪ್ರಸನ್ನವಾಗಿ ಗೋಚರಿಸುವುದು ಎಂದು ಭಾವ. 'ಉಪಲಬ್ಧಸ್ಯ' ಎಂಬುದಕ್ಕೆ ಕರ್ಮಣಿಪ್ರತ್ಯಯದಲ್ಲಾದರೂ, ಅರ್ಥವರ್ಣನೆ ಮಾಡಬಹುದೆಂದು ವಿವರಿಸಿರುವರು. ಗೋಚರಿಸಿದ ಎಂದೇ ಅರ್ಥ ಎಂದು ವಾಖ್ಯಾನಿಸಿರುವರು.



## ಮಂತ್ರ ೧೪

**यदा सर्वे प्रमुच्यन्ते कामा येऽस्य हृदि श्रिताः ।**
**अथ मर्त्योऽमृतो भवत्यत्र ब्रह्म समश्नुते ॥**

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥

### ಪ್ರತಿಪದಾರ್ಥ

ಯದಾ—ಯಾವ ಕಾಲದಲ್ಲಿ (ಯಾವಾಗ), ಅಸ್ಯ—ಇವನ (ಪ್ರಸನ್ನಾಂತಃಕರಣನಾದ ಉಪಾಸಕನ), ಹೃದಿ ಶ್ರಿತಾಃ—ಹೃದಯದಲ್ಲಿ ನೆಲೆಸಿದ್ದ, ಕಾಮಾಃ—(ಧ್ಯೇಯವಿರೋಧಿಯಾದ) ಎಲ್ಲ ವಿಷಯಾಕಾಂಕ್ಷೆಗಳೂ, ಪ್ರಮುಚ್ಯಂತೇ—(ಹೃದಯದಿಂದ) ದೂರವಾಗುವುವೋ, ಮರ್ತ್ಯಃ—(ಅಂಥ ಉಪಾಸಕನಾದ) ಮನುಷ್ಯನು, ಅಥ—ಪ್ರಾಪ್ತವಾದ ದೇಹವಿಯೋಗವಾದ ಮೇಲೆ, ಅಮೃತೋ ಭವತಿ—ಮುಕ್ತನಾಗುತ್ತಾನೆ, (ಮತ್ತು), ಅತ್ರ—ಈ ದೇಹದಲ್ಲಿದ್ದಾಗಲೂ (ಉಪಾಸನದ ಕಾಲದಲ್ಲಿ), ಬ್ರಹ್ಮ—ಅನುಭವಿಸಬೇಕಾದ ಪರಬ್ರಹ್ಮಸ್ವರೂಪವನ್ನು, ಸಮಶ್ನುತೇ—ವಿಶದವಾಗಿ ಅನುಭವಿಸುತ್ತಾನೆ.

### ತಾತ್ಪರ್ಯ

ಪರಿಶುದ್ಧಮನಸ್ಸುಳ್ಳ ಇಂತಹ ಜೀವಾತ್ಮನ ಹೃದಯದಲ್ಲಿ ನೆಲೆಸಿದ್ದ ಶಬ್ದಾದಿ ದುರ್ವಿಷಯಾಕಾಂಕ್ಷೆಗಳು ನಾಶವಾದರೆ ಶರೀರವಿಯೋಗಾನಂತರ ಜೀವನು ಮುಕ್ತನಾಗುವನು. ಈ ಲೋಕದಲ್ಲಿ ಉಪಾಸನೆ ಮಾಡುವಾಗಲೂ ಈತನಿಗೆ ಪರಬ್ರಹ್ಮಾನುಭವವುಂಟಾಗುವುದು.

### ರಂಗರಾಮಾನುಜಭಾಷ್ಯಮ್

ಯದಾ ಸರ್ವೇ ಪ್ರಮುಚ್ಯಂತೇ ಕಾಮಾಃ....ಮರ್ತ್ಯೋಽಮೃತೋ ಭವತಿ । ಕಾಮಾಃ—ದುರ್ವಿಷಯವಿಷಯಕಮನೋರಥಾಃ ಹೃದ್ಗತಾಃ ಯದಾ ಶಾಂತಾ ಭವಂತಿ, ತದನಂತರಮೇವಾಯಮುಪಾಸಕಃ ಅಮೃತೋ ಭವತಿ—ವಿಶ್ಲಿಷ್ಟಾಶ್ಲಿಷ್ಟಪೂರ್ವೋತ್ತರದುರಿತಭರೋ ಭವತಿ ಇತ್ಯರ್ಥಃ । ಅತ್ರಬ್ರಹ್ಮ ಸಮಶ್ನುತೇ—ಅತ್ರೈವೋಪಾಸನವೇಲಾಯಾಂ ಬ್ರಹ್ಮಾನುಭವತಿ ಇತ್ಯರ್ಥಃ । 'ಸಮಾನಾ ಚಾಽಽಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ' (ಬ್ರ.ಸೂ. 4-2-7) ಇತ್ಯತ್ರ ಭಾಷ್ಯಮ್—

'ಅನುಪೋಷ್ಯ ಶರೀರೇಂದ್ರಿಯಾದಿಸಂಬಂಧಮದಗ್ಧ್ವೈವ ಯತ್ ಅಮೃತತ್ವಮ್ ಉತ್ತರಪೂರ್ವಾಘಯೋಃ ಅಶ್ಲೇಷವಿನಾಶರೂಪಂ ಪ್ರಾಪ್ಯತೇ, ತದುಚ್ಯತೇ. 'ಯದಾ ಸರ್ವೇ ಪ್ರಮುಚ್ಯಂತೇ' ಇತ್ಯಾದಿಕಯಾ ಶ್ರುತ್ಯೇತ್ಯರ್ಥಃ। 'ಅತ್ರ ಬ್ರಹ್ಮ ಸಮಶ್ನುತೇ' ಇತಿ ಚ ಉಪಾಸನವೇಲಾಯಾಂ ಯೋ ಬ್ರಹ್ಮಾನುಭವಃ ತದ್ವಿಷಯಮಿತ್ಯಭಿಪ್ರಾಯಃ' ಇತಿ॥

### ಅನುವಾದ

ಯದಾ ಸರ್ವೇ ಪ್ರಮುಚ್ಯಂತೇಕಾಮಾಃ....ಅಮೃತೋ ಭವತಿ। ಕಾಮಾಃ—ಕೆಟ್ಟ ವಿಷಯಗಳನ್ನು ಕುರಿತ ಮನಸ್ಸಿನಲ್ಲಿರುವ ಬಯಕೆಗಳು, ಯಾವಾಗ ಶಾಂತವಾಗುವುವೋ, ಅದರ

ನಂತರವೇ, ಅಯಮ್ ಉಪಾಸಕಃ–ಉಪಾಸಕನು, ಅಮೃತೋ ಭವತಿ–ತನ್ನಿಂದ ಅಗಲಿ ಹೋದ ಪೂರ್ವಪಾಪಗಳ ಮತ್ತು ತನ್ನಲ್ಲಿ ಲೇಪಿಸದ ಉತ್ತರ ಪಾಪಗಳ ಭಾರವುಳ್ಳವನಾಗುತ್ತಾನೆ. ಅಂದರೆ (ಪೂರ್ವೋತ್ತರ ಪಾಪರಾಶಿಯನ್ನು ಕಳೆದುಕೊಳ್ಳುತ್ತಾನೆ.) ಅತ್ರ ಬ್ರಹ್ಮ ಸಮಶ್ನುತೇ–ಈ ದೇಹದಲ್ಲೇ ಉಪಾಸನಾಕಾಲದಲ್ಲಿ ಬ್ರಹ್ಮವನ್ನು ಅನುಭವಿಸುತ್ತಾನೆ ಎಂದರ್ಥ. 'ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ' ಎಂಬಲ್ಲಿ ಶ್ರೀಭಾಷ್ಯಗ್ರಂಥವು.

ಅನುಪೋಷ್ಯ–ಶರೀರೇಂದ್ರಿಯಾದಿಗಳ ಸಂಬಂಧವನ್ನು ಸುಟ್ಟುಹಾಕದೆಯೇ, ಅಂದರೆ (ನಿರ್ಮೂಲಗೊಳಿಸದಿರುವಾಗಲೇ) ಯಾವ ಅಮೃತತ್ತ್ವವು ಉತ್ತರ ಮತ್ತು ಪೂರ್ವ ಪಾಪಗಳ, ಲೇಪವಿಲ್ಲದಿರುವಿಕೆ ಮತ್ತು ವಿನಾಶರೂಪವಾದುದು ಹೊಂದಲ್ಪಡುತ್ತದೆಯೋ, ಅದೇ 'ಯದಾ ಸರ್ವೇ ಪ್ರಮುಚ್ಯಂತೇ' ಇತ್ಯಾದಿ ಶ್ರುತಿಗಳಿಂದ ಹೇಳಲ್ಪಡುತ್ತದೆ. 'ಅತ್ರ ಬ್ರಹ್ಮ ಸಮಶ್ನುತೇ' ಎಂಬ ವಾಕ್ಯವಾದರೋ ಉಪಾಸನ ವೇಳೆಯಲ್ಲಿಯ ಬ್ರಹ್ಮಾನುಭವವಾವುದುಂಟೋ ಅದನ್ನು ಕುರಿತದ್ದು ಎಂದಭಿಪ್ರಾಯ (ಎಂಬ ಅರ್ಥದ್ದಾಗಿದೆ).

## ಭಾಷ್ಯಸಾರ

ಈ ಉಪಾಸಕನ ಅಂತಃಕರಣದಲ್ಲಿ ಅನಾದಿಕಾಲದಿಂದಲೂ ಬೇರೂರಿ ನೆಲೆಸಿಕೊಂಡಿರುವ ಶಬ್ದಾದಿ ಇಂದ್ರಿಯಾರ್ಥಗಳ ಮೇಲಿನ ಸೆಳೆತಗಳೆಲ್ಲವೂ, ತತ್ತ್ವಸಾಕ್ಷಾತ್ಕಾರ ದೊರಕಿದೊಡನೆ ಕರಗಿಹೋಗುತ್ತವೆ, ಮತ್ತು ಆ ಕಾಮಗಳೆಲ್ಲಾ ನಿರವಶೇಷವಾದ ಮೇಲೆ ಮರ್ತ್ಯ (ಮರಣ ಧರ್ಮ)ನಾಗಿದ್ದ ಉಪಾಸಕನು ಅಮೃತನಾಗುತ್ತಾನೆ ಅಂದರೆ ಹಿಂದೆ ಗಳಿಸಿದ ಕರ್ಮಗಳೆಲ್ಲವೂ, ಹುರಿದ ಕಾಳಿನಂತಾಗಿ (ನಿರ್ವೀರ್ಯವಾಗುವುದರಿಂದಲೂ) ಮುಂದಾಗಬಹುದಾದ ಕರ್ಮಗಳು (ಉಪಾಸನಾಬಲದಿಂದ) ಇವನಲ್ಲಿ ಲೇಪಿಸದಿರುವುದರಿಂದಲೂ ಮತ್ತೆ ಸಂಸಾರವನ್ನುಂಟುಮಾಡುವ ಕರ್ಮಬೀಜವಿಲ್ಲದವನಾಗುತ್ತಾನೆ. ಇವನಿಗೆ ದೇಹೇಂದ್ರಿಯಾದಿಗಳ ಸಂಬಂಧವಿದ್ದರೂ, ಧ್ಯಾನಕಾಲದಲ್ಲಿ ಇವನು ಪರಬ್ರಹ್ಮವನ್ನು ಅನುಭವಿಸುವಂತಾಗುವನು.

ಸುಬೋಧಿನೀಕಾರರು ಅಂತಃಕರಣವೆಂಬ ಉಪಾಧಿಯನ್ನವಲಂಬಿಸಿ ಪ್ರತಿಕ್ಷಣವೂ ಬೆಳೆಯುತ್ತ ಬಂದಿದ ಗಟ್ಟಿಯಾಗಿ ಬೇರೂರಿದ್ದ ಎಲ್ಲ ಕಾಮಗಳು ಮತ್ತೊಮ್ಮೆ ಮೊಳಕೆಯಾಗದಂತೆ ತಾನಾಗಿಯೇ ಛಿದ್ರಛಿದ್ರವಾಗಿ ದೂರ ಹೋಗುವುವೋ ಆಗ ಅಲ್ಪಸ್ವಲ್ಪವಾದ ಪ್ರಾರಬ್ಧ ಕರ್ಮವಿದ್ದರೂ ಯೋಗಸಿದ್ಧಿಯ ಬಲದಿಂದ ಇವನಿಗೆ ಬ್ರಹ್ಮಾನುಭವವು ದೊರಕುತ್ತದೆ. ಸಂಸಾರಬೀಜವಾದ ಕರ್ಮವು ನಷ್ಟವಾದುದೇ ಇದಕ್ಕೆ ಕಾರಣ.



## ಮಂತ್ರ ೧೫

**यदा सर्वे प्रभिद्यन्ते हृदयस्येह (स्यैव) ग्रन्थयः ।**
**अथ मर्त्योऽमृतो भवत्येतावदनुशासनम् ॥**

ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ(ಸ್ಯೈವ) ಗ್ರಂಥಯಃ ।
ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಮ್ ॥

### ಪ್ರತಿಪದಾರ್ಥ

ಇಹ-ಈ ಲೋಕ(ದೇಶ)ದಲ್ಲಿ,ಉಪಾಸಕನ ಹೃದಯದಲ್ಲಿ ನೆಲೆಸಿದ್ದಕ್ಕೆ ಸಂಬಂಧಪಟ್ಟ, ಸರ್ವೇಗ್ರಂಥಯಃ-ಗಂಟುಗಳಂತೆ ಮುಂದೆ ಸಾಗಲು ಬಿಡದ ಕಾಮ-ಕ್ರೋಧ-ರಾಗ-ದ್ವೇಷಾದಿಗಳೆಲ್ಲವೂ, ಯದಾ-ಯಾವಾಗ ಪ್ರಭಿದ್ಯಂತೇ-ಅದರದರ ವಾಸನೆಗಳೊಡನೆ ನಿರ್ಮೂಲವಾಗುವುವೋ, ಆವಾಗ, ಅಥ-ಅಂತಹ ಶರೀರವಿಯೋಗವಾದ ಮೇಲೆ ಮರ್ತ್ಯಃ-ಉಪಾಸಕನಾದ ಮನುಷ್ಯನು, ಅಮೃತೋ ಭವತಿ-ಪುನರಾವೃತ್ತಿರಹಿತವಾದ ಸ್ಥಿತಿಯೆಂಬ ಮೋಕ್ಷವನ್ನು ಹೊಂದುವನು. ಅನುಶಾಸನಮ್-ಮುಮುಕ್ಷುವಾದ ನಿನಗೆ ಉಪದೇಶಿಸತಕ್ಕ ಅಂಶವಾದರೋ, ಏತಾವತ್-ಇಷ್ಟುಮಾತ್ರವೇ ಅಂದರೆ ಮುಂದೆ ಹೇಳುವಂತಹುದು.

### ತಾತ್ಪರ್ಯ

ಉಪಾಸಕನು ಈ ಲೋಕದಲ್ಲಿ ಇರುವ ದೆಶೆಯಲ್ಲಿಯೇ ಅವನ ಕಾಮ, ಕ್ರೋಧ, ರಾಗ-ದ್ವೇಷ ಮುಂತಾದ ಹೃದಯಗ್ರಂಥಿಗಳು ವಾಸನೆಯೊಂದಿಗೆ ನಾಶವಾದರೆ ಅವನು ಆ ಶರೀರ ವಿಯೋಗಾನಂತರವೇ ಅಪುನರಾವೃತ್ತಿರೂಪವಾದ ಮೋಕ್ಷವನ್ನು ಹೊಂದುವನು. ಉಪಾಸಕನಿಗೆ ಇಷ್ಟು ಮಾತ್ರ ಉಪದೇಶಿಸತಕ್ಕದ್ದು. ಏನೆಂದರೆ ಮುಂದಿನ ಮಂತ್ರಗಳಲ್ಲಿ ಹೇಳುವುದು.

### ರಂಗರಾಮಾನುಜಭಾಷ್ಯಮ್

ಉಕ್ತಮೇವಾರ್ಥಮಾದರೇಣಾಭ್ಯಸ್ಯನ್, ಉಪದೇಷ್ಟವ್ಯಾಂಶಃ ಏತಾವಾನೇವೇತ್ಯುಪಸಂಹರತಿ—ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೈವ ಗ್ರಂಥಯಃ। ಗ್ರಂಥಯಃ-ಗ್ರಂಥಿವತ್ ದುರ್ಮೋಚಾಃ ರಾಗ-ದ್ವೇಷಾದಯೋ ಯದೈವ ಪ್ರಮುಚ್ಯಂತ ಇತ್ಯರ್ಥಃ । ಏತಾವದನುಶಾಸನಮ್-ಅನುಶಾಸನೀಯಮ್ ಉಪಾಸಕಸ್ಯ ಕರ್ತವ್ಯತ್ವೇನ ಉಪದೇಷ್ಟವ್ಯಮೇತಾವದೇವ । ವಕ್ಷ್ಯಮಾಣಮೂರ್ಧನ್ಯನಾಡೀನಿಷ್ಕ್ರಮಣಾರ್ಚಿರಾದಿಗಮನಾದಿಕಂ ನ ಸಾಧಕಸ್ಯ ಕೃತ್ಯಮ್, ಕಿಂತು ಉಪಾಸನಪ್ರೀತಭಗವತ್ಕೃತ್ಯಮಿತಿ ಭಾವಃ ॥

### ಅನುವಾದ

ಹಿಂದೆ ಹೇಳಿದ ಅರ್ಥವನ್ನೇ ಆದರದೊಡನೆ ಹೇಳುತ್ತಾ ಉಪದೇಶಿಸಬೇಕಾದ ವಿಷಯ ಇಷ್ಟೇ ಎಂದು ಮುಕ್ತಾಯಗೊಳಿಸುತ್ತಾನೆ. ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ. ಗ್ರಂಥಯಃ-ಬಿಚ್ಚಲು ಕಷ್ಟವಾದ, ಗಂಟಿನಂತೆ ಬಿಡಿಸಲು ಕಷ್ಟವಾಗಿರುವ ರಾಗ ದ್ವೇಷ ಮುಂತಾದುವುಗಳು ಯಾವಾಗ ಬಿಟ್ಟು ಹೋಗುವವೋ ಎಂದರ್ಥ. ಏತಾವದನುಶಾಸನಮ್- ಉಪಾಸಕನಿಗೆ ಕರ್ತವ್ಯ ಎಂದು ಉಪದೇಶಿಸಬೇಕಾದುದು ಇಷ್ಟೇ. ಮುಂದೆ ಹೇಳುವಂತಹ ದೇಹದಿಂದ ಮೂರ್ಧನ್ಯ ನಾಡಿಯ ಮೂಲಕ ಉತ್ಕ್ರಾಂತಿ ಹೊಂದುವುದು

ಮತ್ತು ಅರ್ಚಿರಾದಿಮಾರ್ಗದಲ್ಲಿ ಸಾಗುವುದು, ಮುಂತಾದವುಗಳೆಲ್ಲವೂ ಸಾಧಕನ ಕರ್ತವ್ಯ ಗಳಲ್ಲಿ ಸೇರಲಾರವು ಮತ್ತೇನೆಂದರೆ ಉಪಾಸನೆಯಿಂದ ಸಂತುಷ್ಟನಾದ ಪರಮಾತ್ಮನ ಕರ್ತವ್ಯ ಎಂದು ತಾತ್ಪರ್ಯ.

ಭಾಷ್ಯಸಾರ

(ನಿರಂತರವಾದ ಉಪಾಸನಾಬಲದಿಂದ) ಗ್ರಂಥಿಗಳಂತೆ ಬಿಡಿಸುವಾಗ ದುಃಖವನ್ನು ತರುವ ರಾಗಾಭಿಮಾನಾದಿ ದೋಷಗಳೆಲ್ಲವೂ, ಕತ್ತರಿಸಿ ಹೋದ ಮೇಲೆ ಅಂದರೆ ಸವಾಸನ ವಾಗಿ ಕ್ಲೇಶಗಳೆಲ್ಲವೂ ಹೋದ ಮೇಲೆ ಉಪಾಸಕನಾದ ಈ ಜೀವನಿಗೆ ಅಮೃತತ್ತ್ವವು ದೊರ ಕುವುದು. ಇಷ್ಟುಮಾತ್ರವೇ ಗುರುವು ಶಿಷ್ಯನಿಗೆ ಉಪದೇಶಿಸತಕ್ಕ ವಿಷಯವಾಗಿದೆ. ಇದಕ್ಕಿಂತ ಹೆಚ್ಚಾದುದು ಯಾವುದೂ ಇಲ್ಲ.

ಸುಬೋಧಿನೀಕಾರರು—ಆತ್ಮವಸ್ತುವಲ್ಲದ್ದರಲ್ಲಿ ಆತ್ಮತ್ವಭ್ರಮೆ. ಅದನ್ನು ಅವಲಂಬಿಸಿ ಹುಟ್ಟುವ, ತನ್ನದಲ್ಲದುದರಲ್ಲಿ ತನ್ನದೆಂಬ ಭ್ರಮೆ ಇವೆಲ್ಲವೂ ಅಭಿಮಾನವೆನಿಸುವವು. ಈ ಅಭಿಮಾನವೆಂಬುದು ಕಾಮಕ್ಕೂ ಮೂಲವಾದದು. ಇವು ಆತ್ಮನ ಸ್ವರೂಪಕ್ಕೆ ಸಂಬಂಧ ಪಡದೆ ಅವನ ಅಂತಃಕರಣವೆಂಬ ಉಪಾಧಿಯನ್ನು ಅವಲಂಬಿಸಿಕೊಂಡಿದೆ. ಅದೆಲ್ಲ ನಿರ್ಮೂಲವಾದರೆ (ಶುದ್ಧಾಂತಃಕರಣನಾದ ಇವನು) ಮುಕ್ತನಾಗುವನು. ಇಷ್ಟು ಮಾತ್ರ ಮುಮುಕ್ಷುವಿಗೆ ಅನುಷ್ಠೇಯವಾದ ಉಪಾಯ. ಇದಕ್ಕಿಂತ ಬೇರಾದ ಮತ್ತಾವುದೂ ಅರಿಯಬೇಕಾದುದಿಲ್ಲ.



# ಮಂತ್ರ ೧೬

शतञ्चैका च हृदयस्य नाड्यस्तासां मूर्धानमभिनिस्सृतैका ।
तयोर्ध्वमायन्नमृतत्वमेति विष्वङ्ङन्या उत्क्रमणे भवन्ति ॥

ಶತಂ ಚೈಕಾ ಚ ಹೃದಯಸ್ಯ ನಾಡ್ಯ-
ಸ್ತಾಸಾಂಮೂರ್ಧಾನಮಭಿನಿಸ್ಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ
ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ ॥

### ಪ್ರತಿಪದಾರ್ಥ

ಹೃದಯಸ್ಯ ನಾಡ್ಯಃ—ಹೃದಯದ ಪ್ರಧಾನವಾದ ನಾಡಿಗಳು, ಶತಂ ಚೈಕಾ ಚ—ನೂರ ಒಂದು ನಾಡಿಗಳು ತಾಸಾಂ (ಮಧ್ಯೇ)—ಅವುಗಳ ಪೈಕಿ, ಏಕಾ—ಒಂದಾದ ಬ್ರಹ್ಮರಂಧ್ರನಾಡಿಯು, ಮೂರ್ಧಾನಮ್—ತಲೆಯನ್ನು ಅಂದರೆ ಬ್ರಹ್ಮರಂಧ್ರದವರೆವಿಗೂ, ಅಭಿನಿಸ್ಸೃತಾಃ—ವ್ಯಾಪ್ತಿಯನ್ನು ಹೊಂದಿರುವುದು. ತಯಾ—ಆ ಬ್ರಹ್ಮರಂಧ್ರನಾಡಿಯ ಮೂಲಕ, ಊರ್ಧ್ವಮ್—ಊರ್ಧ್ವಲೋಕವನ್ನು (ಪರಮಪದವನ್ನು), ಆಯನ್ ಹೊಂದಿದವನಾಗಿ, ಅಮೃತತ್ವಮ್—ಸ್ವಸ್ವರೂಪದ ಆವಿರ್ಭಾವಪೂರ್ವಕ ಪರಮಾತ್ಮಸಾಮ್ಯವೆಂಬ ಮೋಕ್ಷವನ್ನು, ಏತಿ—ಹೊಂದುತ್ತಾನೆ. ಅನ್ಯಾಃ (ಅನ್ಯಾಭ್ಯಃ)—ಇತರ ನೂರು ನಾಡಿಗಳ ಮೂಲಕ, ಉತ್ಕ್ರಮಣೇ—ಜೀವಾತ್ಮರಿಗೆ ಉತ್ಕ್ರಾಂತಿ ಏರ್ಪಟ್ಟಿದ್ದೇ ಆದರೆ, ವಿಷ್ವಂಗ್‌ಭವಂತಿ—ಬೇರೆ ಬೇರೆ ನಾನಾ ಯೋನಿಗಳಲ್ಲಿ ಹುಟ್ಟಲು ಅರ್ಹರಾಗುತ್ತಾರೆ.

### ತಾತ್ಪರ್ಯ

ಹೃದಯದಲ್ಲಿ ಪ್ರಧಾನವಾದ ನಾಡಿಗಳು ನೂರ ಒಂದು. ಅವುಗಳಲ್ಲಿ ಒಂದು ಬ್ರಹ್ಮರಂಧ್ರದವರೆವಿಗೂ ಸಾಗಿರುವುದು. ಅದು ಬ್ರಹ್ಮನಾಡಿ. ಆ ಬ್ರಹ್ಮನಾಡಿಯ ಮೂಲಕ ಜೀವನು ಊರ್ಧ್ವಮುಖವಾಗಿ ದೇಹದಿಂದ ಉತ್ಕ್ರಾಂತಿ ಹೊಂದಿ ಅರ್ಚಿರಾದಿ ಮಾರ್ಗದಲ್ಲಿ ಸಾಗಿ ಪರಮಪದವನ್ನು ಹೊಂದುತ್ತಾನೆ. ಈ ಬ್ರಹ್ಮನಾಡಿಯನ್ನು ಬಿಟ್ಟು ಉಳಿದ ನಾಡಿಗಳ ಮೂಲಕ ದೇಹೋತ್ಕ್ರಮಣವು ಜೀವಿಗೆ ಒದಗಿದ್ದೇ ಆದರೆ ಆ ಜೀವಿಯು ವಿವಿಧ ಯೋನಿಗಳಲ್ಲಿ ಜನ್ಮ ತಳೆಯುವನು.

### ರಂಗರಾಮಾನುಜಭಾಷ್ಯಮ್

'ವಿಮುಕ್ತಶ್ಚ ವಿಮುಚ್ಯತೇ' ಇತಿ ಪೂರ್ವಮುಕ್ತಾಂ ದ್ವಿತೀಯಾಂ ಪರಮಾಮುಕ್ತಿಮಾಹ—ಶತಂ ಚೈಕಾ ಚ ಹೃದಯಸ್ಯ ನಾಡ್ಯಸ್ತಾಸಾಂ ಮೂರ್ಧಾನಮಭಿನಿಸ್ಸೃತೈಕಾ । ಹೃದಯಸ್ಯ ಪ್ರಧಾನನಾಡ್ಯಃ ಶತಂ ಚೈಕಾ ಚ ಸಂತಿ। ತಾಸಾಂ ಮಧ್ಯೇ ಏಕಾ ಸುಷುಮ್ನಾಖ್ಯಾ ಬ್ರಹ್ಮನಾಡೀ ಮೂರ್ಧಾನಮಭಿನಿಸ್ಸೃತಾ । ತಯೋರ್ಧ್ವಮಾಯನ್ ಅಮೃತತ್ವಮೇತಿ । ತಯಾ ನಾಡ್ಯಾ ಊರ್ಧ್ವಂ ಬ್ರಹ್ಮಲೋಕಂ ಗಚ್ಛನ್ ದೇಶವಿಶೇಷವಿಶಿಷ್ಟಬ್ರಹ್ಮಪ್ರಾಪ್ತಿಪೂರ್ವಕಸ್ವಸ್ವರೂಪಾವಿರ್ಭಾವಲಕ್ಷಣಾಂ ಮುಕ್ತಿಂ ಪ್ರಾಪ್ನೋತಿ ವಿಷ್ವಂಗನ್ಯಾ ಉತ್ಕ್ರಮಣೇ ಭವಂತಿ ॥ ಅನ್ಯಾಸ್ತು ನಾಡ್ಯಃ ವಿಷ್ವಙ್ ಉತ್ಕ್ರಮಣೇ—ನಾನಾವಿಧಸಂಸಾರಮಾರ್ಗೋತ್ಕ್ರಮ

ಣಾಯೋಪಯುಜ್ಯಂತೇ । ವಿಷ್ವಗ್ವಿತತಾ ನಾಡ್ಯೋಽನ್ಯಾ ಅನ್ಯೋತ್ಕ್ರಮಣೇ ಉಪಯುಜ್ಯಂತ ಇತಿ ವ್ಯಾಸಾರ್ಯೈರ್ವ್ಯಾಖ್ಯಾತಮ್ ।

ಇದಂ ಚ ವಾಕ್ಯಂ ಭಗವತಾ ಬಾದರಾಯಣೇನ ಉತ್ಕ್ರಾಂತಿಪಾದೇ ಚಿಂತಿತಮ್। ತಥಾಹಿ; ಮೂರ್ಧನ್ಯಯಾ ಶತಾಧಿಕಯಾ ನಾಡ್ಯಾ ವಿದುಷೋ ಗಮನಮ್ ಅನ್ಯಾಭಿರವಿದುಷಃ ಇತಿ ನಿಯಮೋ ನೋಪಪದ್ಯತೇ । ನಾಡೀನಾಂ ಭೂಯಸ್ತ್ವಾತ್ ಅತಿಸೂಕ್ಷ್ಮತ್ವಾಚ್ಚ ದುರ್ವಿವೇಚತಯಾ ಪುರುಷೇಣೋಪಾದಾತುಮಶಕ್ಯತ್ವಾತ್ । 'ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ' ಇತಿ ಯಾದೃಚ್ಛಿಕೀಮುತ್ಕ್ರಾಂತಿ ಮನುವದತೀತಿ ಯುಕ್ತಮಿತ್ಯೇವಂ ಪೂರ್ವಪಕ್ಷೇ ಪ್ರಾಪ್ತೇ—'ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಶ್ಶತಾಧಿಕಯಾ' ಇತಿ ಸೂತ್ರೇಣ ಸಿದ್ಧಾಂತಿತಮ್। ತಸ್ಯ ಚಾಯಮರ್ಥಃ–ತದೋಕಃ ತಸ್ಯ-ಜೀವಸ್ಯ ಓಕಃ–ಸ್ಥಾನಂ ಹೃದಯಮ್-ಅಗ್ರಜ್ವಲನಮ್–ಅಗ್ರೇ ಜ್ವಲನಂ ಪ್ರಕಾಶನಂ ಯಸ್ಯ ತದಿದಮಗ್ರಜ್ವಲನಮ್ । ತೇನ ಅಗ್ರಜ್ವಲನೇನ ಪ್ರಕಾಶಿತದ್ವಾರೋ ಭವತಿ । 'ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ವಾ ಮೂರ್ಧ್ನೋ ವಾ ಅನ್ಯೇಭ್ಯೋ ವಾ ಶರೀರದೇಶೇಭ್ಯಃ' ಇತಿ ಶ್ರುತೇಃ । ಏತಾವತ್ ವಿದ್ವದವಿದ್ವತ್ಸಾಧಾರಣಮ್ । ವಿದ್ವಾಂಸ್ತು ಶತಾಧಿಕಯಾ ಮೂರ್ಧನ್ಯಯೈವ ನಾಡ್ಯಾ ಉತ್ಕ್ರಾಮತಿ । ನ ಚ ಅಸ್ಯಾಃ ನಾಡ್ಯಾಃ ವಿದುಷೋ ದುರ್ವಿವೇಚತ್ವಮ್ ವಿದ್ವಾನ್ ಹಿ ಪರಮಪುರುಷಾರಾಧನಭೂತಾತ್ಯರ್ಥಪ್ರಿಯವಿದ್ಯಾಸಾಮರ್ಥ್ಯಾತ್ ವಿದ್ಯಾಶೇಷಭೂತತಯಾ ಆತ್ಮನೋಽತ್ಯರ್ಥಪ್ರಿಯಗತ್ಯನುಸ್ಮರಣಯೋಗಾಚ್ಚ ಪ್ರಸನ್ನೇನ ಹಾರ್ದೇನ ಪರಮಪುರುಷೇಣಾನುಗೃಹೀತೋ ಭವತಿ । ತತಸ್ತಾಂ ನಾಡೀಂ ವಿಜಾನಾತೀತಿ ತಯಾ ವಿದುಷೋ ಗತಿರುಪಪದ್ಯತೇ–ಇತಿ ಪ್ರಕೃತಮನುಸರಾಮಃ ॥

## ಅನುವಾದ

'ವಿಮುಕ್ತಶ್ಚ ವಿಮುಚ್ಯತೇ' ಎಂದು ಹಿಂದೆ ಹೇಳಿದ ಪರಮಮುಕ್ತಿಯನ್ನು ವಿವರಿಸುತ್ತಾನೆ. ಶತಂ ಚೈಕಾಚ ...ಅಭಿನಿಸ್ಸೃತೈಕಾ–ಹೃದಯದ ಮುಖ್ಯ ನಾಡಿಗಳು ನೂರು ಮತ್ತು ಒಂದುಇರುತ್ತವೆ. ಅವುಗಳ ನಡುವೆ ಒಂದಾದ 'ಸುಷುಮ್ನಾ' ಎಂಬ ಬ್ರಹ್ಮನಾಡಿಯು ನೆತ್ತಿಯವರೆಗೂ ಹೋಗಿದೆ. ತಯೋರ್ಧ್ವಮಾಯನ್ ಅಮೃತತ್ವಮೇತಿ–ಆ ನಾಡಿಯ ಮೂಲಕ ಊರ್ಧ್ವಮುಖವಾಗಿ ಬ್ರಹ್ಮಲೋಕಕ್ಕೆ ಸಾಗುವವನು ವಿಶಿಷ್ಟವಾದ ದೇಶದಲ್ಲಿ ಕಂಗೊಳಿಸುವ ಬ್ರಹ್ಮಸ್ವರೂಪವನ್ನು ಪಡೆದು ತನ್ನ ಸ್ವಾಭಾವಿಕಸ್ವರೂಪದ ಆವಿರ್ಭಾವವೆಂಬ ಮೋಕ್ಷವನ್ನು ಪಡೆಯುತ್ತಾನೆ. ವಿಷ್ವಂಗನ್ಯಾ ಉತ್ಕ್ರಮಣೇ ಭವಂತಿ–ಇತರ ನಾಡಿಗಳಾದರೋ ನಾನಾ ವಿಧವಾದ ಸಂಸಾರಮಾರ್ಗದಲ್ಲಿ ಉತ್ಕ್ರಮಣಗೊಳ್ಳಲು ಉಪಯೋಗವಾಗುತ್ತವೆ. ಹರಡಿರುವ ಬೇರೆ ಬೇರೆ ನಾಡಿಗಳು ಬೇರೆ ಬಗೆಯ ಉತ್ಕ್ರಮಣಕ್ಕೆ ಸಹಾಯವಾಗುತ್ತವೆ ಎಂದು ಶ್ರುತಪ್ರಕಾಶಿಕಾಚಾರ್ಯರ ವಿವರಣೆ.

ಉತ್ಕ್ರಾಂತಿಪಾದದಲ್ಲಿ ಪೂಜ್ಯರಾದ ಬಾದರಾಯಣರು ಈ ವಾಕ್ಯವನ್ನು ಕುರಿತು ಸಮಾಲೋಚಿಸಿರುವರು. ನೂರೊಂದನೆಯ ಮೂರ್ಧನ್ಯನಾಡಿಯಿಂದ ಬ್ರಹ್ಮಜ್ಞಾನಿಗೆ ಗಮನವು, ಇತರರಿಗೆ ಇತರ ನಾಡಿಗಳಿಂದ ಎಂಬ ನಿಯಮವು ಸಲ್ಲದು. ನಾಡಿಗಳು ಬಹಳ

ವಿರುವುದರಿಂದಲೂ, ಬಹಳ ಸೂಕ್ಷ್ಮವಾಗಿರುವುದರಿಂದಲೂ ಮಧ್ಯನಾಡಿಯು ಇದೇ ಎಂದು ನಿಶ್ಚಯಿಸಲು ಸಾಧ್ಯವಿಲ್ಲದ್ದರಿಂದ ಚೇತನನಿಂದ ಆ ನಾಡಿಯು ಸ್ವೀಕರಿಸಲು ಅಸಾಧ್ಯವು. 'ತಯೋರ್ಧ್ವ....ಭವಂತಿ' ಎಂಬುದು ಅಕಸ್ಮಾತ್ (ಕಾಕತಾಳೀಯವಾಗಿ) ಅಂದರೆ ಬುದ್ಧಿ ಪೂರ್ವಕ ಯತ್ನವಿಲ್ಲದೆಯೇ ಒದಗಿದ ಉತ್ಕ್ರಮಣದ ಬಗ್ಗೆ ಅನುರೂಪವಾಗಿ ತಿಳಿಸುವ ಮಾತು ಎಂಬುದು ಯುಕ್ತವಾಗಿದೆ ಎಂಬ ಪೂರ್ವಪಕ್ಷ ಬಂದಲ್ಲಿ 'ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನು ಗೃಹೀತಃ'ಶತಾಧಿಕಯಾ' (ಬ್ರ.ಸೂ. 4–2–10) ಎಂಬ ಸೂತ್ರದಿಂದ ಸಿದ್ಧಾಂತಾರ್ಥವು ಹೇಳಲ್ಪಟ್ಟಿದೆ. ಇದರ ಅರ್ಥ ಇದು. ತದೋಕಃ–ಜೀವಾತ್ಮನಸ್ಥಿತಿಗೆ ಆಧಾರವಾದ ಹೃದಯ ಪ್ರದೇಶ, ಅಗ್ರಜ್ವಲನಮ್–ಮುಂಭಾಗದಲ್ಲಿ ಪ್ರಕಾಶವು ಏರ್ಪಡುವುದರಿಂದ ಅಗ್ರಜ್ವಲನ ವೆನಿಸುವುದು. ಈ ಅಗ್ರಜ್ವಲನದಿಂದ ಹೃದಯದ್ವಾರದ ಪ್ರಕಾಶವನ್ನು ಹೊಂದಿದವ ನಾಗುತ್ತಾನೆ. 'ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ವಾ ಮೂರ್ಧ್ನೋ ವಾ ಅನ್ಯೇಭ್ಯೋ ವಾ ಶರೀರದೇಶೇಭ್ಯಃ' ಎಂಬುದು ಈ ಬಗ್ಗೆ ಶ್ರುತಿ. (ಅಂತಹ ಈ ಹೃದಯದ ಅಗ್ರಭಾಗವು ಪ್ರಕಾಶಹೊಂದುತ್ತದೆ. ಆ ಪ್ರಕಾಶವನ್ನವಲಂಬಿಸಿ ಈ ಆತ್ಮನು ಕಣ್ಣು–ಶಿರಸ್ಸು ಅಥವಾ ಉಳಿದ ಇನ್ನಾವುದೇ ದೇಹ ಭಾಗಗಳಿಂದ ನಿಷ್ಕ್ರಮಣ ಹೊಂದುತ್ತಾನೆ.) ಇಷ್ಟು ಅಂಶ ಜ್ಞಾನಿಗೂ ಮತ್ತು ಅಜ್ಞಾನಿಗೂ ಸಮಾನವಾದುದು. ಜ್ಞಾನಿಯಾದವನು ನೂರೊಂದನೆಯ ಮೂರ್ಧನ್ಯನಾಡಿಯಿಂದಲೇ ಉತ್ಕ್ರಾಂತಿಹೊಂದುತ್ತಾನೆ. ಈ ನಾಡಿಯ ಬಗ್ಗೆ ಪ್ರತ್ಯೇಕಿಸಿ ತಿಳಿದುಕೊಳ್ಳುವುದು ಜ್ಞಾನಿಗೆ ಅಸಾಧ್ಯವಾದುದೇನೂ ಅಲ್ಲ, ಏಕೆಂದರೆ ಜ್ಞಾನಿಯು ಪರಮಾತ್ಮನಿಗೆ ಆರಾಧನಾ ರೂಪವಾದ ಕಾರಣ ಅತ್ಯಂತ ಪ್ರಿಯವಾದ (ಉಪಾಸನೆಯ) ಬಲದಿಂದಲೂ ಮತ್ತು ವಿದ್ಯಾಂಗಭೂತವಾಗಿದ್ದುದರಿಂದ ಆ ಜೀವಾತ್ಮನಿಗೆ ಅತ್ಯಂತ ಪ್ರಿಯವಾಗಿದ್ದ ಗತಿಯ ಚಿಂತನವು ನೆನಪಿಗೆ ಬಂದುದರಿಂದಲೂ, ಪ್ರಸನ್ನತೆಯನ್ನು ಪಡೆದ ಹಾರ್ದ(ಹೃದಿಸ್ಥ)ನಾದ ಪರಮಪುರುಷನಿಂದ ಅನುಗ್ರಹಿಸಲ್ಪಟ್ಟವನಾಗುತ್ತಾನೆ. ಆದುದರಿಂದ ಆ ನಾಡಿಯನ್ನು (ಸುಲಭವಾಗಿ) ತಿಳಿಯುತ್ತಾನೆ ಎಂಬ ಕಾರಣದಿಂದ ಶ್ರುತ್ಯುಕ್ತವಾದ ಆ ಮಧ್ಯನಾಡಿಯ ಮೂಲಕ ಗತಿಯು ಜ್ಞಾನಿಯಾದವನಿಗೆ ಯುಕ್ತವಾಗಿರುತ್ತದೆ ಎಂದು ಪ್ರಕೃತವಾದ ವಿಷಯ ವನ್ನು ಮುಂದುವರಿಸೋಣ.

## ಭಾಷ್ಯಸಾರ

ನೂರೊಂದು ಸಂಖ್ಯೆಯನ್ನು ಹೊಂದಿರುವ ಪ್ರಧಾನ ನಾಡಿಗಳು ಹೃದಯ ಪ್ರದೇಶ ದಲ್ಲಿ ಇರುತ್ತವೆ. ಅವುಗಳ ಪೈಕಿ ಒಂದು ನಾಡಿ ಮಾತ್ರ ಮಸ್ತಕವನ್ನು ಭೇದಿಸಿಕೊಂಡು ಮೇಲೆ ಹೋಗಿದೆ. ಆ ನಾಡಿಯನ್ನು ಸುಷುಮ್ನಾ, ಬ್ರಹ್ಮನಾಡಿ ಎಂಬ ಶಬ್ದಗಳಿಂದ ವ್ಯವಹರಿಸುತ್ತಾರೆ. ಉಪಾಸಕನಾದವನು ಮರಣಕಾಲದಲ್ಲಿ ಆ ನಾಡಿಯ ಮೂಲಕ ಮೇಲೆ ಸಾಗಿದವನಾಗಿ ಸೂರ್ಯರಶ್ಮಿಗಳ ಮೂಲಕ 'ಅರ್ಚಿಸ್' ಮೊದಲಾದ ಹಾದಿಯಿಂದ ಸಾಕೇತ ಪ್ರಸಿದ್ಧವಾದ ಭಗವಂತನ ಧಾಮವನ್ನು ಸೇರಿ (ತಿರೋಹಿತವಾದ) ಸ್ವಸ್ವರೂಪದ ಆವಿರ್ಭಾವ ವನ್ನು ಹೊಂದಿ ಶ್ರೀರಾಮನೆಂಬ ಪರಬ್ರಹ್ಮದ ಅನುಭವವನ್ನು ಹೊಂದುತ್ತಾನೆ. ಉಳಿದ ನೂರು ಸಂಖ್ಯೆ ನಾಡಿಗಳಾದರೋ ದೇಹದ ಬಹುಭಾಗಗಳಲ್ಲಿ ಬಾಯಿ, ಮೂಗು, ಕಣ್ಣು ಮೊದಲಾದ ದ್ವಾರಗಳ ಮೂಲಕ ಜೀವಾತ್ಮನನ್ನು ಉತ್ಕ್ರಮಣಗೊಳಿಸಲು ಉಪಯೋಗ

ವಾಗುತ್ತವೆ, ಆ ರೀತಿ ಬೇರೆ ಬೇರೆ ನಾಡಿಗಳ ಮೂಲಕ ಬೇರೆ ಬೇರೆ ದ್ವಾರಗಳಿಂದ ಉತ್ಕ್ರಮಣವೇರ್ಪಟ್ಟಲ್ಲಿ ಸುರ-ನರ-ತಿರ್ಯಕ್ ಮೊದಲಾದ ನಾನಾ ಬಗೆಯ ಯೋನಿ ಪ್ರಾಪ್ತಿರೂಪವಾದ ಗತಿಗಳು ಒದಗುತ್ತವೆ. ಇವು ಅಜ್ಞಾನಿಗೆ ಮಾತ್ರ.

ಸುಬೋಧಿನೀಕಾರರು—ಮುಮುಕ್ಷುವಾದವನಿಗೆ ಪರಮಗತಿರೂಪವಾದ ಯೋಗವನ್ನು ಹೇಳಿ ಆ ವಿಷಯದಲ್ಲಿ ಕಾಮನಿವೃತ್ತಿ ಮತ್ತು ಅಭಿಮಾನನಿವೃತ್ತಿ ಇವೆರಡೂ ಕೂಡ ಅಂತರಂಗಸಾಧನವೆಂಬುದಾಗಿ ಹಿಂದೆ ಹೇಳಿದ್ದಾಯಿತು. ಈ ಮುಂದೆ ಮುಕ್ತನಾಗಲಿರುವ ಚೇತನನ ಉತ್ಕ್ರಮಣಪ್ರಕಾರವು ಹೇಳಲ್ಪಡುತ್ತದೆ ಎಂದು ಈ ಮಂತ್ರಕ್ಕೆ ಅವತರಣಿಕೆಯನ್ನು ಕೊಟ್ಟಿರುವರು.



## ಮಂತ್ರ ೧೭

**अङ्गुष्ठमात्रः पुरुषोऽन्तरात्मा सदा जनानां हृदये सन्निविष्टः ।
तं स्वाच्छरीरात् प्रवृहेन्मुञ्जादिवेषीकां धैर्येण ।
तं विद्याच्छुक्रममृतं तं विद्याच्छुक्रममृतमिति ॥**

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ
ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।
ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ।
ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ॥

### ಪ್ರತಿಪದಾರ್ಥ

ಜನಾನಾಮ್–ಎಲ್ಲ ಚೇತನರ, ಹೃದಯೇ–ಹೃದಯಕಮಲದಲ್ಲಿ, ಅಂತರಾತ್ಮಾ ಪುರುಷಃ–ಅಂತರ್ಯಾಮಿಯಾದ ಪರಮಪುರುಷನು, ಅಂಗುಷ್ಠಮಾತ್ರಃ– (ಜೀವಾತ್ಮನು ಮಾಡುವ ಉಪಾಸನೆಗಾಗಿ, ಅಂಗುಷ್ಠಪರಿಮಾಣವನ್ನು ಹೊಂದಿದವನಾಗಿ, ಸದಾ–ಯಾವಾಗಲೂ, ಸಂನಿವಿಷ್ಟಃ–ನೆಲೆಸಿರುವವನು. ತಮ್–ಅಂಗುಷ್ಠಮಾತ್ರಪುರುಷನಾದ ಆ ಅಂತರ್ಯಾಮಿಯನ್ನು ಸ್ವಾತ್ ಶರೀರಾತ್—ತನ್ನ ದೇಹದ ದೆಸೆಯಿಂದ, ಮುಂಜಾತ್ ಇಷೀಕಾಮ್ ಇವ–ಮುಂಜವೆಂಬ ಹುಲ್ಲಿನಿಂದ ಅದರ ನಡುವೆ ಇರುವ ಬೀಜಗಳಿಗೆ ಆಶ್ರಯವಾದ ಪ್ರಧಾನವಾದ ಹುಲ್ಲನ್ನು ಹೇಗೋ ಹಾಗೇ, ಧೈರ್ಯೇಣ–ಬುದ್ಧಿಕೌಶಲದಿಂದ, ಪ್ರವೃಹೇತ್–ಪೃಥಕ್ಕಾಗಿ ತಿಳಿಯಬೇಕು. (ಬೇರ್ಪಡಿಸಿಕೊಳ್ಳಬೇಕು) ತಮ್–ಆ ಪರಮಾತ್ಮನನ್ನು ಶುಕ್ರಂ ಅಮೃತಂ ವಿದ್ಯಾತ್–ಶುದ್ಧವಾದ ಅಮೃತಸ್ವರೂಪವೆಂದು ಧ್ಯಾನಿಸತಕ್ಕದ್ದು. ತಂ ವಿದ್ಯಾಚ್ಛುಕ್ರಮಮೃತಮಿತಿ–ಉಪನಿಷತ್‌ಸಮಾಪ್ತಿಯ ಗುರುತಾಗಿ ಈ ಭಾಗವನ್ನು ಎರಡು ಬಾರಿ ಹೇಳಿದೆ.)

### ತಾತ್ಪರ್ಯ

ಅಂತರ್ಯಾಮಿಯಾದ ಪರಮಪುರುಷನು ಜೀವಿಗಳ ಉಪಾಸನೆಗೆ ಯೋಗ್ಯನಾಗಲು ಅಂಗುಷ್ಠಪ್ರಮಾಣವನ್ನು ತಾನು ಹೊಂದಿ ಎಲ್ಲ ಜೀವಿಗಳ ಹೃದಯದಲ್ಲಿಯೂ ಎಂದೆಂದಿಗೂ ನೆಲೆನಿಂತಿರುತ್ತಾನೆ. ಅವನನ್ನು ತನ್ನ ಶರೀರಕ್ಕಿಂತಲೂ ಮತ್ತು ತನ್ನ ಸ್ವರೂಪಕ್ಕಿಂತಲೂ ಪೃಥಕ್ಕಾಗಿ ಉಪಾಯಕುಶಲತೆಯನ್ನವಲಂಬಿಸಿ ಅರಿಯಬೇಕಾಗಿದೆ. ಹೇಗೆಂದರೆ ಮುಂಜ ಹುಲ್ಲಿನ ಮಧ್ಯದ ಕಾಂಡವನ್ನು ಉಪಾಯವಾಗಿ ಪೃಥಕ್ಕರಿಸುವಂತೆ ಅಂತಹ ಹೃದಯಮಧ್ಯವರ್ತಿಯೂ ಅಂತರ್ಯಾಮಿಯೂ ಆದ ಪರಮಪುರುಷನನ್ನು ಹೇಯಗುಣಸಂಪರ್ಕವಿಲ್ಲದೆ ನಿತ್ಯ ನಿರ್ಮಲವಾಗಿರುವ ಅಮೃತಸ್ವರೂಪನೆಂದು ಚಿಂತಿಸತಕ್ಕದ್ದು.

### ರಂಗರಾಮಾನುಜಭಾಷ್ಯಮ್

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ । ಸ್ಪಷ್ಟೋಽರ್ಥಃ। ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ। ಯಥಾ ದೇವದತ್ತಃ ಸ್ವಾಚ್ಛರೀರಾದ್ವಿಲಕ್ಷಣಃ ಇತ್ಯುಕ್ತೇ ಸ್ವಶಬ್ದಃ ಸಮಭಿವ್ಯಾಹೃತದೇವದತ್ತ ಸಂಬಂಧಿಪರಾಮರ್ಶೀ, ಏವಂ ಪೂರ್ವನಿರ್ದಿಷ್ಟಾಂತರಾತ್ಮಸಂಬಂಧಿಪರಾಮರ್ಶೀ ಸ್ವಶಬ್ದಃ ।

ತತಶ್ಚಾಯಮರ್ಥಃ । —ತಮ್—ಜನಾನಾಮಂತರಾತ್ಮಾನಂ ತಚ್ಛರೀರಭೂತಾತ್ ಜನಶಬ್ದಿತಾಚ್ಚೇತನಾತ್ , ಪ್ರವೃಹೇತ್—ವಿವಿಚ್ಯ ಜಾನೀಯಾತ್ । 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್ ' ಇತಿ ಶ್ರುತ್ಯುಕ್ತರೀತ್ಯಾ ಧಾರಕತ್ವನಿಯಂತೃತ್ವಶೇಷಿತ್ವಾದಿನಾ ವಿಲಕ್ಷಣಂ ಜಾನೀಯಾದಿತ್ಯರ್ಥಃ। ಮುಂಜಾತ್—ತೃಣವಿಶೇಷಾತ್, ಇಷೀಕಾಮ್—ತನ್ಮಧ್ಯವರ್ತಿಸ್ಥೂಲತೃಣವಿಶೇಷಮಿವ ಧೈರ್ಯೇಣ—ಜ್ಞಾನಕೌಶಲೇನೇತಿ ಪೂರ್ವೇಣಾನ್ವಯಃ। ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ । ಉಕ್ತೋಽರ್ಥಃ ದ್ವಿರ್ವಚನಮುಪದೇಶಸಮಾಪ್ತ್ಯರ್ಥಮ್॥

## ಅನುವಾದ

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ (ಅಂತರ್ಯಾಮಿಯಾದ ಪರಮಾತ್ಮನು ಜನರ ಹೃದಯದಲ್ಲಿ ಉಪಾಸನಾನುಕೂಲಕ್ಕಾಗಿ ಅಂಗುಷ್ಠಪರಿಮಾಣವುಳ್ಳವನಾಗಿ, ಯಾವಾಗಲೂ ನೆಲೆಸಿರುವವನು ಎಂಬ ಅರ್ಥ ಸ್ಪಷ್ಟವಾಗಿದೆ.) ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ—ದೇವದತ್ತನು ಸ್ವಶರೀರಕ್ಕಿಂತ 'ವಿಲಕ್ಷಣನು' ಎಂಬ ವಾಕ್ಯದಲ್ಲಿ 'ಸ್ವ'ಶಬ್ದವು (ಎಂಬುದು) ಪ್ರಸ್ತುತನಾದ ದೇವದತ್ತನ ಸಂಬಂಧಿಯಾದುದನ್ನು ಹೇಳಿರುವಂತೆ ಇಲ್ಲಿಯು ಸ್ವಶಬ್ದವು ಪೂರ್ವಪ್ರಸ್ತುತನಾದ ಅಂತರಾತ್ಮನ ಸಂಬಂಧಿಯಾದುದನ್ನು ಹೇಳುವುದಾಗಿದೆ. (ಮಂತ್ರಕ್ಕೆ ಈ ಅರ್ಥವು ಏರ್ಪಡುತ್ತದೆ.) ತಮ್ ಜನರ ಅಂತರಾತ್ಮನಾದ ಪರಮಾತ್ಮನನ್ನು ಅವನ ಶರೀರರೂಪವಾದ ಇಲ್ಲಿಯು ಜನಶಬ್ದದಿಂದ ಹೇಳಲ್ಪಟ್ಟ ಚೇತನನಿಗಿಂತ ಪ್ರವೃಹೇತ್—ಪೃಥಕ್ಕಾಗಿ ಅರಿಯತಕ್ಕದ್ದು. ಅಂದರೆ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್ ' ಎಂಬ ಶ್ರುತಿಯಲ್ಲಿ ಹೇಳಿರುವಂತೆ, ಧಾರಕತ್ವ—ನಿಯಂತೃತ್ವ—ಶೇಷಿತ್ವ ಮುಂತಾದ ಗುಣಗಳಿಂದ (ಪರಮಾತ್ಮನು) ವಿಲಕ್ಷಣನೆಂದು ತಿಳಿಯಬೇಕೆಂದರ್ಥ. ಮುಂಜಾತ್—ಮುಂಜವೆಂಬ ಹುಲ್ಲಿನಿಂದ ಇಷೀಕಾಮ್—ಅದರ ಮಧ್ಯದಲ್ಲಿರುವ ದಪ್ಪವಾದ ಹುಲ್ಲನ್ನು ಬೇರ್ಪಡಿಸುವಂತೆ, ಧೈರ್ಯೇಣ—ಜ್ಞಾನಕೌಶಲದಿಂದ ಬೇರ್ಪಡಿಸಿ ತಿಳಿಯಬೇಕೆಂದು ಹಿಂದಕ್ಕೆ ಅನ್ವಯಿಸಬೇಕು. ತಂ ವಿದ್ಯಾಚ್ಛುಕ್ರಮಮೃತಮ್' ತಂ ವಿದ್ಯಾಚ್ಛುಕ್ರಮಮೃತಮಿತಿ—ಅರ್ಥವು ಹಿಂದೆ ಹೇಳಲಾಗಿದೆ. ಎರಡು ಸಲ ಹೇಳಿರುವುದು ಉಪದೇಶಮುಕ್ತಾಯ ಸೂಚಕ.

## ಭಾಷ್ಯಸಾರ

ಅಂತರ್ಯಾಮಿಯಾದ ಪರಮಪುರುಷನು ಜನ್ಮತಾಳುವಂತಹ ಜೀವಿಗಳ ಹೃದಯಪ್ರದೇಶದಲ್ಲಿ ಅಂಗುಷ್ಠಮಾತ್ರ(ಹೆಬ್ಬೆರಳಿನಗಾತ್ರ) ಪರಿಮಿತನಾಗಿ, ಸರ್ವಕಾಲದಲ್ಲಿಯೂ ಪ್ರವೇಶಗೊಂಡು ನೆಲೆಸಿರುತ್ತಾನೆ. ಅವನನ್ನು ತನ್ನ ಕರ್ಮಾರ್ಜಿತವಾದ ಶರೀರದ ದೆಸೆಯಿಂದ ಪ್ರಮಾದ ಹೊಂದದ ಮನಸ್ಸೆಂಬ ಸಾಧನವನ್ನವಲಂಬಿಸಿ ವಿವೇಚನಾಪೂರ್ವಕ ತಿಳಿಯತಕ್ಕದ್ದು. ಹೇಗೆಂದರೆ ಮುಂಜಹುಲ್ಲಿನ ನಡುವೆ ಇರುವ ಸೂಕ್ಷ್ಮವಾದ ಕಾಂಡ(ಶಲಾಕೆ) ವನ್ನು ಪೃಥಕ್ಕರಿಸುವಂತೆ ಅಂದರೆ ಈ ಸ್ಥೂಲವಾದ ಶರೀರದಲ್ಲಿ ನೆಲೆಸಿರುವವನು ಜೀವನು. ಅವನಲ್ಲಿಯೂ ಸಹ ನೆಲೆಸಿರುವವನು ಅತ್ಯಂತಸೂಕ್ಷ್ಮವಾದ ಸರ್ವಾಂತರ್ಯಾಮಿ ಪರಮಾತ್ಮನೂ ಆದ ಕಾರಣ ಸ್ಥೂಲವಾದ ವಸ್ತುವಿನಿಂದ ಸೂಕ್ಷ್ಮವಾದ ಪರಮಾತ್ಮತತ್ತ್ವವನ್ನು ಅಪ್ರಮತ್ತನಾಗಿ ತಿಳಿಯತಕ್ಕದ್ದು. ಆ ಪರಮಾತ್ಮನನ್ನು ಅಖಿಲಹೇಯಪ್ರತ್ಯನೀಕನೂ, ಸರ್ವಪ್ರಕಾಶಕನೂ ಆದ ನಿರುಪಾಧಿಕ ಅಮೃತತ್ವಸಂಪನ್ನನೆಂದು ಧ್ಯಾನಿಸತಕ್ಕದ್ದು.

ಸುಬೋಧಿನೀಕಾರರು-ಅಂಗುಷ್ಠಮಾತ್ರಪುರುಷನು ಅಂತರ್ಯಾಮಿಯಾಗಿ ನಮ್ಮೆಲ್ಲರ ಹೃದಯದಲ್ಲಿ ಸದಾ ಸರ್ವಕಾಲ ಎಡಬಿಡದೆ ನೆಲೆಗೊಂಡಿರುವನು. ಅವನನ್ನು ತನ್ನ ಭೋಗಕ್ಕಾಗಿ ಕರ್ಮದ ಮೂಲಕ, ತಾನೇ ಗಳಿಸಿಕೊಂಡ ಈ ಶರೀರಕ್ಕಿಂತ ಪೃಥಕ್ಕಾಗಿ ಅಪ್ರಮಾದವನ್ನವಲಂಬಿಸಿ ಅರಿಯತಕ್ಕದ್ದು. ಅಂದರೆ ತನ್ನ ಶರೀರದಲ್ಲೇ ನಿಯಾಮಕನ ಸಂಶ್ಲಿಷ್ಟನಾಗಿದ್ದರೂ ಅವನನ್ನು ಸೂಕ್ಷ್ಮಬುದ್ಧಿಯಿಂದ ವಿಶ್ಲಿಷ್ಟನಾಗಿ ಅರಿಯತಕ್ಕದ್ದು. ದೇಹಸಂಪರ್ಕವಿದ್ದರೂ ದೇಹಕೃತವಾದ ಸುಖದುಃಖಾದಿ ಭೋಗಸಂಬಂಧವಿಲ್ಲದವನೆಂದು ಭಾವಿಸತಕ್ಕದ್ದು ಅಥವಾ ಆ ಅಂತರ್ಯಾಮಿಯನ್ನು ಅವನದೇ ಆದ ಚೇತನಾಚೇತನರೂಪವಾದ ಶರೀರಕ್ಕಿಂತ ಪೃಥಕ್‌ಭಾವನೆಯಿಂದ ಅರಿಯತಕ್ಕದ್ದು.



## ಮಂತ್ರ ೧೮

मृत्युप्रोक्तां न(ना)चिकेतोऽथ लब्ध्वा विद्यामेतां योगविधिं च कृत्स्नम् ।
ब्रह्म प्राप्तो विरजोऽभूद्विमृत्युरन्योऽप्येवं यो विदध्यात्ममेव ॥

ಮೃತ್ಯುಪ್ರೋಕ್ತಾಂ ನ(ನಾ)ಚಿಕೇತೋಽಥ ಲಬ್ಧ್ವಾ
ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್।
ಬ್ರಹ್ಮ ಪ್ರಾಪ್ತೋ ವಿರಜೋಽಭೂದ್ವಿಮೃತ್ಯು-
ರನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ

### ಪ್ರತಿಪದಾರ್ಥ

ನಚಿಕೇತಃ—ನಚಿಕೇತನು, ಮೃತ್ಯುಪ್ರೋಕ್ತಾಮ್—ಯಮದೇವನಿಂದ ಉಪದೇಶಿಸಲ್ಪಟ್ಟ, ಏತಾಂ ವಿದ್ಯಾಮ್—ಈ ಬ್ರಹ್ಮವಿದ್ಯೆಯನ್ನು, ಕೃತ್ಸ್ನಂ ಯೋಗವಿದಿತಂ ಚ—ಇಂದ್ರಿಯಸಂಯಮರೂಪವಾದ ಎಲ್ಲ ಬಗೆಯ ಯೋಗವಿಧಾನವನ್ನೂ, ಲಬ್ಧ್ವಾ—ಹೊಂದಿ, ಅಥ—ಅನಂತರ, ಬ್ರಹ್ಮ ಪ್ರಾಪ್ತಃ—ಪರಬ್ರಹ್ಮವನ್ನು ಹೊಂದಿದವನಾಗಿ, ವಿರಜಃ ವಿಮೃತ್ಯುಃ ಅಭೂತ್—ವಿರಜತ್ವ ವಿಮೃತ್ಯುತ್ವಗಳನ್ನೊಳಗೊಂಡ ಅಷ್ಟಗುಣಗಳ ಆವಿರ್ಭಾವವನ್ನು ತಳೆದನು, ಏವಮ್—ಇದೇ ರೀತಿ, ಅನ್ಯೋಽಪಿ ಯಃ—ಬೇರೆಯವನು ಯಾರೇ ಆದರೂ, ಅಧ್ಯಾತ್ಮಮೇವ ವಿತ್—ಅಧ್ಯಾತ್ಮಜ್ಞಾನ ಒಂದನ್ನೇ ಪಡೆದವನು ಏವಮ್—ನಚಿಕೇತನಂತೆಯೇ ಆಗುತ್ತಾನೆ.

### ತಾತ್ಪರ್ಯ

ನಚಿಕೇತನು ಮೃತ್ಯುದೇವನಿಂದ ಉಪದೇಶದ ಮೂಲಕ ಈ ಅಧ್ಯಾತ್ಮವಿದ್ಯೆಯನ್ನೂ ಅದನ್ನು ಸಾಧಿಸಲು ಬೇಕಾದ ಯೋಗವಿಧಿವಿಧಾನಾದಿಗಳೆಲ್ಲವನ್ನೂ ಹೊಂದಿ ಅದರ ಮೂಲಕ ಪರಬ್ರಹ್ಮವನ್ನು ಪಡೆದು ಸ್ವಸ್ವರೂಪವಾದ ಅಪಹತಪಾಪ್ಮತ್ವಾದಿ ಎಂಟುಗುಣಗಳ ಆವಿರ್ಭಾವವನ್ನು ಹೊಂದಿದನು. (ಪರಮಮುಕ್ತಿಯನ್ನು ಹೊಂದಿದನು) ಯಾವುದೇ ಚೇತನರಾದರೂ ಇವನಂತೆ ಅಧ್ಯಾತ್ಮಜ್ಞಾನವೊಂದನ್ನೇ ಲಕ್ಷ್ಯವಾಗಿಟ್ಟು ಸಾಧಿಸಿದರೆ ಇವನಂತೆಯೇ ಬ್ರಹ್ಮಪ್ರಾಪ್ತಿಸ್ವಸ್ವರೂಪಾವಿರ್ಭಾವಗಳನ್ನು ಹೊಂದುವುದರಲ್ಲಿ ಯಾವುದೇ ಸಂಶಯವಿಲ್ಲವೆಂಬುದಾಗಿ ವಿದ್ಯೆಯ ಉಪಸಂಹಾರ.

### ರಂಗರಾಮಾನುಜಭಾಷ್ಯಮ್

ಆಖ್ಯಾಯಿಕಾರ್ಥಮುಪಸಂಹರತಿ—ಮೃತ್ಯುಪ್ರೋಕ್ತಾಂ ನಚಿಕೇತೋಽಥ ಲಬ್ಧ್ವಾ ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್ । ಬ್ರಹ್ಮ ಪ್ರಾಪ್ತೋ ವಿರಜೋಽಭೂತ್ ವಿಮೃತ್ಯುಃ । ನಚಿಕೇತಾಃ ಮೃತ್ಯುಪ್ರೋಕ್ತಾಮಾತ್ಮವಿದ್ಯಾಮ್, 'ಯದಾ ಪಂಚ' ಇತ್ಯಾದಿನಾ ಉಕ್ತಂ ಯೋಗವಿಧಿಂ ಚ ಲಬ್ಧ್ವಾ—ಪ್ರಾಪ್ಯ 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಇತಿ ಶ್ರುತ್ಯುಕ್ತರೀತ್ಯಾ ಬ್ರಹ್ಮ ಪ್ರಾಪ್ಯ ಆವಿರ್ಭೂತಗುಣಾಷ್ಟಕೋಽಭೂದಿತ್ಯರ್ಥಃ । ಅನ್ಯೋಽಪ್ಯೇವಂ ಯೋ ವಿತ್ ಅಧ್ಯಾತ್ಮಮೇವ-ಅಧ್ಯಾತ್ಮ ವಿದ್ಯಾಂ ಯಃ ಅನ್ಯೋಽಪಿ ವೇತ್ತಿ ಸೋಽಪಿ ಏವಮೇವ-ನಚಿಕೇತಾ ಇವೈವ ಭವತೀತ್ಯರ್ಥಃ ।

## ಅನುವಾದ

ಈವರೆಗೂ ಹೇಳಿದ ಕಥೆಯ ಫಲವನ್ನು ಶ್ರುತಿಯು ಮುಕ್ತಾಯಗೊಳಿಸುತ್ತದೆ. ಮೃತ್ಯುಪ್ರೋಕ್ತಾಮ್....ವಿರಜೋಽಭೂತ್ ವಿಮೃತ್ಯುಃ ನಚಿಕೇತನು ಯಮನು ಹೇಳಿದ ಆತ್ಮ ವಿದ್ಯೆಯನ್ನೂ, 'ಯದಾ ಪಂಚಾವತಿಷ್ಠಂತೇ' (ಕ.ಉ. 6–10) ಮುಂತಾದ ಭಾಗದಿಂದ ತಿಳಿಸಿದ ಯೋಗವಿದ್ಯೆಯನ್ನೂ, ಲಬ್ಧ್ವಾ—ಹೊಂದಿ, 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' (ಛಾಂ. ಉ. 8–3) ಎಂಬ ಶ್ರುತಿಯಲ್ಲಿ ಹೇಳಿದಂತೆ ಬ್ರಹ್ಮವನ್ನು ಸೇರಿ ಅಪಹತಪಾಪ್ಮತ್ವ ಮುಂತಾದ ಎಂಟು ಗುಣಗಳ ಪ್ರಕಾಶಹೊಂದಿದವನಾದನು ಎಂದರ್ಥ. ಅನ್ಯೋಽಪ್ಯೇವಂ ಯೋ ವಿತ್ ಅಧ್ಯಾತ್ಮಮೇವ–ಈ ಅಧ್ಯಾತ್ಮವಿದ್ಯೆಯನ್ನು ಬೇರಾವನು ಅರಿಯುತ್ತಾನೋ ಅವನೂ ಸಹ, ಏವಮೇವ-ನಚಿಕೇತನಂತೆಯೇ ಆಗುತ್ತಾನೆ ಎಂದರ್ಥ.

## ಭಾಷ್ಯಸಾರ

ಯಮನು ಪೂರ್ತಿ ಉಪದೇಶ ಮಾಡಿದ ಮೇಲೆ ಗೌತಮಪುತ್ರನಾದ ನಾಚಿಕೇತನು (ನಚಿಕೇತಾ ಏವ ನಾಚಿಕೇತಃ) ಮೃತ್ಯುದೇವನಿಂದ ಉಪದೇಶರೂಪವಾಗಿ ತನಗೆ ಬಂದ ಪರಮಾತ್ಮಸ್ವರೂಪವನ್ನು ತಿಳಿಸುವಂತಹ ವಿದ್ಯೆಯನ್ನು ಸಮಗ್ರವಾದ 'ಯದಾ ಪಂಚಾವತಿಷ್ಠಂತೇ' ಇತ್ಯಾದಿಯಾಗಿ ಹೇಳಿದ ಯೋಗವಿಧಿಯನ್ನೂ ಪಡೆದುಕೊಂಡವನಾಗಿ, ಪರಮಾತ್ಮನನ್ನು ಹೊಂದಿ ಸ್ವಸ್ವರೂಪಾವಿರ್ಭಾವವನ್ನು ಪಡೆದು 'ವಿರಜಃವಿಮೃತ್ಯುಃ— ಎನಿಸಿಕೊಂಡನು. ಅಂದರೆ ಗುಣಾಷ್ಟಕದ ಆವಿರ್ಭಾವ ಪಡೆದನು. ಈ ನಚಿಕೇತನಂತೆಯೇ ಮತ್ಯಾರೇ ಆದರೂ ಶರೀರಮಧ್ಯದಲ್ಲಿರುವ ಪರಮಾತ್ಮಸ್ವರೂಪವನ್ನು ಅರಿತು ಆ ಪರಮಾತ್ಮನನ್ನು ತನ್ನ ಶರೀರದಿಂದ ಪೃಥಕ್ಕಾಗಿ ಅರಿಯುತ್ತಾನೋ ಅವನೂ ಕೂಡ ನಚಿಕೇತನಂತೆಯೇ ಬ್ರಹ್ಮೋಪಸಂಪತ್ತಿ ಪಡೆದು ಗುಣಾಷ್ಟಕಾವಿರ್ಭಾವವನ್ನು ಹೊಂದುತ್ತಾನೆ. ಅಥವಾ ಜೀವಾಂತರ್ಯಾಮಿಯಾದ ಪರಮಾತ್ಮನನ್ನು ಇವನಂತೆಯೇ ಜೀವಾತ್ಮನಿಗಿಂತಲೂ ಪೃಥಕ್ಕಾಗಿ ವಿವೇಚನೆಯಿಂದ ಅರಿಯುತ್ತಾನೋ ಅವನೂ ಸಹ ಇವನಂತೆಯೇ ಆಗುತ್ತಾನೆ.

'ಅಧ್ಯಾತ್ಮವಿತ್' ಎಂಬುದಕ್ಕೆ 'ಆತ್ಮನಿ....ಶರೀರೇ' ಇತಿ ಅಧ್ಯಾತ್ಮಂ ಶರೀರಮಧ್ಯೆ ಎಂದರ್ಥ. ಶರೀರಮಧ್ಯದಲ್ಲಿರುವ ಪರಮಾತ್ಮನನ್ನು ಮುಂಜಹುಲ್ಲಿನ ಮಧ್ಯದಲ್ಲಿರುವ (ಸೂಕ್ಷ್ಮವಾದ ಕಾಂಡವನ್ನು ಹೇಗೋ ಹಾಗೇ) ಶರೀರದಿಂದ ಪೃಥಕ್ಕಾಗಿ ಯಾರು ಅರಿಯುತ್ತಾರೋ ಎಂದು, 'ಅಧ್ಯಾತ್ಮಮ್' ಎಂಬಲ್ಲಿ ಆತ್ಮಪದಕ್ಕೆ ಶರೀರಪರವಾದ ವ್ಯಾಖ್ಯಾನವನ್ನು 'ಯದ್ವಾ' ಎಂಬುದಾಗಿ ಆತ್ಮಪದಕ್ಕೆ ಜೀವಪರವಾದ ವ್ಯಾಖ್ಯಾನವನ್ನು ಮಾಡಿ ಜೀವಾಂತರ್ಯಾಮಿಯಾದ ಪರಮಾತ್ಮನನ್ನು ಜೀವಾತ್ಮನಿಗಿಂತಲೂ ಪೃಥಕ್ಕಾಗಿ ಯಾರು ಅರಿಯುವರೋ ಎಂದು ವ್ಯಾಖ್ಯಾನಿಸಿರುವರು.



## ಶಾಂತಿಪಾಠಃ

**स ह नाववतु । सह नौ भुनक्तु । सह वीर्यं करवावहै ।**
**तेजस्विनावधीतमस्तु मा विद्विषावहै ।**
**ॐ शान्तिः शान्तिः शान्तिः ।। हरिः ओम् ।।**

ಸ ಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ
ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ।
ಓಂ ಶಾಂತಿಃ ಶಾಂತಿಃ ಶಾಂತಿಃ ।।ಹರಿಃ ಓಮ್।।

### ಪ್ರತಿಪದಾರ್ಥ

**ಸ ಹ** —ಈ ಉಪನಿಷತ್ತಿನಿಂದ ಪ್ರತಿಪಾದ್ಯನಾದ ಪರಮಾತ್ಮನು, **ನೌ**—ಗುರುಶಿಷ್ಯರಾದ ನಮ್ಮಿಬ್ಬರನ್ನು **ಅವತು**—ಇಬ್ಬರಿಗೂ ಯಾವುದೇ ದೋಷವೂ ಒದಗದಂತೆ ರಕ್ಷಿಸಲಿ. (ಪರಮಾತ್ಮನು), **ನೌ ಸಹ**—ಗುರುಶಿಷ್ಯರಾದ ನಮ್ಮಿಬ್ಬರನ್ನೂ ಒಟ್ಟಿಗೆ **ಭುನಕ್ತು**—ಪಾಲಿಸಲಿ, **ಸಹ**—ಜೊತೆಗೇನೇ (ಆವಾಮ್—ನಾವಿಬ್ಬರೂ), **ವೀರ್ಯಮ್**—ವಿದ್ಯೆಯಿಂದ, ಒದಗುವ ಸಾಮರ್ಥ್ಯವನ್ನು ಅಂದರೆ ಫಲಪ್ರಾಪ್ತಿಯನ್ನು, **ಕರವಾವಹೈ**—ಮಾಡುವರಾಗೋಣ, **ನೌ**—ನಮ್ಮಿಬ್ಬರಿಂದಾಗುವ, **ಅಧೀತಮ್**—ಅಧ್ಯಯನವು, **ತೇಜಸ್ವಿ ಅಸ್ತು**—ವೀರ್ಯವತ್ತರವಾಗಲಿ, **ಮಾ ವಿದ್ವಿಷಾವಹೈ**—ನಾವು ಪರಸ್ಪರ ದ್ವೇಷಿಸದಿರುವಂತಾಗಲಿ, (ಅನುರಾಗವುಳ್ಳವರಾಗಿ ಇರೋಣ), **ಓಂ ಶಾಂತಿಃ ಶಾಂತಿಃ ಶಾಂತಿಃ**—ನಮ್ಮ ಉಳಿದ ಬೇರೆ ಬೇರೆ ದೋಷಗಳಿಗೆ ಶಮನವಾಗಲಿ, ಶಮನವಾಗಲಿ, ವಿದ್ಯಾವಿರೋಧಿಯಾದ ಎಲ್ಲ ದೋಷಗಳೂ ನಿಶ್ಶೇಷನಾಶಹೊಂದಲಿ.

### ತಾತ್ಪರ್ಯ

ಈ ಉಪನಿಷತ್ಪ್ರತಿಪಾದ್ಯನಾದ ಪರಮಾತ್ಮನು ನಮ್ಮಿಬ್ಬರನ್ನು ರಕ್ಷಿಸಲಿ, ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ, ವಿದ್ಯೆಯ ಫಲರೂಪವಾದ ಸಾಮರ್ಥ್ಯವನ್ನು ನಮ್ಮಿಬ್ಬರಿಗೂ ಕೊಡಲಿ, ನಮ್ಮಿಬ್ಬರ ಅಧ್ಯಯನವು ವೀರ್ಯವತ್ತರವಾಗಲಿ. ನಾವು ಪರಸ್ಪರದ್ವೇಷಿಸದಿರುವಂತೆ ಆಗಲಿ, ಸಮಸ್ತಪಾಪ ದೋಷವು ಪರಿಹೃತವಾಗಲಿ.

### ರಂಗರಾಮಾನುಜಭಾಷ್ಯಮ್

ಶಿಷ್ಯಾಚಾರ್ಯಯೋಃ ಶಾಸ್ತ್ರೀಯನಿಯಮಾತಿಲಂಘನಕೃತದೋಷಪ್ರಶಮನಾರ್ಥಾ ಶಾಂತಿರುಚ್ಯತೇ । ಸಹ ನಾವವತು। ಸಃ–ವಿದ್ಯಾಪ್ರಕಾಶಿತಃ ಪರಮಾತ್ಮಾ । ಹಶಬ್ದಃ ಪ್ರಸಿದ್ಧೌ। ನೌ–ಶಿಷ್ಯಾಚಾರ್ಯೌ, ಅವತು–ಸ್ವಸ್ವರೂಪಪ್ರಕಾಶನೇನ ರಕ್ಷತು। ಸಹ ನೌ ಭುನಕ್ತು–ವಿದ್ಯಾಪ್ರಚಯದ್ವಾರಾ ಆವಾಂ ಸಹೈವ ಪರಿಪಾಲಯತು । ಯದ್ವಾ ವಿಶ್ಲೇಷಮಂತರೇಣ ಆವಾಂ ಸಹಿತಾವೇವ ಯಥಾ ಸ್ಯಾವ, ತಥಾ ಪರಿಪಾಲಯತು ಇತ್ಯರ್ಥಃ । ಸಹ ವೀರ್ಯಂ ಕರವಾವಹೈ–ಸಹ ಸನಿಯಮಕವಿದ್ಯಾಪ್ರದಾನೇನ ವಿದ್ಯಾಯಾಃ ಸಾಮರ್ಥ್ಯನಿಷ್ಪಾದಯಾವಹೈ । ನಿಯಮಾಭಾವೇ ವಿದ್ಯಾ ನಿರ್ವೀರ್ಯಾ ಭವತಿ ಇತಿ ಭಾವಃ । ತೇಜಸ್ವಿ ನಾವಧೀತಮಸ್ತು । ನೌ–ಆವಯೋಃ ಯದಧೀತಮ್, ತತ್ ತೇಜಸ್ವಿ ಅಸ್ತು ವೀರ್ಯವತ್ತರಂ ಭವತ್ವಿತ್ಯರ್ಥಃ । ಮಾ ವಿದ್ವಿಷಾವಹೈ–'ಯಶ್ಚಾಧರ್ಮೇಣ ವಿಬ್ರೂತೇ ಯಶ್ಚಾಧರ್ಮೇಣ ಪೃಚ್ಛತಿ । ತಯೋರನ್ಯತರಃ ಪ್ರೈತಿ ವಿದ್ವೇಷಂ ವಾಧಿಗಚ್ಛತಿ' ಇತಿ ಸ್ಮೃತ್ಯುಕ್ತರೀತ್ಯಾ

ಅಧರ್ಮಾಧ್ಯಯನಾಧ್ಯಾಪನನಿಮಿತ್ತೋ ದ್ವೇಷ ಆವಯೋಃ ಮಾ ಭೂತ್ ಇತ್ಯರ್ಥಃ । ಓಂ ಶಾಂತಿಃ ಶಾಂತಿಃ ಶಾಂತಿಃ । ತ್ರಿರ್ವಚನಂ ಸರ್ವದೋಷಶಾಂತ್ಯರ್ಥಮ್ ॥

ಅನುವಾದ

ಶಿಷ್ಯ ಮತ್ತು ಆಚಾರ್ಯರಿಗೆ ಶಾಸ್ತ್ರದಲ್ಲಿ ಹೇಳಿದ ನಿಯಮವನ್ನು ಮೀರುವುದರಿಂದ ಉಂಟಾಗಬಹುದಾದ ದೋಷಪರಿಹಾರಕ್ಕಾಗಿ ಶಾಂತಿಮಂತ್ರವು ಹೇಳಲ್ಪಡುತ್ತದೆ. ಸಹ ನಾವವತು–ಸಃ- ಈ ವಿದ್ಯೆಯಿಂದ ಪ್ರಕಾಶಗೊಂಡ ಪರಮಾತ್ಮನು. 'ಹ' ಶಬ್ದವು ಪ್ರಸಿದ್ಧಾರ್ಥದಲ್ಲಿದೆ ! ನೌ –ಶಿಷ್ಯ ಮತ್ತು ಆಚಾರ್ಯರಿಬ್ಬರನ್ನೂ, ಅವತು–ತನ್ನ ಸ್ವರೂಪವನ್ನು ಪ್ರಕಾಶಪಡಿಸುವುದರ ಮೂಲಕ ರಕ್ಷಿಸಲಿ. ಸಹ ನೌ ಭುನಕ್ತು—ವಿದ್ಯಾಭಿವೃದ್ಧಿಯ ಮೂಲಕ ಒದಗುವ ದೋಷದಿಂದಾಗಿ ಪರಸ್ಪರ ದ್ವೇಷಕ್ಕೆ ಭಾಗಿಗಳಾಗದಿರೋಣ. ಮನವು ಈ ನಿಯಮೋಲ್ಲಂಘನದಿಂದ ನಮ್ಮಿಬ್ಬರನ್ನೂ ಒಟ್ಟಿಗೆ ಪಾಲಿಸಲಿ ಅಥವಾ ನಮ್ಮಿಬ್ಬರ ಅಗಲಿಕೆಯಿಲ್ಲದೆ ನಾವಿಬ್ಬರು ಒಟ್ಟಿಗೆ ಇರುವಂತೆ ರಕ್ಷಿಸಲಿ ಎಂದರ್ಥ. ಸಹ ವೀರ್ಯಂ ಕರವಾವಹೈ–ಶಾಸ್ತ್ರೋಕ್ತವಾದ ನಿಯಮದೊಡನೆ ವಿದ್ಯೆಯನ್ನು ಉಪದೇಶಿಸುವುದರ ಮೂಲಕ ವಿದ್ಯೆಯ ಸಾಮರ್ಥ್ಯವನ್ನು ನಾವಿಬ್ಬರೂ ಒಂದುಗೂಡಿ ಉಂಟುಮಾಡುವಂತಾಗಲಿ. ನಿಯಮವಿಲ್ಲದಿದ್ದಲ್ಲಿ ವಿದ್ಯೆಯು ನಿರ್ವೀರ್ಯವಾಗುತ್ತದೆ. ಅಂದರೆ ಫಲವನ್ನು ಕಳೆದುಕೊಳ್ಳುತ್ತದೆ ಎಂದು ತಾತ್ಪರ್ಯ. ತೇಜಸ್ವಿ ನಾವಧೀತಮಸ್ತು. ನೌ–ನಮ್ಮಿಬ್ಬರ ಅಧ್ಯಯನವಾವುದುಂಟೋ ಅದು ತೇಜಸ್ವಿ ಅಸ್ತು–ವೀರ್ಯವತ್ತರವಾಗಲಿ. ಎಂದರ್ಥ. ಮಾ ವಿದ್ವಿಷಾವಹೈ-'ಯಶ್ಚಾಧರ್ಮೇಣ ವಿಬ್ರೂತೇ ಯಶ್ಚಾಧರ್ಮೇಣ ಪೃಚ್ಛತಿ । ತಯೋರನ್ಯತರಃ ಪ್ರೈತಿ ವಿದ್ವೇಷಂ 'ವಾಧಿಗಚ್ಛತಿ' (ಯಾವನೊಬ್ಬ ಆಚಾರ್ಯನು ಧರ್ಮವನ್ನವಲಂಬಿಸದೆ ಉಪದೇಶಿಸುವನೋ ಯಾವನೊಬ್ಬ ಶಿಷ್ಯನು ಧರ್ಮದ ಆಸರೆಯಿಲ್ಲದೆ ಪ್ರಶ್ನಿಸುವನೋ ಅವರಿಬ್ಬರಲ್ಲಿ ಒಬ್ಬನು ಮರಣ ಹೊಂದುವನು ಅಥವಾ ವಿದ್ವೇಷವನ್ನಾದರೂ ಹೊಂದುವನು) ಎಂದು ಸ್ಮೃತಿಯಲ್ಲಿ ಹೇಳಿರುವಂತೆ ಅಧರ್ಮದಿಂದ ಕೂಡಿದ ಅಧ್ಯಯನ-ಅಧ್ಯಾಪನಗಳಿಂದ ಉಂಟಾಗುವ ದೋಷವು ನಮ್ಮಿಬ್ಬರಿಗೂ ಬಾರದಿರಲಿ ಎಂದರ್ಥ. ಓಂ ಶಾಂತಿಃ ಶಾಂತಿಃ ಶಾಂತಿಃ–ಮೂರು ಸಲ 'ಶಾಂತಿ' ಎಂದು ಹೇಳಿರುವುದು ಎಲ್ಲ ವಿಧವಾದ ದೋಷಗಳ ಪರಿಹಾರಕ್ಕಾಗಿ ಎಂದರ್ಥ.

ಭಾಷ್ಯಸಾರ

ಗುರುವು ವಿದ್ಯೆಯನ್ನುಪದೇಶಿಸುವಾಗ ಮತ್ತು ಶಿಷ್ಯನು ವಿದ್ಯೆಯನ್ನು ಗ್ರಹಿಸುವಾಗ ಪ್ರಮಾದದ ಸಲುವಾಗಿ ಶಾಸ್ತ್ರೋಕ್ತವಾದ ನಿಯಮಗಳ ಉಲ್ಲಂಘನ ಒದಗಿದ್ದಲ್ಲಿ ಅದರಿಂದ ಉಂಟಾಗುವ ದೋಷವನ್ನು ಶಮನಗೊಳಿಸಲು ಶಾಂತಿಮಂತ್ರವು ಪಠಿಸಲ್ಪಡುತ್ತದೆ. ಯಾವ ಪರಮಾತ್ಮನು ಉಪನಿಷತ್ತುಗಳಲ್ಲಿ ಪ್ರಸಿದ್ಧನೋ ಅವನು ಶಿಷ್ಯಾಚಾರ್ಯರಾದ ನಮ್ಮಿಬ್ಬರನ್ನು ನಮಗೆ ತನ್ನ ಸ್ವರೂಪವನ್ನು ಪ್ರಕಾಶಪಡಿಸುವುದರ ಮೂಲಕ ರಕ್ಷಿಸಲಿ. ಪ್ರಸಿದ್ಧನಾದ ಪರಮೇಶ್ವರನು ನಮಗೆ ವಿದ್ಯಾಫಲವನ್ನು ಪ್ರಕಾಶಪಡಿಸುವುದರ ಮೂಲಕ ನಮ್ಮಿಬ್ಬರನ್ನೂ ಪಾಲಿಸಲಿ. ನಾವಿಬ್ಬರೂ ನಿಯಮಪೂರ್ವಕವಾದ ವಿದ್ಯಾಗ್ರಹಣ ಅಂತಹ (ನಿಯಮಪೂರ್ವಕ) ವಿದ್ಯಾಪ್ರದಾನ ಇವುಗಳಿಂದ ವಿದ್ಯೆಯ ಸಾಮರ್ಥ್ಯವನ್ನು ಸಂಪಾದಿಸುವಂತಾಗೋಣ. ನಿಯಮವನ್ನು ಮೀರಿದರೆ ವಿದ್ಯೆಯ ಸಾಮರ್ಥ್ಯವು ಅಳಿದು ಹೋಗುವುದು. ನಮ್ಮಿಬ್ಬರಿಂದಾದ ವಿದ್ಯಾಧ್ಯಯನವು ವೀರ್ಯವತ್ತರವಾಗಲಿ. ಶಿಷ್ಯಾಚಾರ್ಯರಾದ ನಾವಿಬ್ಬರೂ ಪ್ರಮಾದದಿಂದಾದ ನಿಯಮೋಲ್ಲಂಘನದಿಂದ ಇಂತಹ ದೋಷವನ್ನೇ

ಹೇಳಿರುವರು (ಯಶ್ಚಾಥರ್ವಣೇಣ). ಓಂ ಶಾಂತಿಃ ಶಾಂತಿಃ ಶಾಂತಿಃ ಎಂದು ಮೂರು ಬಾರಿ ಹೇಳಿರುವುದು ಸಮಸ್ತದೋಷಗಳನ್ನೂ ಶಾಂತಿಗೊಳಿಸಲು, ಅಂತೆಯೇ ಉಪನಿಷತ್ ಸಮಾಪ್ತಿಯನ್ನು ತೋರಿಸಲು ಅಥವಾ ಮಂಗಳಾರ್ಥವಾಗಿ ಎಂದರ್ಥ.

### ರಂಗರಾಮಾನುಜಭಾಷ್ಯಮ್

ಇಯಂ ಚ ಉಪನಿಷತ್ ಭಗವತ್ಪರೈವೇತಿ ಭಗವತಾ ಬಾದರಾಯಣೇನ ಸಮನ್ವಯಾಧ್ಯಾಯೇ ತ್ರಿಭಿರಧಿಕರಣೈರ್ನಿರ್ಣೀತಮ್ । ತತ್ರ—

### (1. ಅತ್ತ್ರಧಿಕರಣಮ್)

'ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।
ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥

ಇತಿ ವಾಕ್ಯೇ ಬ್ರಹ್ಮಕ್ಷತ್ರಯೋರೋದನತ್ವನಿರೂಪಣೇನ ಭೋಜ್ಯತ್ವಸ್ಯ ವಾ ಭೋಗ್ಯತ್ವಸ್ಯ ವಾ ಪ್ರತೀತೇಃ ತತ್ಪ್ರತಿಸಂಬಂಧೀ, ಯಸ್ಯೇತಿ ಷಷ್ಠ್ಯಂತಯಚ್ಛಬ್ದನಿರ್ದಿಷ್ಟೋ ಭೋಕ್ತಾ ಜೀವ ಏವ ಸ್ಯಾತ್ ; ಪರಮಾತ್ಮನೋ ಭೋಕ್ತೃತ್ವಾಸಂಭವಾದಿತಿ ಪೂರ್ವಪಕ್ಷಂ ಕೃತ್ವಾ, 'ಅತ್ತಾ ಚರಾಚರಗ್ರಹಣಾತ್' (1-2-9) 'ಪ್ರಕರಣಾಚ್ಚ' (ಬ್ರ.ಸೂ. 1-2-10) 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' (1-2-11) 'ವಿಶೇಷಣಾಚ್ಚ' (1-?-12) ಇತಿ ಚತುರ್ಭಿಃ ಸೂತ್ರೈಃ ಸಿದ್ಧಾಂತಃ ಕೃತಃ । ತೇಷಾಂ ಚ ಅಯಮರ್ಥಃ—'ಉಭೇ ಭವತ ಓದನಃ' ಇತಿ ಓದನಪ್ರತಿಸಂಬಂಧಿತಯಾ ಪ್ರತೀಯಮಾನಃ ಅತ್ತಾ ಪರಮಾತ್ಮೈವ । ಬ್ರಹ್ಮಕ್ಷತ್ರಶಬ್ದಗೃಹೀತನಿಖಿಲಚರಾಚರಸಂಹರ್ತೃತ್ವಸ್ಯ ಅತ್ರ ಮಂತ್ರೇ ಪ್ರತಿಪಾದನಾತ್—ಅತ್ರ ಬ್ರಹ್ಮಕ್ಷತ್ರಶಬ್ದಯೋಃ ನಿಖಿಲಚರಾಚರಲಕ್ಷಕತ್ವಪ್ರಕಾರಃ, ಒದನಶಬ್ದಸ್ಯ ವಿನಾಶ್ಯತ್ವಲಕ್ಷಕತ್ವಪ್ರಕಾರಶ್ಚ ಏತನ್ಮಂತ್ರವ್ಯಾಖ್ಯಾನಾವಸರೇ ಪ್ರತಿಪಾದಿತಃ ತತ್ರೈವಾನುಸಂಧೇಯಃ 'ಮಹಾಂತಂ ವಿಭುಮಾತ್ಮಾನಮ್' (ಕ.ಉ.2.22) ಇತಿ ಪ್ರಸ್ತುತತ್ವೇನ ತಸ್ಯ ಬ್ರಹ್ಮಪ್ರಕರಣಮಧ್ಯಗತತ್ವಾಚ್ಚ ।

ನನು 'ಋತಂ ಪಿಬಂತೌ' (ಕ.ಉ.3-1) ಇತ್ಯುತ್ತರಮಂತ್ರೇ ಕರ್ಮಫಲಭೋಗಾನ್ವಯಿನೋರೇವ ಪ್ರತಿಪಾದನಾತ್' ಪರಮಾತ್ಮನಶ್ಚ ಜೀವವತ್ ಕರ್ತೃತ್ವೇನ ಅಂತಃಕರಣವತ್ ಕರಣತ್ವೇನ ವಾಽನ್ವಯಾಸಂಭವಾತ್ ಪರಮಾತ್ಮಪ್ರಕರಣಮಧ್ಯಗತತ್ವಂ ನಾಸ್ತಿ ಇತ್ಯಾಶಂಕ್ಯೋಕ್ತಮ್; 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ' (ಬ್ರ 1.2.11) ಇತಿ। ಗುಹಾಂ ಪ್ರವಿಷ್ಟೌ ಜೀವಪರಮಾತ್ಮಾನಾವೇವ। ತಯೋರೇವಾಸ್ಮಿನ್ ಪ್ರಕರಣೇ ಗುಹಾಪ್ರವೇಶದರ್ಶನಾತ್ । 'ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಮ್' (ಕ.ಉ.2-12)ಇತಿ ಪರಮಾತ್ಮನೋ ಗುಹಾಪ್ರವೇಶಃ ಶ್ರೂಯತೇ। 'ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ। ಗುಹಾಂ ಪ್ರವಿಶ್ಯ ತಿಷ್ಠಂತೀ' (ಕ.ಉ.4-7) ಇತಿ ಜೀವಸ್ಯಾಪಿ ಗುಹಾಪ್ರವೇಶೋ ದೃಶ್ಯತೇ। ಅತಃ ದ್ವಯೋರಪಿ ಗುಹಾಪ್ರವೇಶದರ್ಶನಾತ್ ತಯೋರೇವ ಪಿಬ(ದಪಿಬ)ತೋಶ್ಛತ್ರಿನ್ಯಾಯೇನ 'ಋತಂ ಪಿಬಂತೌ' (ಕ.ಉ.3-1) ಇತಿ ನಿರ್ದೇಶಸ್ಯ ಸಂಭವಾತ್' 'ಋತಂ ಪಿಬಂತೌ' ಇತಿ ಮಂತ್ರೇಣ ನ ಪರಮಾತ್ಮಪ್ರಕರಣವಿಚ್ಛೇದಃ ಶಕ್ಯಶಂಕಃ । 'ವಿಶೇಷಣಾಚ್ಚ' (ಬ್ರ.ಸೂ.1-2-12) ಅಸ್ಮಿನ್ ಪ್ರಕರಣೇ, ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ' ಇತಿ ಜೀವಪರಯೋರುಪಾಸ್ಯತ್ವೋಪಾಸಕತ್ವಾದಿನಾ

ಯಾಗವಾದ ಜ್ಯೋತಿಷ್ಟೋಮಕ್ಕೆ ಅನ್ವಯಿಸಿ ಮೂರು ಉಪಸತ್‌ಗಳನ್ನು ಅನುಷ್ಠಿಸುವುದು. ಹಾಗೆಯೇ ಹನ್ನೆರಡು ಉಪಸತ್‌ಗಳನ್ನು ಅನುಷ್ಠಿಸುವುದೆಂಬುದು ಜ್ಯೋತಿಷ್ಟೋಮದಲ್ಲಿ ವೈಕಲ್ಪಿಕವೆಂದು ಪೂರ್ವಪಕ್ಷ.

ಸಿದ್ಧಾಂತವೇನೆಂದರೆ–ಅಹೀನಶಬ್ದವು 'ನ ಹೀನಃ' ಎಂಬ ಅವಯವಾರ್ಥದಿಂದ ಸಮಾಸ ಹೊಂದಿದಲ್ಲಿ 'ಅಯಜ್ಞಃ' ಎಂಬ ಶಬ್ದದಂತೆ ಆದ್ಯುದಾತ್ತವಾದೀತು. ಆದರೆ ಇಲ್ಲಿ ಆ ಪದವು ಮಧ್ಯೋದಾತ್ತವಾಗಿ ಶ್ರುತವಾಗಿದೆ. ಅಂತೆಯೇ ಅಹೀನಶಬ್ದಕ್ಕೆ ರೂಢಿಯನ್ನವಲಂಬಿಸಿದಾಗ ಅವಯವವ್ಯುತ್ಪತ್ತಿಯನ್ನು ಎದುರುನೋಡದೆ ಅರ್ಥೋಪಸ್ಥಿತಿಯು ಶೀಘ್ರವಾಗಿ ದೊರಕುವುದು. ಆದಕಾರಣ ಈ ಅಹೀನಶಬ್ದವು ಸೋಮಯಾಗದ ಆವೃತ್ತಿಗಳನ್ನೊಳಗೊಂಡಿರುವ ದ್ವಿರಾತ್ರ, ತ್ರಿರಾತ್ರ ಮೊದಲಾದ ಅಹರ್ಗಣವನ್ನು ಹೇಳುವುದೇ ಹೊರತು ಜ್ಯೋತಿಷ್ಟೋಮವನ್ನಲ್ಲ. ಆದುದರಿಂದ ಜ್ಯೋತಿಷ್ಟೋಮಪ್ರಕರಣದಿಂದ ಇದನ್ನು ಬೇರ್ಪಡಿಸತಕ್ಕದ್ದು. ಅದ್ದರಿಂದ ಹನ್ನೆರಡು ಉಪಸತ್‌ಗಳು ಅಹರ್ಗಣಕ್ಕೆ ಸಂಬಂಧಪಟ್ಟಿದ್ದೇ ವಿನಹ ಜ್ಯೋತಿಷ್ಟೋಮಕ್ಕಲ್ಲ ಎಂಬುದು ಅಹೀನಾಧಿಕರಣನ್ಯಾಯ.

## 3. ಆಕೃತ್ಯಧಿಕರಣ (ಪೂ. ಮೀ. 1–3–11)

ನಾಗೃಹೀತವಿಶೇಷಣನ್ಯಾಯಃ–(ಪೂ. ಮೀ ಸೂ. 1–3–31) (ಕ.ಉ. 1–20)

'ನಾಗೃಹೀತವಿಶೇಷಣಾ ಬುದ್ಧಿಃ ವಿಶೇಷ್ಯಮುಪಸಂಕ್ರಾಮತಿ' ಬುದ್ಧಿಯು ಯಾವುದೆ ಒಂದು ವಿಶಿಷ್ಟ (ವಿಶೇಷಣ ಮತ್ತು ಅದರಿಂದ ಕೂಡಿದ) ವಸ್ತುವನ್ನು ಗ್ರಹಿಸಬೇಕಾದರೆ ಆ ವಿಶಿಷ್ಟದ ಏಕದೇಶವಾದ ವಿಶೇಷಣಾಂಶವನ್ನು ಗ್ರಹಿಸದೇ ವಿಶಿಷ್ಟವನ್ನು ಗ್ರಹಿಸಲಾರದು. ಹೇಗೆಂದರೆ ದಂಡಧಾರಿಪುರುಷನನ್ನು 'ದಂಡೀ ಪುರುಷಃ' ಎಂದು ಗ್ರಹಿಸಬೇಕಾದರೆ ಅವನಲ್ಲಿ ವಿಶೇಷಣವಾಗಿ ತೋರುವ ದಂಡ ಎಂಬ ಭಾಗವು ಅರಿವಾಗದಿದ್ದಾಗ ದಂಡವುಳ್ಳವನು ಎಂದು ತೋರಲಾರದು ಎಂದರ್ಥ.

ಈ ನ್ಯಾಯವು ಪೂರ್ವಮೀಮಾಂಸಾಶಾಸ್ತ್ರದ ಆಕೃತ್ಯಧಿಕರಣ (1–3–11) ದಲ್ಲಿ ನಿಷ್ಪನ್ನವಾಗಿದೆ.

ಸಾಸ್ನಾದಿ ಆಕೃತಿಯಿಂದ ಕೂಡಿದ ಗೋವ್ಯಕ್ತಿಯನ್ನು ಗೋಶಬ್ದವು ತಿಳಿಸಬೇಕಾದರೆ ವಿಶೇಷಣವಾದ ಸಾಸ್ನಾದಿ ಆಕೃತಿಯೂ ಸಹ ಶಬ್ದದಿಂದ ತೋರಲೇಬೇಕು. (ಆಕೃತಿ-ವಿಶೇಷಣ, ಗೋವು–ವಿಶಿಷ್ಟ).

## 4. ಉಪಕ್ರಮಾಧಿಕರಣ (ಪೂ. ಮೀ. 3–3–1) (ಕ. ಉ. 1–20)

ಇದಕ್ಕೆ 'ಅಸಂಜಾತವಿರೋಧನ್ಯಾಯ' ಎಂದು ಮತ್ತೊಂದು ಹೆಸರು. ಅಲ್ಲಿಯ ವಿಚಾರ ಹೀಗಿದೆ — ಋಗ್ವೇದಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ಉಚ್ಚಸ್ವರದಿಂದ ಪಠಿಸಬೇಕು. ಯಜುರ್ವೇದದ ಮಂತ್ರಗಳನ್ನು ಉಪಾಂಶುಸ್ವರದಿಂದಲೂ, ಸಾಮವೇದಮಂತ್ರಗಳನ್ನು ಉಚ್ಚೈಸ್ಸ್ವರದಿಂದಲೂ ಪಠಿಸಬೇಕೆಂಬುದಾಗಿ ಶ್ರುತಿವಾಕ್ಯವು ಹೇಳಿದೆ. ಅದನ್ನವಲಂಬಿಸಿ ಆಲೋಚಿಸುವುದಾದರೆ ಯಜುರ್ವೇದಪಠಿತವಾದ 'ಋಙ್ಮಂತ್ರ'ಗಳನ್ನು ಅಧ್ವರ್ಯು ಹೇಳುವಾಗಲೂ ಅದು 'ಋಕ್' ಆದುದರಿಂದ ಉಚ್ಚಸ್ವರವನ್ನೇ ಪ್ರಯೋಗಿಸತಕ್ಕದ್ದು ಎಂಬ ಪೂರ್ವಪಕ್ಷ ಬಂದು, ಇದಕ್ಕೆ ಸಿದ್ಧಾಂತವಾಗಿ ಉಪಕ್ರಮವನ್ನನುಸರಿಸಿ ಉಪಸಂಹಾರ

ವನ್ನು ಹೊಂದಿಸಬೇಕೆಂದು ಹೇಳಿದೆ. ಅಂದರೆ ಮೊದಲು 'ತ್ರಯೋ ವೇದಾ ಅಸೃಜಂತ' ಅಗ್ನೇಃ ಋಗ್ವೇದಃ, ವಾಯೋಃ ಯಜುರ್ವೇದಃ, ಆದಿತ್ಯಾತ್ ಸಾಮವೇದಃ' ಎಂಬು ದಾಗಿ ಋಗಾದಿಗಳನ್ನು ವೇದಪದದಿಂದ ಉಲ್ಲೇಖಿಸಿ ಉಪಕ್ರಮಿಸಿರುವ ಕಾರಣ ಮುಂದೆ ಮುಕ್ತಾಯದಲ್ಲಿ 'ಋಚಾ, ಯಜುಷಾ, ಸಾಮ್ನಾ' ಎಂಬ ಶಬ್ದಗಳು ಋಗಾದಿ ಮಂತ್ರ ಪರವಾಗದೆ ಋಗಾದಿವೇದಪರವಾಗಿ ತಾತ್ಪರ್ಯ ಹೊಂದುತ್ತವೆ. ಆದ್ದರಿಂದ ಯಜು ರ್ವೇದಪಠಿತವಾದ ಋಙ್ಮಂತ್ರವೂ ಸಹ ಯಜುರ್ವೇದವೇ ಆದುದರಿಂದ ಅಧ್ವರ್ಯುವು ಅದನ್ನು ಯಜುರ್ವೇದದ ಉಪಾಂಶುಸ್ವರದಿಂದಲೇ ಉಚ್ಚರಿಸಬೇಕೆಂದು ಅರ್ಥ.

### 5. ಛೇದನಾದೀನಾಂ ಶಾಖಾಪ್ರಯುಕ್ತತ್ವಾಧಿಕರಣ (ಪೂ.ಮೀ. 4-2-3)

### 'ಮೂಲತಃ ಶಾಖಾಂ ಪರಿವಾಸ್ಯ ಉಪವೇಶಂ ಕರೋತಿ'

ದರ್ಶಪೂರ್ಣಮಾಸಪ್ರಕರಣದಲ್ಲಿ 'ಮೂಲತಃ ಶಾಖಾಂ ಪರಿವಾಸ್ಯ ಉಪವೇಶಂ ಕರೋತಿ' ಎಂಬುದಾಗಿ ಶ್ರುತವಾಗಿದೆ. ಪಲಾಶವೃಕ್ಷದಿಂದ ಶಾಖೆ (ಕೊಂಬೆ) ಒಂದನ್ನು ಕತ್ತರಿಸಿ ತರಬೇಕು. ಅದರ (ಬುಡ) ಮೂಲಭಾಗವನ್ನು ಪ್ರಾದೇಶ ಪರಿಮಾಣದಲ್ಲಿ ಕತ್ತರಿ ಸುವುದರ ಮೂಲಕ ಪ್ರತ್ಯೇಕಿಸಿ ಶಾಖೆಯಿಂದ 'ವತ್ಸಾಪಾಕರಣ' (ಹಸುವಿನ ಕರುವನ್ನು ಹಸುವಿನಿಂದ ಬೇರ್ಪಡಿಸುವುದು)ವನ್ನು ಮಾಡಬೇಕು. ಕತ್ತರಿಸಿದ ಬುಡದ ಭಾಗಕ್ಕೆ ಉಪವೇಶವೆಂದು ಹೆಸರು. ಅಂದರೆ ಆ ಶಾಖೆಯ ಮೂಲವನ್ನು ಕತ್ತರಿಸಿ ಉಪವೇಶವನ್ನು ಮಾಡಬೇಕು. ಶಾಖಾಭಾಗದಿಂದ ವತ್ಸಾಪಾಕರಣಮಾಡಬೇಕು ಎಂದಾಗ ಶಾಖಾಹರಣಕ್ಕೆ ಎರಡು ಪ್ರಯೋಜನವೆಂದು ಹೇಳಿದಂತಾಗುತ್ತದೆ. ಒಂದು 'ಶಾಖಯಾ ವತ್ಸಾನ್ ಅಪಾ ಕರೋತಿ' ಎಂದು ವಿಹಿತವಾದುದು. ಎರಡನೆಯದು 'ಉಪವೇಷೇಣ ಕಪಾಲಾನ್ಯುಪದಧಾತಿ' ಎಂದು ಹೇಳಿದ ಕಪಾಲೋಪಾದಾನ. ಆದ್ದರಿಂದ ಇವೆರಡು ಕಾರ್ಯಗಳನ್ನೂ ಉದ್ದೇಶಿಸಿ ಪಲಾಶಶಾಖಾಛೇದನ ಮತ್ತು ಆಹರಣಗಳನ್ನು ಮಾಡಬೇಕು ಎಂಬುದು ಪೂರ್ವಪಕ್ಷ.

ಸಿದ್ಧಾಂತವಾದರೋ—ಮರದಿಂದ ಶಾಖಾಛೇದನಕ್ಕೆ ಪ್ರಯೋಜಕವಾದುದು ವತ್ಸಾಪಾ ಕರಣವೇ ಹೊರತು ಉಪವೇಶಸಿದ್ಧಿಯಲ್ಲ. ಅದರ ನಂತರ ದಪ್ಪಗಿರುವ ಬುಡವನ್ನು ಅನುಕೂಲಕ್ಕಾಗಿ ಕತ್ತರಿಸಬೇಕು. ಹಾಗೆ ಎರಡನೇ ಬಾರಿ ಕತ್ತರಿಸುವುದಕ್ಕೆ ಉಪವೇಶಸಿದ್ಧಿ ಪ್ರಯೋಜಕ ಎಂಬುದು. ಅಂದರೆ 'ಉಪವೇಶಂ ಕರೋತಿ' ಎಂಬ ಮಾತಿಗೆ 'ಕೇನ ದ್ರವ್ಯೇಣ' ಎಂಬ ಆಕಾಂಕ್ಷೆ ಬಂದಾಗ 'ಮೂಲತಃ' ಎಂಬುದು ಪರಿಹಾರ. ಇದರ ನಂತರ 'ಕಸ್ಯ ಮೂಲಮ್' ಎಂಬ ಆಕಾಂಕ್ಷೆಗೆ 'ವತ್ಸಾಪಾಕರಣಾರ್ಥಂ ಛಿನ್ನಾಯಾಃ ಪಲಾಶಶಾಖಾಯಾಃ ಮೂಲಮ್' ಎಂಬುದು ಪರಿಹಾರ.

ಉಪವೇಶಸಿದ್ಧಿಯು ಆನುಷಂಗಿಕವಾದುದು. ಇಲ್ಲಿ ವಾಕ್ಯಾನ್ವಯ 'ಶಾಖಾಮ್ ಮೂಲತಃ ಪರಿವಾಸ್ಯ, ಮೂಲತಃ ಉಪವೇಶಂ ಕರೋತಿ' ಎಂಬುದು.

### 9. ಧೇನ್ವಾ ಗವಾಮೇವ ಬಾಧಕತ್ವಾಧಿಕರಣ (ಪೂ.ಮೀ. 10–3–14)

### ತಸ್ಯ ಧೇನುರಿತಿ ಗವಾಮ್ (ಪೂ. ಮೀ. ಸೂ. 10–3–55)

ಇದು ಅಲ್ಲಿಯ ಪೂರ್ಣಸೂತ್ರ 'ತಸ್ಯ ಧೇನುರಿತಿ ಗವಾಂ ಪ್ರಕೃತೌ ವಿಭಕ್ತಚೋದಿ ತತ್ವಾತ್ ಸಾಮಾನ್ಯಾತ್ ತದ್ವಿಕಾರಸ್ಯಾದ್ಯಥೇಷ್ಟಿಃ ಗುಣಶಬ್ದೇನ'

'ಅಥೈಷ ಭೂಃ ವೈಶ್ವದೇವಃ' ಎಂಬುದಾಗಿ 'ಭೂ' ಎಂಬ ಹೆಸರಿನ 'ಏಕಾಹ'ಯಾಗ ಒಂದನ್ನು ಉಪಕ್ರಮಿಸಿ ತಸ್ಯ ಧೇನುರ್ದಕ್ಷಿಣಾ ಎಂಬುದಾಗಿ ಧೇನುವನ್ನು ಯಾಗದಕ್ಷಿಣೆಯಾಗಿ ವಿಧಿಸಿದೆ. ಇದು ಅಲ್ಲಿಯ ವಿಚಾರ—ಇಲ್ಲಿ ಹೇಳಿರುವ ಧೇನುವೆಂಬ ದಕ್ಷಿಣೆಯು, ಪ್ರಸ್ತುತವಾದ ದಕ್ಷಿಣೆಗಳ ಪೈಕಿ ಗೋರೂಪವಾದ ದಕ್ಷಿಣೆಯನ್ನು ಮಾತ್ರ ಬಾಧಿಸಿ ಉಳಿದ ಎಲ್ಲ ದಕ್ಷಿಣೆಗಳನ್ನು ಉಳಿಸುತ್ತದೆಯೋ ? ಅಥವಾ ಎಲ್ಲ ದಕ್ಷಿಣೆಗಳನ್ನೂ ಬಾಧಿಸಿ ತಾನು ಮಾತ್ರ ಉಳಿಯುತ್ತದೆಯೋ ? ಎಂಬುದಾಗಿ ಸಂಶಯ.

ಧೇನು ಎಂಬುದು ಗೋ ಎಂಬ ಸಾಮಾನ್ಯಕ್ಕೆ ವಿಶೇಷರೂಪವಾಗಿರುವುದರಿಂದ ಗೋವನ್ನು ಮಾತ್ರ ಬಾಧಿಸಿ ತಾನು ಉಳಿಯುತ್ತದೆ ಎಂಬುದು ಪೂರ್ವಪಕ್ಷ.

ಇಲ್ಲಿ 'ದಕ್ಷಿಣಾ' ಎಂಬುದಾಗಿ ಏಕವಚನವಿರುವುದರಿಂದ ಉಳಿದ ದಕ್ಷಿಣೆಗಳೂ ಇದ್ದಲ್ಲಿ 'ದಕ್ಷಿಣಾಃ' ಎಂದು ಬಹುವಚನ ಬರಬೇಕಾಗಿರುವುದರಿಂದ ಪ್ರಸ್ತುತವಾದ ಎಲ್ಲ ದಕ್ಷಿಣೆಗಳನ್ನು ಬಾಧಿಸಿ 'ಧೇನುದಕ್ಷಿಣೆ' ಒಂದೇ ಉಳಿಯುತ್ತದೆಂದು ಸಿದ್ಧಾಂತ.

### 7. ಪ್ರಜಾಪತಿವ್ರತಾಧಿಕರಣ (ಪೂ. ಮೀ. 4-1-5) (ಕ. ಉ. 2-25)

'ನಾನೃತಂ ವದೇತ್'

'ಸುಳ್ಳು ಹೇಳಬಾರದು' ಎಂಬ ನಿಷೇಧವು ಪುರುಷಾರ್ಥರೂಪವಾಗಿ (ಪುರುಷ ಪ್ರೀತಯೇ ವಿಧೀಯಮಾನಃ ಪುರುಷಾರ್ಥಃ) ಹೇಳಲ್ಪಟ್ಟದ್ದಾದರೂ, ದರ್ಶಪೂರ್ಣಮಾಸ ಯಾಗಪ್ರಕರಣದಲ್ಲಿ ಯಾಗಕ್ಕೆ ಉಪಯೋಗವಾಗಿ ಹೇಳಿರುವುದರಿಂದ ಕ್ರತ್ವರ್ಥವೂ ಆಗ ಬಹುದು. (ಕ್ರತುಸ್ವರೂಪಪೌಷ್ಕಲ್ಯಾಯ ಯೋ ವಿಧೀಯತೇ ಸಃ ಕ್ರತ್ವರ್ಥಃ ।)

ಏಕದೇಶೇಽಪಿ ಯೋ ದೃಷ್ಟಃ ಶಬ್ದೋ ಜಾತಿನಿಬಂಧನಃ ।
ತದತ್ಯಾಗಾನ್ನ ತಸ್ಯಾಸ್ತಿ ನಿಮಿತ್ತಾನ್ತರಗಾಮಿತಾ ॥ (ತಂತ್ರವಾರ್ತಿಕಮ್ 1-4-10)

ಜಾತಿಯನ್ನು ಪ್ರವೃತ್ತಿನಿಮಿತ್ತವಾಗಿ ಹೊಂದಿರುವ ಶಬ್ದವು ಯಾವುದೊಂದು ಪ್ರವೃತ್ತಿ ನಿಮಿತ್ತೈಕದೇಶವನ್ನವಲಂಬಿಸಿಯೂ ಪ್ರಯೋಗಿಸಲ್ಪಟ್ಟಿದ್ದಾದರೆ, ಪ್ರವೃತ್ತಿನಿಮಿತ್ತವನ್ನು ತ್ಯಾಗಮಾಡದ ಕಾರಣ ಬೇರೆ ಪ್ರವೃತ್ತಿನಿಮಿತ್ತವನ್ನವಲಂಬಿಸಿದ ದೋಷವು ಬರಲಾರದು.

### 8. ಪ್ರೋದ್ಗಾತೃಧಿಕರಣ (ಪೂ.ಮೀ. 3-5-8)

'ಜ್ಯೋತಿಷ್ಟೋಮ'ಪ್ರಕರಣದಲ್ಲಿ 'ಪ್ರೈತು ಹೋತುಶ್ಚಮಸಃ ಪ್ರಬ್ರಹ್ಮಣಃ ಪ್ರೋದ್ಗಾತೃಣಾಮ್ ಪ್ರಯಜಮಾನಸ್ಯ ಪ್ರಯಂತು ಸದಸ್ಯಾನಾಮ್' ಎಂಬುದಾಗಿ ಶ್ರುತವಾಗಿದೆ.

ಇಲ್ಲಿಯ 'ಚಮಸ'ಶಬ್ದದಿಂದ 'ಚಮ್ಯಂತೇ ಭಕ್ಷ್ಯಂತೇ ಸೋಮಃ ಅಸ್ಮಿನ್' ಎಂಬ ವ್ಯುತ್ಪತ್ತಿಯ ಮೂಲಕ ಪಾತ್ರವಿಶೇಷವು ಮತ್ತು ಭಕ್ಷಣವೂ ತೋರುತ್ತದೆ. ಇಲ್ಲಿ ಪ್ರೋದ್ಗಾತೃಣಾಮ್ ಎಂದು ಬಹುವಚನವಿದೆ. ಉದ್ಗಾತೃವೆಂದರೆ ಸಾಮವೇದಕ್ಕೆ ಸಂಬಂಧಿಸಿದ ಪ್ರಯೋಗಗಳನ್ನು ಮಾಡುವ ಒಬ್ಬ ಋತ್ವಿಕ್. ಒಬ್ಬನಲ್ಲಿ 'ಉದ್ಗಾತೃಣಾಮ್ ಎಂಬ ಬಹುವಚನವನ್ನು ಅನ್ವಯಿಸುವುದು ಹೇಗೆ ? ಅನ್ವಯಿಸಲೇ ಬೇಕಾದರೆ (ಛತ್ರಿನ್ಯಾಯವನ್ನವಲಂಬಿಸಿ) ಆ ಉದ್ಗಾತೃವಿನಿಂದ ಕೂಡಿದ ಒಟ್ಟು ಹದಿನಾರು ಋತ್ವಿಕ್ಕುಗಳೂ ಸಹ ಈ ಭಕ್ಷಣಕ್ಕೆ ಭಾಗಿಯಾಗುವರು ಎಂದು ಪೂರ್ವಪಕ್ಷ.

ರೂಢಿಯಿಂದ ಉದ್ಗಾತೃಶಬ್ದವು ಒಬ್ಬನನ್ನು ಮಾತ್ರ ಹೇಳುವುದು. ಬಹುವಚನವು ಉದ್ಗಾತೃವಿನ ಸಮೀಪದಲ್ಲಿದ್ದವರನ್ನೂ ಸೇರಿಸಿಕೊಂಡು ಹೊಂದುತ್ತದೆ. ಆದ್ದರಿಂದ ಉದ್ಗಾತೃವಿಗೆ ಸನ್ನಿಹಿತರಾದ 'ಪ್ರಸ್ತೋತೃ, ಪ್ರತಿಹರ್ತೃ, ಸುಬ್ರಹ್ಮಣ್ಯಮ್' ಇವರುಗಳನ್ನು ಸೇರಿಸಿಕೊಂಡು ಉದ್ಗಾತೃವು ಅಂದರೆ ಒಟ್ಟು ಸಾಮಗರು ಈ ಭಕ್ಷಣವನ್ನು ಮಾಡಬೇಕೆಂಬುದು ಸಿದ್ಧಾಂತ.

### 9. ಬರ್ಹಿರಾಜ್ಯಾಧಿಕರಣ (ಪೂ. ಮೀ. 1-4-8)

ದರ್ಶಪೂರ್ಣಮಾಸಪ್ರಕರಣದಲ್ಲಿ 'ಬರ್ಹಿಃ ಲುನಾತಿ' 'ಆಜ್ಯಂ ನಿರ್ವಪತಿ' 'ಪುರೋಡಾಶಂ ಪರ್ಯಗ್ನಿ ಕರೋತಿ' ಎಂಬ ವಾಕ್ಯಗಳು ಶ್ರುತವಾಗಿವೆ. ಅಲ್ಲಿಯ ಬರ್ಹಿಃ, ಆಜ್ಯ, ಪುರೋಡಾಶಶಬ್ದಗಳಿಗೆ ಶಾಸ್ತ್ರದಲ್ಲಿ ಸಂಸ್ಕಾರಹೊಂದಿದ ದರ್ಭೆ, ಘೃತ, ಪುರೋಡಾಶಗಳಲ್ಲಿ ಮಾತ್ರ ಪ್ರಯೋಗ ಕಂಡುಬಂದಿರುವುದರಿಂದ 'ಯೂಪಃ, ಆಹವನೀಯಃ' ಇತ್ಯಾದಿ ಶಬ್ದಗಳು ಕೇವಲ ಸ್ತಂಭ, ಕೇವಲ ಅಗ್ನಿಗಳನ್ನು ಹೇಳದೆ ಸಂಸ್ಕೃತವಾದ ಯಜ್ಞಸ್ತಂಭ, ಯಜ್ಞಾಗ್ನಿಗಳನ್ನೇ ಹೇಳುವಂತೆ ಸಂಸ್ಕೃತವಾದ ದರ್ಭಾದಿಗಳಲ್ಲಿ ಮಾತ್ರವೇ ರೂಢವಾಗಿವೆ ಎಂದು ಪೂರ್ವಪಕ್ಷ ಬಂದಾಗ—

ಸಂಸ್ಕಾರಹೊಂದಿದೆಡೆಯಲ್ಲಿಯೂ, ಕೇವಲವಾಗಿರುವಲ್ಲಿಯೂ, ದರ್ಭತ್ವಾದಿ ಜಾತಿಗಳಿಗೆ ಲೋಪವಿಲ್ಲ. ಆದರೆ ಲೌಕಿಕ ವ್ಯವಹಾರದಲ್ಲಿ, ಸಂಸ್ಕಾರಕ್ಕೆ ಎಡೆಯಿಲ್ಲದೆ ಕೇವಲ ಜಾತಿಯನ್ನವಲಂಬಿಸಿದ್ದ ವ್ಯವಹಾರವು ಕಂಡುಬರುತ್ತದೆ. ಹೀಗೆ ಜಾತಿಸಂಬಂಧವು ಸರ್ವತ್ರ ಅವರ್ಜನೀಯವಾದುದರಿಂದ ಇವುಗಳು ಜಾತಿ ಶಬ್ದಗಳೇ ಸರಿ ಎಂಬುದು ಸಿದ್ಧಾಂತ.

### 10. ಭೂಯೋऽನುಗ್ರಹಾಧಿಕರಣ (ಪೂ. ಮೀ. 12-2-7) (ಕ. ಉ. 1-20)

'ಭೂಯಸಾಂ ಸಧರ್ಮತ್ವಮ್ ಸ್ಯಾತ್ ಇತಿ ನ್ಯಾಯಃ'

ಇದಕ್ಕೆ 'ಭೂಯೋऽನುಗ್ರಹನ್ಯಾಯ' ಎಂಬುದಾಗಿಯೂ ಹೆಸರು. ಅದರ ಸಾರಾಂಶವಿದು–ಮುಖ್ಯ ಮತ್ತು ಉಪಕ್ರಮದಲ್ಲಿ ಇರುವವುಗಳನ್ನೂ ಸಹ ಬಾಧಿಸಿ ಬಹುಸಂಖ್ಯಾತ ವಿಷಯಗಳಿಗೆ ಹೊಂದಾಣಿಕೆಯನ್ನು ದೊರಕಿಸುವುದು. ಕಾಮೇಷ್ಟಿಪ್ರಕರಣದಲ್ಲಿ ಆಗ್ನೇಯ ಪುರೋಡಾಶಯಾಗ, ಐಂದ್ರಪುರೋಡಾಶಯಾಗ, ಪ್ರಜಾಪತಿದೇವತಾಕವಾದ ಅಪ್, ಮಧು, ದಧಿ, ಘೃತ, ಧಾನಾದ್ರವ್ಯಕಯಾಗಗಳನ್ನು ಪಶುಕಾಮನಾದವನು ಅನುಷ್ಠಿಸಬೇಕೆಂದು ಹೇಳಿದೆ. ಇವುಗಳಲ್ಲಿ ಆಗ್ನೇಯವೆಂಬುದು ದರ್ಶಕ್ಕೂ, ಪೌರ್ಣಮಾಸಕ್ಕೂ ಸಾಧಾರಣವಾದುದು, ಐಂದ್ರಪುರೋಡಾಶಯಾಗವು ಪ್ರಾಜಾಪತ್ಯವಾದ ಪ್ರಜಾಪತಿದೇವತಾಕದಧಿದ್ರವ್ಯಕಯಾಗವೂ ದರ್ಶದ ವಿಕೃತಿರೂಪವಾದುದು. ಉಳಿದ ಪ್ರಜಾಪತಿ ದೇವತಾಕವಾದ ಅಪ್, ಮಧು, ಘೃತ, ಧಾನಾದ್ರವ್ಯಕಯಾಗಗಳು ಪೂರ್ಣಮಾಸವಿಕೃತಿಯಾಗಗಳು. ಈ ಸನ್ನಿವೇಶದಲ್ಲಿ ಇಂತಹ ಎಲ್ಲ ಯಾಗಗಳನ್ನುದ್ದೇಶಿಸಿ ಅಂಗರೂಪವಾಗಿ ಆಜ್ಯಭಾಗಾದಿಗಳನ್ನು ಅನುಷ್ಠಿಸುವಾಗ ದರ್ಶಪ್ರಕೃತಿಯ ಮಂತ್ರಗಳನ್ನು ಸ್ವೀಕರಿಸಬೇಕೇ ? ಅಥವಾ ಪೂರ್ಣಮಾಸಪ್ರಕೃತಿಯ ಮಂತ್ರಗಳನ್ನು ಸ್ವೀಕರಿಸಬೇಕೇ, ಎಂಬ ವಿಚಾರ ಬಂದಾಗ ಐಂದ್ರಪುರೋಡಾಶವೆಂಬುದು ಪ್ರಾಜಾಪತ್ಯಕ್ಕಿಂತಲೂ ಹಿಂದೆ ಇದ್ದು ಉಪಕ್ರಮಸ್ಥ ಮತ್ತು ಮುಖ್ಯ ಆದರೂ ಕೂಡ, ಪೂರ್ಣಮಾಸವಿಕಾರವಾದುದು ಇವುಗಳಿಗಿಂತ ಅಧಿಕವಾಗಿರುವುದರಿಂದ ಅವುಗಳಿಗೆ ಹೊಂದುವಂತೆ ಪೂರ್ಣಮಾಸದ ಮಂತ್ರಗಳನ್ನೇ ಸ್ವೀಕರಿಸಬೇಕೆಂದು ಸಿದ್ಧಾಂತಿಸಿದೆ.

## 11. ಲೌಕಿಕಯೂಪಸ್ಪರ್ಶಪ್ರಾಯಶ್ಚಿತ್ತಾಧಿಕರಣ (ಪೂ. ಮೀ. 9–3–3)

'ಯದ್ಯೇಕಂ ಯೂಪಮುಪಸ್ಪೃಶೇತ್, ಏಷ ತೇ ವಾಯೌ ಇತಿ ಬ್ರೂಯಾತ್' 'ಲೌಕಿಕೇ ದೋಷಸಂಯೋಗಾತ್ ಅಪವೃಕ್ತೇ ಹಿ ಚೋದ್ಯತೇ ನಿಮಿತ್ತೇ ನ ಪ್ರಕೃತೌ ಸ್ಯಾತ್ ಅಭಾಗಿತ್ವಾತ್' (ಪೂ. ಮೀ. ಸೂ. 9–3–9).

ಜ್ಯೋತಿಷ್ಟೋಮಕ್ಕೆ ಸಂಬಂಧಪಟ್ಟ ಅಗ್ನೀಷೋಮೀಯಪಶುಪ್ರಕರಣದಲ್ಲಿ 'ಯದ್ಯೇಕಂ ಯೂಪಮುಪಸ್ಪೃಶೇತ್' 'ಏಷ ತೇ ವಾಯೌ ಇತಿ ಬ್ರೂಯಾತ್' ಎಂಬುದಾಗಿ ಯೂಪ (ಯಜ್ಞೀಯಸ್ತಂಭ) ಸ್ಪರ್ಶಕ್ಕೆ ಪ್ರಾಯಶ್ಚಿತ್ತವನ್ನು ಹೇಳಿದೆ. ಇಲ್ಲಿ ಈ ಪ್ರಾಯಶ್ಚಿತ್ತವು ಲೌಕಿಕವಾಗಿ ಯೂಪಸ್ಪರ್ಶವೇರ್ಪಟ್ಟಾಗ ಮಾಡಬೇಕಾದುದೇ ಅಥವಾ ವೈದಿಕವಾಗಿಯೋ ಆದರೂ ಯೂಪಸಂಸ್ಕಾರಕಾಲದಲ್ಲಿ ಒದಗುವ ಯೂಪಸ್ಪರ್ಶಕ್ಕೂ ಅನ್ವಯಿಸುವುದೇ ಎಂಬುದು ವಿಚಾರ.

ಲೌಕಿಕವಾಗಿ ಯೂಪಸ್ಪರ್ಶಕ್ಕೆ ಸಂಬಂಧವೇ ಇಲ್ಲದುದರಿಂದಲೂ ವೈದಿಕವಾಗಿ ಅಂಜನಾದಿ ಸಂಸ್ಕಾರಗಳು ವಿಹಿತವಾಗಿರುವುದರಿಂದ ಆ ಸಮಯದಲ್ಲಿ ಸ್ಪರ್ಶವು ಅನಿವಾರ್ಯವಾಗಿ ಒದಗುವುದರಿಂದಲೂ, ವೈದಿಕವಾದ ಯೂಪಸ್ಪರ್ಶಕ್ಕೆ ಪ್ರಾಯಶ್ಚಿತ್ತವಿದು ಎಂಬುದು ಪೂರ್ವಪಕ್ಷ.

'ಯೂಪೋ ವೈ ಯಜ್ಞಸ್ಯ ದುರಿಷ್ಟಮಾ ಮುಂಚತೇ ಯದ್ಯೂಪಮುಪಸ್ಪೃಶೇದರಿಷ್ಟಂ ಯಜ್ಞಸ್ಯಾಮುಂಚತೇ ತಸ್ಮಾತ್ ಯೂಪೋ ನೋಪಸ್ಪೃಶ್ಯಃ' ಎಂದು ಯೂಪಸ್ಪರ್ಶವನ್ನು ನಿಷೇಧಿಸಿ ನಂತರ 'ಯದ್ಯೇಕಮ್' ಎಂಬುದಾಗಿ ಪ್ರಾಯಶ್ಚಿತ್ತವನ್ನು ಹೇಳಿರುವುದರಿಂದ ಪ್ರತಿಷೇಧವು ಮತ್ತು ಪ್ರಾಯಶ್ಚಿತ್ತವು ಲೌಕಿಕವಾದ ಯೂಪಸ್ಪರ್ಶವನ್ನು ಕುರಿತದ್ದೇ ಆಗಿದೆ. ವೈದಿಕವಾದ ಯೂಪಸ್ಪರ್ಶವು ವಿಹಿತವೇ ಆಗಿರುವುದರಿಂದ ವಿಹಿತಾನುಷ್ಠಾನಕ್ಕೆ ಪ್ರಾಯಶ್ಚಿತ್ತವು ಬರಲಾರದು ಎಂಬುದು ಸಿದ್ಧಾಂತ.

ಸೂತ್ರಾರ್ಥ :—ಲೌಕಿಕೇ—ಯೂಪವನ್ನು ವಿಹಿತವಲ್ಲದ ರೀತಿಯಲ್ಲಿ ಸ್ಪರ್ಶಿಸಿದಾಗ ಮಾತ್ರ ಪ್ರಾಯಶ್ಚಿತ್ತರೂಪವಾಗಿ 'ಏಷ ತೇ ವಾಯೋ' ಎಂಬ ಮಂತ್ರ ಬರುವುದು. ದೋಷಸಂಯೋಗಾತ್—ಯೂಪಸ್ಪರ್ಶ ಒದಗಿದಲ್ಲಿ 'ಯಜ್ಞಸ್ಯ ದುರಿಷ್ಟಮ್' ಎಂಬುದರಿಂದ ಅನಿಷ್ಟವನ್ನು ಹೇಳಿರುವ ಕಾರಣ ಹಿ—ಏಕೆಂದರೆ, ಅಪಮುಕ್ತೇ ನಿಮಿತ್ತೇ—ನಿಷಿದ್ಧವಾದ ಸ್ಪರ್ಶವೆಂಬ ನಿಮಿತ್ತಒದಗಿದಾಗ ಚೋದ್ಯತೇ—ಪ್ರಾಯಶ್ಚಿತ್ತವು ವಿಧಿಸಲ್ಪಡುತ್ತದೆ. ಪ್ರಕೃತೌ—ಕ್ರತೂಪಯೋಗಿಯಾದ ಸ್ಪರ್ಶ ಒದಗಿದಲ್ಲಿ, ಅಭಾಗಿತ್ವಾತ್—ವಿಹಿತವಾದ ಸ್ಪರ್ಶದಲ್ಲಿ ನಿಷೇಧವು ಪ್ರಾಪ್ತವಲ್ಲದುದರಿಂದ, ನ ಸ್ಯಾತ್—ಮಂತ್ರಪಾಠರೂಪಪ್ರಾಯಶ್ಚಿತ್ತವು ಬರಲಾರದು.

## 12. ವಾಕ್ಯಶೇಷಾಧಿಕರಣ (ಪೂ. ಮೀ. 1–4–19) (ಕ. ಉ. 1–20)

'ಸಂದಿಗ್ಧೇ ತು ವಾಕ್ಯಶೇಷಾತ್' ಇತಿ ನ್ಯಾಯಃ (ಪೂ. ಮೀ. ಸೂ. 1–4–20)

ಇದರ ಸಾರಾಂಶ—ಯಾವ ಸ್ಥಳದಲ್ಲಿ ವಿಧಿವಾಕ್ಯದ ಅರ್ಥವು ನಿರ್ಣಯಾತ್ಮಕವಾಗಿ ತಿಳಿಯದೇ ಸಂದೇಹಕ್ಕೆ ಎಡೆಯಾಗುವುದೋ ಅಂತಹ ಸ್ಥಳದಲ್ಲಿ, ವಿಧಿವಾಕ್ಯದನಂತರ ಬರುವ ವಾಕ್ಯಶೇಷವನ್ನು ಅನುಸರಿಸಿ ವಿಧಿವಾಕ್ಯದ ಅರ್ಥವನ್ನು ನಿರ್ಣಯಿಸಿಕೊಳ್ಳಬೇಕು ಎಂಬುದು.

(ಚಯನಪ್ರಕರಣದಲ್ಲಿ) 'ಅಕ್ತಾಃ ಶರ್ಕರಾಃ ಉಪದಧಾತಿ' ಎಂಬ ವಿಧಿವಾಕ್ಯವು "ತೇಜೋ ವೈ ಘೃತಮ್" ಎಂಬ ವಾಕ್ಯಶೇಷವೂ ಶ್ರುತವಾಗಿದೆ. ಮಣ್ಣಿನಿಂದ ಬೆರೆತ ಸಣ್ಣ-ಸಣ್ಣ ಕಲ್ಲು(ಶರ್ಕರಾ)ಗಳನ್ನು ಲೇಪನದ್ರವ್ಯದಿಂದ ಲೇಪಿಸಿ ಅವುಗಳನ್ನು ಚಯನಕ್ಕೆ ಇಡಬೇಕು ಎಂಬುದು ವಿಧಿವಾಕ್ಯದ ಅರ್ಥ. ಲೇಪಿಸಲು ಯಾವ ದ್ರವ್ಯವನ್ನು ಬಳಸ ಬೇಕೆಂಬ ವಿಚಾರ ಬಂದಾಗ ಇಂತಹವನ್ನೇ ಬಳಸಬೇಕೆಂಬ 'ನಿರ್ಣಾಯಕವಿಧಿ' ಇಲ್ಲದುದರಿಂದ ಘೃತ, ತೈಲ ಮೊದಲಾದ ಯಾವುದಾದರೊಂದು ಲೇಪನದ್ರವ್ಯದಿಂದ ಅಂಜನ(ಲೇಪನ) ಮಾಡಬಹುದು ಎಂಬುದಾಗಿ ಅನಿರ್ಣೀತ(ಸಂದಿಗ್ಧ)ಸ್ಥಿತಿಯಲ್ಲಿ ಪ್ರಸಕ್ತವಾದ ವಿಧಿವಾಕ್ಯಕ್ಕೆ ಶೇಷವಾಗಿ ಶ್ರುತವಾಗಿರುವ 'ತೇಜೋ ವೈ ಘೃತಮ್' ಎಂಬ ವಾಕ್ಯಶೇಷದಿಂದ ಘೃತವನ್ನೇ ಶರ್ಕರೆಯ ಲೇಪನದ್ರವ್ಯವಾಗಿ ಬಳಸಬೇಕೆಂದು ನಿಶ್ಚಯಿಸಿದೆ. ಏಕೆಂದರೆ ಲೇಪನದಿಂದ ವಸ್ತುವು ಹೊಳೆಯಲು ಯಾವುದು ಸಾಧನವಾಗುವುದೋ ಅಂತಹದೇ ಸ್ವೀಕರಣೀಯ ವಾದುದು. ಅದು ಯಾವುದು ಎಂದು ಬಂದಾಗ ಘೃತವೇ ತೇಜೋರೂಪವಾಗಿದ್ದು ಹೊಳೆಯುವುದಕ್ಕೆ ಸಾಧನವೆಂದು ವಾಕ್ಯಶೇಷದಿಂದ ಗೊತ್ತಾಗುವುದರಿಂದ ಅದೇ ಇಲ್ಲಿ ನಿರ್ಣಾಯಕವೆಂದು ಸಿದ್ಧಾಂತ ಮಾಡಿದೆ.

### 13. ವಿಧ್ಯಂತಾಧಿಕರಣ (ಪೂ. ಮೀ. 7-4-2)

'ಸೌರ್ಯಂ ಚರುಂ ನಿರ್ವಪೇತ್ ಬ್ರಹ್ಮವರ್ಚಸಕಾಮಃ' ಎಂಬುದು ಸೌರ್ಯೇಷ್ಟಿವಿಧಾಯಕವಾಕ್ಯ. ಸೌರ್ಯೇಷ್ಟಿಯು ದರ್ಶಪೂರ್ಣಮಾಸಕ್ಕೆ ವಿಕೃತಿ. ಇಲ್ಲಿ ವಿಧಿವಾಕ್ಯಶ್ರವಣಾನಂತರ 'ಕಥಂ ಭಾವಯೇತ್' ಎಂಬ ಇತಿಕರ್ತವ್ಯತಾ(ಅಂಗಕಲಾಪ)ಽಽಕಾಂಕ್ಷೆಯು ಹುಟ್ಟುವುದರಿಂದ ಅದನ್ನು ಶಮನಗೊಳಿಸಲು 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ಅತಿದೇಶ ವಾಕ್ಯದಂತೆ ವೈದಿಕವಾದ ದರ್ಶಪೂರ್ಣಮಾಸವೆಂಬ ಪ್ರಕೃತಿಯಲ್ಲಿ ಪಠಿತವಾದ ಅಂಗ ಕಲಾಪವೇ ಅನ್ವಯಿಸುವುದೇ ? ಅಥವಾ ಲೌಕಿಕವಾದ ಯಾವುದಾದರೊಂದು ಅಂಗಕಲಾಪವು ಅನ್ವಯಿಸಬಹುದೇ ಎಂಬುದು ವಿಚಾರ.

ಅಲ್ಲಿ ಯಾವುದೇ ಇತಿಕರ್ತವ್ಯತೆಯನ್ನು ಉಪದೇಶಿಸದೇ ಇರುವ ಕಾರಣ ಸ್ಥಾಲೀ ಪಾಕಾದಿಲೌಕಿಕ(ಸ್ಮಾರ್ತ)ಕರ್ಮಗಳಲ್ಲಿ ಕಂಡುಬರುವ ಅಂಗಕಲಾಪದಿಂದಲೇ ಆ ಆಕಾಂಕ್ಷೆಯನ್ನು ಪೂರ್ಣಗೊಳಿಸಬಹುದು. ಏಕೆಂದರೆ, ವೈದಿಕವಾದ ಅಂಗಕಲಾಪವು ಅಲ್ಲಲ್ಲಿಯ ಪ್ರಕರಣದಿಂದ ಆಯಾ ಕರ್ಮವಿಶೇಷಗಳಿಗೆ ಮಾತ್ರ ಸೀಮಿತವಾಗಿದೆ. ಲೌಕಿಕವಾದ ಅಂಗ ಕಲಾಪಗಳಿಗೆ ಅಂತಹ ನಿರ್ಬಂಧವಿಲ್ಲದುದರಿಂದ ಎಲ್ಲಿ ಬೇಕಾದರೂ ಅನ್ವಯಿಸಬಹುದಷ್ಟೆ, ಎಂಬುದು ಪೂರ್ವಪಕ್ಷ.

ಸೌರ್ಯೇಷ್ಟಿಯೂ ಸಹ ಬ್ರಹ್ಮವರ್ಚಸಕಾಮನಿಗೆ ಅನುಷ್ಠೇಯವಾದ ವೈದಿಕ ಸಾಧನವೇ ಆದುದರಿಂದ, ಅದರಲ್ಲಿ ಹುಟ್ಟುವ ಕಥಂಭಾವಾಕಾಂಕ್ಷೆಗೆ ವೈದಿಕವಾದ ಅಂಗ ಕಲಾಪವೇ ಬುದ್ಧಿಸ್ಥವಾಗುವುದರಿಂದ ಬುದ್ಧಿಸ್ಥವಾದುದನ್ನು ಬಿಟ್ಟು ಬುದ್ಧಿಸ್ಥವಲ್ಲದ್ದನ್ನು ಸ್ವೀಕರಿಸುವುದು ಉಚಿತವಲ್ಲದ ಕಾರಣ ದರ್ಶಪೂರ್ಣಮಾಸವೆಂಬ ಪ್ರಕೃತಿಭೂತವಾದ ವೈದಿಕ ಕರ್ಮದ ಅಂಗಕಲಾಪವೇ ಅನ್ವಯಿಸುತ್ತದೆ ಎಂಬುದು ಸಿದ್ಧಾಂತ.

'ವೈದಿಕೇ ವೈದಿಕತ್ವೇನ ಸಾಮಾನ್ಯೇನೋಪತಿಷ್ಠತೇ ।
ಲೌಕಿಕೀ ತ್ವಸಮಾನತ್ವಾನ್ನೋಪಸ್ಥಾಸ್ಯತ್ಯಪೇಕ್ಷಿತಾ ॥'

ಎಲ್ಲಿ ಅಂಗಕಲಾಪಗಳನ್ನು ಉಪದೇಶಿಸಿಲ್ಲವೋ, ಅಂತಹ ಸೌರ್ಯೇಷ್ಟಿ ಮೊದಲಾದ ವಿಕೃತಿಯಾಗಗಳಲ್ಲಿ ಇತಿಕರ್ತವ್ಯತಾಕಾಂಕ್ಷೆಗೆ ಶಾಮ್ಯಮಕವಾಗಿ ವೈದಿಕವಾದ ಇತಿಕರ್ತವ್ಯತೆಯೇ ಉಪಸ್ಥಿತವಾಗುತ್ತದೆ. ಏಕೆಂದರೆ ವಿಕೃತಿಯಾಗವೂ ವೈದಿಕವೇ, ಉಪಸ್ಥಿತವಾಗುವಂತಹ ಅಂಗಕಲಾಪವೂ (ಇತಿಕರ್ತವ್ಯತೆ) ವೈದಿಕವಾದ ಪ್ರಕೃತಿಯದೇ ಆಗಿದೆ. ಆದುದರಿಂದ 'ಪ್ರಕೃತಿವತ್ ವಿಕೃತಿಃ ಕರ್ತವ್ಯಾ' ಎಂಬ ಅತಿದೇಶದಿಂದಲೇ ಪ್ರಕೃತಿಯಲ್ಲಿ ಕಂಡ ವೈದಿಕವಾದ ಅಂಗಕಲಾಪವೇ ವಿಕೃತಿಯಲ್ಲಿ ಹೊಂದಿಕೊಳ್ಳಲು ಯೋಗ್ಯವಾಗಿದೆ. ಅದಲ್ಲದೆ ಲೌಕಿಕವಾದ ಇತಿಕರ್ತವ್ಯತೆಯು, ಇದಕ್ಕೆ (ಸೌರ್ಯೇಷ್ಟಿಯೆಂಬ ವೈದಿಕವಿಕೃತಿಗೆ) ಸರಿಸಮನಲ್ಲ. ಆದ್ದರಿಂದ ಇದರ ಆಕಾಂಕ್ಷೆಗೆ ಅದು (ಲೌಕಿಕ) ಶಾಮ್ಯಮಕವಾಗಲಾರದು.

## 14. ಸಮಸಂಖ್ಯಾನಾಂ ಧರ್ಮವಿರೋಧೇ ಮುಖ್ಯಧರ್ಮಸ್ಯಾನುಷ್ಠಾನಾಧಿಕರಣ

(ಪೂ. ಮೀ. 12-2-8)

'ಮುಖ್ಯಂ ವಾ ಪೂರ್ವಚೋದನಾತ್ ಲೋಕವತ್' (ಪೂ.ಮೀ.ಸೂ. 12-2-23) ಇದು ಅಲ್ಲಿಯ ಪೂರ್ಣ ಸೂತ್ರ. 'ಆಗ್ನಾವೈಷ್ಣವೇ ದ್ವಾದಶಕಪಾಲಂ ನಿರ್ವಪೇತ್' ಎಂಬುದಾಗಿ ಐಂದ್ರಾಗ್ನಿಯಾಗಕ್ಕೆ ವಿಕೃತಿಯಾಗಿ ಆಗ್ನಾವೈಷ್ಣವೇಷ್ಟಿಯನ್ನೂ, 'ಸರಸ್ವತೀ ಮಾಜ್ಯಸ್ಯ ಯಜೇತ್' ಎಂಬುದಾಗಿ ಉಪಾಂಶುಯಾಗಕ್ಕೆ ವಿಕೃತಿಯಾಗಿ ಸಾರಸ್ವತಾಜ್ಯೇಷ್ಟಿಯನ್ನು ವಿಧಿಸಿದೆ. ಇವುಗಳ ಪೈಕಿ ಯಾವುದಕ್ಕೆ ಆಜ್ಯಭಾಗಗಳನ್ನು ಅನುಷ್ಠಿಸಬೇಕು ಎಂಬ ವಿಚಾರ ಬಂದಾಗ ಯಾವುದೇ ವಿಶೇಷ ನಿಯಾಮಕವಿಲ್ಲದುದರಿಂದ ವೈಕಲ್ಪಿಕವಾಗಿ ಯಾವುದಾದರೊಂದಕ್ಕೆ ಆಜ್ಯಭಾಗಗಳನ್ನು ಅನುಷ್ಠಿಸಬೇಕು ಎಂಬುದು ಪೂರ್ವಪಕ್ಷ.

ಇವುಗಳಲ್ಲಿ ಆಗ್ನಾವೈಷ್ಣವವೇ ಪ್ರಥಮಪಠಿತವಾಗಿದ್ದು ಮುಖ್ಯವಾಗಿರುವುದರಿಂದ ಅದಕ್ಕೆ ಅಂಗವಾಗಿಯೇ ಆಜ್ಯಭಾಗವನ್ನು ಅನುಷ್ಠಿಸಬೇಕೆಂಬುದು ಸಿದ್ಧಾಂತ.

## 15. ಸಾಮಿಧೇನೀಷು ಆಗಂತೂನಾಂ ಅಂತೇ ನಿವೇಶಾಧಿಕರಣ

(ಪೂ. ಮೀ. 5-3-3)

'ಸಮಿಧ್ಯಮಾನವತೀಂ ಸಮಿದ್ಧವತೀಂ ಚಾಂತರೇಣ ಧಾಯ್ಯಾಸ್ಯುಃ ದ್ಯಾವಾಪೃಥಿವ್ಯಾಮ್ ಅಂತರಾಲೇ ಸಮರ್ಹಣಾತ್' (ಪೂ. ಮೀ. ಸೂ. 5-3-4)

ದರ್ಶಪೂರ್ಣಮಾಸಪ್ರಕರಣದಲ್ಲಿ 'ಸಾಮಿಧೇನೀ' ಎಂಬ ಋಕ್ಕುಗಳ ಬಗ್ಗೆ ಹೀಗೆ ಶ್ರುತವಾಗಿದೆ 'ಏಕವಿಂಶತಿಮನುಬ್ರೂಯತ್ ಪ್ರತಿಷ್ಠಾಕಾಮಸ್ಯ' ಎಂಬುದಾಗಿ. 'ಸಾಮಿಧೇನೀ' ಅಂದರೆ ಅಗ್ನಿಸಮಿಂಧನ. (ಅಗ್ನಿಪ್ರಜ್ವಲನಕ್ಕೆ ವಿನಿಯೋಗಿಸುವ ಋಕ್ಕುಗಳು) ಈ ಋಕ್ಕುಗಳು ಆ ಪ್ರಕರಣದಲ್ಲಿ ಹನ್ನೊಂದು ಮಾತ್ರ ಪಠಿತವಾಗಿವೆ. ಇದನ್ನು ಇಪ್ಪತ್ತೊಂದು ಮಾಡಲು ಕೆಲವು ಉಪಾಯಗಳನ್ನು ಶ್ರುತಿ ಹೇಳಿದೆ. 'ತ್ರಿಃ ಪ್ರಥಮಾಂ ಅನ್ವಾಹ ತ್ರಿರುತ್ತಮಾಮ್' ಎಂದು. ಅಂದರೆ ಹನ್ನೊಂದು ಋಕ್ಕುಗಳಲ್ಲಿ ಮೊದಲನೆಯದನ್ನೂ ಕೊನೆಯದನ್ನೂ 3-3 ಬಾರಿ ಹೇಳಬೇಕೆಂದು, ಅಲ್ಲಿಗೆ ಒಟ್ಟು

15 ಋಕ್ಕುಗಳಾದವು. 'ದಶತಯೀ'ಸೂಕ್ತದಲ್ಲಿ ಪಠಿತವಾದ ಆರು ಋಕ್ಕುಗಳನ್ನ ತಂದು ಕೊಂಡು ಉಳಿದ 6 ಸಂಖ್ಯೆಯನ್ನು ಪೂರ್ತಿಮಾಡಬೇಕು. ಇದು ವಿಷಯ.

ಇಲ್ಲಿಯ ವಿಚಾರವೆಂದರೆ ಇಲ್ಲಿ ಪಠಿತವಾಗದೆ ಬೇರೆಡೆಯಿಂದ ತಂದು ಸಂಖ್ಯಾಪೂರ್ತಿ ಮಾಡತಕ್ಕ ಋಕ್ಕುಗಳನ್ನು ಇವುಗಳ ಮಧ್ಯೆ ನಿವೇಶಮಾಡಿ ಪೂರ್ತಿಗೊಳಿಸಬೇಕೇ ? ಅಥವಾ ಈ ಹದಿನೈದರ ನಂತರ ನಿವೇಶಮಾಡಿ ಸಂಖ್ಯಾಪೂರ್ತಿಮಾಡಬೇಕೇ ಎಂಬುದು ಸಂಶಯ.

'ಧಾಯ್ಯಾ' ಎಂಬ ಹೆಸರಿನ ಋಕ್ಕುಗಳು ಬೇರೆಡೆಯಿಂದ ತಂದದ್ದೇ ಆದರೂ, ಈ ಸಾಮಿಧೇನಿಗಳ ನಡುವೆ ಅವುಗಳನ್ನು ನಿವೇಶಮಾಡುವುದು ಕಂಡುಬಂದಿದೆ—'ಇಯಂ ವೈ ಸಮಿಧ್ಯಮಾನವತಿ' 'ಅಸೌ ಸಮಿದ್ಧವತೀ ಯದುತ್ತರಾ ತದ್ಧಾಯ್ಯಾ' ಎಂಬುದಾಗಿ, ಅಂದರೆ ಸಮಿಧ್ಯಮಾನೋ ಅಧ್ವರೇ' ಎಂಬ ಋಕ್ಕು ಸಮಿಧ್ಯಮಾನವತೀ. 'ಸಮಿದ್ಧೋ ಅಗ್ನ ಆಹುತ' ಎಂಬ ಋಕ್ಕು ಸಮಿದ್ಧವತೀ. ಇವೆರಡೂ ಸಾಮಿಧೇನಿಗಳ ನಡುವೆ 'ಪೃಥುಪಾಜ ವತ್ಯೌ ಧಾಯ್ಯೇ ಭವತಃ' ಎಂದು ಹೇಳಿದಂತೆ 'ಪೃಥುಪಾಜಾ ಅಮರ್ತ್ಯಃ' ಮೊದಲಾದ ಎರಡು ಋಕ್ಕುಗಳನ್ನೂ ಪಠಿಸಬೇಕು ಎಂದರ್ಥ. ಇವುಗಳಂತೆಯೇ, ದಶತಯೀಸೂಕ್ತದಿಂದ ತಂದ ಋಕ್ಕುಗಳನ್ನೂ ಸಹ ಮಧ್ಯೆ ನಿವೇಶಮಾಡುವುದೇ ಸರಿ ಎಂಬುದಾಗಿ ಪೂರ್ವಪಕ್ಷ.

ಸಿದ್ಧಾಂತವೇನೆಂದರೆ—ಧಾಯ್ಯಾ ಎಂಬ ಹೆಸರಿನ ಎರಡು ಋಕ್ಕುಗಳನ್ನೂ ಮಧ್ಯೆ ನಿವೇಶಿಸುವುದು 'ಯದಂತರಾ ತದ್ಧಾಯ್ಯಾ' ಎಂದು ಶ್ರುತಿಯಿಂದಲೇ ವಿಹಿತವಾಗಿದೆ. ಧಾಯ್ಯೆಯನ್ನು ಬಿಟ್ಟು ಬೇರೆಡೆಯಿಂದ ತರುವ ಋಕ್ಕುಗಳನ್ನು ಮಧ್ಯೆ ನಿವೇಶಮಾಡಲು ಯಾವುದೇ ಪ್ರಮಾಣವಿಲ್ಲದ್ದರಿಂದ, ಹದಿನೈದುಸಂಖ್ಯೆಯಾದಮೇಲೆ ನಿವೇಶಮಾಡುವುದೇ ಸರಿ.

'ಸಮಿಧ್ಯಮಾನವತೀಂ ಸಮಿದ್ಧವತೀಂ ಚಾಂತರೇಣ'—ಸಮಿಧ್ಯಮಾನಪದದಿಂದ ಕೂಡಿದ ಋಕ್ಕಿಗೂ ಸಮಿದ್ಧವತೀಪದದಿಂದ ಕೂಡಿದ ಋಕ್ಕಿಗೂ ಮಧ್ಯೆ, ಧಾಯ್ಯಾಸ್ಯುಃ—ಧಾಯ್ಯಾಪದದಿಂದ ಹೇಳಿದ ಋಕ್ಕುಗಳು ಬರುವುವು. 'ದ್ಯಾವಾಪೃಥಿವ್ಯೋಃ ಅಸೌ ಎಂದು ಹೇಳಿದ ದ್ಯುಲೋಕಕ್ಕೂ ಇಯಮ್ ಎಂದು ಹೇಳಿದ ಪೃಥಿವೀಲೋಕಕ್ಕೂ, ಅಂತ ರಾಲೇ–ಮಧ್ಯವಾದ ಆಕಾಶಸ್ಥಾನದಲ್ಲಿಟ್ಟು 'ಸಮಹರ್ಣಾತ್—ಧಾಯ್ಯೆಗಳನ್ನು ಸ್ತುತಿಸಿರು ವುದರಿಂದ 'ಧೀಯಂತೇ ಇತಿ ಧಾಯ್ಯಾಃ' ಆಗಂತುಕವಾದ ಋಕ್ಕುಗಳೆಂಬುದು ಸೂತ್ರಾರ್ಥ.

## 16. ಸೋಮಚಮಸಾಧಿಕರಣ (ಪೂ. ಮೀ. 10–3–19)

'ಯದಿ ತು ಬ್ರಹ್ಮಣಸ್ತದೂನಂ ತದ್ವಿಕಾರಸ್ಸ್ಯಾತ್' (ಪೂ. ಮೀ. ಸೂ. 10–3–69)

ಋತುಪೇಯವೆಂಬ ಯಾಗಪ್ರಕರಣದಲ್ಲಿ 'ಔದುಂಬರಃ ಸೋಮಚಮಸೋ ದಕ್ಷಿಣಾ ಸಪ್ರಿಯಾಯ ಸಗೋತ್ರಾಯ ಬ್ರಹ್ಮಣೇ ದೇಯಃ' ಎಂದು ಶ್ರುತವಾಗಿದೆ. ಅತ್ತಿಮರದಿಂದ ಮಾಡಿದ ಸೋಮಧಾರಣಪಾತ್ರೆಯು ದಕ್ಷಿಣೆ. ಅದು ಪ್ರಿಯನೂ, ತನ್ನ ಸಮಾನ ಗೋತ್ರನೂ ಆದ ಬ್ರಹ್ಮ ಎಂಬ ಋತ್ವಿಕ್ಕಿಗೆ ದಾನಮಾಡತಕ್ಕದ್ದು ಇದು ವಿಷಯವಾಕ್ಯದ ಅರ್ಥ. ಬ್ರಹ್ಮ(ಋತ್ವಿಕ್)ನಿಗೆ ದಕ್ಷಿಣಾರೂಪವಾಗಿ ಕೊಡಬೇಕೆಂದು ಇಲ್ಲಿ ವಿಧಿಸಿದ ಸೋಮ ಚಮಸವು ಬ್ರಹ್ಮನಿಗೆ ಸಂಬಂಧಪಟ್ಟ ಎಲ್ಲ ದಕ್ಷಿಣೆಯನ್ನೂ ಬಾಧಿಸಿ ತಾನು ಉಳಿಯು ತ್ತದೆಯೇ ? ಅಥವಾ ಎಲ್ಲ ಋತ್ವಿಕ್ಕುಗಳಿಗೂ ಕೊಡಬೇಕಾದ ದಕ್ಷಿಣೆಯನ್ನೆಲ್ಲಾ ಬಾಧಿಸಿ ತಾನು ಉಳಿಯುತ್ತದೆಯೇ ? ಎಂಬುದು ವಿಚಾರ—

ಅಲ್ಲೀ 'ಯತ್ ಪಶೂನ್ ಬ್ರಹ್ಮಣೇ ದದ್ಯಾತ್ ಸಃ ಅನೃತಂ ಕುರ್ಯಾತ್' ಎಂಬುದಾಗಿ ಪಶುದಾನವನ್ನು ನಿಂದಿಸಿರುವ ಕಾರಣ ಸರ್ವಸ್ವದಾನವೂ ಪ್ರಸಕ್ತವಾಗುವುದರಿಂದ ಅಲ್ಲಿ ಬ್ರಹ್ಮ ಭಾಗವಾಗಬಹುದಾದ ಉಳಿದುದೆಲ್ಲವನ್ನೂ ಬಾಧಿಸಿ ತಾನು ಉಳಿಯುತ್ತದೆಯೇ ಹೊರತು ಯಾಗದ ಉಳಿದ ದಕ್ಷಿಣೆಗಳಿಗೆಲ್ಲಾ ಬಾಧವಿಲ್ಲ ಎಂಬುದು ಪೂರ್ವಪಕ್ಷ.

ಇಲ್ಲಿ ಪಶುದಾನನಿಂದೆಯು ನಿಷೇಧಕ್ಕಾಗಿ ಬಂದುದಲ್ಲ. ಇಲ್ಲಿ ವಿಹಿತವಾದ ಸೋಮ ಚಮಸದ ಬಗ್ಗೆ ಸ್ತುತಿಯನ್ನು ಮಾಡಲು ಹೊರಟ ಅರ್ಥವಾದವಾಗಿದೆ. ಆದಕಾರಣ ಪಶುದಾನನಿಂದೆಯು ಸರ್ವದಾನಪ್ರಸಂಜಕವಲ್ಲದ್ದರಿಂದ ಪ್ರಸಕ್ತವಾದ ಸರ್ವದಾನಕ್ಕೂ ಬಾಧಕವಲ್ಲ ಎಂಬುದು ಸರಿಯಲ್ಲ. ಸರ್ವದಕ್ಷಿಣೆಯನ್ನೂ ಬಾಧಿಸಿಯೇ ಬಾಧಿಸುತ್ತದೆ. ಲೌಕಿಕವಾದ ಉಪಾಯಗಳಿಂದ ಋತ್ವಿಕ್ಕುಗಳನ್ನು ಪ್ರಾರ್ಥಿಸಿ ಯಾಗವನ್ನು ನಡೆಸತಕ್ಕದ್ದು ಎಂಬುದು ಸಿದ್ಧಾಂತ.

ಸೂತ್ರಾರ್ಥ :—ಯದಿ ತು ಬ್ರಹ್ಮಣಃ—ಸೋಮಚಮಸದಾನವು ಬ್ರಹ್ಮನಿಗೆ ಆಗುವುದಾದರೆ, (ಈ ಯಾಗವು) ತದೂನಮ್—ಸೋಮಚಮಸದ ಹೊರತು ಉಳಿದ ಬ್ರಹ್ಮ ಭಾಗಮಾತ್ರದಿಂದ ಊನವಾದ ಉಳಿದ ಪ್ರಕೃತಿಯಲ್ಲಿ ಕಂಡ ದಾನವುಳ್ಳದ್ದಾಗಿರುವುದು. ಆದ್ದರಿಂದ, ತದ್ವಿಕಾರಃ ಸ್ಯಾತ್—ಬ್ರಹ್ಮಭಾಗಕ್ಕೆ ವಿಕಾರವೇರ್ಪಡುವುದು. (ಪೂರ್ವಪಕ್ಷ ಸೂತ್ರ.)

## 17. ಸ್ವರ್ಗಕಾಮಾಧಿಕರಣ (ಪೂ. ಮೀ. 6–1–1)

'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬುದು ದರ್ಶಪೂರ್ಣ ಮಾಸಯಾಗವಿಧಿ. ಇಂತಹ ಯಾಗಕ್ರಿಯೆಯನ್ನು ನೆರವೇರಿಸುವವನೇ ಅದಕ್ಕೆ ಕರ್ತೃ. ಇಂತಹ ಕರ್ತೃವಿಗೆ ಈ ಯಾಗಾಧಿಕಾರವು ಉಂಟೇ ಇಲ್ಲವೇ ಎಂಬುದು ಇಲ್ಲಿಯ ವಿಚಾರ. ಅಧಿಕಾರವೆಂದರೆ ಯಾವುದರ ಬಗ್ಗೆ ಅಧಿಕಾರವೆಂದು ಹೇಳುತ್ತೇವೋ, ಅಂತಹ ಕ್ರಿಯಾದಿ ಗಳಿಂದ ದೊರಕುವ ಫಲಕ್ಕೆ ಭೋಕ್ತೃವಾಗುವಿಕೆ ಅಂದರೆ ಸ್ವಾಮಿತ್ವ. ಈ ಬಗೆಯ ಅಧಿಕಾರವು ಯಾಗಕರ್ತೃವಿಗೂ ಸಂಭವಿಸಲಾರದು. ಏಕೆಂದರೆ ಅದರ ಫಲಭೋಗ ಅವನಿಗಿಲ್ಲ.

'ಯಜೇತ' ಎಂಬಲ್ಲಿ 'ತ' ಎಂಬ ಆಖ್ಯಾತಪ್ರತ್ಯಯದಿಂದ ಭಾವನೆಯು (ಪುರುಷ ಪ್ರಯತ್ನ) ಅಭಿಹಿತವಾಗುತ್ತದೆ. ಅದಕ್ಕೆ ಸಾಧ್ಯರೂಪವಾಗಿ 'ಯಜ್' ಧಾತುವಿನ ಅರ್ಥವಾದ ಯಾಗಕ್ರಿಯೆಯು ಏಕಪದಶ್ರುತಿರೂಪಪ್ರಮಾಣದಿಂದ ತೋರುತ್ತದೆ. ಸ್ವರ್ಗವಾದರೋ 'ಯಜೇತ' ಎಂಬುದಕ್ಕಿಂತಲೂ ಭಿನ್ನವಾದ ಸ್ವರ್ಗಕಾಮಪದದಿಂದ ತೋರುವ ಕಾರಣ, ವಾಕ್ಯಪ್ರಮಾಣವನ್ನವಲಂಬಿಸಿಯೇ ಸಾಧ್ಯವೆಂದು ತೋರಬೇಕಾಗಿದೆ. ಆದರೆ ಏಕಪದಶ್ರುತಿಯು ವಾಕ್ಯಪ್ರಮಾಣಕ್ಕಿಂತಲೂ ಬಲಿಷ್ಠವಾದುದರಿಂದ ವಾಕ್ಯ ಪ್ರಮಾಣವನ್ನು ಬಾಧಿಸುತ್ತದೆ. ಹೀಗಿರಲಾಗಿ ಆಖ್ಯಾತದಿಂದ ತೋರುವ ಭಾವನೆಗೆ ಸ್ವರ್ಗವು ಸಾಧ್ಯರೂಪವಾಗಲಾರದು. ಸ್ವರ್ಗಶಬ್ದವು ಪುರುಷನಿಗೆ ಭೋಗಾರ್ಹವಾದ ಸುಖವನ್ನು ಹೇಳದೆ ಸುಖಸಾಧನವನ್ನು ಮಾತ್ರ ಹೇಳುತ್ತದೆ. ಆದ್ದರಿಂದ ಈ ವಿಧಿವಾಕ್ಯದಲ್ಲಿ ಫಲ ಶ್ರವಣವೇ ಇಲ್ಲದುದರಿಂದ ಯಾಗಕರ್ತೃವಿಗೆ(ಯಜಮಾನ) ಕರ್ತೃತ್ವವೇ ಹೊರತು ಭೋಕ್ತೃತ್ವರೂಪವಾದ ಅಧಿಕಾರವಿಲ್ಲವೆಂಬುದು ಪೂರ್ವಪಕ್ಷ.

ಇಲ್ಲಿಯು ಸಿದ್ಧಾಂತವಿದು—'ಯಜೇತ' ಎಂಬಲ್ಲಿಯು 'ತ' ಎಂಬುದಕ್ಕೆ ಎರಡು ರೂಪವುಂಟು. ಒಂದು 'ಆಖ್ಯಾತತ್ವ', ಮತ್ತೊಂದು 'ಲಿಂಜ್ತ್ವ'. ಅದರಲ್ಲಿ ಆಖ್ಯಾತತ್ವವೆಂಬ ರೂಪದಿಂದ 'ತ' ಪ್ರತ್ಯಯವು ಭಾವನೆಯನ್ನೂ, ವಿಧಿತ್ವವೆಂಬ ರೂಪದಿಂದ ಪುರುಷಪ್ರವರ್ತನೆಯನ್ನೂ ಬೋಧಿಸುತ್ತದೆ. ಪುರುಷನಾದರೋ, ಫಲವೊಂದನ್ನೆದುರು ನೋಡದೆ ಪ್ರವರ್ತಿಸಲಾರನಾದ್ದರಿಂದ 'ವಿಧಿ'ಪ್ರತ್ಯಯವು ಪುರುಷಪ್ರವೃತ್ತಿಗೆ ಸಾಧನರೂಪವಾಗಿ ಸ್ವರ್ಗವನ್ನೇ ಸ್ವೀಕರಿಸುತ್ತದೆ. ಸ್ವರ್ಗಶಬ್ದವೂ ಸಹ ಸಮುದಾಯಶಕ್ತಿ(ರೂಢಿ) ಯಿಂದ ಉತ್ಕೃಷ್ಟವಾದ ಸುಖವನ್ನೇ ಹೇಳುತ್ತದೆ. ಆದಕಾರಣ ವಿಧಿರೂಪವಾದ ಶ್ರುತಿಯಿಂದಲೇ ಪುರುಷಪ್ರವೃತ್ತಿಗೆ ಸ್ವರ್ಗರೂಪವಾದ ಸುಖವು ಸಾಧ್ಯವಾಗಿ ತೋರುತ್ತದೆ. ಏಕಪದಶ್ರುತಿಯಿಂದ ಧಾತ್ವರ್ಥವಾದ ಯಾಗವು ಭಾವ್ಯವಾಗಿ ತೋರಿದರೂ ಸಹ, ಪ್ರಕೃತಿಯಿಂದ ತೋರಿತೇ ವಿನಹ ಪ್ರತ್ಯಯದಿಂದಲ್ಲ. ಆದಕಾರಣ ಆಖ್ಯಾತದಿಂದ ತೋರಿದ ಭಾವನೆಗೆ ಅದೇ ಆಖ್ಯಾತದಿಂದ ವಿಧಿತ್ವಾಕಾರದ ಮೂಲಕ ತೋರಿದ ಪ್ರವೃತ್ತಿಗೆ ಭಾವ್ಯವಾದ ಸ್ವರ್ಗವು ಸನ್ನಿಹಿತವಾಗಿರುವುದು. 'ಕಾಮಃ' ಎಂಬ ಶಬ್ದದಿಂದಲೂ ಸಹ, ಕಾಮ್ಯತ್ವವನ್ನು ಹೊಂದಿ ಸ್ವರ್ಗವು ಭಾವನೆಗೆ ಭಾವ್ಯವಾಗುವುದು. ಒಟ್ಟಿನಲ್ಲಿ ಈ ವಿಧಿವಾಕ್ಯದಿಂದ ಫಲಶ್ರವಣವು ದೊರಕುವುದರಿಂದ ಫಲಭೋಗವು ತೋರಿ ಭೋಕ್ತೃತ್ವವೆಂಬ ಅಧಿಕಾರವು ಯಜಮಾನನಿಗೆ ಸಿದ್ಧವಾಗುವುದು.

## 18. ಸ್ವರ್ಗಪರತಾಧಿಕರಣ (ಪೂ. ಮೀ. 4-3-7)

'ಸಃ ಸ್ವರ್ಗಃ ಸ್ಯಾತ್ ಸರ್ವಾನ್ ಪ್ರತಿ ಅವಿಶಿಷ್ಟತ್ವಾತ್' (ಪೂ. ಮೀ. ಸೂ. 4-3-15)

ಇದು ಪೂರ್ಣಸೂತ್ರ, 'ವಿಶ್ವಜಿತಾ ಯಜೇತ' ಎಂಬುದು ವಿಶ್ವಜಿದ್ಯಾಗವನ್ನು ವಿಧಿಸುವ ವಾಕ್ಯ. ಇಲ್ಲಿ ಪಶುಕಾಮಃ, ಸ್ವರ್ಗಕಾಮಃ, ಮೊದಲಾಗಿ ಯಾವುದೇ ಫಲ ನಿರ್ದೇಶವಿಲ್ಲ. ಫಲವಿಲ್ಲದೇ ಯಾವುದೇ ಕರ್ಮದಲ್ಲೂ ಪ್ರವೃತ್ತಿ ಬರಲಾರದು. ಆದಕಾರಣ ಫಲವನ್ನು ಕಲ್ಪಿಸಿ ಯಾಗವನ್ನು ಅನುಷ್ಠಿಸಬೇಕು, ಎಂಬ ಸಿದ್ಧಾಂತವನ್ನು ಆಧರಿಸಿ ಈ ಅಧಿಕರಣ.

ಕಲ್ಪಿಸಬೇಕಾದಂತಹ ಫಲ ಇಂತಹದೇ ಎಂಬ ಬಗ್ಗೆ ನಿಯಾಮಕವಾವುದೂ ಇಲ್ಲದ್ದರಿಂದ ಯಾರು ಯಾರಿಗೆ ಯಾವ ಯಾವ ಫಲಬೇಕೋ ಅವೆಲ್ಲದರ ಬಗ್ಗೆಯೂ ಈ ಯಾಗಾನುಷ್ಠಾನವೆ? ಅಥವಾ ಫಲವಿಶೇಷವನ್ನೂ ಕಲ್ಪಿಸಬೇಕೇ? ಎಂಬುದು ಇಲ್ಲಿಯ ವಿಚಾರ.

ನಿಯಾಮಕವಿಲ್ಲದ್ದರಿಂದ ಎಲ್ಲ ಫಲವನ್ನೂ ಕಲ್ಪಿಸುವುದಾದರೆ ಸರ್ವಫಲಕಲ್ಪನಾ ಗೌರವವೇರ್ಪಡುತ್ತದೆಯಾದ್ದರಿಂದ, ಇಲ್ಲಿ ಫಲಕಲ್ಪನೆಯೂ ಕಷ್ಟಕರವೇ ಎಂಬುದು ಪೂರ್ವಪಕ್ಷ.

ಪಶು, ಪಕ್ಷಿ, ಪುತ್ರಾದಿಫಲಗಳು ಆಯಾ ಅಧಿಕಾರಿಗಳ ಇಷ್ಟ ಮತ್ತು ಅನಿಷ್ಟರೂಪವಾಗಬಹುದಾದ್ದರಿಂದಲೂ, ದುಃಖಮಿಶ್ರಿತವಾದುದರಿಂದಲೂ, ಎಲ್ಲರನ್ನೂ ಕುರಿತು ಯೋಗ್ಯಫಲವಾಗದುದರಿಂದ ಎಲ್ಲರೂ ಅಪೇಕ್ಷಿಸುವಂತಹ ದುಃಖಸ್ಪರ್ಶಶೂನ್ಯವಾದ ಉತ್ಕೃಷ್ಟಸುಖರೂಪಸ್ವರ್ಗವು ವಿಶ್ವಜಿದ್ಯಾಗಕ್ಕೆ ಫಲವೆಂದು ಕಲ್ಪಿಸುವುದರಲ್ಲಿ ಯಾವ ತೊಂದರೆಯೂ ಇಲ್ಲವೆಂಬುದು ಸಿದ್ಧಾಂತ.

ಸೂತ್ರಾರ್ಥ:—ಸಃ–ವಿಶ್ವಜಿದ್ಯಾಗದ ಫಲರೂಪವಾದ ಅರ್ಥವು ಸ್ವರ್ಗಃ ಸ್ಯಾತ್— ದುಃಖಾಸಂಭಿನ್ನಸುಖರೂಪವಾದ ಸ್ವರ್ಗವೆಂಬುದೇ ಸರಿ. ಸರ್ವಾನ್ ಪ್ರತಿ–ಎಲ್ಲ ಅಧಿಕಾರಿಗಳನ್ನೂ ಕುರಿತು, ಅವಿಶಿಷ್ಟತ್ವಾತ್–ವೈಷಮ್ಯವಿಲ್ಲದೆ ಸಮಾನವಾಗಿ ಅಪೇಕ್ಷಿಸತಕ್ಕ ಫಲವಾದ್ದರಿಂದ.

# ೧೦. ಲೌಕಿಕನ್ಯಾಯಗಳು

## 1. 'ಕಾಕಾಕ್ಷಿನ್ಯಾಯಃ

ಕಾಕಸ್ಯ ಅಕ್ಷಿಗೋಲಕಮಿವ ನ್ಯಾಯಃ–ಕಾಗೆಯ ಕಣ್ಣುಗುಡ್ಡೆಯಂತಿರುವ ಒಂದು ನ್ಯಾಯ.

ಒಂದು ವಸ್ತುವು ಎರಡು ಬಗೆಯಲ್ಲಿ ಉಪಯೋಗಕ್ಕೆ ಬರುವುದು ಈ ನ್ಯಾಯದ ಆಶಯ. ಇದರ ಅರ್ಥ—ಕಾಗೆಗೆ ಚಕ್ಷುರಿಂದ್ರಿಯವೊಂದೇ ಇರುವುದಾಗಿದ್ದು ಅದರ ಗೋಲಕವು ಮಾತ್ರ ಎರಡು ಕಡೆಯಿರುವುದು. ಕಾಗೆಯು ಎರಡೂ ಕಡೆಯಲ್ಲಿ ನೋಡಲು ಒಂದೇ ಇಂದ್ರಿಯವನ್ನು ಬಳಸಿಕೊಳ್ಳುತ್ತದೆ. ಅದರಂತೆ ಒಂದುವಾಕ್ಯದಲ್ಲಿ ಪ್ರಯುಕ್ತವಾದ ಒಂದೇ ಪದವು ವಾಕ್ಯದ ಎರಡು ಭಾಗಗಳಿಗೂ ಅನ್ವಯಿಸಿ ಪ್ರಕೃತಾರ್ಥವನ್ನು ಪೂರೈಸುವುದು ಎಂಬಲ್ಲಿ ಇದರ ಅನ್ವಯ. ಇಂತಹ ಸನ್ನಿವೇಶದಲ್ಲಿ 'ಮಧ್ಯಮಣಿನ್ಯಾಯ' 'ದೇಹಲೀದೀಪನ್ಯಾಯ' ಎಂಬುದಾಗಿಯೂ ವಿವರಿಸುವುದುಂಟು.

## 2. ಕೈಮುತಿಕನ್ಯಾಯಃ

ಇದು ಲೌಕಿಕನ್ಯಾಯ. 'ಕಿಮುತ' ಆ ಬಗ್ಗೆ ಮತ್ತೆ ಹೇಳಬೇಕಾದುದೇನು ? ಎಂಬ ಅಂಶವನ್ನು ತೆಗೆದುಕೊಂಡುಬಂದ ನ್ಯಾಯ. ಅಂದರೆ ಆಭರಣಗಳು ತುಂಬಿದ್ದ ಒಂದು ಪೆಟ್ಟಿಗೆಯನ್ನೇ ಕಳ್ಳನು ಕೊಂಡೊಯ್ದನು ಎಂದಾಗ ಪೆಟ್ಟಿಗೆ ಒಳಗಿನ ಆಭರಣಗಳನ್ನು ಕದ್ದೊಯ್ದನೆಂಬ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ ! ಪೆಟ್ಟಿಗೆಯನ್ನು ಕದ್ದೊಯ್ದದ್ದರಿಂದಲೇ ಆಭರಣವನ್ನೂ ಒಯ್ದನೆಂಬುದು ಸ್ವತಃ ಸಿದ್ಧವಾಗುತ್ತದೆ.

## 3. 'ಛತ್ರಿನ್ಯಾಯಃ'

ಹತ್ತಾರು ಜನಗಳಿರುವ ಒಂದು ಗುಂಪಿನಲ್ಲಿ ಒಬ್ಬನೇ ಒಬ್ಬನು ಛತ್ರಿಯನ್ನು ಹಿಡಿದುಕೊಂಡಿದ್ದರೆ ಅವನನ್ನೊಳಗೊಂಡ ಎಲ್ಲ ಜನರನ್ನೂ ಉದ್ದೇಶಿಸಿ 'ಛತ್ರಿಣೋ ಯಾನ್ತಿ' 'ಛತ್ರಧಾರಿಗಳು ಹೋಗುತ್ತಿದ್ದಾರೆ' ಎಂದು ಪ್ರಯೋಗಿಸುತ್ತಾರೆ. ಅಂತೆಯೇ ಸಮೂಹದಲ್ಲೊಬ್ಬರಲ್ಲಿರುವ ಧರ್ಮವನ್ನು ಸಮೂಹಕ್ಕೂ ಅನ್ವಯಿಸಬಹುದೆಂಬುದನ್ನ ಈ ನ್ಯಾಯವು ತಿಳಿಸುತ್ತದೆ.

## 4. ನೀರಕ್ಷೀರನ್ಯಾಯಃ

ಬೆರೆತ ವಸ್ತುಗಳನ್ನು ಬೇರ್ಪಡಿಸುವುದು ಅಸಾಧ್ಯವಾಗಿ ತೋರಿದಾಗ ಈ ನ್ಯಾಯ ನೆನಪಿಗೆ ಬರುತ್ತದೆ. ಅಂದರೆ ಹೆಚ್ಚು ನೀರಿನೊಡನೆ ಸ್ವಲ್ಪ ಹಾಲು ಬೆರೆತಾಗ, ಹಾಲು ಅದರೊಡನೆ ಸೇರಿರುವುದು ಎಷ್ಟೇ ಸತ್ಯವಾದರೂ, ಆ ಹಾಲನ್ನು ಹಾಲಾಗಿ ತೋರಿಸುವುದು ಹೇಗೆ ಅಸಾಧ್ಯವೋ ಹಾಗೆ, ಪ್ರಕೃತಿಪ್ರಾಕೃತಗಳೊಡನೆ ಪರಮಾತ್ಮತತ್ತ್ವವು ಸೇರಿಕೊಂಡಿರು

ವಾಗ ಈ ಪ್ರಕೃತಿಯಿಂದ ಬೇರ್ಪಡಿಸಿ ಅದನ್ನು ಅರಿವಿಗೆ ತರುವುದು ಸುಲಭಸಾಧ್ಯವಲ್ಲ ವೆಂಬುದು ಇದರ ಅಭಿಪ್ರಾಯ.

### 5. ಬ್ರಾಹ್ಮಣಪರಿವ್ರಾಜಕನ್ಯಾಯಃ

ಇದರ ಸಾರಾಂಶ-ಯಾವ ವಾಕ್ಯದಲ್ಲಿ ಸಾಮಾನ್ಯಶಬ್ದವೂ ವಿಶೇಷಶಬ್ದವೂ ಒಟ್ಟಿಗೆ ಬಳಸಲ್ಪಡುತ್ತದೆಯೋ ಅಂತಹ ಸ್ಥಳದಲ್ಲಿ ಸಾಮಾನ್ಯಶಬ್ದವು, ಪಕ್ಕದಲ್ಲಿರುವ ವಿಶೇಷಶಬ್ದದ ಅರ್ಥವನ್ನು ಬಿಟ್ಟು ಉಳಿದ ಸಾಮಾನ್ಯವನ್ನು ಮಾತ್ರ ಹೇಳುವುದು ಎಂಬುದು. ಅಂದರೆ— ಯಾವುದೇ ಯಜ್ಞಾದಿಕರ್ಮಗಳು ಪರಿಸಮಾಪ್ತಿಯಾದಮೇಲೆ 'ಬ್ರಾಹ್ಮಣಾಃ ಪರಿವ್ರಾಜಕಾಶ್ಚ ಭೋಜ್ಯಂತಾಮ್' ಎಂಬ ವಾಕ್ಯಪ್ರಯೋಗಮಾಡಿದಲ್ಲಿ (ಬ್ರಾಹ್ಮಣರಿಗೂ ಮತ್ತು ಸನ್ಯಾಸಿಗಳಿಗೂ ಭೋಜನಮಾಡಿಸಿ) ಪರಿವ್ರಾಜಕರೂ ಸಹ ಬ್ರಾಹ್ಮಣರೇ ಆಗಿರುವುದರಿಂದ ಬ್ರಾಹ್ಮಣಾಃ ಎಂಬ ಪದದಿಂದಲೇ ಅವರನ್ನು ಗ್ರಹಿಸಬಹುದಾಗಿರಲಾಗಿ ಪೃಥಕ್ಕಾಗಿ ಪರಿವ್ರಾಜಕ ಪದವನ್ನು ಪ್ರಯೋಗಿಸಿರುವುದರಿಂದ ಬ್ರಾಹ್ಮಣಶಬ್ದವು ಪರಿವ್ರಾಜಕರನ್ನು ಬಿಟ್ಟು ಉಳಿದ ಬ್ರಾಹ್ಮಣರನ್ನು ಮಾತ್ರ ಹೇಳುತ್ತದೆ. ಅಂದರೆ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಎಂಬ ಮೂರು ಆಶ್ರಮದವರೂ ಬ್ರಾಹ್ಮಣಪದದ ಅರ್ಥವಾಗಿದ್ದು ಪರಿವ್ರಾಜಕಪದ ಸನ್ಯಾಸಿಯನ್ನು ಮಾತ್ರ ಹೇಳತಕ್ಕದ್ದೆಂದು ತಿಳಿಯತಕ್ಕದ್ದು.

### 6. ಯಾಚಿತಮಂಡನನ್ಯಾಯಃ

ಸ್ವಂತವಾಗಿ ಆಭರಣಗಳಿಲ್ಲದವರು ಯಾವುದಾದರೂ ಶುಭಸಮಾರಂಭದ ಸಲುವಾಗಿ ತಮ್ಮ ಆತ್ಮೀಯರಾದ ಉಡಿಗೆ-ತೊಡಿಗೆ ಉಳ್ಳವರಿಂದ ಆ ಸಮಾರಂಭಕ್ಕಾಗಿ ತನಗೆ ಉಡಿಗೆ-ತೊಡಿಗೆಗಳನ್ನು ಕೊಟ್ಟಿರಬೇಕೆಂದು ಬೇಡಿಕೊಂಡು ಆ ಸಮಯದಲ್ಲಿ ಉಡಿಗೆ-ತೊಡಿಗೆಗಳನ್ನು ತನ್ನ ಸ್ವಂತವಾದ ವಸ್ತುಗಳಂತೆಯೇ ಧರಿಸಿ ತಾವೂ ಸಂತೋಷಪಟ್ಟು ತಮ್ಮನ್ನು ನೋಡಿದವರನ್ನೂ ಸಂತೋಷಪಡುವಂತೆ ಮಾಡಿ ಅಂದರೆ ಸ್ವೋಪಯೋಗ ಪರೋಪಯೋಗಗಳನ್ನು ದೊರಕಿಸಿ ಆ ಕಾರ್ಯಸಮಾಪ್ತಿಯಾದಮೇಲೆ ಆ ಒಡವೆಗಳನ್ನು ಒಡೆತನ ಹೊಂದಿದವರಿಗೆ ಹಿಂತಿರುಗಿಸುತ್ತಾರೆ ಎಂಬುದು ಈ ನ್ಯಾಯ.

### 7. ಸೂಚೀಕಟಾಹನ್ಯಾಯಃ

ಒಬ್ಬರಿಗೆ ಅಲ್ಪಕಾಲ ಅಲ್ಪಶ್ರಮಗಳಿಂದ ಆಗುವ ಕೆಲಸವನ್ನು ಬಹುಕಾಲ ಬಹುಶ್ರಮಗಳಿಂದ ಸಾಧ್ಯವಾಗುವ ಕೆಲಸವನ್ನೂ ನೇಮಿಸಿದಾಗ ಕೆಲಸ ಒಪ್ಪಿಕೊಂಡವನು ಇವೆರಡು ಕಾರ್ಯಗಳ ಪೈಕಿ ಯಾವ ಕಾರ್ಯವು ಅಲ್ಪಶ್ರಮ ಮತ್ತು ಅಲ್ಪಕಾಲಗಳಿಂದ ಸಾಧ್ಯವಾಗತಕ್ಕದ್ದೋ ಅಂತಹದ್ದನ್ನು ಮೊದಲು ಮಾಡಿ ಬಹುಕಾಲ ಬಹುಶ್ರಮಸಾಧ್ಯವಾದುದನ್ನು ಅನಂತರ ಮಾಡುವುದು ಲೋಕದಲ್ಲಿ ಕಂಡು ಬಂದಿದೆ. ಉದಾಹರಣೆಗೆ—ಒಬ್ಬ ಲೋಹಕರ್ಮಕಾರನಿಗೆ ಸೂಚಿಯನ್ನೂ ಒಂದು ಹಂಡೆಯನ್ನೂ ಮಾಡಲು ಆಜ್ಞಾಪಿಸಿದಾಗ ಅವನು ಮೊದಲು ಸೂಜಿಯನ್ನು ತಯಾರಿಸಿ ನಂತರ ಹಂಡೆಯನ್ನು ತಯಾರಿಸುವನು. ಇದು ಈ ನ್ಯಾಯ.

# ೧೧. ಕಠೋಪನಿಷತ್ತಿನ ವಾಕ್ಯಗಳನ್ನು ಹೋಲುವ ಗೀತಾವಾಕ್ಯಗಳ ಆಶಯ

ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥

(ಕ. ಉ. 2–19)

ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥

(ಭ. ಗೀ. 2–19)

ಅಜನೂ, ನಿತ್ಯನೂ, ಶಾಶ್ವತನೂ ಆದ ಜೀವಾತ್ಮನನ್ನು ಕುರಿತು ಹನನಕಾರಣವೆಂಬುದಾಗಿ ಯಾವುದನ್ನೇ ಓರ್ವನು ಯೋಚಿಸುತ್ತಾನೆಯೋ, ಅಂತೆಯೇ ಯಾವುದೇ ಸಾಧನದಿಂದ ಈ ಆತ್ಮನು ಕೊಲ್ಲಲ್ಪಟ್ಟನೆಂದು ಒಬ್ಬನು ತಿಳಿಯುವನೋ ಇವರಿಬ್ಬರೂ ಆತ್ಮನನ್ನು ತಿಳಿದವರಲ್ಲ. ಆತ್ಮನು ನಿತ್ಯನಾದ ಕಾರಣ ಹನನಸಾಧನವೆಂದು ಲೋಕಪ್ರಸಿದ್ಧವಾದುದಾವುದೂ ಇವನನ್ನು ಸಂಹರಿಸಲಾರದು. ಆದುದರಿಂದಲೇ ಇವನು ಸಂಹರಿಸಲ್ಪಡುವುದಿಲ್ಲ. ಆತ್ಮನನ್ನುದ್ದೇಶಿಸಿ 'ಹನ್' ಧಾತುವನ್ನು ಪ್ರಯೋಗಮಾಡಿದೆಡೆಯಲ್ಲಿ ದೇಹ ಮತ್ತು ಆತ್ಮಗಳ ವಿಯೋಗವೇ 'ಹನ್' ಧಾತುವಿನಿಂದ ತೋರುತ್ತದೆಯೇ ವಿನಹ ದೇಹ ಮೊದಲಾದ ಅಚೇತನವಸ್ತುಗಳನ್ನು ಕುರಿತು ಪ್ರಯೋಗಿಸಿದೆಡೆಯಲ್ಲಿ ತೋರುವಂತಹ ನಾಶವನ್ನಲ್ಲ. 'ನ ಹಿಂಸ್ಯಾತ್ ಸರ್ವಾಭೂತಾನಿ' 'ಬ್ರಾಹ್ಮಣೋ ನ ಹಂತವ್ಯಃ' ಇವೇ ಮೊದಲಾದ ಹನನನಿಷೇಧಶಾಸ್ತ್ರಗಳೂ ಸಹ ಶಾಸ್ತ್ರವಿಹಿತವಲ್ಲದ ಶರೀರವಿಯೋಗವನ್ನು ಕುರಿತದ್ದಾಗಿದೆ.

ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ನಾಯಂ ಕುತಶ್ಚಿತ್ ನ ಬಭೂವ ಕಶ್ಚಿತ್ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥

(ಕ. ಉ. 2–18)

ನ ಜಾಯತೇ ಮ್ರಿಯತೇ ವಾ ಕದಾಚಿತ್ ನಾಯಂ ಭೂತ್ವಾ ಭವಿತಾ ವಾ ನ ಭೂಯಃ।
ಅಜೋನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥

(ಭ. ಗೀ. 2–20)

ಆತ್ಮನು ನಿತ್ಯನೂ, ವಿಕಾರರಹಿತನೂ ಆಗಿರುವುದರಿಂದ ಜನನಮರಣಾದಿ ಅಚೇತನದೇಹಧರ್ಮಗಳು ಇವನಿಗೆ ಇಲ್ಲ ಎಂಬ ವಿಷಯವನ್ನು ಮೇಲಿನ ಶ್ಲೋಕದಿಂದ ತಿಳಿಸಿದ್ದಾರೆ.

ಊರ್ಧ್ವಮೂಲೋ ಅವಾಕ್‌ಶಾಖ ಏಷೋಽಶ್ವತ್ಥಸ್ಸನಾತನಃ ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ್ ॥ (ಏತದ್ವೈತತ್)

(ಕ. ಉ. 6–1)

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಂ ।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ (ಭ. ಗೀ. 15–1)

ಇತ್ಯಾದಿ ಶ್ರುತಿಸ್ಮೃತಿಗಳು ಯಾವ ಸಂಸಾರವೆಂಬ ಅಶ್ವತ್ಥವೃಕ್ಷವನ್ನು ಊರ್ಧ್ವಮೂಲ, ಅಧಃಶಾಖ, ಅವ್ಯಯ ಎಂದು ಹೇಳುವುವೋ ಅಂತೆಯೇ ಯಾವ ಈ ಅಶ್ವತ್ಥಕ್ಕೆ ಛಂದಸ್ಸುಗಳೇ(ಶ್ರುತಿ) ಎಲೆಗಳೆನಿಸುವುವೋ ಅಂತಹ ಈ ಅಶ್ವತ್ಥವನ್ನು ತಿಳಿದವನು ವೇದವಿತ್ ಎನಿಸುತ್ತಾನೆ. ಈ ಅಶ್ವತ್ಥವು ಏಳು ಲೋಕಗಳಿಗೂ ಮೇಲ್ಪಟ್ಟ ಚತುರ್ಮುಖನನ್ನು ಮೂಲವಾಗಿ ಹೊಂದಿರುವುದರಿಂದ ಊರ್ಧ್ವಮೂಲವೂ, ಭೂಮಿಯಲ್ಲಿ ವಾಸಿಸುವ ಸಮಸ್ತ ಜೀವಿಗಳನ್ನೂ ಬೆಳವಣಿಗೆಯ ಕೊನೆಯಾಗಿ ಹೊಂದಿರುವುದರಿಂದ ಅಧಃಶಾಖವೂ (ಕೆಳಗೊಂಬೆ ವುಳ್ಳದ್ದು). ಈ ಸಂಸಾರದಲ್ಲಿ ಅನಾಸಕ್ತನಾಗಿರಲೂ ಬೇಕಾದ ಸಮ್ಯಗ್ಜ್ಞಾನ (ಶುದ್ಧವಾದ ತತ್ತ್ವಜ್ಞಾನ) ಹುಟ್ಟುವವರೆಗೂ ನಿರಂತರ ಪ್ರವಾಹರೂಪವಾಗಿ ಸರಿಯುತ್ತಿರುವುದರಿಂದ ಅವ್ಯಯವೂ ಮತ್ತು ಶ್ರುತ್ಯುಕ್ತವಾದ ಕಾಮ್ಯಕರ್ಮಗಳನ್ನು ತನ್ನ ಬೆಳವಣಿಗೆಗೆ ಕಾರಣವಾಗಿ ಹೊಂದಿರುವುದರಿಂದ ಛಂದಃಪರ್ಣವೂ ಎಂದು ರೂಪಿಸಿದೆ. ವೇದವು ಸಂಸಾರವೃಕ್ಷದ ಸ್ವರೂಪವನ್ನು ತಿಳಿಸಿ ಆ ಮೂಲಕ ಅದನ್ನು ಛೇದಿಸಿ ಮುಕ್ತನಾಗಿ ಬಾಳುವ ಉಪಾಯವನ್ನು ತಿಳಿಸುವ ಕಾರಣ ಈ ವೃಕ್ಷಸ್ವರೂಪವನ್ನು ಅರಿತವನು ವೇದವಿತ್ ಎನಿಸುತ್ತಾನೆ.

ಪುರಾಣಗಳಲ್ಲಿ —

ಅವ್ಯಕ್ತಮೂಲಪ್ರಭವಃ ತಸ್ಯೈವಾನುಗ್ರಹೋತ್ಥಿತಃ ।
ಬುದ್ಧಿಸ್ಕಂಧಮಯಶ್ಚೈವ ಇಂದ್ರಿಯಾಂತರಕೋಟರಃ ॥

ಮಹಾಭೂತವಿಶಾಖಶ್ಚ ವಿಷಯೈಃ ಪತ್ರಶಾಖವಾನ್ ।
ಧರ್ಮಾಧರ್ಮಸುಪುಷ್ಪಶ್ಚ ಸುಖದುಃಖಫಲೋದಯಃ ॥

ಆಜೀವ್ಯಃ ಸರ್ವಭೂತಾನಾಂ ಬ್ರಹ್ಮವೃಕ್ಷಸ್ಸನಾತನಃ ।
ಏತದ್ಬ್ರಹ್ಮವನಂ ಚೈವ ಬ್ರಹ್ಮವೃಕ್ಷಸ್ಯ ತಸ್ಯ ತತ್ ॥

ಏತಚ್ಛಿತ್ವಾ ಚ ಭಿತ್ವಾ ಚ ಜ್ಞಾನೇನ ಪರಮಾಸಿನಾ ।
ತತಶ್ಚಾತ್ಮರತಿಂ ಪ್ರಾಪ್ಯ ಯಸ್ಮಾನ್ನಾವರ್ತತೇ ಪುನಃ ॥
(ಭಾ. ಆಶ್ವ. 35–20 ನಾರ. ಪು. 16–5)

ಇಂದ್ರಿಯಾಣಿ ಪರಾಣ್ಯಾಹುಃ ಇಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಯೋ ಬುದ್ಧೇಃ ಪರತಸ್ತು ಸಃ ॥
(ಭ. ಗೀ. 3–42)

ಸಕಲಶರೀರಗಳಲ್ಲಿಯೂ ಗೋಚರವಾಗುವ ಹುಟ್ಟು ಸಾವು ಎಂಬ ಜನನಮರಣಗಳ ಸೋಂಕು ಇವನನ್ನು (ಆತ್ಮನನ್ನು) ಸ್ಪರ್ಶಿಸುವುದಿಲ್ಲ. 'ನಾಯಂ ಭೂತ್ವಾ ಭವಿತಾ ವಾ ನ ಭೂಯಃ' ಅಂದರೆ ಚತುರ್ಮುಖಬ್ರಹ್ಮಾದಿಗಳ ದೇಹದ ಬಗ್ಗೆ ಆಗಮಗಳಲ್ಲಿ ಹೇಳಿರುವ

ಕಲ್ಪಾದಿಕಾಲದ ಉತ್ಪತ್ತಿ ಕಲ್ಪಾಂತಕಾಲದ ನಾಶ ಇವೂ ಸಹ ಈ ಆತ್ಮನನ್ನು ಸ್ಪರ್ಶಿಸುವುದಿಲ್ಲ. ಆದಕಾರಣ ಸಕಲ ದೇಹಗಳಲ್ಲಿ ಇರುವ ಆತ್ಮನು ಅಜನು, ಆದುದರಿಂದಲೇ ನಿತ್ಯನು, ಶಾಶ್ವತನು. ಶಾಶ್ವತನು ಅಂದರೆ ಪ್ರಕೃತಿಯಂತೆ ಅಸ್ಪಷ್ಟವಾದ (ಸ್ಥೂಲ ಬುದ್ಧಿಗೆ ಅಗೋಚರವಾದ) ನಿರಂತರವಾದ ಪರಿಣಾಮಗಳೊಡನೆಯೂ ಇವನು ಸಂಬಂಧಿಸುವುದಿಲ್ಲ. ಪುರಾಣನು ಎಂದರೆ ಎಷ್ಟುಕಾಲದ ಅನಂತರವೂ ಕೂಡ ಹೊಸಬನೇ ಅಂದರೆ ಯಾವಾಗಲೂ ಅಪೂರ್ವವಸ್ತುವಿನಂತೆಯೇ ತೋರುವವನು. ಆದಕಾರಣ ಶರೀರವು ನಾಶಹೊಂದಿದರೂ ಈ ಆತ್ಮನು ನಾಶಹೊಂದುವುದಿಲ್ಲ.

ಇಂದ್ರಿಯಾಣಿ ಹಯಾನಾಹುಃ ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥
(ಕ. ಉ. 2-4)

ಇಂದ್ರಿಯಗಳು ವಿಷಯಗಳಲ್ಲಿ ತೊಡಗಿದಾಗ ಜ್ಞಾನವೆಂಬುದು ಆತ್ಮನಲ್ಲಿ ಹುಟ್ಟದ ಕಾರಣ ಜ್ಞಾನವಿರೋಧಿಗಳಲ್ಲಿ ಇಂದ್ರಿಯಗಳೇ ಪ್ರಧಾನವೆಂಬುದಾಗಿ ಹೇಳುತ್ತಾರೆ. ಇಂದ್ರಿಯಗಳು ತನ್ನ ತನ್ನ ವ್ಯಾಪಾರದಿಂದ ಹಿಂತಿರುಗಿದ್ದಾಗಲೂ ಅಂದರೆ ನಿರ್ವ್ಯಾಪಾರವಾಗಿದ್ದಾಗಲೂ, ಮನಸ್ಸಿಗೆ ವಿಷಯಾಭಿಮುಖ್ಯವಿದ್ದಲ್ಲಿ ಆತ್ಮಜ್ಞಾನ ಹುಟ್ಟಲಾರದು. ಆದಕಾರಣ ಇಂದ್ರಿಯಗಳಿಗಿಂತ ಆತ್ಮವಿರೋಧಿಗಳಲ್ಲಿ ಮನಸ್ಸು ಹೆಚ್ಚಿನದು. ಮನಸ್ಸು, ನಿದ್ರೆ ಮೊದಲಾದವುಗಳಿಂದ ಯಾವುವೇ ವಿಷಯದಲ್ಲಿ ಚಟುವಟಿಕೆ ಹೊಂದದೇ ಮಂಕಾಗಿದ್ದಾಗಲೂ, ಬುದ್ಧಿಯು ಆತ್ಮವಿರೋಧಿವಿಷಯದಲ್ಲಿ ದೃಢಪ್ರವೃತ್ತವಾಗಿದ್ದಲ್ಲೂ ಆತ್ಮಜ್ಞಾನ ದೊರಕಲಾರದು. ಆದಕಾರಣ ಬುದ್ಧಿಯು ಆತ್ಮವಿರೋಧಿಗಳಲ್ಲಿ ಮನಸ್ಸಿಗಿಂತಲೂ ಹಿರಿದು. ಇಂದ್ರಿಯ, ಮನಸ್ಸು, ಬುದ್ಧಿ ಇವೆಲ್ಲವೂ ಉಪರತವಾಗಿದ್ದರೂ ರಜೋಗುಣದಿಂದ ಒದಗುವ ಇಚ್ಛಾರೂಪವಾದ ಕಾಮವು ಯಾವುದೇ ವಿಷಯದಲ್ಲಿ ತೀವ್ರವಾಗಿದ್ದಲ್ಲಿ ಅದು ಇಂದ್ರಿಯಾದಿಗಳನ್ನೂ ತನ್ನ ತನ್ನ ವಿಷಯದಲ್ಲಿ ತೊಡಗುವಂತೆ ಮಾಡಿಕೊಂಡು ಆತ್ಮಜ್ಞಾನವನ್ನು ನಿರೋಧಿಸುತ್ತದೆ. ಆದಕಾರಣ ಬುದ್ಧಿಗಿಂತಲೂ ಆತ್ಮವಿರೋಧಿಗಳಲ್ಲಿ ಕಾಮವೇ ಪ್ರಧಾನವು.

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವಂತೋಽಪಿ ಬಹವೋಽಯಂ ನ ವಿದ್ಯುಃ ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ
ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ (ಕ.ಉ. 2-7)

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ।
(ಭ. ಗೀ. 2-29)

ಶರೀರಕ್ಕಿಂತಲೂ ಭಿನ್ನವಾದ ಆತ್ಮಸ್ವರೂಪವನ್ನು ತಿಳಿಯುವುದು ದುಷ್ಕರ. ಅನೇಕ ಜಂತುಗಳಲ್ಲಿ ಮಹಾತಪಸ್ಸಿನಿಂದ ಪಾಪವನ್ನು ಕಳೆದು ಪುಣ್ಯವನ್ನು ಗಳಿಸಿದ ಯಾವನೋ ಒಬ್ಬನು ತನಗಿಂತ ಬೇರೆಯಾದ ಸಮಸ್ತ ವಸ್ತುಗಳಿಗಿಂತಲೂ ವಿಲಕ್ಷಣನೂ, ಆಶ್ಚರ್ಯನೂ ಆದ ಆತ್ಮನನ್ನು ನೋಡುತ್ತಾನೆ. ಅಂತಹವರಲ್ಲಿ ಯಾವನೋ ಒಬ್ಬನು ಇನ್ನೊಬ್ಬನಿಗೆ

ಹೇಳುತ್ತಾನೆ. ಈ ಪ್ರಕಾರ ಯಾವನೋ ಒಬ್ಬನು ಕೇಳಿದರೂ ಆತ್ಮನ ಸತ್ಯವಾದ ಸ್ವರೂಪವನ್ನು ತತ್ತ್ವತಃ ಯಾರೂ ಅರಿಯುವುದಿಲ್ಲ.

'ಆಶ್ಚರ್ಯವಚ್ಚ' ಎಂಬಲ್ಲಿನ 'ಚ'ಕಾರದಿಂದ ಆತ್ಮಸ್ವರೂಪವನ್ನು ನೋಡುವವರೂ, ಹೇಳುವವರೂ, ಕೇಳುವವರಲ್ಲಿಯೂ ಕೂಡ ತತ್ವಸ್ಥಿತಿಯಿಂದ ಆತ್ಮಸ್ವರೂಪವನ್ನು ತತ್ತ್ವತಃ ನೋಡುವವರೂ, ತತ್ತ್ವತಃ ಹೇಳುವವರೂ, ತತ್ವತಃ ಕೇಳುವವರೂ ಕೂಡ ದುರ್ಲಭವೆಂದು ತಿಳಿದು ಬರುವುದು.



# ೧೨. ಗ್ರಂಥಸೂಚೀ

## I. ಮೂಲ ಮತ್ತು ಭಾಷ್ಯಗ್ರಂಥಗಳು


1. ಅಷ್ಟಾವಿಂಶತ್ಯುಪನಿಷದಃ—ಸಂ. ವಾಸುದೇವಲಕ್ಷ್ಮಣಶಾಸ್ತ್ರಿ ಪಣ್ಸೀಕರ್. ನಿರ್ಣಯಸಾಗರ ಮುದ್ರಣಾಲಯ, ಬೊಂಬಾಯಿ. ಭಾಷೆ–ಸಂಸ್ಕೃತ. ಲಿಪಿ–ದೇವನಾಗರಿ. 1918.
2. ಅಷ್ಟೋತ್ತರಶತೋಪನಿಷದಃ— ಸಂ. ಅನೇಕ ಪಂಡಿತರು. ಶ್ರೀರಾಮ ಮುದ್ರಣಾಲಯ, ಮದ್ರಾಸ್. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1928.
3. ಅಷ್ಟೋತ್ತರಶತೋಪನಿಷದಃ—ಸಂ. ಸಿದ್ಧಾಂತಿ ಸುಬ್ರಹ್ಮಣ್ಯಮನೀಷೀ, ಬೆಂಗಳೂರು. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1900.
4. ಅಷ್ಟೋತ್ತರಶತೋಪನಿಷತ್—ಆದಿಕಲಾನಿಧಿ ಮುದ್ರಣಾಲಯ, ಮದ್ರಾಸ್. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1883.
5. ಅಷ್ಟೋತ್ತರಶತೋಪನಿಷದಃ—ಸಂ. ವೆಂಕಟಕೃಷ್ಣಶಾಸ್ತ್ರಿ, ಮದ್ರಾಸ್. ಭಾಷೆ–ಸಂಸ್ಕೃತ, ಲಿಪಿ–ಗ್ರಂಥ, 1896.
6. ದಶೋಪನಿಷದಃ—ಸಂ. ಶಾತ್ತನೂರು ಕಲ್ಯಾಣಸುಂದರಶಾಸ್ತ್ರಿ, ಮದ್ರಾಸು. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1903.
7. ದಶೋಪನಿಷದಃ—ಸಂ. ಯನಮದಲವೆಂಕಟಾಚಾರ್ಯ, ವಿವೇಕಕಳಾನಿಧಿ ಮುದ್ರಣಾಲಯ, ಯನಮದಲ. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1876.
8. ದ್ವಾದಶೋಪನಿಷದಃ—ಸಂ. ಧರ್ಮಾಧಿಕಾರಿ ಚಕ್ರವರ್ತಿ ಅಯ್ಯಂಗಾರ್, ವಿದ್ಯಾತರಂಗಿಣಿ ಮುದ್ರಣಾಲಯ, ಮೈಸೂರು. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1891.
9. ಈಶಾದಿವಿಂಶದುತ್ತರಶತೋಪನಿಷದಃ—ಸಂ. ಕಾವ್ಯತೀರ್ಥ ನಾರಾಯಣ ರಾಮಾಚಾರ್ಯ. ನಿರ್ಣಯಸಾಗರ ಮುದ್ರಣಾಲಯ, ಮುಂಬಯಿ. ಭಾಷೆ–ಸಂಸ್ಕೃತ, ಲಿಪಿ–ದೇವನಾಗರಿ, 1948.
10. ಈಶಕೇನಕಠಪ್ರಶ್ನಮುಂಡಕಮಾಂಡೂಕ್ಯತೈತ್ತಿರೀಯಐತರೇಯೋಪನಿಷದಃ—ಸಂ. ಸ್ವಾಮಿ ಶ್ರೀವೈಷ್ಣವಾಚಾರ್ಯ. ರಾಮಾನಂದ ವೇದಾಂತಪ್ರಚಾರ ಸಮಿತಿ, ಅಹಮದಾಬಾದ್. ಭಾಷೆ–ಸಂಸ್ಕೃತ, ಲಿಪಿ–ದೇವನಾಗರಿ, 1967.
11. ಈಶಾದಿದಶೋಪನಿಷದ್ಭಾಷ್ಯಮ್—ಕ. ಗೋಪಾಲಾನಂದಸ್ವಾಮಿ, ಸಂ. ಎಂಬಾರ್ ಕೃಷ್ಣಮಾಚಾರ್, ನಿರ್ಣಯಸಾಗರ ಮುದ್ರಣಾಲಯ, ಬೊಂಬಾಯಿ. ಭಾಷೆ–ಸಂಸ್ಕೃತ, ಲಿಪಿ–ದೇವನಾಗರಿ, 1932.


---

ಸಂ–ಸಂಪಾದಕರು, ಕ–ಕರ್ತೃ, ಅನು–ಅನುವಾದಕರು.

12. ಈಶಾವಾಸ್ಯೋಪನಿಷತ್, ಕೇನೋಪನಿಷತ್ ಮತ್ತು ಕಠೋಪನಿಷತ್—ಸಂ. ಉತ್ತಮೂರು ವೀರರಾಘವಾಚಾರ್ಯ. ಉಭಯವೇದಾಂತ ಗ್ರಂಥಮಾಲಾ, ಮದ್ರಾಸು, ಭಾಷೆ–ಸಂಸ್ಕೃತ, ಲಿಪಿ–ದೇವನಾಗರಿ, 1948.

13. ಉಪನಿಷತ್‌ಷಟ್ಕಮ್—ಸಂ. ಧರ್ಮಾಧಿಕಾರಿ ಚಕ್ರವರ್ತಿ ಅಯ್ಯಂಗಾರ್, ವಿದ್ಯಾತರಂಗಿಣಿ ಮುದ್ರಣಾಲಯ, ಮೈಸೂರು. ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1893.

14. ಈಶಾದ್ಯಷ್ಟೋಪನಿಷದ್ಭಾಷ್ಯಮ್—ಸಂ. ವ. ನ. ಕೃಷ್ಣಮಾಚಾರ್ಯ, ವೈದಿಕ ವರ್ಧಿನೀಸಭಾ, ಉಪ್ಪಿಲಿ ಅಪ್ಪನ್ ಸನ್ನಿಧಿ, ಭಾಷೆ–ಸಂಸ್ಕೃತ, ಲಿಪಿ–ಗ್ರಂಥ, 1913.

15. ದಶೋಪನಿಷದ್ವ್ಯಾಖ್ಯಾನಮ್—ಕ. ಭಾರದ್ವಾಜ ರಾಮಾನುಜಾಚಾರ್ಯ, ವಿವೇಕ ಕಳಾನಿಧಿ ಮುದ್ರಣಾಲಯ, ಮದ್ರಾಸ್, ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1875.

16. ಷಡುಪನಿಷದ್ಭಾಷ್ಯಮ್—ಸಂ. ವಾವಿಳ್ಳ ರಾಮಸ್ವಾಮಿಶಾಸ್ತ್ರಿ, ಪ್ರ. ವಾವಿಳ್ಳ ರಾಮಸ್ವಾಮಿ ಅಂಡ್ ಸನ್ಸ್, ಮದ್ರಾಸ್, ಭಾಷೆ–ಸಂಸ್ಕೃತ, ಲಿಪಿ–ತೆಲುಗು, 1939.

17. ಈಶಾವಾಸ್ಯೇತ್ಯಾದಿ ಉಪನಿಷದ್ಭಾಷ್ಯಟಿಪ್ಪಣಿ—ಕ. ಜಯತೀರ್ಥಭಿಕ್ಷು, ಗ್ರಂಥಪ್ರಕಾಶನ ಸಮಿತಿ, ಉಡುಪಿ, ಭಾಷೆ–ಸಂಸ್ಕೃತ, ಲಿಪಿ–ದೇವನಾಗರಿ, 1954.

18. ದಶೋಪನಿಷದಃ (ಭಾಗ ೧)—ಸಂ. ಅಡ್ಯೆಯಾರ್ ಲೈಬ್ರರಿಯ ಪಂಡಿತರು, ಥಿಯಸಾಫಿಕಲ್ ಸೊಸೈಟಿ, ಮದ್ರಾಸ್, 1935.

19. ಕಠೋಪನಿಷತ್—ಸಂ. ಅನು ಎಂ.ಬಿ. ಪಂತುಲು, ರಾಜಾರಾಮ್ ಮೋಹನ್ ರಾಯ್ ಮುದ್ರಣಾಲಯ, ಪುರುಷೈಪಾಕಮ್, ಮದ್ರಾಸ್, ಭಾಷೆ–ದೇವನಾಗರಿ, ತೆಲುಗು, ಲಿಪಿ–ತೆಲುಗು, 1894.

20. ಕಠೋಪನಿಷತ್—ಸಂ. ಅನು ಎನ್. ಎಸ್. ಅನಂತರಂಗಾಚಾರ್ಯ, ನವಯುಗ್ ಪಬ್ಲಿಕೇಷನ್ಸ್, ರಾಜಾಜಿನಗರ, ಬೆಂಗಳೂರು. ಭಾಷೆ–ಸಂಸ್ಕೃತ, ಆಂಗ್ಲ. ಲಿಪಿ–ದೇವನಾಗರಿ, ಆಂಗ್ಲ, 1984.

21. ಕಠೋಪನಿಷತ್—ಅನು. ಕೆ. ಸಿ. ವರದಾಚಾರಿ, ಟಿ. ಟಿ. ತಾತಾಚಾರ್ಯ, ಸಂ. ರಾಮಾನುಜಸ್ವಾಮಿ, ಟಿ. ಟಿ. ಡಿ. ಮುದ್ರಣಾಲಯ, ತಿರುಪತಿ. ಭಾಷೆ ಮತ್ತು ಲಿಪಿ–ಆಂಗ್ಲ, 1948.

22. ಈಶ-ಕೇನ-ಕಠ-ಪ್ರಶ್ನ ಮತ್ತು ಮುಂಡಕ—ಅನು. ವಿಶ್ವಕ್ಸೇನಾಚಾರ್ಯ, ಕಾಪಾರ. ಭಾಷೆ–ಸಂಸ್ಕೃತ, ಹಿಂದಿ, ಲಿಪಿ–ದೇವನಾಗರಿ, 1942.

# II. ಉದ್ಧೃತಗ್ರಂಥಗಳು


## ಸಂಸ್ಕೃತ

1. ಶ್ರೀಭಾಷ್ಯ—ಕ. ಭಗವದ್ರಾಮಾನುಜರು, ಸಂ. ವೀರರಾಘವಾಚಾರ್, ವಿ॰ ಕಠಮಂತ್ರಗಳ ವಿವರಣೆಯಿಂದ ಕೂಡಿದೆ. ಉಭಯವೇದಾಂತಗ್ರಂಥ ಮಾಲಾ, ಮದ್ರಾಸ್, 1967.
2. ಶ್ರುತಪ್ರಕಾಶಿಕಾ—ಕ॰ ಸುದರ್ಶನಭಟ್ಟಾರಕರು, ಸಂ. ಉ. ವೀರರಾಘವಾಚಾರ್, ವಿ. ಶ್ರೀ ಭಾಷ್ಯದ ವ್ಯಾಖ್ಯಾನರೂಪವಾಗಿದ್ದು ಕಠಮಂತ್ರಗಳ ವಿವರಣೆಯಿಂದ ಕೂಡಿದೆ. ಉಭಯವೇದಾಂತಗ್ರಂಥಮಾಲಾ, ಮದ್ರಾಸ್, 1967.
3. ನಯಮಯೂಖಮಾಲಿಕಾ—ಕ. ಅಪ್ಪಯ್ಯದೀಕ್ಷಿತರು, ಸಂ. ವ. ನ. ಕೃಷ್ಣಮಾಚಾರ್ಯ, ಶ್ರೀ ಗೋಪಾಲವಿಲಾಸ ಮುದ್ರಾಕ್ಷರಶಾಲಾ, ಕುಂಭಕೋಣ (ತಮಿಳುನಾಡು), 1915.
4. ಶ್ರುತಪ್ರದೀಪಿಕಾ—ಕ. ಸುದರ್ಶನಸೂರಿ, ಸಂ. ಶ್ರೀನಿವಾಸರಾಘವನ್, M.A. ಶ್ರೀಭಾಷ್ಯದ ವ್ಯಾಖ್ಯಾನರೂಪ. ಸರಸ್ವತೀಮಹಲ್ ಗ್ರಂಥಾಲಯ ನಿರ್ವಾಹಕಸಮಿತಿ, ತಂಜಾವೂರು.
5. ಶ್ರೀಭಾಷ್ಯಪ್ರಕಾಶಿಕಾ,—ಕ. ಶ್ರೀನಿವಾಸಾಚಾರ್ಯ, ಸಂ. ಟಿ. ಚಂದ್ರಶೇಖರನ್, M A L.T, ಅಧಿಕರಣಾರ್ಥಗಳ ಸಂಗ್ರಹರೂಪವಾಗಿದೆ. ಭಾರತೀವಿಜಯಮ್ ಪ್ರೆಸ್, ಮದ್ರಾಸ್-5.
6. ಅಧ್ವರಮೀಮಾಂಸಕುತೂಹಲವೃತ್ತಿ—ಕ. ವಿದ್ವಾನ್ ಶ್ರೀ ವಾಸುದೇವ ದೀಕ್ಷಿತರು. ಶ್ರೀ ಲಾಲಬಹದೂರ್‌ಶಾಸ್ತ್ರಿ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠ, ದಿಲ್ಲೀ, 1968-69.
7. ಭಾವಪ್ರಕಾಶಿಕಾ—ಕ ಉ. ವೀರರಾಘವಾಚಾರ್, ಸಂ. ಉ. ವೀರರಾಘವಾಚಾರ್, ಶ್ರೀಭಾಷ್ಯ ಮತ್ತು ಶ್ರುತಪ್ರಕಾಶಿಕೆಯ ವಿವರಣೆಯಿಂದ ಕೂಡಿದೆ. ತಿರುಮಲೈ, 1959.
8. ಶಾರೀರಕಶಾಸ್ತ್ರಾರ್ಥದೀಪಿಕಾ—ಕ. ರಂಗರಾಮಾನುಜಮುನಿ, ಸಂ. ವ. ನ. ಕೃಷ್ಣಮಾಚಾರ್ಯ, ರಾ. ಗುರುರಾಜಾಚಾರ್ಯ, ಕುಂಭಕೋಣ.
9. ವೇದಾರ್ಥಸಂಗ್ರಹ—ಕ. ಭಗವದ್ರಾಮಾನುಜ, ಸಂ. ಪ್ರತಿವಾದಿ ಭಯಂಕರ ಅಣ್ಣಂಗರಾಚಾರ್ಯ, ಶ್ರೀ ಭಗವದ್ರಾಮಾನುಜಗ್ರಂಥಮಾಲಾ, ಕಾಂಚೀ, 1956.

## ಕನ್ನಡ

1. ಉಪನಿಷತ್ತು—ಸಂ., ಅನು. ದೇವುಡು ನರಸಿಂಹಶಾಸ್ತ್ರಿ, ವಿ॰ ಈಶಾದಿ ಉಪನಿಷತ್ತುಗಳ ತಾತ್ಪರ್ಯ ಮತ್ತು ವಿಸ್ತಾರವಾದ ಪೀಠಿಕೆ ಇದೆ. ಮೈಸೂರು ಸಂಸ್ಥಾನದ ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. 1958.

2. ಉಪನಿಷತ್ಪರಿಚಯು—ಸಂ. ಅನು. ಸ್ವಾಮಿ ಸೋಮನಾಥಾನಂದ, ವಿ. ಕಠೋಪ ನಿಷತ್ತಿನ ಪರಿಚಯುವನ್ನು ಕೊಡಲಾಗಿದೆ. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯು, ಮೈಸೂರು, 1968.

ತಮಿಳು

1. ಉಪನಿಷತ್ಸಾರಮ್—ಕ. ಸಂ. ಉ. ವೀರರಾಘವಾಚಾರ್, ವಿ. ಈಶಾದಿ ಉಪನಿಷತ್ತುಗಳ ಸಾರವು ತಮಿಳು ಭಾಷೆಯಲ್ಲಿದೆ. ವಿಶಿಷ್ಟಾದ್ವೈತ ಪ್ರಚಾರಿಣೀಸಭಾ, ಮದ್ರಾಸ್, 1970.

2. ದಶೋಪನಿಷತ್ತುಕ್ಕಳಿನ್ ದ್ರಾವಿಡಪ್ರತಿಪದಭಾಷ್ಯಮ್—ಮೂಲವು ಗ್ರಂಥ ಮತ್ತು ತೆಲಗುಲಿಪಿಯಲ್ಲಿದೆ. ಪ್ರತಿಪದಾರ್ಥವು ತಮಿಳಿನಲ್ಲಿದ್ದು ಶಂಕರ, ರಾಮಾನುಜಮತಾನುಸಾರಿಯಾದ ಅನುವಾದವಿದೆ.

ಹಿಂದಿ

1. ಈಶಾದಿಪಂಚೋಪನಿಷತ್—ಕ. ಸಂ. ತ್ರಿದಂಡಿ ಶ್ರೀಮದ್ವಿಷ್ವಕ್ಸೇನಾಚಾರ್ಯ ಸ್ವಾಮಿ, ವಿ. ಈಶಾದಿಉಪನಿಷತ್ತುಗಳಿಗೆ ವಿಶಿಷ್ಟಾದ್ವೈತಪರವಾದ ಹಿಂದಿ ಪ್ರತಿಪದಾರ್ಥವಿದೆ. ಈಶಾವಾಸ್ಯದ 12ನೇ ಮಂತ್ರಕ್ಕೆ ಶ್ರೀವಚನ ಭೂಷಣದ ಚಿಂತಾಮಣಿವ್ಯಾಖ್ಯಾನವನ್ನು ಉದಾಹರಿಸಿದ್ದಾರೆ. ಈ ಹಿಂದಿ ವ್ಯಾಖ್ಯಾನಕ್ಕೆ 'ಗೂಢಾರ್ಥದೀಪಿಕಾ' ಎಂದು ಹೆಸರು. ಶ್ರೀರಾಮ ದೇವಾಚಾರ್ಯರ ಅಚ್ಯುತ ಮುದ್ರಣಾಲಯು, ಕಾಶೀ, 1952.

ಇಂಗ್ಲೀಷ್

1. ದಿ ಉಪನಿಷತ್ಸ್ (ಭಾಗ–1)—ಕ. ಸಂ. ಮ್ಯಾಕ್ಸ್ ಮುಲ್ಲರ್. ವಿ. ಈಶಾದಿ ಉಪನಿಷತ್ತುಗಳಿಗೆ ಆಂಗ್ಲಭಾಷಾಂತರ ಮತ್ತು ಟಿಪ್ಪಣಿಗಳಿವೆ. ಡೋವರ್ ಪಬ್ಲಿಕೇಷನ್ಸ್, ನ್ಯೂಯಾರ್ಕ್. 1884.

2. ಉಪನಿಷತ್ಸ್—ಸಂ. ಅನು. ಕೆ. ಪಿ. ಬಹಾದೂರ್. ವಿ. ಈಶಾದಿ ಉಪನಿಷತ್ತುಗಳ ಮೂಲವು ಸಂಸ್ಕೃತ ಮತ್ತು ಇಂಗ್ಲೀಷ್ ಲಿಪಿಗಳಲ್ಲಿವೆ. ಹೆರಿಟೇಜ್ ಪಬ್ಲಿಕೇಷನ್ಸ್, ಪ್ರಿಂಚ್‌ವೆಲ್ಸ್ ಪ್ರೆಸ್, ದೆಹಲಿ, 1979.

3. ದಿ ಟೆನ್ ಪ್ರಿನ್ಸಿಪಲ್ ಉಪನಿಷತ್ಸ್—ಕ. ಸಂ. ಪುರೋಹಿತಸ್ವಾಮಿ ಮತ್ತು ಡಬ್ಲ್ಯು ಬಿ ಈಟ್ಸ್. ವಿ. ಈಶಾದಿ ಉಪನಿಷತ್ತುಗಳ ಆಂಗ್ಲಭಾಷಾನು ವಾದವಿದೆ. ಫೇಬರ್ ಅಂಡ್ ಫೇಬರ್ ಲಿಮಿಟೆಡ್, ಲಂಡನ್, 1975.

4. ಉಪನಿಷತ್ಸ್-ರಿ-ಟೋಲ್ಡ್—ಕ. ಸಂ. ವಿ. ಹೆಚ್. ಧಾತೆ. ವಿ. ಈಶಾವಾಸ್ಯ ಮೊದಲಾದ ಉಪನಿಷತ್ತುಗಳ ಆಂಗ್ಲವಿವರಣವಿದೆ. ಅಲೈಡ್ ಪಬ್ಲಿ ಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೊಂಬಾಯಿ, 1979

5. ಗೈಡ್ ಟು ದಿ ಉಪನಿಷತ್ಸ್—ಕ. ಸಂ. ಎಂ. ಪಿ. ಪಂಡಿತ್. ವಿ. ಈಶ ಹಾಗೂ ಕೇನೋಪನಿಷತ್ತುಗಳ ಕೆಲವು ಕ್ಲಿಷ್ಟಪದಗಳಿಗೆ ಆಂಗ್ಲಭಾಷಾ ವಿವರಣೆಯಿದೆ. ದೀಪ್ತಿ ಪಬ್ಲಿಕೇಷನ್ಸ್ ಜುಪಿಟರ್ ಪ್ರೆಸ್, ಮದ್ರಾಸ್, 1972.

6. ದಿ ಮೆಸೇಜ್ ಆಫ್ ದಿ ಉಪನಿಷತ್ಸ್—ಕ. ಸ್ವಾಮಿ ರಂಗನಾಥಾನಂದ. ವಿ. ಈಶಾದಿ ಉಪನಿಷತ್ತುಗಳ ಮೂಲ ದೇವನಾಗರಿ ಲಿಪಿಯಲ್ಲಿದ್ದು ಅದರ ತಾತ್ಪರ್ಯವು ಆಂಗ್ಲಭಾಷೆಯಲ್ಲಿದೆ. ಭಾರತೀಯ ವಿದ್ಯಾಭವನ, ರಾಣಿ ಭಾರತೀ ಪ್ರೆಸ್, ಬೊಂಬಾಯಿ, 1971.

7. ಯೈಟ್ ಉಪನಿಷತ್ಸ್—ಸಂ. ಸ್ವಾಮಿ ಗಂಭೀರಾನಂದ. ವಿ. ದೇವನಾಗರಿಯಲ್ಲಿ ಮೂಲವೂ, ಆಂಗ್ಲಭಾಷೆಯ ಪ್ರತಿಪದಾರ್ಥ ಮತ್ತು ವಿಸ್ತಾರವಾದ ವ್ಯಾಖ್ಯಾನವೂ ಇದೆ. ಅದ್ವೈತಾಶ್ರಮ, ಮಾಯಾವರ, ಯೂನಿಯನ್ ಪ್ರೆಸ್, ಕಲ್ಕತ್ತಾ, 1977.

8. ರಾಮಾನುಜ ಆನ್ ದಿ ಉಪನಿಷತ್ಸ್—ಕ. ಎಸ್. ಎಸ್. ರಾಘವಾಚಾರ್ಯ. ವಿ. ಭಗವದ್ರಾಮಾನುಜರ ಶ್ರೀಭಾಷ್ಯಾದಿ ಗ್ರಂಥಗಳಲ್ಲಿ ಉದಾಹರಿಸಿರುವ 'ಈಶ' ಮುಂತಾದ ಉಪನಿಷತ್ತುಗಳ ಸಾರಾಂಶವು ಆಂಗ್ಲಭಾಷೆಯಲ್ಲಿದೆ. ಎಂ. ರಂಗಾಚಾರ್ಯ ಮೆಮೋರಿಯಲ್ ಟ್ರಸ್ಟ್, ವಿದ್ಯಾಪ್ರೆಸ್, ಮದ್ರಾಸ್, 1972.

## IV. ತಾಳಪತ್ರಗಳು

### ಕಠೋಪನಿಷತ್ (ಮೂಲಮಾತ್ರ)

1) ಸೇರ್ಪಡೆ ಸಂ. 2139 ಇ. ಪತ್ರಗಳು 11 ಗ್ರಂಥ ಲಿಪಿ.
2) ,, ,, 3250 ಸಿ. ,, 6 ,, ,,
3) ,, ,, 1229 ಎ. ,, 10 ,, ,,
4) ,, ,, 731 ಬಿ. ,, 6 ನಂದಿನಾಗರಿ ಲಿಪಿ,
5) ,, ,, 1294 ಸಿ. ,, 5 ,, ,,
6) ,, ,, 1317 ಸಿ. ,, 6 ,, ,,

(ನಮ್ಮ ಸಂಸ್ಥೆಯ ತಾಳಪತ್ರಸಂಗ್ರಹವಿಭಾಗದಲ್ಲಿವೆ.)

